

ಚರಿತ್ರೆ ಮಾಲೆ ೭

# ಕರ್ನಾಟಕ ಚರಿತ್ರೆ

(ಕ್ರಿ.ಶ. ೧೯೦೦-೧೯೫೬)

**ಸಂಪುಟ ೭**


ಪ್ರಧಾನ ಸಂಪಾದಕರು

**ಪ್ರೊ. ಬಿ. ಷೇಕ್ ಅಲಿ**

ಸಂಪುಟ ಸಂಪಾದಕರು

**ಪ್ರೊ. ಎಸ್. ಚಂದ್ರಶೇಖರ್**







ಪ್ರಸಾರಾಂಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ

ಚರಿತ್ರೆ ಮಾಲೆ - ೭

# ಕರ್ನಾಟಕ ಚರಿತ್ರೆ

(ಕ್ರಿ.ಶ. ೧೯೦೦ - ೧೯೫೬)

**ಸಂಪುಟ ೭**


ಪ್ರಧಾನ ಸಂಪಾದಕರು

**ಪ್ರೊ. ಬಿ. ಷೇಕ್ ಅಲಿ**

ಸಂಪುಟ ಸಂಪಾದಕರು

**ಪ್ರೊ. ಎಸ್. ಚಂದ್ರಶೇಖರ್**






ಪ್ರಸಾರಾಂಗ

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ, ಕಮಲಾಪುರ ೫೮೩ ೨೨೧

# KARNATAKA CHARITRE

(A.D. 1900-1956)

Volume Seven in the Series of Comprehensive History of Karnataka

General Editor
**Prof. B. Sheik Ali**
Volume Editor
**Prof. S. Chandrashekar**
Translator
**C. Naganna**

Co-ordinator
**Prof. Laxman Telagavi**
Asst. Co-ordinator
**C.R. Govindaraju**
Project Assistant
**K.L. Rajashekar**

Published by
**Prof. A.V. Navada**
Director, Prasaranga
Kannada University, Hampi
Vidyaranya, Kamalapura 583 221

Pages: XXXII+ 280 First Edition 1997

Rs. 200/-



ಪ್ರಕಾಶಕರು :
**ಪ್ರೊ. ಎ. ವಿ. ನಾವಡ**
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ಕಮಲಾಪುರ ೫೮೩ ೨೨೧

ರೂ. ೨೦೦/-
ಮುಖಪುಟ : **ಕೆ. ಕೆ. ಮಕಾಳಿ**

ಅಕ್ಷರ ಜೋಡಣೆ :
**ಕಂಟ್ರೋಲ್ ಸಿಸ್ಟಮ್ಸ್ ಇಂಕ್**
ಶಂಕರನಗರ, ಮಹಾಲಕ್ಷ್ಮಿ ಬಡಾವಣೆ
ಬೆಂಗಳೂರು ೫೬೦ ೦೯೬
ದೂರವಾಣಿ: ೩೪೭೦೩೯೩

ಮುದ್ರಕರು :
**ಲಕ್ಷ್ಮಿ ಮುದ್ರಣಾಲಯ**
ಚಾಮರಾಜಪೇಟೆ, ಬೆಂಗಳೂರು ೫೬೦ ೦೧೮
ದೂರವಾಣಿ: ೬೬೧೩೧೨೩, ೬೬೧೮೭೫೨

# ನಿಮ್ಮೊಡನೆ

ಕನ್ನಡ ವಿಶ್ವವಿದ್ಯಾಲಯ ವಿಜಯನಗರ ಸಾಮ್ರಾಜ್ಯದ ಸ್ಥಳದಲ್ಲೇ ಈಗ ತಲೆಯೆತ್ತಿದೆ. ಅದೇ ಕಾರಣಕ್ಕಾಗಿ ಈ ವಿಶ್ವವಿದ್ಯಾಲಯದ ಒಂದು ಜವಾಬ್ದಾರಿಯೆಂದರೆ ಕರ್ನಾಟಕದ ಸಮಗ್ರ ಇತಿಹಾಸವನ್ನು ಬರೆಯಿಸುವುದು. ಈ ಬರವಣಿಗೆಯ ಜವಾಬ್ದಾರಿ ಹೆಚ್ಚಿನದು. ನಮ್ಮ ದೇಶದ ಇತಿಹಾಸ ದೀರ್ಘಕಾಲದ್ದು ಮತ್ತು ಸಮೃದ್ಧವಾದದ್ದು. ಆದರೆ ಇತಿಹಾಸದ ಬರವಣಿಗೆ ಮಾತ್ರ ಇತ್ತೀಚಿನದು. ಬ್ರಿಟಿಶರು ತಮಗೆ ಅನುಕೂಲವಾಗುವಂತೆ ಈ ದೇಶದ ಇತಿಹಾಸವನ್ನು ರಚಿಸಿದರು. ಇತಿಹಾಸವೆಂದರೆ ಒಂದು ಕಥಾಮಾರ್ಗ, ಅದೂ ಕೂಡ ಕಥೆಯ ಒಂದು ರೂಪ. ವಾಸ್ತವ ಸತ್ಯವೇ ಕಥೆಯ ಸತ್ಯವಾಗಲಾರದು. ಉದಾಹರಣೆಗೆ ಟಿಪ್ಪೂ ಬ್ರಿಟಿಶರ ಕಡುವೈರಿಯಾಗಿದ್ದ. ಅಂದಮೇಲೆ ಟಿಪ್ಪೂನ ವ್ಯಕ್ತಿತ್ವ ಈ ವೈರದಿಂದ ರೂಪಿತವಾಗುವುದು ಅನಿವಾರ್ಯವಾದದ್ದು. ಬ್ರಿಟಿಶರು ನಮ್ಮ ದೇಶವನ್ನು ಗೆದ್ದವರು. ಗೆಲುವಿನ ಕಣ್ಣಿನಲ್ಲಿ ಸೋಲಿನ ನೋಟ ಹೇಗೆ ಇರಬೇಕೋ ಹಾಗೆ ಅವರು ಬರೆದರು. ಅದರ ಜೊತೆಗೆ ಇತಿಹಾಸವನ್ನು ಬರೆಯುವ ಶಾಸ್ತ್ರವನ್ನೂ ಕಲಿಸಿದರು. ಶಾಸ್ತ್ರೀಯ ಇತಿಹಾಸದಲ್ಲಿರುವುದು ಕಾರ್ಯಕಾರಣ ಸಂಬಂಧ. ಐತಿಹಾಸಿಕ ಕಾಲಕ್ರಮದಲ್ಲಿ ಕಾರ್ಯಕಾರಣ ಸಂಬಂಧದ ಹುರಿ ತೊಡಕು ಹಾಕಿಕೊಂಡಿದೆ. ಹೊಸ ಸಂಬಂಧ ಹುಟ್ಟಬೇಕಾದರೆ ಇದ್ದ ಸಂಬಂಧವನ್ನು ಬಿಡಿಸಿ ನೋಡಬೇಕಾಗುತ್ತದೆ. ನಮ್ಮ ದೇಶದಲ್ಲಿ ಈ ಶತಮಾನದ ಪ್ರಾರಂಭಕ್ಕಿಂತ ಮೊದಲು ಗಾಂಧೀಜಿಯಂಥ ಮಹಾತ್ಮ ಹೇಗೆ ಹುಟ್ಟಿದ? ಇಂಥ ಪ್ರಶ್ನೆಗಳಿಗೆ ಉತ್ತರ ಇತಿಹಾಸದಲ್ಲಿ ದೊರೆಯುವುದಿಲ್ಲ.

ಆದರೆ ಇತಿಹಾಸ ಹುಟ್ಟಿಕೊಂಡಿದೆ. ಇತಿಹಾಸವೂ ಒಂದು ಭಾಷೆ. ಆದ್ದರಿಂದ ಅದರಿಂದ ಬಿಡುಗಡೆ ಇಲ್ಲ. ಕರ್ನಾಟಕದ ಅಸ್ಮಿತೆಗಾಗಿ ಕರ್ನಾಟಕದ ಇತಿಹಾಸ ಅಗತ್ಯವಾಗಿದೆ. ಕನ್ನಡ ಭಾಷೆಯಂತೆ ಅದು ಈ ಭೌಗೋಲಿಕ ಪ್ರದೇಶದ ಅಸ್ಮಿತೆಗೆ, ನಾಡಿನ ಚಹರೆಪಟ್ಟಿಗೆ ಕಾರಣವಾಗಿದೆ. ಅನೇಕ ರಾಜವಂಶಗಳು ಈ ಪ್ರದೇಶದಲ್ಲಿ ರಾಜ್ಯಗಳನ್ನು ಕಟ್ಟಿದ್ದವು. ಜನತೆಗೆ ಒಂದು ರಾಜಕೀಯ ಅಸ್ತಿತ್ವವನ್ನು ಕಲ್ಪಿಸಿಕೊಟ್ಟವು. ವಾಸ್ತು ಶಿಲ್ಪ, ನೃತ್ಯ, ಸಂಗೀತ, ಸಾಹಿತ್ಯಗಳು ಸಾಂಸ್ಕೃತಿಕ ಇತಿಹಾಸವನ್ನು ರೂಪಿಸಿದವು. ನಮ್ಮ ಜನಕ್ಕೆ ಐತಿಹಾಸಿಕ ತಿಳುವಳಿಕೆಯ ಅಗತ್ಯವಿದೆ.

ಇತಿಹಾಸವೆಂದರೆ ಕೇವಲ ಗತ ಸಂಗತಿಗಳ ದಾಖಲೆ ಮಾತ್ರ ಅಲ್ಲ. ಮನುಷ್ಯನ ಅನುಭವ ಮತ್ತು ತಿಳುವಳಿಕೆಗಳು ಒಂದರೊಳಗೊಂದು ಕೂಡಿ ಹೋಗುವುದೇ ಇತಿಹಾಸದಲ್ಲಿದೆ.

> ಒಂದಾಗಿಹವೈದು ಭೂತ, ಚಂದ್ರಸೂರ್ಯ ನಂದಿವಾಹನ ನಿಮ್ಮ
> ತನುವಲ್ಲವೇ? ನಿಂದು ನೋಡಲು ಜಗಭರಿತವಾಗಿಪ್ಪೆ
> ಇನ್ನು ನೋಯಿಸುವೆನಾರನಯ್ಯ ರಾಮನಾಥಾ?

ದೇವರದಾಸಿಮಯ್ಯನ ಈ ವಚನದ ಅರ್ಥಕ್ಕೆ ಸಾವಿರ ವರ್ಷಗಳ ಇತಿಹಾಸವಿದೆ. ಪಂಚಭೂತಗಳು, ಸೂರ್ಯ ಚಂದ್ರರು ಶಿವನ ಪ್ರತ್ಯಕ್ಷ ಅವಯವಗಳೆಂದು ಕಾಳಿದಾಸ ತನ್ನ 'ಅಭಿಜ್ಞಾನ ಶಾಕುಂತಲ' ದ ನಾಂದೀಪದ್ಯದಲ್ಲಿ ಹೇಳಿದ್ದಾನೆ. ಈ ತಿಳುವಳಿಕೆಯನ್ನು ಉಪಯೋಗಿಸಿದ ದಾಸಿಮಯ್ಯ ಜಗತ್ತಿನ ತುಂಬ

ಶಿವನ ಪ್ರತಿಮೆಯನ್ನು ಕಾಣುತ್ತಾನೆ. ವಿಶ್ವವನ್ನೆಲ್ಲ ದೇವರು ವ್ಯಾಪಿಸಿದ್ದರೆ ಯಾರನ್ನು ನೋಯಿಸುವುದು? ಅಹಿಂಸೆ ಜೈನ, ಬೌದ್ಧ ಧರ್ಮಗಳ ಒಂದು ಧಾರ್ಮಿಕ ತತ್ತ್ವ. ಇದು ದಾಸಿಮಯ್ಯನ ಅನುಭವದ ಆಳಕ್ಕೆ ಇಳಿದು ಈ ವಚನವನ್ನು ರೂಪಿಸಿದೆ. ಈ ವಚನವನ್ನು ಈಗ ಮತ್ತೊಂದು ದೃಷ್ಟಿಯಿಂದ ನೋಡಿ ಅರ್ಥವಿಸಬಹುದು. ಅನುಭವದ ತಿಳಿವು, ತಿಳುವಳಿಕೆಯ ಅನುಭವ ನಡೆಯುವುದು ಇತಿಹಾಸದಲ್ಲಿಯೇ.

ಕನ್ನಡ ವಿಶ್ವವಿದ್ಯಾಲಯ ಕರ್ನಾಟಕದ ಸಮಗ್ರ ಇತಿಹಾಸವನ್ನು ಬರೆಯಿಸಬೇಕೆಂದು ಯೋಚಿಸಿದಾಗ ಈ ವಿಚಾರಗಳು ನಮ್ಮಲ್ಲಿ ಅಸ್ಪಷ್ಟವಾಗಿ ರೂಪುಗೊಂಡಿದ್ದವು. ಭಾರತದ ಇತಿಹಾಸ ಕೇವಲ ಉತ್ತರ ಭಾರತದ ಇತಿಹಾಸವಾಗಿ, ದಕ್ಷಿಣ ಭಾರತದ ಇತಿಹಾಸ ಅಡಿಟಿಪ್ಪಣಿಗಳಲ್ಲಿ ಒಡಮೂಡುವುದನ್ನು ತಪ್ಪಿಸಬೇಕಾಗಿತ್ತು. ಅದು ತಪ್ಪಬೇಕಾದರೆ ಕರ್ನಾಟಕದ ಇತಿಹಾಸ ಸ್ವತಂತ್ರವಾಗಿ ರಚನೆಗೊಳ್ಳಬೇಕು. ನಮ್ಮ ಇತಿಹಾಸ ಕೇವಲ ದಿಗ್ವಿಜಯಗಳ ಇತಿಹಾಸ ಅಷ್ಟೇ ಆಗಬಾರದು. ಅದು ಸಾಂಸ್ಕೃತಿಕ ಇತಿಹಾಸವೂ ಆಗಬೇಕು. ರಾಜಕೀಯಕ್ಕೂ ಇತಿಹಾಸಕ್ಕೂ ಇರುವ ಸಂಬಂಧ ಅವಿಭಾಜ್ಯವೆಂದು ಒಪ್ಪಿಕೊಂಡರೂ ಈ ಮಾತನ್ನು ಹೇಳಬೇಕಾಗಿದೆ. ಇತಿಹಾಸದ ಬರವಣಿಗೆಯೂ ಬೇರೆ ಸ್ವರೂಪವನ್ನು ತಾಳಬೇಕಾಗಿದೆ. ಅವೆಲ್ಲ ಒಮ್ಮೆಲೆ ಆಗುವ ಕೆಲಸಗಳಲ್ಲ. ಮೊದಲು ಕರ್ನಾಟಕದ ಸಮಗ್ರ ಇತಿಹಾಸದ ಸಾಮಗ್ರಿ ಒಂದು ಕಡೆಗೆ ದೊರೆಯುವಂತಾಗಬೇಕು. ಈಗ ಆ ಕೆಲಸ ಪ್ರಾರಂಭವಾಗಿದೆ. ಇತಿಹಾಸದ ಈ ಸಂಪುಟಗಳಲ್ಲಿ ಈ ಪ್ರದೇಶದ ಅದ್ಭುತವಾದ ಸಾಂಸ್ಕೃತಿಕ ಮತ್ತು ರಾಜಕೀಯ ವಿಕಾಸದ ಚಿತ್ರಗಳಿವೆ. ಕರ್ನಾಟಕದ ಏಕೀಕರಣ ರಾಜಕೀಯವಾಗಿ ನಡೆದು ಹಳೆ ಮಾತಾಯಿತು. ಕರ್ನಾಟಕದ ಸೀಮಾರೇಖೆಗಳು ಅಲ್ಲಲ್ಲಿ ವಾದಗ್ರಸ್ತವಾಗಿದ್ದರೂ ನೃಪತುಂಗನಂತೆ ನಾವು ಈಗ ನಮ್ಮ ಪ್ರದೇಶ ಯಾವುದೆಂದು ನಿಶ್ಚಯಿಸಿಕೊಂಡಿದ್ದೇವೆ. ನಮ್ಮ ಇತಿಹಾಸ ಈ ಪ್ರಾದೇಶಿಕತೆಯಲ್ಲಿ ಪುನಃಸೃಷ್ಟಿಯಾಗಬೇಕು. ಇತಿಹಾಸ ಪ್ರತ್ಯಭಿಜ್ಞಾನದ ಫಲವೆಂದು ಬೇರೆ ಹೇಳುವ ಕಾರಣವಿಲ್ಲ. ಪ್ರತ್ಯಭಿಜ್ಞಾನ ಭಿನ್ನ ಭಿನ್ನವಾದ ಅಂಶಗಳನ್ನು ಒಳಗೂಡಿಸಿ ಒಂದು ಸಂಬಂಧವನ್ನು ಏರ್ಪಡಿಸಿಕೊಳ್ಳುತ್ತದೆ. ಈ ಸಂಬಂಧದ ಸೂತ್ರವನ್ನು ಅನುಸರಿಸುತ್ತಲೇ ಕನ್ನಡ ವಿಶ್ವವಿದ್ಯಾಲಯ ಕನ್ನಡದ ಕೆಲಸಕ್ಕಾಗಿ ಪ್ರಯತ್ನ ಮಾಡುತ್ತಿದೆ.

ಈ ಇತಿಹಾಸ ಸಂಪುಟಗಳ ಮಾರ್ಗದರ್ಶಕರಾಗಿ ಮತ್ತು ಪ್ರಧಾನ ಸಂಪಾದಕರಾಗಿ ನಾಡಿನ ಖ್ಯಾತ ಇತಿಹಾಸತಜ್ಞರಾಗಿರುವ ಪ್ರೊ. ಬಿ. ಷೇಕ್ ಅಲಿಯವರು ದೊರೆತದ್ದು ನಮ್ಮ ಪುಣ್ಯ. ಈಗ ಪ್ರಕಟವಾಗುತ್ತಿರುವ ಸಂಪುಟವನ್ನು ಪ್ರೊ. ಎಸ್. ಚಂದ್ರಶೇಖರ್ ಅವರು ಸಂಪಾದಿಸಿ ಕೊಟ್ಟಿದ್ದಾರೆ. ಇವರೀರ್ವರಿಗೂ ವಿಶ್ವವಿದ್ಯಾಲಯದ ಪರವಾಗಿ ನಮ್ಮ ಕೃತಜ್ಞತೆಗಳು.

**ಚಂದ್ರಶೇಖರ ಕಂಬಾರ**

ಕುಲಪತಿಗಳು

# ಪ್ರಧಾನ ಸಂಪಾದಕರ ಮಾತು

ಇತಿಹಾಸವು, ಯುಗ ಯುಗಾಂತರಗಳಿಂದ ಮಾನವನು ಪ್ರಗತಿ ಹೊಂದಿದ್ದಾನೆಯೇ ಅವನತಿ ಹೊಂದಿದ್ದಾನೆಯೇ ಎಂಬುದನ್ನು ಅಳೆಯುವ ಮಾನಕವಾಗಿದೆ. ಹಿಂದಿನಿಂದ ಬೆಳಕನ್ನು ಹಾಯಿಸಿ, ಗತಕಾಲದ ಘಟನೆಗಳ ಬಗೆಗೆ ಅರಿಯುವುದು, ಅವುಗಳ ಮೌಲ್ಯಮಾಪನ; ವರ್ತಮಾನದ ಘಟನೆಗಳನ್ನು ಉತ್ತಮ ಪಡಿಸುವುದು ಹಾಗೂ ಭವಿಷ್ಯತ್ತಿನ ಘಟನೆಗಳನ್ನು ಮುಂಗಾಣುವುದು ಅದರ ಮುಖ್ಯ ಉದ್ದೇಶ. ಅದು ಮನುಷ್ಯನ ಸ್ಮರಣಶಕ್ತಿಯ ಹಾಗೆ, ಅದು ಭವಿಷ್ಯತ್ತನ್ನು ಕಟ್ಟುವ ಸಲುವಾಗಿ ಭೂತಕಾಲದ ಅನುಭವವನ್ನು ನೀಡುತ್ತದೆ. ವರ್ತಮಾನವು ಭೂತಕಾಲದ ಫಲವಾಗಿರುವಂತೆ ಭವಿಷ್ಯತ್ತು ವರ್ತಮಾನದ ಫಲ. ಇತಿಹಾಸದ ಕೆಲವು ಪುಟಗಳು ಮಾನವನ ಮನಸ್ಸನ್ನು ಕುರಿತು ಸಂಪುಟಗಟ್ಟಲೆ ತತ್ವಶಾಸ್ತ್ರಕ್ಕಿಂತಲೂ ಹೆಚ್ಚಿನ ಅಂತರ್ದೃಷ್ಟಿಯನ್ನು ಕೊಡುತ್ತವೆ ಎಂದು ಹೇಳಲಾಗಿದೆ. ಭೂತಕಾಲವನ್ನು ಮರೆತುಬಿಡುವ ದೇಶಕ್ಕೆ ಭವಿತವ್ಯವಿಲ್ಲ. ಆದ್ದರಿಂದಲೇ ಇತಿಹಾಸಕ್ಕೆ ಸಮುಚಿತ ಸ್ಥಾನ.

ಕರ್ನಾಟಕದ ಇತಿಹಾಸವು ಮಾನವನ ಜೀವನದಲ್ಲಿ ಖಂಡಿತವಾಗಿ ಒಂದು ರೋಮಾಂಚಕ ಅಧ್ಯಾಯ. ದಖ್ಖನ್ ಪ್ರಸ್ಥಭೂಮಿಯ ಹೃದಯಭಾಗದಲ್ಲಿದ್ದು ಕರ್ನಾಟಕವು ಅತಿ ಶ್ರೇಷ್ಠ ಪ್ರಾಚೀನ ಸಂಸ್ಕೃತಿಯುಳ್ಳ, ಭೂಮಿಯ ಮೇಲಿನ ಅತ್ಯಂತ ಶ್ರೇಷ್ಠ ಪ್ರದೇಶಗಳಲ್ಲಿ ಒಂದು. ಪ್ರಾಚೀನಶಿಲಾಯುಗದ ಅಥವಾ ನವಶಿಲಾಯುಗದ, ಅಥವಾ ಸೂಕ್ಷ್ಮಶಿಲಾಯುಗದ, ಅಥವಾ ಬೃಹತ್‌ಶಿಲಾಯುಗದ ಸಂಸ್ಕೃತಿಗಳ ಪ್ರಾಚೀನ ಮಾನವನ ಜೀವನಕ್ಕೆ ಅದು ಒಂದು ವಸ್ತುಸಂಗ್ರಹಾಲಯವಿದ್ದ ಹಾಗಿದೆ. ಅದರ ಇತಿಹಾಸಪೂರ್ವ ಮಾಹಿತಿಯು ಪ್ರದೇಶದಾದ್ಯಂತ ಹರಡಿದೆ, ಹಲವು ಶತಮಾನಗಳಲ್ಲಿ ಮಾನವನು ನಡೆದು ಬಂದ ದಾರಿಯ ಕಿರುನೋಟವನ್ನು ಒದಗಿಸುತ್ತದೆ. ಕ್ರಿ.ಪೂ. ೩೦೦೦ಕ್ಕಿಂತಲೂ ಹೆಚ್ಚು ದೂರದ ಯುಗದಲ್ಲಿ ಹರಪ್ಪ ಕಣಿವೆಯಲ್ಲಿ ಕಂಡುಬಂದ ಚಿನ್ನವು ಕರ್ನಾಟಕದಿಂದ ಆಮದು ಮಾಡಿಕೊಂಡದ್ದು ಎಂದು ಊಹಿಸಲಾಗಿದೆ. ಇತಿಹಾಸಯುಗದ ಮುಂಬೆಳಗಿಗೂ ಬಹಳ ಮೊದಲೇ ಕ್ರಿ.ಶ. ಆರನೆಯ ಶತಮಾನದಲ್ಲಿ, ಋಗ್ವೇದದಲ್ಲಿ ಬರುವ ಅಗಸ್ತ್ಯರಂತಹ ಋಷಿಗಳ ಚಿಂತನ ಪ್ರಕ್ರಿಯೆಯಲ್ಲಿ ಕರ್ನಾಟಕವು ಅಭಿವ್ಯಕ್ತಿ ಪಡೆಯಿತು. ಮಹಾಭಾರತ–ರಾಮಾಯಣ ಈ ಮಹಾಕಾವ್ಯಗಳಲ್ಲಿ ಕರ್ನಾಟಕವನ್ನು ಗಮನಿಸಲಾಗಿದೆ, ಮಹಾಭಾರತದ ಭೀಷ್ಮಪರ್ವದಲ್ಲಿ 'ಕರ್ಣಾಟಕ' ಎಂಬ ಪದವೇ ಇದೆ. ಕರ್ನಾಟಕದ ಪ್ರಾಚೀನತೆಯ ವಿಚಾರದಲ್ಲಿ ನಾವೆಲ್ಲರೂ ತುಂಬಾ ಹೆಮ್ಮೆ ಪಡಬೇಕು.

ಇನ್ನು ಇತಿಹಾಸಯುಗಕ್ಕೆ ಬಂದರೆ, ಜೀವನದ ಎಲ್ಲಾ ವಲಯಗಳಲ್ಲಿ ಸಂಭವಿಸಿದ ವೈವಿಧ್ಯಪೂರ್ಣ ನಾಟಕವು ಯಾರನ್ನೂ ಬೆರಗುಗೊಳಿಸುವಂಥದಾಗಿದೆ. ಕಲೆ, ವಾಸ್ತುಶಿಲ್ಪ, ಸಾಹಿತ್ಯ, ಧರ್ಮ, ತತ್ವಶಾಸ್ತ್ರ ಸಂಗೀತ, ನೀತಿ, ನಡವಳಿಕೆ ಈ ಕ್ಷೇತ್ರಗಳಲ್ಲಿ ಭಾರತದ ಮುಖ್ಯವಾಹಿನಿಗೆ ಕರ್ನಾಟಕವು ಮಹತ್ವದ ಕೊಡುಗೆಯನ್ನು ನೀಡಿದೆ. ಅಲ್ಲದೆ ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ಆಡಳಿತೀಯ ಸಂಸ್ಥೆಗಳ ವಲಯದಲ್ಲೂ ಅದರ ಕೊಡುಗೆ ಮುಖ್ಯವಾದುದು. ರಾಜಕಾರಣ ಕ್ಷೇತ್ರವನ್ನು ನೋಡಿದರೆ, ನಂದರು ಮತ್ತು ಮೌರ್ಯರಿಂದ ಇಂದಿನವರೆಗೆ ನಿರಂತರವಾದೊಂದು ಸರಪಣಿ ಕಂಡುಬರುತ್ತದೆ. ಬೇಕಾದಷ್ಟು ರಾಜವಂಶಗಳು ಉದಿಸಿದವು ಮತ್ತು ಬಿದ್ದುಹೋದುವು. ನೈರಂತರ್ಯವು ಬದಲಾವಣೆಯ ಹಕ್ಕು ಮಾತ್ರ

ಎಂಬ ಪ್ರಕೃತಿಯ ನಿಯಮಕ್ಕೆ ನಿದರ್ಶನಗಳನ್ನು ನೀಡಿವೆ. ಪ್ರಮುಖ ರಾಜವಂಶಗಳಾದ ಶಾತವಾಹನರು, ಕದಂಬರು, ಗಂಗರು, ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ಯಾದವರು, ಒಡೆಯರು, ವಿಜಯನಗರದ ರಾಯರು, ಬಹಮನಿ ಸುಲ್ತಾನರು, ಮೈಸೂರು ಸುಲ್ತಾನರು, ಶಾಹೀ ಸುಲ್ತಾನರು ಇವುಗಳ ಅದೃಷ್ಟವನ್ನು ರೂಪಿಸಿದ ಅಸಂಖ್ಯಾತ ನಟರ ಪ್ರವೇಶ-ನಿರ್ಗಮನಗಳನ್ನು ನೋಡಿ ಬೆರಗಾಗುತ್ತೇವೆ. ಇನ್ನು ಗಣನೆಯೇ ಇಲ್ಲದ ಕಿರಿಯ ವಂಶಗಳ ಬಗೆಗೆ ಹೇಳುವುದೇನು? ಒಳಿತು ಕೆಡಕುಗಳ ನಡುವೆ ನಿರಂತರವಾಗಿ ನಡೆಯುವ ಕಾದಾಟದ ಜೀವನನಾಟಕದಲ್ಲಿ ಅವರು ತೊಡಗಿದ್ದರು. ಇನ್ನೂ ಆಶ್ಚರ್ಯಕರವಾದ ಅಂಶವೆಂದರೆ, ಈ ರಾಜವಂಶಗಳ ಆಳಿಕೆಯ ಕಾಲಾವಧಿ. ಕೆಲವರು ಹೀಗೆ ಬಂದು ಹಾಗೆ ಹೋದರು; ಇನ್ನೂ ಕೆಲವರು, ಉದಾಹರಣೆಗೆ ಗಂಗರು ಮತ್ತು ಒಡೆಯರರು ಏಳು ಶತಮಾನಗಳಷ್ಟು ದೀರ್ಘಕಾಲ ಆಳಿಕೆ ನಡೆಸುತ್ತಿದ್ದರು. ಈ ರಾಜವಂಶಗಳಿಗೆ ಸೇರಿದ ರಾಜನೊಬ್ಬೊಬ್ಬನಿಗೂ ಸರಾಸರಿ ೨೦ ವರ್ಷಗಳನ್ನು ಇಟ್ಟುಕೊಂಡರೆ, ಮಹತ್ವದ ಪಾತ್ರ ನಿರ್ವಹಿಸಿದ ಅರಸರ ಸಂಖ್ಯೆಯನ್ನು ನಾವೇ ಊಹಿಸಬಹುದು! ಯಾವುದೇ ಮಾನಕದಿಂದ ನೋಡಿದರೂ ಕರ್ನಾಟಕದ ರಾಜಕೀಯ ಇತಿಹಾಸ ಬಹು ಸಮೃದ್ಧವಾದದ್ದು.

ಚಿತ್ತಾಕರ್ಷಕವಾಗಿರುವುದು ರಾಜಕೀಯ ಇತಿಹಾಸ ಮಾತ್ರವಲ್ಲ. ಮಾನವ ಸಮಾಜದ ಆಡಳಿತ ವ್ಯವಹರಣೆಯಲ್ಲಿ ಸತ್ಯವನ್ನು, ನ್ಯಾಯವನ್ನು ನೆಲೆಗೊಳಿಸಲು ಮನುಷ್ಯನು ಹೋರಾಡಿದ್ದರಲ್ಲಿ ಕರ್ನಾಟಕವು ಮುಂಚೂಣಿಯಲ್ಲಿದೆ. ಕಲೆ ಮತ್ತು ಸಾಹಿತ್ಯ, ತತ್ವ ಮತ್ತು ಧರ್ಮ, ಸಾಹಸ ಮತ್ತು ಆಡಳಿತ, ಸಂಸ್ಕೃತಿ ಮತ್ತು ಜೀವನವಿಧಾನ ಇವೆಲ್ಲ ಮಾನವ ಸಮುದಾಯದ ಅಭಿವೃದ್ಧಿಗೆ ಅತ್ಯಗತ್ಯವಾದವು. ಇವುಗಳಲ್ಲಿ ಕರ್ನಾಟಕವು ನಾನಾ ಅಗ್ರಸ್ಥಾನದಲ್ಲಿದ್ದುದು ಕಂಡುಬರುತ್ತದೆ. ಭಾರತದ ಶುಭಕರವೂ ಮಹತ್ತರವೂ ಆದ ಸಮಸ್ತವೂ ದೇವಾಲಯಗಳ ನಿರ್ಮಾಣದಲ್ಲಿ ವಿನಿಯೋಗವಾಗಿದೆ ಎಂದು ಹೇಳಲಾಗಿದೆ. ಆದ್ದರಿಂದಲೇ ಬೇಲೂರು, ಹಳೇಬೀಡು, ಸೋಮನಾಥಪುರ ಮತ್ತು ಹಂಪಿಗಳ ದೇವಾಲಯಗಳು ಜಗತ್ತಿನ ನಾಲ್ಕೂ ಮೂಲೆಗಳಿಂದ ಕಲೆ ಮತ್ತು ಸೌಂದರ್ಯಪ್ರೇಮಿಗಳನ್ನು ಆಕರ್ಷಿಸಿವೆ. ಬಂಡೆಯಲ್ಲಿ ಕೊರೆದ ಬಾದಾಮಿ, ಐಹೊಳೆ ಮತ್ತು ಪಟ್ಟದಕಲ್ಲುಗಳ ದೇವಾಲಯಗಳು ಆಶ್ಚರ್ಯವನ್ನು ಹುಟ್ಟಿಸುತ್ತವೆ. ಶಂಕರ, ರಾಮಾನುಜ, ಮಧ್ವ ಮತ್ತು ಇತರ ಚಿಂತಕರು ಪ್ರವರ್ತಿಸಿದ ದರ್ಶನವು ಮಾನವನ ಆತ್ಮದ ಆಳವನ್ನು ತಟ್ಟುತ್ತದೆ. ಮಹಾತ್ಮರು, ಸಂತರು ಮತ್ತು ಸೂಫಿಗಳು ಬೋಧಿಸಿದ ಭಕ್ತಿಪಂಥವು ಜಾತಿ, ಮತ, ವರ್ಗಗಳ ತಡೆಗಳನ್ನು ದಾಟಿ ಹೋಗುತ್ತದೆ. ಭಗವದುನ್ಮತ್ತರಾದ ಶರಣರು ರಚಿಸಿದ ವಚನಗಳು ಜಾಗತಿಕಮಟ್ಟದಲ್ಲಿ ಜನರ ಚಿಂತನೆಯನ್ನು ಕೆರಳಿಸುತ್ತವೆ. ಕರ್ನಾಟಕದ ಗೊಮ್ಮಟೇಶ್ವರ ವಿಗ್ರಹ ಮತ್ತು ಗೋಲ್‌ಗುಂಬಜ್ ಇವು ಗಾಢವಾದ ಶ್ರದ್ಧೆಯ ಮತ್ತು ಸೂಕ್ಷ್ಮವಾದ ಕಲೆಯ ಸಂಕೇತವಾಗಿ ನಿಂತಿವೆ. ವಸಾಹತು ವಿಸ್ತರಣಕ್ಕೆ ಅದು ಒಡ್ಡಿದ ಪ್ರತಿಭಟನೆ ಸುಪ್ರಸಿದ್ಧವಾದ ನಾಲ್ಕು ಮೈಸೂರು ಯುದ್ಧಗಳಲ್ಲಿ ಫಲಿತಗೊಂಡು ರಾಷ್ಟ್ರೀಯತೆಯ ಹೆಮ್ಮೆಯನ್ನು ಹೆಚ್ಚಿಸುತ್ತಿದೆ. ಅದರ ಭಿನ್ನತೆಯಲ್ಲಿ ಏಕತೆ, ಅನೇಕತೆಯಲ್ಲಿ ಸಮಾನತೆ, ಚಂಚಲತೆಯಲ್ಲಿ ಸ್ಥಿರತೆ ಅದರ ಮಾನವೀಯತೆ ಮತ್ತು ಉದಾರತೆ, ಜೀವನದ ಉನ್ನತ ಮೌಲ್ಯಗಳನ್ನು ಅರಸಲು ನಡೆಸಿದ ಪ್ರಯತ್ನ ಇವುಗಳಿಂದ ಕರ್ನಾಟಕವು ಇತರರಿಗೆ ಅನುಕರಿಸಬೇಕಾದ ಮಾದರಿಯಾಗಿದೆ. ಇಂತಹ ಪ್ರದೇಶದ ಸಮಗ್ರ ಇತಿಹಾಸವು, ಈ ದೇಶವನ್ನು ಭವ್ಯತೆಯ ಶಿಖರಕ್ಕೆ ಕೊಂಡೊಯ್ಯಬೇಕೆಂದು ಬಯಸುವವರಿಗೆ ಮಾರ್ಗದರ್ಶನ ಮಾಡುವ ದೀಪಸ್ತಂಭವಾಗುತ್ತದೆ.

ಹಂಪಿಯ ಕನ್ನಡ ವಿಶ್ವವಿದ್ಯಾಲಯವು ಹಲವು ಸಂಪುಟಗಳಲ್ಲಿ ಕರ್ನಾಟಕದ ಸಮಗ್ರ ಇತಿಹಾಸ ರಚನೆಯ ಯೋಜನೆಯನ್ನು ಕೈಗೆತ್ತಿಕೊಂಡುದು ಪ್ರಶಂಸನೀಯವಾಗಿದೆ. ಸ್ಥಾಪನೆಗೊಂಡ ತರುಣದಲ್ಲೇ ವಿಶ್ವವಿದ್ಯಾಲಯವು ಇಂತಹ ಬೃಹತ್ ಯೋಜನೆಯನ್ನು ತನ್ನ ಸಮರ್ಥ, ಕಾರ್ಯಶೀಲ ಕುಲಪತಿ ಡಾ. ಚಂದ್ರಶೇಖರ ಕಂಬಾರ ಅವರ ಸಮರ್ಥ ಮಾರ್ಗದರ್ಶನದಲ್ಲಿ ಕಾರ್ಯಗತಗೊಳಿಸಿದುದು ತುಂಬಾ

ಸಂತೋಷ ಮತ್ತು ಹೆಮ್ಮೆಯ ವಿಷಯವಾಗಿದೆ. ಅವರ ಅವಿರತ ಪರಿಶ್ರಮವಿರದಿದ್ದರೆ ಈ ಯೋಜನೆಯು ಬೆಳಕು ಕಾಣುತ್ತಿರಲಿಲ್ಲ.

ಇತಿಹಾಸವನ್ನು ಬರೆಯುವುದು ಸುಲಭದ ಕೆಲಸವಲ್ಲ. ಯಾವನು ಬೇಕಾದರೂ ಇತಿಹಾಸವನ್ನು ನಿರ್ಮಿಸಬಹುದು, ಆದರೆ ಎಲ್ಲರೂ ಇತಿಹಾಸವನ್ನು ಬರೆಯಲಾರರು ಎಂಬ ಯುಕ್ತಿಯಲ್ಲಿ ಸತ್ಯವಿದೆ. ಈ ಸಂಪುಟಗಳಲ್ಲಿ ಕರ್ನಾಟಕ ಇತಿಹಾಸದ ವಿವಿಧ ಮುಖಗಳನ್ನು ಕುರಿತು ಹೊಸಬೆಳಕು ಚೆಲ್ಲಲಾಗಿದೆ ಎಂದೇನೂ ನಾವು ಹೇಳಿಕೊಳ್ಳುವುದಿಲ್ಲ. ಇದು ಅತ್ಯಂತ ಪ್ರಾಚೀನಕಾಲದಿಂದ ಇಂದಿನವರೆಗೆ ಮಾನವರ ಮತ್ತು ಘಟನೆಗಳ ವಿಸ್ತಾರವಾದ ಸಮೀಕ್ಷೆ. ತೀರಾ ಇತ್ತೀಚೆಗೆ ಬೆಳಕು ಕಂಡ ಸಂಶೋಧನೆಗಳನ್ನು ಅದರಲ್ಲಿ ಅಳವಡಿಸಲಾಗಿದೆ. ವಿಭಿನ್ನ ಮನಸ್ಸುಗಳು ಒಂದು ವಿಷಯದ ಮೇಲೆ ಕೇಂದ್ರೀಕರಿಸಿದಾಗ ಅವು ಏನಾದರೊಂದು ಅತ್ಯಮೂಲ್ಯವಾದ ಅಂಶವನ್ನು ಹೊರಪಡಿಸಬಹುದು. ಅದು ತನ್ನದೇ ವಿಶಿಷ್ಟ ಮಹತ್ವ ಹೊಂದಿರಬಹುದು. ಜ್ಞಾನದ ದ್ವೀಪವು ವಿಸ್ತಾರವಾಗಿದ್ದಷ್ಟು ಆಶ್ಚರ್ಯದ ಕರಾವಳಿಯ ಉದ್ದ ಹೆಚ್ಚಾಗುತ್ತದೆ. ಕರ್ನಾಟಕ ಇತಿಹಾಸವನ್ನು ಕುರಿತ ವಿದ್ವತ್ತಿನ ದ್ವೀಪವು ನಿಜವಾಗಿಯೂ ತುಂಬಾ ವಿಸ್ತಾರವಾದದ್ದು; ಈ ಸಂಪುಟಗಳು ಉದ್ಘೋಷಿಸುವ ಆಶ್ಚರ್ಯದ ಕರಾವಳಿಯು ಸುದೀರ್ಘವಾಗಿದೆಯೇ ಇಲ್ಲವೇ ಎಂಬುದನ್ನು ಕಾದು ನೋಡಬೇಕಾಗಿದೆ. ಪ್ರತಿಯೊಂದು ಜ್ಞಾನಶಾಖೆಯಲ್ಲಿ ಸ್ಫೋಟವಾಗಿದೆ. ಇತಿಹಾಸ ರಚನೆಯೂ ಈಚಿನ ದಿನಗಳಲ್ಲಿ ಸಾಗರದಷ್ಟು ವ್ಯಾಪಕವಾದ ಬದಲಾವಣೆಯನ್ನು ಕಂಡಿದೆ. ಈ ಸಂಪುಟಗಳು ಆ ಬದಲಾವಣೆಯನ್ನು ಪ್ರತಿಬಿಂಬಿಸುತ್ತಿವೆಯೇ ಎಂಬುದು ವಿಚಾರಣೀಯವಾಗಿದೆ. ಏನೇ ಇರಲಿ, ಪ್ರಸ್ತುತ ವಿನಮ್ರ ಪ್ರಯತ್ನದಿಂದ ಬಹುದೀರ್ಘಕಾಲದಿಂದಿದ್ದ ಅಗತ್ಯವು ಪೂರೈಕೆಯಾಗುತ್ತಿದೆ ಎನ್ನುವುದು ನಮಗೆ ಸಂತೋಷ ತಂದಿದೆ. ಇದು ಮುಂಬರುವ ವರ್ಷಗಳಲ್ಲಿ ಇನ್ನಷ್ಟು ಪರಿಷ್ಕರಣೆ, ಸುಧಾರಣೆಗಳಿಗೆ ಬಾಗಿಲು ತೆರೆಯಬಹುದು.

ಈ ಸಂಪುಟಗಳ ಪ್ರಧಾನ ಸಂಪಾದಕನಾಗಿ ಈ ಸಂಪುಟಗಳನ್ನು ಯೋಜಿಸಿ ಸಂಪಾದಿಸುವ ಹೊಣೆಗಾರಿಕೆಯನ್ನು ವಹಿಸಿದುದಕ್ಕಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ವಿವಿಧ ಸಂಪುಟಗಳ ಸಂಪಾದಕರಿಗೆ; ಹಾಗೂ ಈ ಬೃಹತ್ ಯೋಜನೆಯನ್ನು ಕಾರ್ಯಗತಗೊಳಿಸುವಲ್ಲಿ ಪೂರ್ಣ ಸಹಕಾರ ನೀಡಿ ತಮ್ಮ ಬರಹಗಳನ್ನು ಕೊಟ್ಟ ಲೇಖಕವೃಂದಕ್ಕೆ ಹೃತ್ಪೂರ್ವಕ ವಂದನೆಗಳು. ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಇತಿಹಾಸ ಪ್ರಾಧ್ಯಾಪಕರಾಗಿರುವ ಡಾ. ಎಸ್. ಚಂದ್ರಶೇಖರ್, ಪ್ರಸ್ತುತ ಸಂಪುಟವನ್ನು ಸಂಪಾದಿಸಿಕೊಟ್ಟಿದ್ದಾರೆ. ಈ ಸಂಪುಟದ ಎಲ್ಲಾ ಲೇಖನಗಳನ್ನು ಕನ್ನಡಕ್ಕೆ ಅನುವಾದಿಸಿಕೊಟ್ಟವರು ಸಿ.ನಾಗಣ್ಣ ಅವರು. ಅವರಿಗೆ ನಮ್ಮ ಧನ್ಯವಾದಗಳು.

ಈ ಯೋಜನೆಯನ್ನು ಅತ್ಯಂತ ಉಪಯುಕ್ತವೆನಿಸುವಲ್ಲಿ ತಮ್ಮ ಶ್ರದ್ಧೆ, ಉತ್ಸಾಹಗಳಿಂದ ಸೇವೆ ಸಲ್ಲಿಸಿದ ಕೆಲವು ವಿದ್ವಾಂಸರು ಮತ್ತು ಇತರರನ್ನು ಇಲ್ಲಿ ಸ್ಮರಿಸುವ ಅಗತ್ಯವಿದೆ. ಇಂತಹವರ ಪಟ್ಟಿ ದೊಡ್ಡದಾದರೂ ಪ್ರಸಾರಾಂಗದ ನಿರ್ದೇಶಕ ಪ್ರೊ. ಎ.ವಿ. ನಾವಡ, ಯೋಜನೆಯ ಸಂಯೋಜಕ ಪ್ರೊ. ಲಕ್ಷ್ಮಣ್ ತೆಲಗಾವಿ, ಸಹ ಸಂಯೋಜಕ ಸಿ.ಆರ್. ಗೋವಿಂದರಾಜು, ಯೋಜನಾ ಸಹಾಯಕ ಕೆ.ಎಲ್. ರಾಜಶೇಖರ್, ಕಲಾವಿದ ಕೆ.ಕೆ. ಮಕಾಳಿ ಮತ್ತು ಪುಸ್ತಕದ ಡಿ.ಟಿ.ಪಿ. ಮಾಡಿಕೊಟ್ಟ ಬೆಂಗಳೂರಿನ 'ಕಂಟ್ರೋಲ್ ಸಿಸ್ಟಮ್ಸ್ ಇಂಕ್'ನ ಬಿ.ಆರ್. ಬಸವರಾಜು ಮತ್ತು ಚಿದಾನಂದ ಹಾಗೂ ಬೆಂಗಳೂರು 'ಲಕ್ಷ್ಮಿ ಮುದ್ರಣಾಲಯ' ದ ಅಶೋಕ್ ಕುಮಾರ್ ಇವರುಗಳನ್ನಾದರೂ ಇಲ್ಲಿ ಸ್ಮರಿಸಲೇಬೇಕು. ಇಂಥ ಒಂದು ಅತ್ಯುತ್ತಮ ಕಾರ್ಯವನ್ನು ಈಡೇರಿಸುವಲ್ಲಿ ಇವರೆಲ್ಲರೂ ಸಾಕಷ್ಟು ಶ್ರಮವಹಿಸಿ ದುಡಿದಿದ್ದಾರೆ.

**ಬಿ. ಷೇಕ್ ಅಲಿ**

ಪ್ರಧಾನ ಸಂಪಾದಕ

# ಸಂಪುಟ ಸಂಪಾದಕರ ಮಾತು

ಭಾರತದ ಸ್ವಾತಂತ್ರ್ಯ ಸಂಗ್ರಾಮದ ಬಗ್ಗೆ ಬರೆದಿರುವ ಬಹುತೇಕ ಚರಿತ್ರಕಾರರು ದಕ್ಷಿಣ ಭಾರತವನ್ನು ಕಡೆಗಣಿಸಿರುವುದು ಎದ್ದು ಕಾಣುತ್ತದೆ. ಅಥವಾ ದಕ್ಷಿಣ ಭಾರತದ ಮಾದರಿಯ ಚಳವಳಿಯನ್ನು ತಮ್ಮ ತಾತ್ವಿಕ ತೆಕ್ಕೆಗೆ ತೆಗೆದುಕೊಳ್ಳಲಾಗದೆ ಗೊಂದಲಗೊಂಡಂತಿದೆ. ಆಧುನಿಕ ದಕ್ಷಿಣ ಭಾರತದ ಸಮಾಜ-ರಾಜಕಾರಣದ ಬಗ್ಗೆ ರಚಿತವಾಗಿರುವ ಕೃತಿಗಳು ಸ್ವಾತಂತ್ರ್ಯ ಚಳವಳಿಯನ್ನು ಒಳಗೊಳ್ಳದೆ ಸಮಾಜ-ರಾಜಕಾರಣ ಮತ್ತು ಸ್ವಾತಂತ್ರ್ಯ ಚಳವಳಿಗೆ ಸಂಬಂಧವೇ ಇರಲಿಲ್ಲವೇನೊ ಎನ್ನುವ ಸಂಶಯ ಮೂಡಿಸುತ್ತವೆ.

ಆದರೆ ಇಲ್ಲಿನ ಸಮಸ್ಯೆಯೇ ಸಂಕೀರ್ಣವಾದದ್ದು ಎನಿಸುತ್ತದೆ. ವಸಾಹತುಶಾಹಿ-ಆಳ್ವಿಕೆಯಲ್ಲಿ ರಾಷ್ಟ್ರೀಯ ಜನತಾಂತ್ರಿಕ ರಾಜಕಾರಣ ಆರಂಭವಾದಾಗ ದಕ್ಷಿಣ ಭಾರತ ಹಲವಾರು ಸಮಸ್ಯೆಗಳ ಆಗರವಾಗಿತ್ತು. ಈ ಸಮಸ್ಯೆಗಳು ಆ ಸಮಾಜದಲ್ಲಿ ಅಂದಿನ ಚಾರಿತ್ರಿಕ ಸಂದರ್ಭದಲ್ಲಿ ಸಹಜವಾದವೇ ಆಗಿದ್ದವು. ಏಕೆಂದರೆ ದಕ್ಷಿಣ ಭಾರತೀಯ ಸಮಾಜಕ್ಕೆ ತನ್ನದೇ ವಿಶಿಷ್ಟತೆ ಇದೆ. ನಿಜ, ಭಾರತೀಯ ಸಮಾಜವೇ ವಿಶಿಷ್ಟವಾದದ್ದು. ಆದರೆ ದಕ್ಷಿಣ ಭಾರತದ ವೈಶಿಷ್ಟ್ಯ ಬಹಳ ಸಂಕೀರ್ಣ ಸ್ವರೂಪದ್ದು. ಸಾಮಾಜಿಕ-ರಾಜಕೀಯ ಆಗು ಹೋಗುಗಳಲ್ಲಿ ಜಾತಿವ್ಯವಸ್ಥೆ, ಸಾಮಾಜಿಕ-ಧಾರ್ಮಿಕ ಸುಧಾರಣಾ ಕ್ಷೇತ್ರದಲ್ಲಿರಲಿ, ರಾಷ್ಟ್ರೀಯ ಚಳವಳಿಯಲ್ಲಿರಲಿ ವಹಿಸಿದ ಪಾತ್ರ ಊಹೆಗೆ-ವಿಶ್ಲೇಷಣೆಗೆ ನಿಲುಕುವಂಥದ್ದಲ್ಲ. ಇಲ್ಲಿಯ ಬಹುಮುಖೀ ಸಮಾಜ ಎಲ್ಲ ಅರ್ಥಗಳಲ್ಲೂ ಬಹುಮುಖಿ. ಒಂದೊಂದು ಶ್ರೇಣೀಕೃತ ಜಾತಿಯು, ವಿವಿಧ ಕಾಲಘಟ್ಟಗಳಲ್ಲಿ ತನ್ನದೇ ಆದ ಸಾಮಾಜಿಕ ಬೆಳವಣಿಗೆಯ ಹಂತದಲ್ಲಿದ್ದುದು ಸಹಜ. ಜನತಾಂತ್ರಿಕ ಪ್ರಭಾವಕ್ಕೊಳಗಾದ ಕೆಳ-ಹಿಂದುಳಿದ ಜಾತಿಗಳು ಸಮಾನತೆಗಾಗಿ ತುಡಿದದ್ದು ಸ್ವಾಭಾವಿಕ. ಆದರೆ ಈ ಚಲನೆಗೆ ಅವಶ್ಯಕವಾಗಿದ್ದ ಸಾಮಾಜಿಕ ವಿಸ್ತಾರ (space) ಅಲ್ಲಿರಲಿಲ್ಲ. ಆ ತುಡಿತ ಮತ್ತು ಅಭೀಪ್ಸೆಗಳನ್ನು ಒಪ್ಪಿಕೊಳ್ಳುವ ಮನೋಭಾವವೂ ಆ ಸಂದರ್ಭದಲ್ಲಿ ಸಾಧ್ಯವಿರಲಿಲ್ಲ.

ವಸಾಹತುಶಾಹಿ ನಿರ್ಬಂಧ-ಶೋಷಣೆ ಮತ್ತು ಜಾತಿಕಟ್ಟಳೆಗಳು ಒಂದಾಗಿ, ಜನ ಉಸಿರುಕಟ್ಟಿಸುವ ವಾತಾವರಣದಲ್ಲಿ ಬದುಕಬೇಕಾಗಿತ್ತು. ಹಾಗೆ ನೋಡಿದರೆ ಕೆಳ-ಹಿಂದುಳಿದ ಜಾತಿಗಳು ಆಂತರಿಕ, ಸಾಮಾಜಿಕ ನಿರಂಕುಶತೆಯಿಂದ ಬಿಡಿಸಿಕೊಳ್ಳಲು ಪ್ರಾರಂಭಿಸಿದ ಹೋರಾಟಗಳೇ ಕ್ರಮವಾಗಿ ಇಲ್ಲಿ ಸಾಮಾಜಿಕ ಬಿರುಕುಗಳು ಕಾಣಿಸಿಕೊಂಡು ಕಾಲಾನಂತರದಲ್ಲಿ ವಸಾಹತುಶಾಹಿ ವಿರೋಧಿ ರಾಷ್ಟ್ರೀಯ ಹೋರಾಟವಾಗಿ ಮಾರ್ಪಟ್ಟಿತು. ದಕ್ಷಿಣ ಭಾರತದಲ್ಲಿ ಕಾಣಿಸಿಕೊಂಡ ಈ ಸಂಘರ್ಷಗಳನ್ನು ಈ ಹಿನ್ನೆಲೆಯಲ್ಲಿ ನೋಡಿದಾಗಲೇ ಅಲ್ಲಿಯ ಸಮಾಜ-ರಾಜಕಾರಣ ಮತ್ತು ಸ್ವಾತಂತ್ರ್ಯ ಚಳವಳಿಗಳ ನಡುವಿನ ಅಂತರ್ ಸಂಬಂಧಗಳನ್ನು ಅರ್ಥಪೂರ್ಣವಾಗಿ ಕಾಣಲು ಸಾಧ್ಯ.

ಅಂದಿನ ಭಾರತದ ರಾಷ್ಟ್ರೀಯ ಪರಿಕಲ್ಪನೆ, ಎಲ್ಲ ಸಾಮಾಜಿಕ, ಜಾತಿ-ವರ್ಗಗಳ ಜನತಾಂತ್ರಿಕ ಆಶಯಗಳನ್ನು ಒಳಗೊಳ್ಳುವ ಹರವುಳ್ಳದ್ದಾಗಿರಲಿಲ್ಲ. ಅದರಲ್ಲೂ ಸಾಂಪ್ರದಾಯಿಕವಾಗಿ ಎಲ್ಲ ಅವಕಾಶಗಳಿಂದ

ವಂಚಿತವಾಗಿದ್ದವರ ಆಶಯಗಳನ್ನು ಅದು ತೀರಾ ನಿಕೃಷ್ಟವಾಗಿ ಕಂಡಿತು. ಇದು ರಾಷ್ಟ್ರೀಯ ನಾಯಕತ್ವ ವಹಿಸಿದ್ದ ಮೊದಲ ತಲೆಮಾರಿನ ನಾಯಕರ ಮಹಾಸೋಲು. ರಾಷ್ಟ್ರೀಯತೆ–ರಾಷ್ಟ್ರೀಯ ನಾಯಕರ ವಿಫಲತೆಯೇ, ವಸಾಹತುಶಾಹಿ ತನ್ನ ಕಬಂಧಬಾಹುಗಳನ್ನು ಚಾಚಿ ಎಲ್ಲವನ್ನೂ ಆವರಿಸಿಕೊಳ್ಳಲು ಅವಕಾಶ ಮಾಡಿಕೊಟ್ಟದ್ದು ನಮ್ಮ ಆಧುನಿಕ ಚರಿತ್ರೆಯ ದುರಂತ ವ್ಯಂಗ್ಯ. ಎಚ್ಚರಗೊಳ್ಳುತ್ತಾ, ಸಮಾನತೆಗಾಗಿ ತುಡಿಯುತ್ತಿದ್ದವರನ್ನು ಈ ನಾಯಕತ್ವ ಕಡೆಗಣಿಸಿದ್ದಷ್ಟೇ ಅಲ್ಲದೇ, ಅವರ ಬೇಡಿಕೆಗಳನ್ನು ವಿರೋಧಿಸಲು ಪ್ರಾರಂಭಿಸಿದಾಗ, ಕೆಳ ಮತ್ತು ಹಿಂದುಳಿದ ಜಾತಿ–ವರ್ಗಗಳವರು, ಆಗಾಗ ಬ್ರಿಟಿಷ್ ವಸಾಹತುಶಾಹಿಯ ಮಡಿಲಿಗೆ ಬಿದ್ದದ್ದೂ ಉಂಟು. ಬ್ರಿಟಿಷರ ಒಡೆದು ಆಳುವ ನೀತಿಗೆ ಸರಕಾದದ್ದೂ ನಿಜ. ಸಾಮಾಜಿಕ–ಧಾರ್ಮಿಕ ಸುಧಾರಣಾ ಚಳವಳಿಯ ನೇತಾರರಾದ, ಜ್ಯೋತಿರಾವ್ ಫುಲೆ, ವೀರೇಶಲಿಂಗಂ, ನಾರಾಯಣ ಗುರು ಮತ್ತು ಕೆಲಮಟ್ಟಿಗೆ ವಿವೇಕಾನಂದರು. ಹಾಗೆಯೇ ಪರಯ–ಆದಿದ್ರಾವಿಡ ಮುಂತಾದ ದಲಿತ ಗುಂಪುಗಳು, ಧಾರ್ಮಿಕ ಅಲ್ಪಸಂಖ್ಯಾತರಾದ ಮುಸ್ಲಿಮರು, ಭಾರತೀಯ ಕ್ರೈಸ್ತರು ಅಥವಾ ಹಿಂದುಳಿದ ಬ್ರಾಹ್ಮಣೇತರರು, ಒಂದಲ್ಲ ಒಂದು ಸಂದರ್ಭದಲ್ಲಿ ರಾಷ್ಟ್ರೀಯತೆ, ರಾಷ್ಟ್ರೀಯ ನಾಯಕತ್ವ, ರಾಷ್ಟ್ರೀಯ ಕಾಂಗ್ರೆಸ್ಸಿನ ವಿಮರ್ಶಕರೂ ಟೀಕಾಕಾರರೂ ಆದರು. ರಾಷ್ಟ್ರೀಯ ಕಾಂಗ್ರೆಸ್ ನಾಯಕತ್ವವಂತೂ–ಗಾಂಧೀಜಿ ಆಗಮನದವರೆಗೆ–ಈ ಎಲ್ಲ ವರ್ಗಗಳ ಬೇಡಿಕೆಗಳನ್ನು ವಿರೋಧಿಸಿದ್ದೂ ಉಂಟು. ಆದರೆ ಈ ಅನಾಹುತಕಾರಿ ಬೆಳವಣಿಗೆಗ ಪ್ರಮುಖ ಕಾರಣ ವಸಾಹತುಶಾಹಿಯ ಕುಟಿಲತೆಯನ್ನು ಅರಿಯಲು ವಿಫಲವಾದ, ಅರಿತರೂ ತಮ್ಮ ಪಟ್ಟಭದ್ರ ಹಿತರಕ್ಷಣೆಗಾಗಿ ಅದನ್ನು ಕಡೆಗಣಿಸಿದ, ರಾಷ್ಟ್ರೀಯ ನಾಯಕತ್ವ. ದಕ್ಷಿಣ ಭಾರತದ ಕಾಂಗ್ರೆಸ್ ಮತ್ತು ಅದರ ನಾಯಕತ್ವವಂತೂ ಸಮಾನತೆಗಾಗಿ ಮೀಸಲಾತಿ, ಸಮಾನ ಅವಕಾಶಗಳಿಗಾಗಿ ಹೆಚ್ಚುವರಿ ಸವಲತ್ತು ಮುಂತಾದ ದಲಿತ–ಹಿಂದುಳಿದವರ ಬೇಡಿಕೆಗಳನ್ನು ತಿರಸ್ಕರಿಸಿತು. ಸಾಮಾಜಿಕ ಅಸಮತೆ, ಅಸ್ಪೃಶ್ಯತೆ, ಲಿಂಗಾಧಾರಿತ ಅಸಮತೆ ಕುರಿತಾದ ಸಮಸ್ಯೆಗಳನ್ನು ಕುರಿತು ಚರ್ಚಿಸಲೂ ದಕ್ಷಿಣ ಭಾರತದ ಹಲವಾರು ನಾಯಕರು ತಯಾರಿರಲಿಲ್ಲ. ಈ ನಿಲುವು ಭಾರತೀಯ ರಾಷ್ಟ್ರೀಯತೆ, ರಾಷ್ಟ್ರೀಯ ಚಳವಳಿಗಳು ಬೆಳೆಯಲು ಕಂಟಕಪ್ರಾಯವಾದವು. ಎಲ್ಲಾ ಸಾಮಾಜಿಕ ವರ್ಗಗಳೂ ಅದರಲ್ಲೂ ಬಹುಸಂಖ್ಯಾತರಾದ ಹಿಂದುಳಿದ ಬ್ರಾಹ್ಮಣೇತರ–ದಲಿತರು ರಾಷ್ಟ್ರೀಯವಾಹಿನಿಗೆ ಹರಿದುಬರಲು ತಡೆಯೊಡ್ಡಿದವು.

ಕರ್ನಾಟಕದ ಸ್ವಾತಂತ್ರ್ಯ ಚಳವಳಿಯಂತೂ ಮತ್ತಷ್ಟು ಸಂಕೀರ್ಣ ಸ್ವರೂಪದ್ದು. ವಸಾಹತುಶಾಹಿ ಮತ್ತು ರಾಷ್ಟ್ರೀಯ ಪರಿಕಲ್ಪನೆಗಳ ಜೊತೆಗೆ ಇಲ್ಲಿಯ ಜನ, ಇನ್ನೊಂದು ಬಲಿಷ್ಠ ಪರಿಕಲ್ಪನೆಯ ಸುಳಿಗೂ ಸಿಕ್ಕರು. ಅದೆಂದರೆ, ಇಲ್ಲಿಯ ದೇಶೀ ಸಂಸ್ಥಾನಗಳು ಮತ್ತು ಅವುಗಳ ಪ್ರಭುಗಳು. ಕರ್ನಾಟಕ ಒಟ್ಟಾರೆ ವಸಾಹತುಶಾಹಿ ಆಕ್ರಮಣಕ್ಕೆ ತುತ್ತಾಗಿದ್ದರೂ ಈ ಪ್ರದೇಶ ವಸಾಹತುಶಾಹಿ ಮತ್ತು ಹಲವಾರು ಸಂಸ್ಥಾನಗಳಲ್ಲಿ, ಹರಿದು ಹಂಚಿಹೋಗಿದ್ದಿತು. ಇಬ್ಬಗೆಯ ದಮನ–ಶೋಷಣೆಗೆ ಒಳಗಾಗಿತ್ತು. ಆದ್ದರಿಂದಲೇ ಈ ಘಟ್ಟದ ಕರ್ನಾಟಕದ ಇತಿಹಾಸವನ್ನು ಹಲವು ಆಯಾಮಗಳಿಂದ ಪರಿವೀಕ್ಷಿಸಬೇಕಾಗುತ್ತದೆ. ಕರ್ನಾಟಕದ ಸಾಮಾಜಿಕ ವರ್ಗಗಳು ಮೂರು ಬಲಿಷ್ಠ ಪರಿಕಲ್ಪನೆ–ಶಕ್ತಿಗಳ ಪ್ರಭಾವಗಳಿಗೆ ಮತ್ತು ಅವುಗಳು ಒಡ್ಡಿದ ಸಂಕೀರ್ಣ ಸಮಸ್ಯೆಗಳಿಗೆ ಒಳಗಾದವು. ಆದರೆ, ಕ್ರಮೇಣ ಈ ಸಂಕೀರ್ಣತೆಯನ್ನು ಅರ್ಥಮಾಡಿಕೊಳ್ಳುವ ಸಾಮರ್ಥ್ಯವನ್ನು ಪಡೆದುಕೊಂಡವು.

ಸ್ವಾತಂತ್ರ್ಯ ಚಳವಳಿ, ಕಾಂಗ್ರೆಸ್ ಮತ್ತು ಅವುಗಳ ನಾಯಕತ್ವ ಪರಿಸ್ಥಿತಿಯನ್ನು ಅರಿತು, ವಸ್ತುನಿಷ್ಠವಾಗಿ, ವಿವಿಧ ಸಾಮಾಜಿಕ ವರ್ಗಗಳ ಆಶೋತ್ತರಗಳಿಗ ಕ್ರಮೇಣ ಸ್ಪಂದಿಸಿತು. ಈ ಆರೋಗ್ಯಕರ ಬೆಳವಣಿಗೆಯೇ ಎಲ್ಲ ಸಾಮಾಜಿಕ ವರ್ಗಗಳು ರಾಷ್ಟ್ರೀಯ ಆಂದೋಲನದಲ್ಲಿ ಭಾಗವಹಿಸಲು ಸಹಾಯಕವಾಯಿತು. ರಾಷ್ಟ್ರೀಯವಾಹಿನಿ ನಿಜವಾದ ಅರ್ಥದಲ್ಲಿ ರಾಷ್ಟ್ರೀಯವಾಹಿನಿಯಾಯಿತು. ಚಳವಳಿಯ ಕೆಲವು ಘಟ್ಟಗಳಲ್ಲಿ

ಕೆಲವು ಆತಂಕಕಾರಿ ಬೆಳವಣಿಗೆಗಳಾಗಿ, ಸ್ವಾತಂತ್ರ್ಯ ಚಳವಳಿ ಕವಲೊಡೆಯುವ ಅಪಾಯವೂ ಗೋಚರಿಸಿತ್ತು. ಇಲ್ಲಿಯ ಸಾಂಸ್ಕೃತಿಕ – ಭಾಷಾ ಚಳವಳಿ, ಹರಿದು ಹಂಚಿಹೋಗಿದ್ದ ಕನ್ನಡ ಪ್ರಾಂತಗಳನ್ನು ಏಕೀಕರಣಗೊಳಿಸಲು ನಡೆದ ಚಳವಳಿ, ದೇಶೀ ರಾಜರುಗಳ ನಿರಂಕುಶ ಆಳ್ವಿಕೆಯಲ್ಲಿ ಸೊರಗುತ್ತಿದ್ದವರ ಸಮಸ್ಯೆಗಳು, ವಸಾಹತು ಶಾಹಿಯ ಒಡೆದು ಆಳುವ ನೀತಿಯೊಡ್ಡಿದ ಸಮಸ್ಯೆಗಳು ಹಲವಾರು. ಆದರೂ ಬಹುತೇಕ ಈ ಎಲ್ಲ ಸಮಸ್ಯೆಗಳಿಗೂ ಪರಿಹಾರ ಕಂಡುಕೊಳ್ಳಲಾಯಿತು. ಚಳವಳಿಯ ಏಕತೆಯನ್ನು ಉಳಿಸಿಕೊಳ್ಳಲು ಪ್ರಾಂತೀಯ ಮತ್ತು ರಾಷ್ಟ್ರೀಯ ನಾಯಕತ್ವ ಪ್ರಯತ್ನಿಸಿ ಸಫಲವಾಯಿತು.

ಮೇಲೆ ಚರ್ಚಿಸಿದ ಅಂಶಗಳ ವಿವರವಾದ ವಿಶ್ಲೇಷಣೆಯೇ ಈ ಅಧ್ಯಯನ. ಆದರೂ ಇದನ್ನು ಸಮಗ್ರಕೃತಿ ಎಂದು ಕರೆಯಲಾರೆ. ಚರಿತ್ರೆಯ ಅಧ್ಯಯನಗಳು ಸಮಗ್ರವಾಗಲಾರವೆಂಬ ನಂಬಿಕೆ ನನ್ನದು. ಈ ಘಟ್ಟದ ಇತಿಹಾಸದ ಆಳವಾದ ವಿಸ್ತಾರವಾದ ಅಧ್ಯಯನಗಳ ಅವಶ್ಯಕತೆ ಬಹಳವಿದೆ ಎಂದು ವಿನಮ್ರನಾಗಿ ಇಲ್ಲಿ ಸೂಚಿಸಬಯಸುತ್ತೇನೆ. ಈ ಕೃತಿಯ ಬರವಣಿಗೆಯಲ್ಲಿ ನನ್ನ ಕೆಲವು ಸಹೋದ್ಯೋಗಿಗಳ, ಸ್ನೇಹಿತರ ಸಹಾಯ ಪಡೆದಿದ್ದೇನೆ. ಇಲ್ಲಿಯ ಅಭಿಪ್ರಾಯಗಳಿಗೆ ಆಯಾ ಲೇಖಕರೇ ಜವಾಬ್ದಾರರು. ಎಲ್ಲ ರಚನಾತ್ಮಕ ವಿಮರ್ಶೆಗಳಿಗೂ ಸದಾ ಸ್ವಾಗತವಿದೆ. ಹಾಗೆಯೇ ಹಲವು ಸಂಘ–ಸಂಸ್ಥೆಗಳು ಅಮೂಲ್ಯ ನೆರವು ನೀಡಿವೆ. ಕರ್ನಾಟಕ, ತಮಿಳುನಾಡು ಮತ್ತು ನವದೆಹಲಿಯ ಪತ್ರಾಗಾರಗಳಲ್ಲಿ ವಿಷಯ ಸಂಗ್ರಹಣೆಗೆ ನೆರವಾದವರನ್ನು ಮರೆಯಲು ಸಾಧ್ಯವೇ ಇಲ್ಲ. ಕರ್ನಾಟಕ ಪತ್ರಾಗಾರ ಹಲವು ರೀತಿಯಲ್ಲಿ ನೆರವು ನೀಡಿದೆ. ಈ ಕೃತಿಯಲ್ಲಿ ಅಚ್ಚಾಗಿರುವ ಕೆಲವು ಫೋಟೋಗಳು ಈ ಪತ್ರಾಗಾರದಿಂದ ಪಡೆದವು.

ಕನ್ನಡ ವಿಶ್ವವಿದ್ಯಾಲಯದ ಕುಲಪತಿ ಪ್ರೊ. ಚಂದ್ರಶೇಖರ ಕಂಬಾರರ ದೂರದೃಷ್ಟಿಯಿಂದಾಗಿ ಈ ಸಂಪುಟಗಳ ಯೋಜನೆ ಸಾಕಾರಗೊಂಡಿದೆ. ಹಿರಿಯ ಚರಿತ್ರಕಾರರೂ ಈ ಸಂಪುಟಗಳ ಪ್ರಧಾನ ಸಂಪಾದಕರೂ ಆದ ಪ್ರೊ. ಬಿ. ಷೇಕ್ ಅಲಿ ಅವರು ಈ ಯೋಜನೆಯ ಯಶಸ್ಸಿಗಾಗಿ ಅವಿರತ ಶ್ರಮಪಟ್ಟಿದ್ದಾರೆ. ಈ ಹಿರಿಯರನ್ನು ಪ್ರೀತಿಯಿಂದ ನೆನೆಯುತ್ತೇನೆ. ಎಂದಿನಂತೆ ಪ್ರೊ. ಎಸ್. ಶೆಟ್ಟರ್ ಬೆನ್ನು ಚಪ್ಪರಿಸಿದ್ದಾರೆ. ಕಲ್ಗುಡಿ, ಕೆ.ವಿ. ನಾರಾಯಣ, ಕರಿಗೌಡ, ಅಗ್ರಹಾರ ಕೃಷ್ಣಮೂರ್ತಿ, ಡಿ.ಆರ್. ನಾಗರಾಜ ಮುಂತಾದ ಗೆಳೆಯರು ಸಲಹೆ–ಸಹಕಾರ ನೀಡಿದ್ದಾರೆ. ಪ್ರೀತಿಯ ಶಿಷ್ಯರಾದ ಎಂ. ಜಮುನ, ಇಬ್ಬರೂ ಅಶ್ವಥನಾರಾಯಣರು, ಎಂ.ವಿ. ಉಷ, ಸಿ.ಆರ್. ಗೋವಿಂದರಾಜು, ಬಿ.ಸಿ. ಮಹಾಬಲೇಶ್ವರಪ್ಪ, ತನುಜ ಅನೇಕ ರೀತಿಯಲ್ಲಿ ನೆರವಾಗಿದ್ದಾರೆ. ನನ್ನ ಬಾಳಸಂಗಾತಿ ಗಿರಿಜಳನ್ನು ನೆನೆಯುವುದು ಕೇವಲ ಔಪಚಾರಿಕವಾಗಿ ಅಲ್ಲ. ಈ ಸಂಪುಟವನ್ನು ಕನ್ನಡಕ್ಕೆ ಅನುವಾದಿಸಿಕೊಟ್ಟವರು ಸಿ. ನಾಗಣ್ಣ ಅವರು. 'ಕಂಟ್ರೋಲ್ ಸಿಸ್ಟಮ್ಸ್ ಇಂಕ್'ನ ಗೆಳೆಯರಾದ ಬಿ.ಆರ್. ಬಸವರಾಜು ಮತ್ತು ಚಿದಾನಂದ ಅಂದವಾಗಿ ಡಿ.ಟಿ.ಪಿ. ಕೆಲಸ ನಿರ್ವಹಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯದ ಗೆಳೆಯರಾದ ಪ್ರೊ. ಲಕ್ಷ್ಮಣ್ ತೆಲಗಾವಿ, ಕೆ.ಎಲ್. ರಾಜಶೇಖರ್ ಶ್ರದ್ಧೆಯಿಂದ ಮುದ್ರಣಕಾರ್ಯದಲ್ಲಿ ನೆರವಾಗಿದ್ದಾರೆ. ಇವರೆಲ್ಲರಿಗೂ ಕೃತಜ್ಞತೆಗಳು.

**ಎಸ್. ಚಂದ್ರಶೇಖರ್**
ಸಂಪುಟ ಸಂಪಾದಕರು

# ಪರಿವಿಡಿ

ಹೋಂರೂಲ್ ಚಳವಳಿಯ ಸಮಾವೇಶ, ಸಂಕೇಶ್ವರ - ೧೯೧೬

ನಿಂತಿರುವವರು: ಡಿ.ಎಸ್. ಚಂದ್‌ಗಡ್‌ಕರ, ಪಿ.ಜೆ. ಕುಲಕರ್ಣಿ, ಬಿ.ಎಚ್. ದೇಶಪಾಂಡೆ

ಕುರ್ಚಿ ಮೇಲೆ ಕುಳಿತಿರುವವರು: ಲೋಕಮಾನ್ಯ ತಿಲಕ್, ದಾದಾಸಾಹೇಬ್ ಕಪರ್ದೆ

ಕುಳಿತಿರುವವರು: ನೀಲಕಂಠ ರಾ. ದೇಶಪಾಂಡೆ, ವಾಮನ ರಾ. ದೇಶಪಾಂಡೆ, ಅಪ್ಪಾಜಿಕೃಷ್ಣ ದೇಶಪಾಂಡೆ



೧೯೧೭ರಲ್ಲಿ ತಿಲಕರು ಬೆಳಗಾವಿಗೆ ಬಂದಾಗ; ಬಲಗಡೆಯಿಂದ ಕೊನೆಯವರು ಗಂಗಾಧರರಾವ್ ದೇಶಪಾಂಡೆ



ಬೆಂಗಳೂರಿನ ಕಾಂಗ್ರೆಸ್ ಕಾರ್ಯಕರ್ತರು ಹಾಗೂ ಸುಲ್ತಾನ್‌ಪೇಟೆ ಗಣಪತಿ ಗಲಭೆಗೆ ಕಾರಣಕರ್ತರು:
ಜಮಖಂಡಿ ಭೀಮರಾವ್, ಎಚ್.ವಿ. ಸುಬ್ರಹ್ಮಣ್ಯ, ರಾಮಲಾಲ್ ತಿವಾರಿ

ಖಿಲಾಫತ್ ಚಳವಳಿಯ ಬೆಂಗಳೂರಿನ ಕೆಲವು ನಾಯಕರು



ಹಾನಗಲ್ ತಾಲ್ಲೂಕು ಬೋರ್ಡ್ ಕಚೇರಿಯ
ಆವರಣದಲ್ಲಿ ಸ್ವರಾಜ್ಯ ಧ್ವಜಾರೋಹಣ



ಕಾರ್ನಾಡು ಸದಾಶಿವರಾಯರು
ಕಾನೂನುಭಂಗ ಚಳವಳಿಗಾರರನ್ನು ಉದ್ದೇಶಿಸಿ ಮಾತನಾಡುತ್ತಿರುವುದು



ಮಂಗಳೂರಿನಲ್ಲಿ ಗಾಂಧೀಜಿ - ೧೯೩೧



ಉತ್ತರ ಕನ್ನಡ ಕಡವೆಯಲ್ಲಿ ಧ್ವಜವಂದನೆ - ೨೬.೧.೧೯೩೨

ಸಿರಸಿಯ ಕಾಂಗ್ರೆಸ್ ಕಾರ್ಯಕರ್ತರೊಂದಿಗೆ ಗಾಂಧೀಜಿ - ೧೯೩೪



ಕರ್ನಾಟಕ ವ್ಯಾಯಾಮ ಶಿಕ್ಷಣ ಶಿಬಿರ, ಮೈಸೂರು - ೧೯೩೧:
ಜವಾಹರಲಾಲ್ ನೆಹರು ಅವರೊಂದಿಗೆ ಕುಳಿತಿರುವವರು
ಆರ್.ಜಿ. ಸ್ವಾಮಿ, ಕೆ. ಸುಬ್ಬರಾವ್, ಅಗರಂ ರಂಗಯ್ಯ, ಕುಮಾರಿ ಇಂದಿರಾ ನೆಹರು, ಕಮಲಾ ನೆಹರು,
ಪಿ.ಆರ್. ರಂಗನಾಥನಾಯಕ, ಪಾಲಪಳ್ಳಿ ಸೀತಾರಾಮಯ್ಯ, ಎಲ್.ವಿ. ರಾಜಗೋಪಾಲ ಮತ್ತಿತರರು



ಉತ್ತರ ಕನ್ನಡದ ಮಹಿಳಾ ಸಮ್ಮೇಳನ



ಶಿವಪುರ ಧ್ವಜಸತ್ಯಾಗ್ರಹ; ಧ್ವಜಾರೋಹಣ - ೧೯೩೮



ಶಿವಪುರ ಧ್ವಜಸತ್ಯಾಗ್ರಹದಲ್ಲಿ ಸ್ವಯಂಸೇವಕರು
ಊಟ ಮಾಡುತ್ತಿರುವ ದೃಶ್ಯ

ಪಿದುರಾಶ್ವತ್ಥ - ೧೯೩೯



ಪಿದುರಾಶ್ವತ್ಥ ಕಾಂಗ್ರೆಸ್ ಸ್ವದೇಶಿ ಮತ್ತು ಗ್ರಾಮ ಕೈಗಾರಿಕಾ ಪ್ರದರ್ಶನದ ಉದ್ಘಾಟನಾ ಸಮಾರಂಭ



ವಿದುರಾಶ್ವತ್ಥ ಕಾಂಗ್ರೆಸ್ ಅಧಿವೇಶನದ ಒಂದು ದೃಶ್ಯ



ವಿದುರಾಶ್ವತ್ಥ ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷ ಎಸ್.ಸಿ. ದಾಸಪ್ಪನವರ ಮೆರವಣಿಗೆ

ಮೈಸೂರು ಸರ್ಕಾರ ಮತ್ತು ಮೈಸೂರು ಕಾಂಗ್ರೆಸ್ ನಡುವಿನ ಒಪ್ಪಂದದಂತೆ
ಸಂಸ್ಥಾನಿ ಮತ್ತು ಕಾಂಗ್ರೆಸ್ ಧ್ವಜಗಳ ಆರೋಹಣ, ವಿದುರಾಶ್ವತ್ಥ - ೧೯೩೯

ವಿದುರಾಶ್ವತ್ಥ ಕಾಂಗ್ರೆಸ್‌ನಲ್ಲಿ ಭಾಗವಹಿಸಿದ ಕೆಲವು ನಾಯಕರು

ವಿದುರಾಶ್ವತ್ಥ ಕಾಂಗ್ರೆಸ್‌ನಲ್ಲಿ ಪಟ್ಟಾಭಿ ಸೀತಾರಾಮಯ್ಯನವರೊಂದಿಗೆ
ಮೈಸೂರು ಕಾಂಗ್ರೆಸ್ ಅಧ್ಯಕ್ಷ ಎಚ್. ಸಿ. ದಾಸಪ್ಪ



ಬೆಂಗಳೂರಿನ ಕಾಂಗ್ರೆಸ್ ಕಚೇರಿಯಲ್ಲಿ
ಅಖಿಲ ಭಾರತ ಕಾಂಗ್ರೆಸ್ ಅಧ್ಯಕ್ಷ
ಬಾಬು ರಾಜೇಂದ್ರಪ್ರಸಾದ್

೧೯೪೨ರ ಭಾರತ ಬಿಟ್ಟು ತೊಲಗಿ ಚಳವಳಿಯ ಭೂಗತ ಕಾರ್ಯಕರ್ತರೊಂದಿಗೆ
ಮೈಲಾರ ಮಹದೇವಪ್ಪ



೧೯೪೨ರಲ್ಲಿ ಸ್ವಾತಂತ್ರ್ಯ ಘೋಷಿಸಿಕೊಂಡ ಈಸೂರು ಗ್ರಾಮ

ಅಖಿಲ ಮೈಸೂರು ಕಾಂಗ್ರೆಸ್ ಸಮಿತಿಯ ಅಧಿವೇಶನ, ಬೀರೂರು



ಹುಲಕುಂದದ ರಾಷ್ಟ್ರಪ್ರೇಮಿ ಗೀಗೀ ಪದಕಾರರು
ಬಸಪ್ಪ ಬೆಟಗೇರಿ, ಹನುಮಂತಪ್ಪ ಮಿರ್ಜಿ, ಕಲಪ್ಪ ಬೂದಿ, ಸಂಗಯ್ಯ ಸಂಬಳ



ಶಿವಪುರ ಧ್ವಜಸತ್ಯಾಗ್ರಹದ ಸ್ಮಾರಕ ಸೌಧ



ಕಂಠೀರವ ನರಸಿಂಹರಾಜ ಒಡೆಯರ್



ನಾಲ್ವಡಿ ಕೃಷ್ಣರಾಜ ಒಡೆಯರ್



ಸರ್ ಎಂ. ಕಾಂತರಾಜೇ ಅರಸ್


ಸರ್. ಎಂ. ವಿಶ್ವೇಶ್ವರಯ್ಯ


ಸರ್ ಮಿರ್ಜಾ ಇಸ್ಮಾಯಿಲ್


ಆರ್. ಆರ್. ದಿವಾಕರ್


ಕೆಂಗಲ್ ಹನುಮಂತಯ್ಯ


ಶಾಂತಕವಿ


ವೆಂಕಟರಂಗೋಕಟ್ಟಿ


ಗಳಗನಾಥ


ಆಲೂರ ವೆಂಕಟರಾವ್


ಗೋವಿಂದ ಪೈ



ಬಿ. ಎಂ. ಶ್ರೀಕಂಠಯ್ಯ



ಡಿ. ವಿ. ಗುಂಡಪ್ಪ



ಎಂ. ವೆಂಕಟಕೃಷ್ಣಯ್ಯ



ದ. ರಾ. ಬೇಂದ್ರೆ



ಕುವೆಂಪು



ಪಿ. ಸೀತಾರಾಮಯ್ಯ



ಜಿ. ಪಿ. ರಾಜರತ್ನಂ



ಮಾಸ್ತಿ ವೆಂಕಟೇಶ್ ಅಯ್ಯಂಗಾರ್



ಶಿವರಾಮ ಕಾರಂತ

## ಅಧ್ಯಾಯ : ಒಂದು

# ಕರ್ನಾಟಕದ ಸ್ವಾತಂತ್ರ್ಯ ಚಳವಳಿಯ ಅಧ್ಯಯನಗಳು

"ಚರಿತ್ರೆಯ ಪಠ್ಯಪುಸ್ತಕಗಳ ಮೂಲಕ ನಮ್ಮ ಶಾಲೆ ಕಾಲೇಜುಗಳಲ್ಲಿ ಇತಿಹಾಸದ ತಿರುಚಿದ ಮಾದರಿಗಳನ್ನು ಬೋಧಿಸುವವರೆಗೆ ನಮ್ಮ ದೇಶದಲ್ಲಿ ಕೋಮು ಸಾಮರಸ್ಯವನ್ನು ಶಾಶ್ವತವಾಗಿ ಸ್ಥಾಪಿಸಲು ಸಾಧ್ಯವಾಗುವುದಿಲ್ಲ" .

**.....ಗಾಂಧೀಜಿ**

ಕರ್ನಾಟಕದ ಸ್ವಾತಂತ್ರ್ಯ ಚಳವಳಿ ಇತಿಹಾಸವನ್ನು ಕುರಿತಂತೆ ಸೈದ್ಧಾಂತಿಕ ತಳಹದಿಯನ್ನು ಅಧ್ಯಯನ ಮಾಡಲು ಇಲ್ಲಿ ಪ್ರಯತ್ನಿಸಲಾಗಿದೆ. ವೈಯಕ್ತಿಕವಾದ ಸ್ಮೃತಿಗಳು, ಪ್ರಾದೇಶಿಕ ಹಾಗೂ ಜನಪ್ರಿಯವಾದ ಬರವಣಿಗೆಗಳನ್ನು ಗಮನಿಸಿದರೆ ಈ ಸಂಖ್ಯೆ ಐವತ್ತು[1] ಗ್ರಂಥಗಳನ್ನು ಮೀರಬಹುದಾದರೂ ಕೇವಲ ಒಂದೇ ಒಂದು ಕೃತಿಯಲ್ಲಿ ಮಾತ್ರ ಈ ಚಳವಳಿಯ ಉಗಮ ಮತ್ತು ಬೆಳವಣಿಗೆಯನ್ನು ದಾಖಲು ಮಾಡಲಾಗಿದೆ.[2] ಈ ಬರವಣಿಗೆಗಳಿಗೆ ಯಾವ ಸಿದ್ಧಾಂತಗಳು ಆಧಾರವಾಗಿವೆ ಎಂಬುದನ್ನು ಈ ಅಧ್ಯಯನ ಗಮನಕ್ಕೆ ತೆಗೆದುಕೊಳ್ಳುತ್ತದೆ. ಹೆಚ್ಚು ವೈಯಕ್ತಿಕವಾಗಿ ಕಂಡುಬಂದ ಬರವಣಿಗೆಗಳು ಈ ಅಧ್ಯಯನದ ಉದ್ದೇಶಕ್ಕೆ ಹೊರತಾಗಿರುವ ಕಾರಣ ಅದನ್ನು ಕೈಬಿಡಲಾಗಿದೆ.[3]

ಈ ಬರವಣಿಗೆಗಳನ್ನು ಓದಿದ ಮೇಲೆ ಒಂದು ವಿಷಯ ಸ್ಪಷ್ಟವಾಗುತ್ತದೆ. ತನ್ನ ಕರ್ತವ್ಯವನ್ನು ವಸ್ತುನಿಷ್ಠವಾಗಿ ನಿರ್ವಹಿಸಿದಾಗ, ಸಂಬಂಧಪಟ್ಟ ಲೇಖಕರು ತೋರಿಸಬಹುದಾದ ಪ್ರತಿಕ್ರಿಯೆಗಳ ಬಗ್ಗೆ ತಲೆಕೆಡಿಸಿಕೊಳ್ಳದೆ ನೋಡಿದಾಗ, ಸ್ವಾತಂತ್ರ್ಯ ಹೋರಾಟದ ಬಗ್ಗೆ ಬರೆದ ಚರಿತ್ರಕಾರರು ಮತ್ತು ಲೇಖಕರು ಸಮಕಾಲೀನ ಐತಿಹಾಸಿಕ ತಿಳುವಳಿಕೆಯಲ್ಲಿ ಮೂಡಿಬಂದಿರುವ ಹೊಸ ಧೋರಣೆಗಳಿಂದ ಸ್ವಲ್ಪವೂ ವಿಚಲಿತವಾಗಿಲ್ಲವೆನ್ನುವುದೇ ಆ ವಿಷಯ. ಈ ಮಾತಿಗೆ ಕೆಲವೇ ಕೆಲವು ಅಪವಾದಗಳಿವೆ. ಸಾಧ್ಯವಿರುವಷ್ಟು ಮಟ್ಟಿಗಿನ ವಸ್ತುನಿಷ್ಠತೆಯೇ ತನ್ನ ಗುರಿ ಎಂದು ತಿಳಿದಿರುವ, ಚರಿತ್ರಲೇಖನಶಾಸ್ತ್ರದ ವಿದ್ಯಾರ್ಥಿಯು ಆಧುನಿಕ ಕರ್ನಾಟಕದ ಇತಿಹಾಸಕಾರನು ಇನ್ನೂ ಹತ್ತೊಂಬತ್ತನೆಯ ಶತಮಾನದ ರಾಷ್ಟ್ರೀಯತಾವಾದಿ ವಸಾಹತುವಾದಿ ಚರಿತ್ರ ಲೇಖನ ಶಾಸ್ತ್ರದ ದುಷ್ಪರಿಣಾಮಗಳಿಂದ ತಪ್ಪಿಸಿಕೊಂಡಿಲ್ಲವೆಂದು ಹೇಳಬೇಕಾಗುತ್ತದೆ.[4]

ಕರ್ನಾಟಕದಲ್ಲಿ ಸ್ವಾತಂತ್ರ್ಯ ಚಳವಳಿಯನ್ನು ಕುರಿತ ಗ್ರಂಥಗಳು, ಕೆಲವು ಅಪವಾದಗಳನ್ನುಳಿದು[5] ರಾಷ್ಟ್ರೀಯತೆಯ ಉಗಮವನ್ನು ಹತ್ತೊಂಬತ್ತನೆಯ ಶತಮಾನದ ಹಿಂದೂ ಪುನರುಜ್ಜೀವನವಾದಕ್ಕೆ[6] ತಳಕು ಹಾಕುತ್ತವೆ. ಈ ಪುನರುಜ್ಜೀವನವಾದರೂ ಕ್ರಿಶ್ಚಿಯನ್ ಮಿಶನರಿಗಳ ಮತ ಪ್ರಚಾರದ ಪ್ರಯತ್ನಗಳಿಗೆ ಪ್ರತಿಕ್ರಿಯೆಯಾಗಿ ಮೂಡಿಬಂದಿತೆಂದು[7] ಹೇಳಲಾಗುತ್ತದೆ. ಆದ್ದರಿಂದ ತಿಲಕ್, ಆಲೂರು ವೆಂಕಟರಾವ್, ಗಂಗಾಧರರಾವ್

ದೇಶಪಾಂಡೆ, ವೆಂಕಟಕೃಷ್ಣಯ್ಯ ಮೊದಲಾದ ಪ್ರಾರಂಭ ಕಾಲದ ರಾಷ್ಟ್ರೀಯವಾದಿಗಳು ಜನರಲ್ಲಿ ರಾಷ್ಟ್ರಪ್ರಜ್ಞೆಯನ್ನು ಜಾಗ್ರತಗೊಳಿಸಲೆಂದು ಉಪಯೋಗಿಸಿದ ಪ್ರಾದೇಶಿಕ, ಧಾರ್ಮಿಕ ಮತ್ತು ಜಾತಿಯ ಉಪಾಯಗಳನ್ನು ಇಂದಿಗೂ ಹಾಡಿಹೊಗಳಲಾಗುತ್ತಿದೆ. ಸ್ಥಳೀಯರಲ್ಲಿ ದೇಶಭಕ್ತಿಯನ್ನು ಪ್ರಚೋದಿಸಲು ಆ ಉಪಕರಣಗಳು ಮಾತ್ರವೇ ಆಗ ಲಭ್ಯವಿತ್ತೆಂದು ಹೇಳಲಾಗುತ್ತದೆ. ಆದರೆ ಯಾರೂ ಕೂಡ ಈ ಉಪಕರಣಗಳು ಚಳವಳಿಯ ಮೇಲೆ ಬೀರಿದ ಕೆಟ್ಟ ಹಾಗೂ ಋಣಾತ್ಮಕ ಪರಿಣಾಮಗಳ ಬಗ್ಗೆ ಮಾತನಾಡುವುದಿಲ್ಲ. ಈ ಮೌನದಿಂದ ಅವರು, ತಿಳಿದೋ ತಿಳಿಯದೆಯೋ ರಾಷ್ಟ್ರೀಯ ಚಳವಳಿಯಲ್ಲಿ ಅಲ್ಪಸಂಖ್ಯಾತರು ಮತ್ತು ಅಶಿಕ್ಷಿತರು ಮುಖ್ಯಧಾರೆಯಿಂದ ಪಕ್ಕಕ್ಕೆ ತಳ್ಳಲ್ಪಟ್ಟಿದ್ದರೆಂಬ ವಿಷಯವನ್ನು ಮುಚ್ಚಿಡುತ್ತಾರೆ. ಅಂತಹ ದಮನದ ಕೆಟ್ಟ ಪರಿಣಾಮಗಳು ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ಮಾತ್ರವಲ್ಲ, ಇಂದಿನ ಕೋಮುಗಲಭೆಗಳಲ್ಲಿಯೂ ಸಕ್ರಿಯವಾಗಿವೆ. ಆದ್ದರಿಂದಲೇ ಕೋಮುವಾದಿಗಳು ನಡೆಸಿದ ಅತಿನೀಚ ಕೋಮುಗಲಭೆಗಳು ಮತ್ತು ಪಿತೂರಿಗಳನ್ನು ಕೂಡ ಇತಿಹಾಸಕಾರರು ಸ್ವಾತಂತ್ರ್ಯದ ಹಾದಿಯಲ್ಲಿ ಇಟ್ಟ ಹೆಜ್ಜೆಗಳೆಂದು ವರ್ಣಿಸಿದ್ದಾರೆ.[೯]

ಧರ್ಮ ಮತ್ತು ಅದರ ಸಂಕೇತಗಳು ಭಾರತದ ಮೂಕ ಜನಸಮುದಾಯಗಳಲ್ಲಿ ಭಾವನೆಗಳನ್ನು ಕೆರಳಿಸಲೆಂದು ರಾಷ್ಟ್ರೀಯವಾದಿಗಳ ಬತ್ತಳಿಕೆಯಲ್ಲಿದ್ದ ಮುಖ್ಯ ಆಯುಧಗಳೆಂಬ ಸಂಗತಿಯನ್ನು ಅಲ್ಲಗಳೆಯಲು ಸಾಧ್ಯವಿಲ್ಲ. ಆದರೆ ಅದೇ ಕಾಲದಲ್ಲಿ ಇಂಥ ಪ್ರಯತ್ನಗಳ ಫಲವಾದ ಪ್ರಾದೇಶಿಕತೆ, ಜಾತೀಯತೆ ಮತ್ತು ಭಾಷಿಕ ನೆಲೆಗಳನ್ನು ಕಿಡಿಗೇಡಿಗಳು ದುರುದ್ದೇಶಗಳಿಗಾಗಿ ಬಳಸುವರೆಂಬ ಸಂಗತಿಯನ್ನು ಅಲ್ಲಗಳೆಯಲು ಸಾಧ್ಯವಿಲ್ಲ. ಈ ಬೆಳವಣಿಗೆ ದಕ್ಷಿಣ ಭಾರತದಲ್ಲಿ ಹೆಚ್ಚು ವ್ಯಾಪಕವಾಗಿ ಕಾಣಿಸಿಕೊಂಡಿತು. ಅದರಲ್ಲೂ ಬ್ರಾಹ್ಮಣೇತರ ಮತ್ತು ದಲಿತ ಚಳವಳಿಗಳ ಮೂಲಕ[೧೦] ಮತ್ತು ವಿವಿಧ ಜಾತಿಗಳವರು ರೂಪಿಸಿಕೊಂಡ ಸಂಘಸಂಸ್ಥೆಗಳ ಮೂಲಕ ಇಂತಹ ಚಳವಳಿಗಳು ಐತಿಹಾಸಿಕ ಪ್ರಕ್ರಿಯೆಯೊಂದರ ಭಾಗವಾಗಿ, ಇಡೀ ದೇಶದಲ್ಲಿಯೇ ಎಚ್ಚರಗೊಳ್ಳುತ್ತಿದ್ದ ಪ್ರಜಾಪ್ರಭುತ್ವಪರವಾದ ಅನಿಸಿಕೆಗಳ ಅಂಗವಾಗಿ ಹುಟ್ಟಿಕೊಂಡವೆನ್ನುವುದು ನಿಜ. ಆದರೆ ಹಿಂದೆ ತಾವೇ ಧಾರ್ಮಿಕ ಪುನರುಜ್ಜೀವನವಾದವನ್ನು ಹೊಗಳಿದ್ದೇವೆನ್ನುವುದನ್ನು ಮರೆತುಬಿಡುವ ಚರಿತ್ರಕಾರರು ಹಾಗೂ ಲೇಖಕರು, ಈ ಚಳವಳಿಗಳನ್ನು ಪ್ರತಿಗಾಮಿ, ರೋಗಿಷ್ಟ, ಸ್ವಾರ್ಥಿ ಮುಂತಾದ ವಿಶೇಷಣಗಳಿಂದ ವರ್ಣಿಸುತ್ತಾರೆ.[೧೧] ಪ್ರಾಯಶಃ ಈ ಚಳವಳಿಗಳು ಪುರೋಹಿತವರ್ಗದ ಸರ್ವಾಧಿಕಾರವನ್ನು ಪ್ರತಿಭಟಿಸಿದವೆನ್ನುವುದು ಈ ನಿಲುವಿಗೆ ಕಾರಣ ಇರಬಹುದು. ಮತ್ತೊಂದು ಬಹಳ ಕುತೂಹಲಕಾರಿಯಾದ ಸಂಗತಿಯೆಂದರೆ ಇದೇ ಹಿಂದುಳಿದ ವರ್ಗದ ಮುಖಂಡರು ಕಾಂಗ್ರೆಸ್ಸಿಗೆ ಸೇರಿದ ದಿನದಿಂದಲೇ ಸ್ವಾತಂತ್ರ್ಯ ಹೋರಾಟಗಾರರು, ರಾಷ್ಟ್ರೀಯವಾದಿಗಳು ಮುಂತಾದ ಹೊಗಳಿಕೆಗೆ ಪಾತ್ರರಾಗುತ್ತಾರೆ.[೧೨] ಈ ರೀತಿಯ ಭಾವನೆಗಳನ್ನು ತಲೆಯಲ್ಲಿ ತುಂಬಿಕೊಂಡ ಇತಿಹಾಸಕಾರರಿಗೆ ಪುರೋಹಿತವರ್ಗ ಮತ್ತು ಮೇಲುವರ್ಗಗಳವರ ನಾಯಕತ್ವದಲ್ಲಿ ನಡೆದ ಸಾಮಾಜಿಕ-ಧಾರ್ಮಿಕ ಚಳವಳಿಗಳು ಭಾರತೀಯ ಪುನರುಜ್ಜೀವನವಾದಿ ರಾಷ್ಟ್ರೀಯತೆಯ ಎಚ್ಚರವಾಗಿ ಕಾಣಿಸಿದವು. ಅದೇ ಮುಸ್ಲಿಂ ಮತ್ತು ಹಿಂದೂ ಅಲ್ಪಸಂಖ್ಯಾತರು ಅದೇ ಬಗೆಯ ಚಳವಳಿಗಳನ್ನು ನಡೆಸಿದಾಗ ಅವುಗಳನ್ನು ಪ್ರತಿಗಾಮಿ ಕೋಮುವಾದಿ ಮತ್ತು ರಾಷ್ಟ್ರವಿರೋಧಿ ಎಂದು ವರ್ಣಿಸಲಾಯಿತು.[೧೩]

ಈ ರೀತಿಯ ಧೋರಣೆಯಿಂದ ನಾವು ಬಹಳವಾಗಿ ಪ್ರಭಾವಿತರಾಗಿದ್ದೇವೆ. ಅದರ ದುಷ್ಪರಿಣಾಮವೆಂದರೆ ರಾಷ್ಟ್ರೀಯತೆ ಮತ್ತು ಭಾವನಾತ್ಮಕ ಐಕ್ಯದಲ್ಲಿ ನಿಜವಾಗಿಯೂ ಆಸಕ್ತರಾದ ನಮ್ಮಲ್ಲಿ ಅನೇಕರು ಈ ರೀತಿಯ ಕಾರ್ಯವಿಧಾನದಿಂದ ಸಂಪೂರ್ಣವಾಗಿ ಪ್ರಭಾವಿತರಾದರು. ನಮ್ಮ ಬಹುಮುಖವಾದ ಸಮಾಜದ ಮೇಲೆ, ಅದರಲ್ಲೂ ಆಗತಾನೆ ಮುಂದುವರಿಯುತ್ತಿದ್ದ ಕೆಳವರ್ಗದ ಬುದ್ಧಿಜೀವಿಗಳ ಮೇಲೆ ಇದು ಬೀರಿದ ಪ್ರಭಾವ ತೀವ್ರವಾಗಿದೆ. ಇದು ರಾಷ್ಟ್ರೀಯ ಭಾವೈಕ್ಯ ಮತ್ತು ಜಾತ್ಯಾತೀತತೆಗಳಿಗೆ ಆಘಾತವನ್ನು ಉಂಟುಮಾಡುತ್ತದೆ.

## ಪ್ರದೇಶಗಳು, ಪ್ರಾಂತೀಯತೆ

ಆಧುನಿಕ ಕರ್ನಾಟಕದ ಇತಿಹಾಸವನ್ನು ಸಮಗ್ರವಾಗಿ ಬರೆಯಲೆತ್ನಿಸಿದಾಗ ಅನೇಕ ಕಷ್ಟಗಳನ್ನು ಎದುರಿಸಬೇಕೆನ್ನುವುದು ನಿಜ. ಏಕೆಂದರೆ ರಾಜ್ಯಗಳ ಪುನರ್ವಿಂಗಡಣೆಗಳಿಗಿಂತ ಮುಂಚೆ ಕರ್ನಾಟಕವು ಸುಮಾರು ಇಪ್ಪತ್ತಕ್ಕೂ ಹೆಚ್ಚು ಆಡಳಿತ ವಿಭಾಗಗಳಲ್ಲಿ ಹಂಚಿಹೋಗಿತ್ತು. ಆದರೆ ಎಚ್ಚರದ ಅಧ್ಯಯನವು ವಸ್ತುಸ್ಥಿತಿಯನ್ನು ಗ್ರಹಿಸಲು ಖಂಡಿತ ನೆರವಾಗಬಹುದು. ಹಾಗೆಯೇ ಬೇರೆ ಬೇರೆ ಪ್ರದೇಶಗಳಡಿ ವಿಶೇಷ ಅಧ್ಯಯನ ಮಾಡಿದಾಗಲೂ ಫಲ ದೊರಕಬಹುದು.

ಆದರೆ ಕರ್ನಾಟಕದ ದೇಶೀ ಸಂಸ್ಥಾನಗಳಲ್ಲಿ ಸ್ವಾತಂತ್ರ್ಯ ಚಳವಳಿಯ ಇತಿಹಾಸವನ್ನು ಬರೆಯ ಹೊರಟಿರುವ ಬಹುಪಾಲು ಲೇಖಕರು ದುರದೃಷ್ಟವಶಾತ್ ರಾಜರುಗಳು, ಬ್ರಿಟಿಷ್ ಸಾಮ್ರಾಜ್ಯಶಾಹಿಗಳು ಮತ್ತು ಮೊದಲಿನ ರಾಷ್ಟ್ರೀಯವಾದಿ ನಾಯಕರು ಒಡ್ಡಿದ ಬಲೆಯಲ್ಲಿ ಸಿಕ್ಕಿಕೊಂಡಿದ್ದಾರೆ. ಸ್ಪಷ್ಟವಾಗಿಯೇ ಇರುವ ಕಾರಣಗಳಿಗಾಗಿ ಮೈಸೂರು ರಾಜ್ಯದ ರಾಜರುಗಳು ಬಹಳ ಜಾಣತನದಿಂದ ತಮಗೆಂದು ಪ್ರಗತಿಶೀಲ ಪ್ರತಿಮೆಯೊಂದನ್ನು ರೂಪಿಸಿಕೊಂಡರು. ಮೈಸೂರನ್ನು 'ಮಾದರಿ ಮೈಸೂರು' ಎಂದು ಕರೆಯಲಾಯಿತು. ಗಾಂಧೀಜಿಯಂತಹ ನಾಯಕರೂ ಕೂಡ ಇದಕ್ಕೆ ತಮ್ಮದೇ ಕಾಣಿಕೆ ನೀಡಿದರು. ಏಕೆಂದರೆ ಕಾಂಗ್ರೆಸ್ ಪಕ್ಷವು ಭಾರತೀಯರನ್ನು ಸಲಹುವುದು ಬಿಳಿಯರ ಪವಿತ್ರ ಕರ್ತವ್ಯವೆಂದು ಜಂಭಕೊಚ್ಚಿಕೊಳ್ಳುತ್ತಿದ್ದ ಬ್ರಿಟಿಷರಿಗೆ ಉತ್ತರ ಕೊಡಬೇಕಾಗಿತ್ತು. "ಭಾರತೀಯರಿಗೂ ಕೂಡ ಅವಕಾಶ ಕೊಟ್ಟರೆ ತಮ್ಮನ್ನು ಸರಿಯಾಗಿ ಆಳಿಕೊಳ್ಳುವ ಸಾಮರ್ಥ್ಯವಿದೆ, ಬೇಕಾದರೆ ಮಾದರಿ ಮೈಸೂರನ್ನು ನೋಡಿ" ಎಂದು ಬ್ರಿಟಿಷರ ಮುಖಕ್ಕೆ ಹೇಳಬಹುದಾಗಿತ್ತು.[೧೫]

ಈ ವಾಸ್ತವತೆಯನ್ನು ವಿದ್ವಾಂಸರು ಸಾಮಾನ್ಯವಾಗಿ ಗುರುತಿಸುವುದಿಲ್ಲ. ಅವರು ಮೈಸೂರು ರಾಜ್ಯದ ಆಡಳಿತವನ್ನು ವರ್ಣಿಸುವಾಗ "ಮಾದರಿ ರಾಜ್ಯ", ಪ್ರಗತಿಪರ ಆಡಳಿತ, ಸಂವಿಧಾನಬದ್ಧ ಸರ್ವಾಧಿಕಾರ ಮುಂತಾದ ಮಾತುಗಳನ್ನು ಬಳಸುತ್ತಾರೆ. ಹಾಗೆಯೇ ರಾಜರನ್ನು ವರ್ಣಿಸುವಾಗ ಪ್ರಜಾಹಿತೈಶಿ, ರಾಜರ್ಷಿ ಮುಂತಾದ ವಿಶೇಷಣಗಳನ್ನು ಉಪಯೋಗಿಸುತ್ತಾರೆ.[೧೬] ಅವರಿಗೆ ಸಂಸ್ಥಾನಗಳು ನಡೆಸಿದ ದಮನಕಾರಿ ಕೃತ್ಯಗಳನ್ನು ತೋರಿಸಿದಾಗ ಅಂತಹ ರಾಜರನ್ನು ಸರ್ವಾಧಿಕಾರಿಗಳು, ಬ್ರಿಟಿಷರ ಕೈಯಗೊಂಬೆಗಳು ಮುಂತಾಗಿ ಕರೆಯಲಾಗಿತ್ತದೆ.[೧೭]

ಈ ರೀತಿಯ ಬರವಣಿಗೆಗಳ ಅತ್ಯಂತ ಅಚಾರಿತ್ರಿಕ ಅಂಶವೆಂದರೆ ಚಳವಳಿಯಲ್ಲಿ ನಿಜವಾಗಿಯೂ ಭಾಗವಹಿಸಿದ, ಕಷ್ಟಪಟ್ಟ ಯಾವುದೇ ಬಗೆಯ ಸಾಮಾಜಿಕ, ಆರ್ಥಿಕ ಸ್ಥಾನಮಾನಗಳು ಇಲ್ಲದಿದ್ದ ಎಲ್ಲ ಜನವರ್ಗಗಳ ಪಾತ್ರವನ್ನು ಸಂಪೂರ್ಣವಾಗಿ ಪಕ್ಕಕ್ಕೆ ತಳ್ಳಿರುವುದು. ಚರಿತ್ರೆಯನ್ನು ನಿರ್ಮಿಸಿದ, ಚಳುವಳಿಯಲ್ಲಿ ಯಶಸ್ವಿಯಾಗಿ ದುಡಿದ ಕಾರ್ಮಿಕರು, ರೈತರು ಮತ್ತು ವಿದ್ಯಾರ್ಥಿಗಳು ಕರ್ನಾಟಕದ ರಾಷ್ಟ್ರೀಯ ನಾಯಕರ ಪಟ್ಟಿಯಲ್ಲಿ ಜಾಗ ಪಡೆಯುವುದೇ ಇಲ್ಲ. ಅಂತಹವರು ಇರಲಿಲ್ಲವೆಂದಲ್ಲ, ಅದು ಹೇಗೋ ಅವರ ಹೆಸರುಗಳನ್ನು ಕೈಬಿಡಲಾಗಿದೆ.[೧೮]

ಈ ಬರವಣಿಗೆಗಳಲ್ಲಿ ಗುರುತಿಸಬಹುದಾದ ಮತ್ತೊಂದು ಅಂಶವೆಂದರೆ ಅವುಗಳ ಪ್ರಾದೇಶಿಕತೆ. ಪ್ರತಿಯೊಬ್ಬ ಲೇಖಕನೂ ಸ್ವಾತಂತ್ರ್ಯ ಚಳವಳಿಯಲ್ಲಿ ಕರ್ನಾಟಕವು ವಹಿಸಿದ ಪಾತ್ರವನ್ನು ಬೇರೆ ಯಾವ ರಾಜ್ಯಕ್ಕೂ ಕಡಿಮೆಯಿಲ್ಲವೆಂದು ತೋರಿಸಲು ಇತರರೊಂದಿಗೆ ಪೈಪೋಟಿ ನಡೆಸುತ್ತಾನೆ. ಈ ಚಳವಳಿಯನ್ನು ರಾಷ್ಟ್ರೀಯ ಚಳವಳಿಯೆಂದು ಕರೆದಾಗಲೇ, ಕರ್ನಾಟಕವೂ ಒಟ್ಟು ರಾಷ್ಟ್ರದ ಒಂದು ಅಂಗವಾಗಿ ಭಾಗವಹಿಸಿತ್ತೇ

ದೊರತು ಪ್ರತ್ಯೇಕತೆಯಲ್ಲಿ ಅಲ್ಲ ಎಂಬ ಮಾತು ಸ್ಪಷ್ಟ. ಆದರೆ ಒಟ್ಟಿನಲ್ಲಿ ಕೆಲವು ಚಾರಿತ್ರಿಕ ಕಾರಣಗಳಿಂದ ಇಡೀ ದಕ್ಷಿಣ ಭಾರತವೇ ಮೊದಲ ಹಂತದಲ್ಲಿ ಈ ಚಳವಳಿಯಲ್ಲಿ ಸ್ವಲ್ಪಮಟ್ಟಿಗೆ ಹಿಂದುಳಿಯಿತು. ಕನಿಷ್ಠಪಕ್ಷ ೧೯೨೦ರ ವರೆಗಂತೂ ಈ ಮಾತು ಖಂಡಿತ ನಿಜ. ಅದೂ ಅಲ್ಲದೆ ಆಗ ಸಾಕಷ್ಟು ಪ್ರಬಲವಾಗಿದ್ದ ಬ್ರಾಹ್ಮಣೇತರ ಚಳವಳಿಗಳು ಸ್ಥಳೀಯ ರಾಷ್ಟ್ರೀಯವಾದಿಗಳೊಂದಿಗೆ ಸಹಮತ ಹೊಂದಿರಲಿಲ್ಲ.[೧೮]

೧೮೫೭ರ ಈ ಘಟನೆಗಳು ದಕ್ಷಿಣ ಭಾರತವನ್ನು ತೀವ್ರವಾಗಿ ಪ್ರಭಾವಿಸಲಿಲ್ಲವೆನ್ನುವುದು, ಮದ್ರಾಸ್ ರಾಜ್ಯದಲ್ಲಿ ಜಸ್ಟೀಸ್ ಪಕ್ಷವು ಆಡಳಿತ ನಡೆಸಿತೆನ್ನುವುದು, ಕರ್ನಾಟಕದ ರಾಜಕೀಯ ಸನ್ನಿವೇಶದಲ್ಲಿ ಬ್ರಾಹ್ಮಣೇತರ ಜಾತಿಗಳು ಪ್ರಬಲವಾಗಿದ್ದವೆನ್ನುವುದು ಮತ್ತು ಸ್ವತಃ ಕಾಂಗ್ರೆಸ್ ಪಕ್ಷವೇ ದಕ್ಷಿಣ ಭಾರತದ ದೇಶೀ ಸಂಸ್ಥಾನಗಳನ್ನು ನಿರ್ಲಕ್ಷಿಸಿತ್ತೆನ್ನುವುದು ಈ ಮಾತಿಗೆ ಸಾಕ್ಷಿಯಾಗಿದೆ. ಈ ಕಾರಣಗಳಿಂದಲೇ ೧೯೨೦ರ ದಶಕದ ಕೊನೆ ಕೊನೆಯವರೆಗೆ ದಕ್ಷಿಣ ಭಾರತದಲ್ಲಿ ಸ್ವಾತಂತ್ರ್ಯ ಚಳವಳಿ ಮಂದಗತಿಯಲ್ಲಿ ನಡೆಯಿತು.[೧೯] ಆದರೆ ಈ ಅಂಶಗಳನ್ನು ಬಹುತೇಕ ಚರಿತ್ರಕಾರರು ಮುಚ್ಚಿಡಲು ಪ್ರಯತ್ನಿಸುತ್ತಾರೆ.

ಈ ರೀತಿಯ ದೋಷಪೂರ್ಣವಾದ ಚೌಕಟ್ಟಿನಿಂದ ಹೊರಬರಲಾರದೆ ಹೆಚ್ಚು ಸತ್ಯಸಮೀಪವಾಗ ಬಹುದಾಗಿದ್ದ ಸ್ವಾತಂತ್ರ್ಯ ಚಳವಳಿಯ ಇತಿಹಾಸವು ಬರೆಯದೆ ಉಳಿದಿದೆ.

ಇದಕ್ಕೆ ಬದಲಾಗಿ ಕಾಂಗ್ರೆಸ್ ಪಕ್ಷ ಮತ್ತು ಸ್ವಾತಂತ್ರ್ಯ ಚಳವಳಿಗಳು ದಕ್ಷಿಣ ಭಾರತದಲ್ಲಿ ಏಕೆ ಆಳವಾಗಿ ಬೇರುಬಿಡಲಿಲ್ಲವೆಂಬ ಪ್ರಶ್ನೆಯನ್ನು ಕೇಳಿಕೊಂಡು, ಐತಿಹಾಸಿಕ ಬೆಳವಣಿಗೆಯನ್ನು ಪರಿಶೀಲಿಸಿದಾಗ ಒಂದು ಸತ್ಯವು ಗೋಚರವಾಗುತ್ತದೆ. ಬ್ರಿಟಿಷ್ ಆಳುವವರ್ಗ ಮತ್ತು ದೇಶೀಯ ರಾಜರುಗಳ ನಡುವೆ ಒಂದು ಅಲಿಖಿತವಾದ ಒಪ್ಪಂದವಿತ್ತೆನ್ನುವುದೇ ಆ ಸತ್ಯ ಸಂಗತಿ. ಈ ಒಪ್ಪಂದವು ಇತರರು ಪ್ರಶ್ನಿಸುವವರೆಗೆ ಹಾಗೆಯೇ ಮುಂದುವರಿಯಿತು. ಅದರಲ್ಲೂ ಕರ್ನಾಟಕದಲ್ಲಿ ಇದು ಹೆಚ್ಚು ಪರಿಣಾಮಕಾರಿಯಾಗಿತ್ತು. ಏಕೆಂದರೆ ಒಟ್ಟು ರಾಜ್ಯದ ಮೂರನೆಯ ಎರಡರಷ್ಟು ಭಾಗವನ್ನು ದೇಶೀ ರಾಜರು ಆಳುತ್ತಿದ್ದರು ಮತ್ತು ಸ್ವತಃ ಆ ರಾಜರು ಬ್ರಿಟಿಷರ ಆಜ್ಞಾನುವರ್ತಿಗಳಾಗಿದ್ದರು. ಹೀಗಾಗಿ ಮೈಸೂರು ರಾಜ್ಯದ ಜನರು ಇಬ್ಬಗೆಯ ಗುಲಾಮರಾಗಿದ್ದರು. ರಾಜರು ಬ್ರಿಟಿಷರ ಅಡಿಯಾಳಾಗಿದ್ದರು. ಪ್ರಜೆಗಳಾದರೂ ಬ್ರಿಟಿಷರ ಮತ್ತು ರಾಜರುಗಳ ಅಡಿಯಾಳುಗಳಾಗಿದ್ದರು.

ಇದರ ಜೊತೆಗೆ ಇಡೀ ದಕ್ಷಿಣ ಭಾರತದಲ್ಲಿ ಪುರೋಹಿತವರ್ಗಗಳ ಪ್ರಾಬಲ್ಯವಿತ್ತು. ಇದು ಅನಿವಾರ್ಯ ಐತಿಹಾಸಿಕ ಕಾರಣಗಳಿಂದ ಉಂಟಾಗಿತ್ತು. ಪುರೋಹಿತವರ್ಗ ಮತ್ತು ಸಾಮ್ರಾಜ್ಯಶಾಹಿಗಳಿಗೆ ಒಂದು ಸಮಾನವಾದ ಉದ್ದೇಶವಿತ್ತು. ಅಶಿಕ್ಷಿತ ಜನವರ್ಗವನ್ನೂ ಅದರ ಹಿತಾಸಕ್ತಿಗಳನ್ನು, ಕಡೆಗಣಿಸುವುದರಲ್ಲಿ ಅವರಿಬ್ಬರೂ ಒಟ್ಟಾದರು. ಅಷ್ಟೇ ಅಲ್ಲದೆ ಭಾರತದಲ್ಲಿ ರಾಷ್ಟ್ರೀಯತಾವಾದದ ಉಗಮಕ್ಕೆ ಕಾರಣವಾಯಿತೆಂದು ಹೇಳಲಾದ ಪಾಶ್ಚಾತ್ಯರ ಉದಾರವಾದಿ ತತ್ವಶಾಸ್ತ್ರದಿಂದ ಮೊದಲು ಪ್ರಭಾವಿತರಾದವರು ಕೂಡ ಪುರೋಹಿತ ವರ್ಗದವರೇ ಆಗಿದ್ದರು. ಬ್ರಿಟಿಷ್ ಸಂಸ್ಥೆಗಳು ಮತ್ತು ಆಡಳಿತದಿಂದ ತಾವು ಹೊಸದಾಗಿ ಪಡೆದುಕೊಂಡ ತಿಳುವಳಿಕೆ ಮತ್ತು ಅಧಿಕಾರವನ್ನು ಇತರರೊಂದಿಗೆ ಹಂಚಿಕೊಳ್ಳಲು ಇವರು ತಯಾರಾಗಿರಲಿಲ್ಲ. ಇಂಥ ನಿಲುವಿನ ಫಲವಾಗಿ ಅಶಿಕ್ಷಿತರು ದೂರದಲ್ಲೇ ಉಳಿದರು. ಮುಂದೆ ಒಂದು ದಿನ ಹೋಂ ರೂಲ್, ರಾಷ್ಟ್ರೀಯತೆ ಮುಂತಾದ ಹೆಸರುಗಳ ಘೋಷಣೆಗಳ ಸಂಗಡ ಪುರೋಹಿತವರ್ಗವು ತಮ್ಮ ಕಡೆಗೆ ಬಂದಾಗ ಅವರು ಸಹಜವಾಗಿಯೇ ಅನುಮಾನ ತಾಳಿದರು. ಹೋಂ ರೂಲ್ ಮತ್ತು ಅಂತಹುದೇ ಇತರ ವಿಷಯಗಳನ್ನು 'ಮೇಲ್ವರ್ಗದ ಪಿತೂರಿ' ಯೆಂದು ಕರೆದ ಅವರು ಅವುಗಳಿಂದ ದೂರ ಉಳಿದರು.

ಎರಡನೆಯದಾಗಿ ಮತ್ತು ಹೆಚ್ಚು ಮುಖ್ಯವಾಗಿ ಬಹು ಜನ ಸಮುದಾಯದ ಭಾಗವಹಿಸುವಿಕೆಗೆ ಯಾವ ಮನ್ನಣೆಯೂ ದೊರೆತಿಲ್ಲ. ಪೌರ ಅಸಹಕಾರ, ಕರನಿರಾಕರಣೆ, ಭಾರತಬಿಟ್ಟು ತೊಲಗಿ ಚಳವಳಿ, ಅರಣ್ಯ ಸತ್ಯಾಗ್ರಹ ಮುಂತಾದುವನ್ನು ನಿರ್ದಿಷ್ಟ ಕಾಂಗ್ರೆಸ್ ನಾಯಕರ ವಿಜಯಗಳೆಂದು ಪರಿಗಣಿಸಲಾಗಿದೆ. ಈ ಯಶಸ್ಸನ್ನು ಜನಸಮುದಾಯದ ಕಡುಬಡತನದ ಆರ್ಥಿಕಸ್ಥಿತಿಯ ಚೌಕಟ್ಟಿನಲ್ಲಿ ಬೆಲೆ ಕಟ್ಟಲಾಗಿಲ್ಲ. ಎಷ್ಟೋ ಬಾರಿ ಸ್ವತಃ ಕಾಂಗ್ರೆಸ್ ನಾಯಕರಿಗೆ ಇಷ್ಟವಿಲ್ಲದಾಗಲೂ ರೈತರು ಕರನಿರಾಕರಣೆ ಚಳವಳಿಯಲ್ಲಿ ತೊಡಗಿರುವುದನ್ನು ಗಮನಿಸಬಹುದು.[೨೦] ಎಷ್ಟೋ ಸಲ ಸ್ವತಃ ನಾಯಕರು ಸಿದ್ಧವಿಲ್ಲದಿದ್ದಾಗ ಜನರೇ ನಾಯಕರಿಗೆ ಮಾರ್ಗದರ್ಶನ ನೀಡಿರುವುದನ್ನು ಗಮನಿಸಬಹುದು. ಕರ್ನಾಟಕದ ಜನಸಮುದಾಯದ ಮಟ್ಟಿಗಂತೂ ಈ ವಿಷಯವನ್ನು ಸ್ವತಃ ಮಹಾತ್ಮ ಗಾಂಧಿಯವರೇ ಒಪ್ಪಿಕೊಂಡಿದ್ದಾರೆ.[೨೧] ಬೇರೆಬೇರೆ ಸಾಮಾಜಿಕ ವರ್ಗಗಳಿಗೆ ಸೇರಿದವರು ಚಳವಳಿಯ ವಿವಿಧ ಹಂತಗಳಲ್ಲಿ ತೋರಿಸಿದ ಪ್ರತಿಕ್ರಿಯೆಗಳ ಅಧ್ಯಯನವು ಖಂಡಿತ ಹೆಚ್ಚು ಉಪಯುಕ್ತವಾಗುತ್ತದೆ.

'ಕೋಮುವಾದ' , 'ರಾಷ್ಟ್ರೀಯವಾದ' , 'ಭಯೋತ್ಪಾದಕ ರಾಷ್ಟ್ರೀಯವಾದ' ಮುಂತಾದ ವಿಧಾನಗಳನ್ನು ಅನ್ವಯಿಸಿ ನೋಡಿದಾಗ ನಾವು ಪರಿಶೀಲಿಸುತ್ತಿರುವ ಲೇಖನಗಳು ಚರಿತ್ರೆಯ ವಿದ್ಯಾರ್ಥಿಗಳಿಗೆ ನಿರಾಶೆ ಉಂಟುಮಾಡುತ್ತವೆ. ಏಕೆಂದರೆ, ಅವು ಸ್ವಾತಂತ್ರ್ಯ ಚಳವಳಿಯ ಇತಿಹಾಸದಲ್ಲಿ ವಿಭಿನ್ನ ಹಂತಗಳಿವೆಯೆಂಬ ಸಂಗತಿಯನ್ನು ಗುರುತಿಸುವುದೇ ಇಲ್ಲ. ಇಡೀ ಚಳವಳಿಯು ಸಾರ್ವತ್ರಿಕವಾಗಿತ್ತೆಂದು ವಿಕಸನರಹಿತವಾಗಿತ್ತೆಂದು ಚಿತ್ರಿಸಲಾಗುತ್ತಿದೆ. ಇದಂತೂ ಅತ್ಯಂತ ಅಚಾರಿತ್ರಿಕವಾಗಿದೆ.

ಈ ವಿದ್ವಾಂಸರು ಸಂಗ್ರಹಿಸಿರುವ ಅಪಾರ ಸಾಮಗ್ರಿಯನ್ನು ಎಚ್ಚರಿಕೆಯಿಂದ ಪರಿಶೀಲಿಸಿದರೆ, ರೈತರು, ಕಾರ್ಮಿಕರು, ಮಹಿಳೆಯರು ಹಾಗೂ ವಿದ್ಯಾರ್ಥಿಗಳು ಹೇಗೆ ಈ ಚಳವಳಿಯ ಸೆಳೆತಕ್ಕೆ ಸಿಕ್ಕಿಬಿದ್ದಿದ್ದರು ಅಥವಾ ದೂರ ಉಳಿದಿದ್ದರು ಎಂಬುದನ್ನು ಕಂಡುಹಿಡಿಯಬಹುದಾಗಿದೆ. ಇನ್ನೊಂದು ಕುತೂಹಲಕರವಾದ ಅಂಶವಿದೆ. ಯಾವಾಗ ಕಾಂಗ್ರೆಸ್ ಪಕ್ಷದ ಬೇಡಿಕೆಗಳು ಎಲ್ಲ ಜನವರ್ಗಗಳವರಿಗೂ ಸಹಾಯಕವಾಗುವಂತೆ ಇದ್ದವೋ ಆಗ ಇಡೀ ಜನವರ್ಗ ಚಳವಳಿಯಲ್ಲಿ ಉತ್ಸಾಹದಿಂದ ಭಾಗವಹಿಸುತ್ತಿತ್ತು. ಉದಾಹರಣೆಗೆ ಕಾಡಿನ ಉತ್ಪನ್ನಗಳಿಗೆ ಕರನಿರಾಕರಣೆ ಚಳವಳಿ. ಅಲ್ಲದೆ ರಾಷ್ಟ್ರೀಯ ಚಳವಳಿ ತನ್ನ ಲಕ್ಷಣದಲ್ಲಿ ನಿಜವಾಗಿಯೂ ರಾಷ್ಟ್ರೀಯವಾಗಿ ಬಡವರ ಮತ್ತು ಜನಸಾಮಾನ್ಯರ ಸಮಸ್ಯೆಗಳೊಂದಿಗೆ ಗುರುತಿಸಿಕೊಂಡಾಗ ಜನರು ಸಹಜವಾಗಿಯೇ ಚಳವಳಿಯ ಪ್ರಮುಖ ಧಾರೆಗೆ ಸೇರಿದುದನ್ನು ತಡೆಯಲು ಕೋಮುವಾದಿ ಹಿತಾಸಕ್ತಿಗಳಿಗೆ ಸಾಧ್ಯವಾಗಲಿಲ್ಲ. ರಾಷ್ಟ್ರೀಯ ಚಳವಳಿಗಳು ಸಮಗ್ರ ಜನಹಿತದ ಕಾರ್ಯಕ್ರಮಗಳನ್ನು ಹಮ್ಮಿಕೊಂಡಾಗಲೆಲ್ಲ ಅದರೊಳಗಿನ ಪ್ರತಿಗಾಮಿ ಅಂಶಗಳು ಮರೆಯಲ್ಲಿ ಉಳಿಯಬೇಕಾಗುತ್ತಿತ್ತು. ಜನರು ಅವುಗಳನ್ನು ತಿರಸ್ಕರಿಸಿಬಿಟ್ಟರು. ಬಿಪಿನ್ ಚಂದ್ರ ಅವರು ತೋರಿಸಿಕೊಡುವಂತೆ ೧೯೧೯-೨೨, ೧೯೨೯-೩೬, ಮತ್ತು ೧೯೪೨ರಲ್ಲಿ ಕೋಮುಗಲಭೆಗಳು ನಡೆಯಲೇ ಇಲ್ಲ. ಈ ಅವಧಿಯಲ್ಲಿ ಅಸಹಕಾರ, ಖಿಲಾಫತ್, ಕರನಿರಾಕರಣೆ, ಪೌರಕಾಯಿದೆ ಭಂಗ, ಭಾರತದಿಂದ ತೊಲಗಿರಿ ಮುಂತಾದ ಚಳವಳಿಗಳು ನಡೆಯುತ್ತಿದ್ದವು. ಇವು ಎಲ್ಲ ವರ್ಗಗಳ ಜನರಿಗೂ ಆಕರ್ಷಕವಾಗಿದ್ದವು.[೨೨] ಬದಲಾಗಿ ಕಾಂಗ್ರೆಸ್ ಪಕ್ಷವು ಸಂವಿಧಾನ ಸಭೆಗಳಲ್ಲಿ ಪ್ರವೇಶ ಪಡೆಯುವ ಕುತೂಹಲವನ್ನು ತೋರಿಸಿದಾಗ ಮತ್ತು ಅಧಿಕಾರದಲ್ಲಿದ್ದಾಗ ಎಂದರೆ ೧೯೨೩-೨೮ ಹಾಗೂ ೧೯೩೭-೩೯ರ ಅವಧಿಯಲ್ಲಿ ಇಡೀ ದೇಶದ ತುಂಬ ಗಂಭೀರವಾದ ಕೋಮುಗಲಭೆಗಳು ಸಂಭವಿಸಿದವು. ಹಿಂದೂ ಮತ್ತು ಮುಸ್ಲಿಂ ಕೋಮುವಾದಿಗಳು ತಮಗೆ ಇಷ್ಟ ಬಂದಂತೆ ಮೆರೆಯಲು ಸಾಧ್ಯವಾಯಿತು. ಈ ಮಾತು ಕರ್ನಾಟಕದ ಸಂದರ್ಭದಲ್ಲಿಯೂ ನಿಜ.

ಈ ಐತಿಹಾಸಿಕ ಬರವಣಿಗೆಗಳ ಮತ್ತೊಂದು ಕೆಟ್ಟ ಲಕ್ಷಣವೆಂದರೆ ಅವು ತಮ್ಮ ತಾಳಕ್ಕೆ ತಕ್ಕಂತೆ ಹೆಜ್ಜೆ ಹಾಕದ ಇತರ ಬರವಣಿಗೆಗಳನ್ನು ನಿರ್ಲಕ್ಷಿಸುವ ಅಥವಾ ತಮ್ಮ ಅನುಕೂಲಕ್ಕೆ ತಕ್ಕಹಾಗೆ ತಿರುಚಿಕೊಳ್ಳುವ ರೀತಿ. ಎಷ್ಟೋ ಕೃತಿಗಳಲ್ಲಿ ಈ ರೀತಿಯ ಬೌದ್ಧಿಕ ಅಪ್ರಾಮಾಣಿಕತೆಯನ್ನು ಗುರುತಿಸಬಹುದು. ಇತರ ಲೇಖನಗಳು ಹಾಗೂ ಲೇಖಕರನ್ನು ನಿರ್ಲಕ್ಷಿಸುವುದಕ್ಕೂ ಅವರ ವಾದಗಳನ್ನು ವಿರೋಧಿಸುವುದಕ್ಕೂ ವ್ಯತ್ಯಾಸವಿದೆ. ಸಕಾರಣವಾದ ವಿರೋಧವನ್ನು ಒಪ್ಪಿಕೊಳ್ಳಬಹುದು. ಆದರೆ ಆಧುನಿಕ ಕರ್ನಾಟಕದ ವಿದ್ವಾಂಸರು ನಿರ್ಲಕ್ಷದ ಹಾದಿಯನ್ನು ಹಿಡಿಯುವುದರಿಂದ ಅಪ್ರಾಮಾಣಿಕರಾಗುತ್ತಾರೆ. ಚರಿತ್ರ ಲೇಖನದ ರಾಷ್ಟ್ರೀಯವಾದಿ-ವಾಸ್ತವವಾದಿ ಚಿಂತನಧಾರೆಗಳು ಇದಕ್ಕೆ ಅಗತ್ಯವಾದ ಬೌದ್ಧಿಕ ಸಿದ್ಧತೆಯನ್ನು ಪಡೆದಿಲ್ಲ. ಅದಕ್ಕಿಂತ ಹೆಚ್ಚಾಗಿ ಅವರು ತಾವು ನಿಂತಿರುವ ಬರವಣಿಗೆಯನ್ನು ರೂಪಿಸಿರುವ ಸಡಿಲ ನೆಲದಲ್ಲಿ ಕುಸಿದು ಬೀಳುತ್ತಾರೆ.[೨೩]

ಸ್ವಾತಂತ್ರ್ಯ ಚಳವಳಿಯ ವಸ್ತುನಿಷ್ಠವೂ ಸಮಗ್ರವೂ ಆದ ಅಧ್ಯಯನವನ್ನು ಕೈಗೊಳ್ಳುವ ಚರಿತ್ರಕಾರ ಇತರ ಅತ್ಯಗತ್ಯ ಸಂಗತಿಗಳನ್ನು ಪರಿಗಣಿಸುವುದರ ಜತೆಗೆ ಈ ಮೇಲೆ ಹೆಸರಿಸಿದ ಅತಿಮುಖ್ಯವಾದ ವಿಷಯಗಳನ್ನು ತನ್ನ ಗಮನದಲ್ಲಿರಿಸಿಕೊಳ್ಳಬೇಕು; ಇದು ಕರ್ನಾಟಕದ ಬಗ್ಗೆಯಾಗಬಹುದು ಅಥವಾ ದೇಶದ ಯಾವುದೇ ಭಾಗದ ಸ್ವಾತಂತ್ರ್ಯ ಚಳವಳಿಯ ಇತಿಹಾಸವನ್ನು ಕುರಿತಾಗಿರಬಹುದು. ಇದುವರೆಗೆ ಪಾಂಡಿತ್ಯಪೂರ್ಣ ಹಾಗೂ ಜನಪ್ರಿಯ ಕೃತಿಗಳೆಂದು ಸರ್ವಮಾನ್ಯವಾದ ಕೃತಿಗಳು ಈ ಪ್ರಶ್ನೆಗಳನ್ನು ಕಡೆಗಣಿಸಿರುವ ಕಾರಣ ಈಗ ಅವು ದೋಷಪೂರ್ಣ ಗ್ರಂಥಗಳೆಂದು ಕರೆಯಲ್ಪಡುವುದು ಸಹಜವಾಗಿದೆ. ಬಹಳ ಮುಖ್ಯವಾದ ಸಂಗತಿಯೆಂದರೆ ಈ ಬಗೆಯ ಅಧ್ಯಯನದಿಂದ ಕೇವಲ ಕರ್ನಾಟಕದ ಇತಿಹಾಸಕ್ಕಷ್ಟೇ ಅನ್ಯಾಯವಾಗಿಲ್ಲ, ಬದಲಾಗಿ ಕರ್ನಾಟಕದ ಜನತೆಗೆ ಅನ್ಯಾಯವಾಗಿದೆ. ಏಕೆಂದರೆ ತಮ್ಮ ನಾಡಿನ ಗತಕಾಲದ ಚರಿತ್ರೆಯನ್ನು ವಸ್ತುನಿಷ್ಠವಾಗಿ ತಿಳಿಯುವ ಹಕ್ಕು ಅವರಿಗೆ ಇರುವುದರಿಂದ.

ಈ ಹಿನ್ನೆಲೆಯನ್ನು ಗಮನದಲ್ಲಿರಿಸಿಕೊಂಡು ಚರಿತ್ರೆಯ ಬಗೆಗಿನ ಬರಹಗಳನ್ನು ನಾವು ಸೂಕ್ಷ್ಮವಾಗಿ ಅಧ್ಯಯನ ಮಾಡಬೇಕು; ನಮ್ಮ ಭೂತಕಾಲವನ್ನು ಸರಿಯಾದ ರೀತಿಯಲ್ಲಿ ಅನಾವರಣ ಮಾಡುವ ಬರವಣಿಗೆ ಯಾವುದೇ ಇರಲಿ ಅದನ್ನು ನಾವು ಸ್ವೀಕರಿಸಬೇಕು. ಈ ಬಗೆಯ ಬೆಳವಣಿಗೆಗಳ ಕಡೆ ಗಮನ ಕೊಡದೆಹೋದ ಪಕ್ಷದಲ್ಲಿ ಈಗಾಗಲೇ ನಿಂತ ನೀರಾಗಿರುವ ಇತಿಹಾಸ ಪಾಂಡಿತ್ಯಕ್ಕೆ ಭಾರೀ ನಷ್ಟವುಂಟಾಗುವುದರ ಜೊತೆಗೆ ನಮ್ಮ ರಾಷ್ಟ್ರೀಯ ಭಾವೈಕ್ಯತೆಗೂ ದೊಡ್ಡ ಕಂಟಕ ಒದಗುವುದು.

ಈ ಬರವಣಿಗೆಗಳನ್ನು ಏಕಾಏಕಿ ತಿರಸ್ಕರಿಸಲೂ ಕೂಡ ಸಾಧ್ಯವಿಲ್ಲ. ಅವುಗಳಿಂದಾಗಿರುವ ಒಂದು ದೊಡ್ಡ ಉಪಕಾರವೆಂದರೆ ಅಗಾಧ ಪ್ರಮಾಣದಲ್ಲಿ ಸಂಗ್ರಹವಾಗಿರುವ ವಿಭಿನ್ನ ಬಗೆಯ ವಿಷಯ ಸಾಮಗ್ರಿ.[೨೪] ಈ ಕೃತಿಗಳಲ್ಲಿ ಬಹುಪಾಲು ಬಹಳ ಮೌಲಿಕವಾದ ಮೂಲಸಾಮಗ್ರಿ ಇರುವುದರಿಂದ ಇದನ್ನು ವಿಶ್ಲೇಷಣೆ ಮಾಡಿ ವಸ್ತುನಿಷ್ಠ ಬರಹಕ್ಕಾಗಿ ಉಪಯೋಗಿಸಿಕೊಳ್ಳಬಹುದು. ಸಮಕಾಲೀನ ಚರಿತ್ರಕಾರರ ಆಲೋಚನೆ, ಅಭಿರುಚಿ ಹಾಗೂ ದೃಷ್ಟಿಯನ್ನು ತಿಳಿಯಬಯಸುವ ವಿದ್ವಾಂಸರು ಈ ಬರವಣಿಗೆಗಳಲ್ಲಿ ತುಂಬಾ ಮೌಲಿಕವಾದ ಆಕರವನ್ನು ಪಡೆದುಕೊಳ್ಳಬಹುದಾಗಿದೆ. ಕರ್ನಾಟಕದಲ್ಲಿ ಸ್ವಾತಂತ್ರ್ಯ ಚಳವಳಿಯ ಸಂದರ್ಭದ ಚರಿತ್ರೆಗೆ ಸಂಬಂಧಿಸಿದ ಬರಹಗಳು ಇವು ಎಂಬ ಅಂಶವನ್ನಂತೂ ತಳ್ಳಿಹಾಕಲಾಗುವುದಿಲ್ಲ.

– ಪ್ರೊ. ಎಸ್. ಚಂದ್ರಶೇಖರ್

## ಟಿಪ್ಪಣಿಗಳು

೧ ಅ ಕೃಷ್ಣರಾವ್, ಎಂ. ವಿ. ಹಾಗೂ ಹಾಲಪ್ಪ, ಗ.ಸ (ಸಂ): ಹಿಸ್ಟರಿ ಆಫ್ ಫ್ರೀಡಮ್ ಮೂವ್‌ಮೆಂಟ್ ಇನ್ ಕರ್ನಾಟಕ, ಸಂ. ೧, ಬೆಂಗಳೂರು, ೧೯೬೨

ಆ ಹಾಲಪ್ಪ, ಗ. ಸ. (ಸಂ): ಹಿಸ್ಟರಿ ಆಫ್ ಫ್ರೀಡಮ್ ಮೂವ್‌ಮೆಂಟ್ ಇನ್ ಕರ್ನಾಟಕ, ಸಂ. ೨, ಬೆಂಗಳೂರು, ೧೯೬೪

ಇ ಸೂರ್ಯನಾಥ ಯು. ಕಾಮತ್ (ಸಂ): ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ. ೧–೩, ೧೯೭೪, ೧೯೭೭, ೧೯೮೦

ಈ ಸೂರ್ಯನಾಥ ಯು. ಕಾಮತ್ (ಸಂ): ಕರ್ನಾಟಕದ ಸಂಕ್ಷಿಪ್ತ ಇತಿಹಾಸ, ಬೆಂಗಳೂರು, ೧೯೮೦

ಉ ಸೂರ್ಯನಾಥ ಯು. ಕಾಮತ್ (ಸಂ): ಕರ್ನಾಟಕ ಗ್ಯಾಸೆಟಿಯರ್, ಸಂ. ೨, ಬೆಂಗಳೂರು, ೧೯೮೩

ಊ ವೀರತಪ್ಪ, ಕೆ.: ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಚಳುವಳಿ, ಬೆಂಗಳೂರು, ೧೯೭೭

ಋ ಶರ್ಮಾ, ತೀ.ತಾ.: ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ

ೠ ದೇಶಪಾಂಡೆ, ಆರ್.ಹೆಚ್.: ಬೆಳಗಾವಿ ಜಿಲ್ಲೆಯಲ್ಲಿ ಸ್ವಾತಂತ್ರ್ಯ ಸಂಗ್ರಾಮ, ಸಂ. ೨

ಎ ನಾರಾಯಣರಾವ್, ವಿ.ಎಸ್.: ಸ್ವಾತಂತ್ರ್ಯ ಚಳುವಳಿಯಲ್ಲಿ ಶ್ರೀಸಾಮಾನ್ಯ, ಬೆಂಗಳೂರು, ೧೯೭೮

ಏ ದಿವಾಕರ ರಂಗನಾಥ: ಕರನಿರಾಕರಣೆಯ ವೀರಕಥೆ, ಹುಬ್ಬಳ್ಳಿ, ೧೯೫೫

ಐ ದಿವಾಕರ ರಂಗನಾಥ: ಕರ್ನಾಟಕದ ಏಕೀಕರಣದ ಕಥೆ

ಒ ದೊರೆಸ್ವಾಮಿ, ಹೆಚ್.ಎಸ್.: ಹೋರಾಟದ ದಿಟ್ಟಹೆಜ್ಜೆಗಳು, ಬೆಂಗಳೂರು, ೧೯೭೨

ಓ ವೀರಣ್ಣ ಗೌಡ, ಎಚ್.ಕೆ.: ಬದುಕು–ಮೆಲುಕು, ಬೆಂಗಳೂರು, ೧೯೭೪

ಔ ಲಿಂಗಯ್ಯ, ಡಿ.: ಶಿವಪುರ ಧ್ವಜಸತ್ಯಾಗ್ರಹ, ಬೆಂಗಳೂರು, ೧೯೭೯

ಅಂ ಮೊಹಮ್ಮದ್ ಜೆ. ಇಮಾಮ್: ಮೈಸೂರು ಆಗ ಮತ್ತು ಈಗ, ಮೈಸೂರು, ೧೯೬೬

ಅಃ ಧ್ರುವನಾರಾಯಣ(ಸಂ.): ಸ್ವಾತಂತ್ರ್ಯಾಂದೋಲನ–ರಾಯಚೂರು ಜಿಲ್ಲೆ, ರಾಯಚೂರು, ೧೯೭೧

ಕ ಶರ್ಮಾ, ತೀ.ತಾ.: ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ ೧೮೦೦–೧೮೫೭, ಬೆಂಗಳೂರು, ೧೯೫೭

ಖ ಜೋಯಿಸ್, ಎಂ.ಎನ್.: ಕರ್ಮಯೋಗಿ (ತಗಡೂರು ರಾಮಚಂದ್ರ ರಾವ್ ಅವರ ಆತ್ಮ ಕಥನ– ಮತ್ತು ಅಭಿನಂದನ ಗ್ರಂಥ – ತಗಡೂರರ ಗೌರವಾರ್ಥ), ಮೈಸೂರು, ೧೯೭೪

೨ ಹಾಲಪ್ಪ, ಗ. ಸ. (ಸಂ): ಹಿಸ್ಟರಿ ಆಫ್ ಫ್ರೀಡಮ್ ಮೂವ್‌ಮೆಂಟ್ ಇನ್ ಕರ್ನಾಟಕ, ಸಂ. ೨, ಬೆಂಗಳೂರು, ೧೯೬೪

೩ ಸ್ವಾತಂತ್ರ್ಯಾನಂತರ ರಾಜಕೀಯವಾಗಿ ಮುಖಂಡರಾದ ವ್ಯಕ್ತಿಗಳ ನೆನಪಿಗಾಗಿ ಅವರ ಅನುಯಾಯಿಗಳು ಹೊರತಂದ ಹೊತ್ತಿಗೆಗಳೂ ಇದರಲ್ಲಿ ಸೇರ್ಪಡೆಯಾಗಿವೆ.

೪ ಸಾಮಾನ್ಯವಾಗಿ ದಕ್ಷಿಣ ಭಾರತೀಯ ಇತಿಹಾಸಕಾರರು ದೋಷಯುಕ್ತವೂ ಅಪ್ರಸ್ತುತವೂ ಆದ ಚೌಕಟ್ಟಿಗೆ ಜೋತು ಬಿದ್ದಿದ್ದಾರೆ ಎಂದು ಎಸ್. ಶೆಟ್ಟರ್ ಅವರು ತಮ್ಮ ಪಾಂಡಿತ್ಯಪೂರ್ಣ ಭಾಷಣದಲ್ಲಿ ದಾಖಲು ಮಾಡಿದ್ದಾರೆ. ವಿವರಗಳಿಗಾಗಿ ನೋಡಿ: ಶೆಟ್ಟರ್, ಎಸ್.: ಟ್ವೆಂಟಿಯತ್ ಸೆಂಚುರಿ ಇನ್ ಏನ್ಷಿಯಂಟ್ ಇಂಡಿಯಾ, ಭಾರತೀಯ ಇತಿಹಾಸ ಸಮ್ಮೇಳನದ ಅಧ್ಯಕ್ಷೀಯ ಭಾಷಣ, ಪುರಾತನ ಕಾಲ– ೪೩, ಕುರುಕ್ಷೇತ್ರ ಗೋಷ್ಠಿ, ಧಾರವಾಡ, ೧೯೮೨

೫ ಈ ಬಗೆಯ ಆಲೋಚನಾ ಕ್ರಮಕ್ಕೆ ೧೯ನೇ ಶತಮಾನದ ಐತಿಹಾಸಿಕ ಪರಿಸ್ಥಿತಿಯಲ್ಲಿ ಅನನ್ಯತೆಯ ಚಿಂತೆಯ ಆಗತ್ಯವಿತ್ತು. ಹೊರಗಿನ ಸಾಮ್ರಾಜ್ಯಶಾಹಿಯ ರೀತಿ ರಿವಾಜುಗಳನ್ನು ಅರಿಯದ ಆರಂಭದ ರಾಷ್ಟ್ರೀಯವಾದಿಗಳು ಜನಸಮುದಾಯವನ್ನು ಸಾಮ್ರಾಜ್ಯಶಾಹಿ–ವಿರೋಧಿ ಬಣಗಳಾಗಿ ಮಾರ್ಪಡಿಸುವ ಪ್ರಯತ್ನದಲ್ಲಿ ಧರ್ಮ ಹಾಗೂ ಅದರ ಪುನರುತ್ಥಾನದ ಕ್ರಮದಲ್ಲಿ ಸಮೀಪದ ಮಾರ್ಗವನ್ನು ಕಂಡುಕೊಂಡರು. ಆದರೆ ಈ ಸಾಧನಗಳ ಮಿತಿಯೂ ಅವರಿಗೆ ಗೊತ್ತಿದ್ದ ಪರಿಣಾಮವಾಗಿ ಬ್ರಿಟಿಷ್ ಚಕ್ರಾಧಿಪತ್ಯದ ವಿರುದ್ಧ ಅದನ್ನೇ ಆಯುಧಗಳನ್ನಾಗಿ

ಬಳಸಿಕೊಂಡರು. ವಿವರಗಳಿಗಾಗಿ ನೋಡಿ: ಬಿಪಿನ್ ಚಂದ್ರ: ಇಂಡಿಯನ್ ನ್ಯಾಶನಲ್ ಮೂವ್‌ಮೆಂಟ್ ಅಂಡ್ ಕಮ್ಯುನಲ್ ಪ್ರಾಬ್ಲಮ್, ನವದೆಹಲಿ, ೧೯೭೬, ಪು. ೨೫೨–೨೭೪

೬ ವೀರಪ್ಪ, ಕೆ.: ಮೈಸೂರು ಸಂಸ್ಥಾನದಲ್ಲಿ ಸ್ವಾತಂತ್ರ್ಯ ಚಳವಳಿ, ಬೆಂಗಳೂರು, ೧೯೭೭, ರಾಷ್ಟ್ರೀಯ ವಾದದ ಬೆಳವಣಿಗೆಗೆ ಅಷ್ಟೇ ಸಹಾಯವಾದಂಥ ಉಳಿದ ಪ್ರಸ್ತುತ ಸಂಗತಿಗಳನ್ನು ಲೇಖಕರು ದಾಖಲು ಮಾಡಿದ್ದಾರೆ.

೭ ಹಾಲಪ್ಪ, ಗ. ಸ.: ವಿಜಯನಗರ ಚಕ್ರಾಧಿಪತ್ಯವು ಇಸ್ಲಾಂ ಧರ್ಮದ ಹೊಡೆತದಿಂದ ಹಿಂದುಗಳನ್ನು ರಕ್ಷಿಸಲು ಸ್ಥಾಪನೆಯಾಯಿತೆಂದು ಹೇಳುವ ರೀತಿಯನ್ನು ಇದು ಹೋಲುವಂತಿದೆ.

೮ ಅದೇ, ಪು. ೮೦–೮೨

೯ ಹಾಲಪ್ಪ, ಗ. ಸ.: ಪು. ೧೯೨–೧೯೩

ಈ ಗಲಭೆಯನ್ನು ಈ ರೀತಿ ಅರ್ಥೈಸಲಾಗಿದೆ: ಬ್ರಾಹ್ಮಣೇತರರ ಚಳವಳಿಯನ್ನು ಒಡೆದು ಹಾಕುವ ಮಾರ್ಗದಲ್ಲಿ ಬ್ರಾಹ್ಮಣೇತರರು ಹಾಗೂ ಮುಸ್ಲಿಮರ ಸಂಬಂಧಗಳನ್ನು ಕಡಿಯುವುದು ಒಂದು ಕಡೆಯಾದರೆ ಇನ್ನೊಂದು ಕಡೆ ಸರ್ಕಾರ ಹಾಗೂ ಬ್ರಾಹ್ಮಣೇತರರ ನಡುವಿನ ಸಂಬಂಧ ಕೆಡಿಸುವುದು. ಇದೆಲ್ಲ ಬ್ರಾಹ್ಮಣರ ಪಿತೂರಿ ಎಂದು ಕರೆಯಲಾಗಿದೆ. ವಿವರಗಳಿಗಾಗಿ ನೋಡಿ: ಮೇನರ್ ಜೇಮ್ಸ್: ಪೊಲಿಟಿಕಲ್ ಚೇಂಜ್ ಇನ್ ಎನ್ ಇಂಡಿಯನ್ ಸ್ಟೇಟ್, ಮೈಸೂರ್: ೧೯೧೭–೧೯೫೫, ನವದೆಹಲಿ, ೧೯೭೭, ಪು. ೬೨–೬೩. ಜೊತೆಗೆ ಹೆಟ್ನೆ, ಬಿ: ಪೊಲಿಟಿಕಲ್ ಎಕಾನಮಿ ಆಫ್ ಇನ್‌ಡೈರೆಕ್ಟ್ ರೂಲ್, ಮೈಸೂರು ೧೮೮೧–೧೯೪೭, ನವದೆಹಲಿ, ಪು. ೧೫೧–೧೫೨.

೧೦ ವಿವರಗಳಿಗಾಗಿ ನೋಡಿ: ಬೇಕರ್, ಸಿ.ಜೆ. ಹಾಗೂ ವಾಷ್‌ಬ್ರೂಕ್, ಡಿ: ಪೊಲಿಟಿಕಲ್ ಇನ್‌ಸ್ಟಿಟ್ಯೂಶನ್ಸ್, ಪೊಲಿಟಿಕಲ್ ಚೇಂಜ್, ಸೌತ್‌ಇಂಡಿಯಾ: ೧೮೮೦–೧೯೪೦, ಮೀರತ್, ೧೯೭೫

೧೧ ಹಾಲಪ್ಪ, ಗ.ಸ. ಸಂ.೨, ಹಾಗೂ ಕಾಮತ್, ಎಸ್.ಯು.: ಪೆಸೆಂಟ್ಸ್ ಅಂಡ್ ಫ್ರೀಡಂ ಮೂವ್‌ಮೆಂಟ್ ಇನ್ ಕರ್ನಾಟಕ, ಕ್ವಾರ್ಟರ್ಲಿ ಜರ್ನಲ್ ಆಫ್ ಮಿಥಿಕ್ ಸೊಸೈಟಿ (ಕ್ಯು.ಜೆ.ಎಂ.ಎಸ್)ಲೇಖನ, ಸಂ. LXXIII, ಸಂಖ್ಯೆ. ೨, ಬೆಂಗಳೂರು ೧೯೮೨, ಪು. ೧೪–೨೩. ಈ ಚಳವಳಿಗಳು ಹಾಗೂ ಅವುಗಳ ನಾಯಕರನ್ನು ಕುರಿತು ತುಂಬಾ ಹೀನಾಯವಾಗಿ ಅನೇಕ ಬರಹಗಾರರು ಆಡಿರುವುದನ್ನು ಗಮನಿಸಬಹುದಾಗಿದೆ.

೧೨ ಈ ಚಳವಳಿಗಳಲ್ಲಿ ಭಾಗಿಯಾಗಿದ್ದವರು ಅಥವಾ ಸಹಾನುಭೂತಿ ಹೊಂದಿದ್ದವರನ್ನು ಉಳಿದು ಬೇರೆ ಬರಹಗಾರರೆಲ್ಲ ಅದೇ ಪ್ರಕಾರ ಮಾಡಿದ್ದಾರೆ – ಅವರು ಸ್ವಾರ್ಥಿಗಳಾಗಿ, ಕೋಮುವಾದಿಗಳಾಗಿ ಮುಂದುವರಿದಿರಲಿ ಅಥವಾ ನಿಜವಾದ ರಾಷ್ಟ್ರೀಯವಾದಿಗಳಾಗಿ ಮಾರ್ಪಟ್ಟಿರಲಿ–

೧೩ ಆರ್.ಎಸ್. ಶರ್ಮಾ, ಬಿಪಿನ್ ಚಂದ್ರ, ಆರ್. ಥಾಪರ್, ಎಚ್. ಮುಖಿಯಾ ಮುಂತಾದ ಕೆಲವು ಲೇಖಕರ ಹೊತ್ತಿಗೆಗಳನ್ನು ಹೊರತುಪಡಿಸಿ ಬಹುತೇಕ ಪುಸ್ತಕಗಳು. ಎ. ತ್ರಿಪಾಠಿ, ಬರೌಂಡ, ಇರ್ಫಾನ್ ಹಬೀಬ್ ಮತ್ತ ಕೆಲವರು ಅದೇ ಮಾರ್ಗ ಅನುಸರಿಸಿದ್ದಾರೆ. ಸತ್ಯ ಹೇಳಿದ ಕಾರಣಕ್ಕಾಗಿ ಈ ಲೇಖಕರಿಗೆಲ್ಲ ಮಾರ್ಕ್ಸಿಸ್ಟರು ಹಾಗೂ ಹಿಂದೂ ವಿರೋಧಿಗಳೆಂದು ಹಣೆಪಟ್ಟಿ ಹಚ್ಚಲಾಗಿದೆ.

೧೪ ಚಂದ್ರಶೇಖರ್, ಎಸ್.: ಸಾಮಾಜಿಕ ಹಿನ್ನಲೆಯಲ್ಲಿ ಮೈಸೂರು ರಾಜಕೀಯ: ೧೮೮೧–೧೯೪೦, ಬೆಂಗಳೂರು, ೧೯೮೩, ಪು. ೧೦೭–೧೦೯

೧೫ ಅ. ನಾರಾಯಣ ರಾವ್, ವಿ.ಎಸ್.: ಮಿರ್ಜಾ ಇಸ್ಮಾಯಿಲ್‌ರ ಜೀವನ ಚರಿತ್ರೆ, ಮೈಸೂರು, ೧೯೮೦
ಆ. ಕಾಮತ್, ಎಸ್.ಯು: ಕರ್ನಾಟಕದ ಸಂಕ್ಷಿಪ್ತ ಚರಿತ್ರೆ, ಬೆಂಗಳೂರು, ೧೯೮೦, ವಿಶೇಷವಾಗಿ ಸ್ವಾತಂತ್ರ್ಯ ಚಳುವಳಿಯ ಮೇಲಿನ ಅಧ್ಯಾಯ.

೧೬ ಹಾಲಪ್ಪ, ಗ.ಸ.: ೧.೨ ಪು. ೧೩೨–೪೬೧ ಹಾಗೂ ಕಾಮತ್, ಎಸ್.ಯು.: ಮೈಸೂರು ಜಿಲ್ಲೆಯಲ್ಲಿ ಸ್ವಾತಂತ್ರ್ಯ ಹೋರಾಟ, ಕೋಣಂದೂರು ವೆಂಕಪ್ಪ–(ಸಂ): ಪರಿವರ್ತನೆಯ ಹರಿಕಾರ; ದೇವರಾಜ ಅರಸು ನೆನಪಿನ ಸಂಪುಟ, ಬೆಂಗಳೂರು, ೧೯೮೪, ಪು. ೩೫೭–೩೬೮

೧೭ ಯಾವ ಮುಸಲ್ಮಾನ ರಾಷ್ಟ್ರೀಯವಾದಿಯ ಹೆಸರು ದಾಖಲಾಗಿಲ್ಲ, ಅದೇ ಪ್ರಕಾರ ದಲಿತ ನಾಯಕರು ಹಾಗೂ ಉಳಿದ ಅಲ್ಪ ಸಂಖ್ಯಾತರ ಉಲ್ಲೇಖವಿಲ್ಲ. ಉತ್ತರ ಕನ್ನಡದ ಕರನಿರಾಕರಣೆ ಆಂದೋಲನದಲ್ಲಿ ಭಾಗವಹಿಸಿದ ಭೂ ಒಡೆತನ ಹೊಂದಿದ್ದ ನಾಡವ ಸಮುದಾಯ ಮಾತ್ರ ಇದಕ್ಕೆ ಅಪವಾದವಾಗಿರಬಹುದು.

ಕೃಷಿಕರು ಹಾಗೂ ಕಾರ್ಮಿಕವರ್ಗವನ್ನು ಪರಿಗಣಿಸಿಯೇ ಇಲ್ಲ ಎನ್ನಬಹುದು. ಸ್ವಾತಂತ್ರ ಹೋರಾಟದಲ್ಲಿ ಶ್ರೀಸಾಮಾನ್ಯ ಎಂಬ ಪುಸ್ತಕದ ಶೀರ್ಷಿಕೆ ಆಶಾಭಾವನೆ ಉಂಟುಮಾಡುವುದಾದರೂ ಅದರ ಒಳಗಡೆ ಇರುವ ವಿವರಣೆಗಳಲ್ಲಿ ಯಾವ ಶ್ರೀಸಾಮಾನ್ಯನ ದರ್ಶನವೂ ಆಗುವುದಿಲ್ಲ, ಬದಲಾಗಿ ಇಲ್ಲಿ ಬರುವ ಪಾತ್ರಧಾರಿಗಳೆಲ್ಲ ಸುಪರಿಚಿತರಾದ ನಾಯಕರು ಹಾಗೂ ಹುತಾತ್ಮರೇ ಆಗಿದ್ದಾರೆ. ನೋಡಿ: ನಾರಾಯಣರಾವ್, ಪಿ.ಎಸ್.: ಬೆಂಗಳೂರು, ೧೯೭೮

೧೮ ಇರ್ಷಿಕ್, ಇ.ಎಫ್.: ಪೊಲಿಟಿಕಲ್ ಅಂಡ್ ಸೋಶಿಯಲ್ ಕಾನ್‌ಫ್ಲಿಕ್ಟ್: ನಾನ್ ಬ್ರಾಹ್ಮಿನ್ ಮೂವ್‌ಮೆಂಟ್ ಅಂಡ್ ತಮಿಳ್ ಸೆಪರೇಟಿಸಂ: ೧೯೧೬-೧೯೧೭

೧೯ ಮೇನರ್, ಜೆ. ಹಾಗೂ ಹೆಟ್ನೆ, ಬಿ. ಟಿ: ೮ ಮತ್ತು ಅಡಿಟಿಪ್ಪಣಿ ಸಂಖ್ಯೆ. ೧೮

೨೦ ದಿವಾಕರ್, ಆರ್.ಆರ್.: ಕರನಿರಾಕರಣೆಯ ವೀರಕಥೆ, ಹುಬ್ಬಳ್ಳಿ, ೧೯೫೫, ಪು. ೭೩-೯೨,೧೯೩೧-೩೨ರಲ್ಲಿ ಕರನಿರಾಕರಣೆಯ ನೇತೃತ್ವ ವಹಿಸಿದ್ದ ದಿವಾಕರರೇ ಒಪ್ಪಿಕೊಳ್ಳುವಂತೆ ಬೇಸತ್ತ ರೈತರು ಕರ ನೀಡದೆ ನಿರಾಕರಿಸಿದರು, ತರುವಾಯದಲ್ಲಷ್ಟೇ ಕಾಂಗ್ರೆಸ್ ಅದಕ್ಕೆ ಬೆಂಬಲ ನೀಡಿತು. ಈ ಅಧ್ಯಾಯದ ಶೀರ್ಷಿಕೆಯೇ ಆರ್ಥಿಕ ಕರನಿರಾಕರಣೆ ಎಂದಿದೆ. (ಆರ್ಥಿಕ ಕಾರಣಗಳಿಗಾಗಿ ಕರವನ್ನು ನಿರಾಕರಿಸುವುದು ಎಂದರ್ಥ).

೨೧ ಮೈಸೂರಿನಲ್ಲಿ ತಮ್ಮ ನಿರೀಕ್ಷೆಗೂ ಮೀರಿ ರಾಜಕೀಯ ಅರಿವು ಮೂಡಿದೆ ಎಂಬುದಾಗಿ ಗಾಂಧೀಜಿ ವಿದುರಾಶ್ವತ್ಥದ ಜನಾಂದೋಲನ ತರುಣದಲ್ಲಿ ಆಗಿನ ದಿವಾನರಿಗೆ ತಂತಿ ಕಳಿಸಿದರು. ಗಾಂಧೀಜಿಯವರಿಂದ ಮಿರ್ಜಾ ಇಸ್ಮಾಯಿಲ್ಲರಿಗೆ ತಂತಿ, ೨೮ ಏಪ್ರಿಲ್ ೧೯೩೮. ರೈತರೇ ಮೊದಲು ಪ್ರಾರಂಭಿಸಿದ ಕಾರಣದಿಂದಾಗಿ ಮೊದ ಮೊದಲು ೧೯೩೭ರ ಅರಣ್ಯ ಸತ್ಯಾಗ್ರಹದಲ್ಲಿ ಭಾಗವಹಿಸಲು ನಿಜಲಿಂಗಪ್ಪ ಹಿಂದೇಟು ಹೊಡೆದಿದ್ದರಾದರೂ ತರುವಾಯ ಪಾಲ್ಗೊಂಡರು. ವಿವರಗಳಿಗಾಗಿ ನೋಡಿ: ಮೇನರ್, ಜೆ. ಟಿ.: ೮. ಪು. ೧೪೦-೧೪೭

೨೨ ರೋಮಿಲಾ ಥಾಪರ್, ಹರ್ಬನ್ಸ್ ಮುಖಿಯ, ಬಿಪಿನ್ ಚಂದ್ರ: ಕಮ್ಯುನಲಿಸಂ ಅಂಡ್ ದಿ ರೈಟಿಂಗ್ ಆಫ್ ಇಂಡಿಯನ್ ಹಿಸ್ಟರಿ, ನವದೆಹಲಿ, ೧೯೮೪, ಪು. ೩೯-೬೧ ಹಾಗೂ ಬಿಪಿನ್ ಚಂದ್ರ ಟಿ. ೫೫.

೨೩ ಎಪ್ಪತ್ತು ಹಾಗೂ ಎಂಭತ್ತರ ದಶಕದಲ್ಲಿ ಬಂದ ಬರವಣಿಗೆಗಳು ಈ ಕಾರಣಗಳಿಂದಾಗಿ ಬೇರೆ ಬರಹಗಳನ್ನು ಮರೆತೂ ಉಲ್ಲೇಖಿಸುವುದಿಲ್ಲ.

೨೪ ಎಸ್.ಯು. ಕಾಮತ್‌ರು ಸಂಪಾದಿಸಿರುವ ಸ್ವಾತಂತ್ರ ಸಂಗ್ರಾಮದ ಸ್ಮೃತಿಗಳು ಎಂಬ ಮೂರು ಸಂಪುಟಗಳ ಗ್ರಂಥ ३೦೦೦ ಪುಟಗಳಷ್ಟಿದ್ದು ಇದೊಂದು ಅತ್ಯಮೂಲ್ಯ ಗ್ರಂಥವಾಗಿದೆ. ಇದೇ ರೀತಿಯಾಗಿ ಗ.ಸ. ಹಾಲಪ್ಪ ನವರು ಸಂಪಾದಿಸಿರುವ ಗ್ರಂಥವೂ ಕೂಡ ಮೂಲ ದಾಖಲೆಗಳನ್ನು ಸಂಚಯಿಸಿರುವ ಹೊತ್ತಿಗೆಯಾಗಿದೆ. ಈ ಗ್ರಂಥದ ಶೇಕಡಾ ೮೦ ಭಾಗ ಉಲ್ಲೇಖಗಳು ಹಾಗೂ ಕೆಲವು ದಾಖಲುಗಳು ಪುನರ್ ಮುದ್ರಣವಾಗಿದೆಯೆಂದರೆ ತಪ್ಪಾಗಲಾರದು.

## ಅಧ್ಯಾಯ : ಎರಡು

# ರಾಷ್ಟ್ರವಾದದ ಉಗಮ : ಸಮಾಜ ಸುಧಾರಣಾ ಚಳವಳಿಗಳು

೧೯ನೇ ಶತಮಾನದ ಸುಮಾರಿಗೆ ಕರ್ನಾಟಕವನ್ನು ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಯು ತನ್ನ ಅಧೀನಕ್ಕೆ ತೆಗೆದುಕೊಂಡ ಸಂದರ್ಭದಲ್ಲಿ ಕನ್ನಡ ಮಾತನಾಡುವ ಪ್ರದೇಶವನ್ನು ಇಪ್ಪತ್ತೊಂದು ಆಡಳಿತ ಘಟಕಗಳಾಗಿ ವಿಭಾಗಿಸಲಾಗಿತ್ತು. ಕರ್ನಾಟಕದ ವಸಾಹತೀಕರಣದಲ್ಲಿ ಎದ್ದುಕಾಣುವ ಪ್ರಧಾನವಾದ ಅಂಶವೆಂದರೆ ಜನರನ್ನು ಗುಂಪು ಗುಂಪುಗಳಾಗಿ ಒಡೆದದ್ದು. ಉತ್ತರದ ಕೆಲವು ಪ್ರದೇಶಗಳು ಬೊಂಬಾಯಿ ಪ್ರೆಸಿಡೆನ್ಸಿಯ ಒಂದು ಭಾಗವಾದವು. ದಕ್ಷಿಣ ಕನ್ನಡ, ಬಳ್ಳಾರಿ ಹಾಗೂ ಈಗಿನ ಮೈಸೂರು ಮತ್ತು ಬೆಂಗಳೂರು ಜಿಲ್ಲೆಗಳ ಕೆಲವು ಭಾಗಗಳು ಮದ್ರಾಸ್ ಪ್ರೆಸಿಡೆನ್ಸಿಯೊಡನೆ ವಿಲೀನವಾದವು. ರಾಯಚೂರು, ಗುಲ್ಬರ್ಗ ಹಾಗೂ ಬೀದರ್ ಜಿಲ್ಲೆಗಳ ಈಶಾನ್ಯ ಭಾಗದ ಪ್ರದೇಶ ಹೈದರಾಬಾದಿನ ನಿಜಾಮನಿಗೆ ಸೇರಿದವು. ಹಾಗೆಯೇ ಕರ್ನಾಟಕದ ದಕ್ಷಿಣ ಭಾಗ, ಅಂದರೆ, ಮೈಸೂರು ಟಿಪ್ಪು ಸುಲ್ತಾನನ ಪರಾಭವದ ನಂತರ ಮೈಸೂರು ಒಡೆಯರ ಅಧೀನಕ್ಕೆ ಒಳಪಟ್ಟವು. ಬೊಂಬಾಯಿ ಕರ್ನಾಟಕ ಹಾಗೂ ಬಳ್ಳಾರಿ ಪ್ರದೇಶಗಳಲ್ಲಿ ಸಣ್ಣ ಪುಟ್ಟ ಸ್ಥಾನಿಕ ಸಂಸ್ಥಾನಗಳು ತಲೆಯೆತ್ತಿ ಇವುಗಳಲ್ಲಿ ಪಾಳೆಯಗಾರರ ತಮ್ಮದೇ ಆದ ರೀತಿಯ ಆಡಳಿತಾತ್ಮಕ ಪದ್ಧತಿಗಳು ಜಾರಿಯಲ್ಲಿದ್ದವು.

ಇದರ ಒಟ್ಟು ಪರಿಣಾಮ ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಹರಿದು ಹಂಚಿಹೋದ ಜನತೆಯ ಮೇಲೆ ಆಗಿ ಅವರ ಸ್ಥಿತಿ ಅತಂತ್ರವಾಗಿತ್ತು. ಮುಂಬಯಿ ಕರ್ನಾಟಕ ಪ್ರಾಂತ್ಯದ ಜನರು ಪ್ರಬಲರಾದ ಮರಾಠಿಗರು ಹಾಗೂ ಮರಾಠಿ ಭಾಷೆಯಿಂದ ಹೆಚ್ಚು ಸಂಕಷ್ಟಕ್ಕೊಳಗಾದಂತೆ ಕಂಡರು. ಇಂಗ್ಲಿಷ್ ಭಾಷೆಯ ಪ್ರಭಾವದಿಂದ ನಲುಗುವುದು ಒಂದು ಬಗೆಯಾದರೆ, ಶಾಲೆ ಹಾಗೂ ಕಾಲೇಜುಗಳಲ್ಲಿ ಮರಾಠಿ ಭಾಷೆಯ ಹೇರಿಕೆಯಿಂದ ಇನ್ನೊಂದು ರೀತಿಯಲ್ಲಿ ಬಳಲಿದರು. ಇದೂ ಸಾಲದೆಂಬಂತೆ ಈ ಪ್ರದೇಶವು 'ದಕ್ಷಿಣ ಮರಾಠ ದೇಶ' ವೆಂದು ಕರೆಯಲ್ಪಟ್ಟಿತು. ಹೈದರಾಬಾದು ಕರ್ನಾಟಕ ಪ್ರದೇಶವನ್ನು ಇನ್ನೂ ದಮನಕಾರಿ ರೀತಿಯಲ್ಲಿ ಹೈದರಾಬಾದಿನ ನಿಜಾಮ ಆಳುತ್ತಿದ್ದ. ೧೯೪೦ರ ತನಕ ಈ ರಾಜ್ಯದಲ್ಲಿ ರಾಜಕೀಯ ಚಟುವಟಿಕೆಯ ಮಾತಂತಿರಲಿ, ಯಾವುದೇ ಬಗೆಯ ಸಾಂಸ್ಕೃತಿಕ ಅಥವಾ ಸಾಮಾಜಿಕ ಚಟುವಟಿಕೆಗೂ ಅಸ್ಪದವಿರಲಿಲ್ಲ. ಈ ಪ್ರದೇಶಗಳಲ್ಲಿ ಜನರು ತಾವು ಶೋಷಣೆಗೆ ಒಳಗಾಗಿರುವ ಪರಿಸ್ಥಿತಿಯಲ್ಲಿ ಬದುಕತೊಡಗಿದರು. ಮದರಾಸು ಪ್ರಾಂತ್ಯದಲ್ಲಿ ಕನ್ನಡಿಗರು, ತೆಲುಗರು ಹಾಗೂ ತಮಿಳರ ದ್ವಿವಿಧವಾದ ಹೊರೆಯಿಂದ ನಲುಗಿದರು. ಜನರಲ್ಲಿ ಈ ಬಗೆಯಾದ ಭಾವನೆ ಇದ್ದದ್ದು ಸಹಜವಾದರೂ ವಸ್ತುಸ್ಥಿತಿ ಅಷ್ಟು ಗಂಭೀರ ಸ್ವರೂಪದ್ದಾಗಿರಲಿಲ್ಲ, ವಸಾಹತು ನೀತಿಯೇ ಒಡೆದು ಆಳುವುದಾಗಿದ್ದರಿಂದ ಆ ಸನ್ನಿವೇಶ ನಿರ್ಮಾಣವಾಗಿತ್ತು. ಕರ್ನಾಟಕದ ಜನತೆಯ ಹಾಗೆ ನಿಕೃಷ್ಟವಾದ ರೀತಿಯಲ್ಲಿ ರಾಷ್ಟ್ರದ ಯಾವುದೇ ಪ್ರದೇಶದ ಜನರು ಒಡೆದು ಹೋಗಿರಲಿಲ್ಲ.

೧೯ನೇ ಶತಮಾನದ ಮಧ್ಯಭಾಗದಲ್ಲಿ ಕನ್ನಡಿಗರಲ್ಲಿ ಪ್ರಜ್ಞಾವಂತರಾದವರು ತಮಗಾಗಿರುವ ಹಾನಿಯ ಪ್ರಮಾಣವನ್ನು ಅರ್ಥಮಾಡಿಕೊಂಡರು. ಈ ತಿಳುವಳಿಕೆ ತಮ್ಮ ಭಾಷೆ ಹಾಗೂ ಸಾಹಿತ್ಯ-ಸಂಸ್ಕೃತಿಗಳ ಅನನ್ಯತೆಯನ್ನು ಸ್ಥಾಪಿಸುವಂಥ ವೈಯಕ್ತಿಕ ಪ್ರಯತ್ನಗಳ ಮೂಲಕ ಪ್ರಕಟವಾಗಲು ಪ್ರಾರಂಭವಾಯಿತು. ೧೯ನೇ ಶತಮಾನದ ಕಡೆಯ ಕಾಲು ಶತಕದಲ್ಲಿ ಈ ಪ್ರಯತ್ನಗಳಿಗೆ ಸಾಂಸ್ಥಿಕ ಅಭಿವ್ಯಕ್ತಿ ಪ್ರಾಪ್ತವಾಗತೊಡಗಿತು. ೧೮೬೫ರಷ್ಟು ಹಿಂದೆಯೇ ಬೆಂಗಳೂರಿನಲ್ಲಿ ‘ಕರ್ನಾಟಕ ಪ್ರಕಾಶಿಕ’[೧] ಎಂಬ ಪತ್ರಿಕೆಯೊಂದು ಪ್ರಾರಂಭವಾಗಿ, ಕರ್ನಾಟಕವೆಂಬ ಪ್ರದೇಶ ಒಂದಿದೆ ಎಂಬ ಅಂಶವನ್ನು ಮನದಟ್ಟು ಮಾಡಿತು. ಅದೇ ಸಂದರ್ಭದಲ್ಲಿ ಸ್ಥಾಪನೆಗೊಂಡ ಸಂಸ್ಥೆಗಳಲ್ಲಿ ‘ಕರ್ನಾಟಕ ಭಾಷೋಜ್ಜೀವಿನಿ ಸಭಾ’ (ಮೈಸೂರಿನಲ್ಲಿ), ‘ಕರ್ನಾಟಕ ವಿದ್ಯಾವರ್ಧಕ ಸಂಘ’ (ಧಾರವಾಡದಲ್ಲಿ) ಪ್ರಮುಖವಾದುವು; ಇವು ಬಹಳ ಪ್ರಾಧಾನ್ಯತೆ ಪಡೆದ ಸಾಂಸ್ಕೃತಿಕ ಹಾಗೂ ಸಾಹಿತ್ಯಕ ಕೇಂದ್ರಗಳಾಗಿದ್ದವು. ತರುವಾಯದಲ್ಲಿ ರಾಷ್ಟ್ರೀಯ ಸ್ವಾತಂತ್ರ ಸಂಗ್ರಾಮದಲ್ಲಿ ಕೂಡ ಈ ಎರಡು ನಗರಗಳು ಬಹಳ ಪ್ರಮುಖವಾದ ಪಾತ್ರ ವಹಿಸಲಿದ್ದುವು.

ಬೇರೆ ಬೇರೆ ಆಡಳಿತಾತ್ಮಕ ಪದ್ಧತಿಗಳು, ಒಬ್ಬರನ್ನೊಬ್ಬರು ಗುಮಾನಿಯಿಂದ ಗಮನಿಸುವುದು, ಶೋಷಿತ ಸ್ಥಿತಿಯಲ್ಲಿ ಬದುಕುವುದು, ವಸಾಹತುಶಾಹಿಯ ಬಹುಮುಖಿ ಶೋಷಣೆಯಲ್ಲಿ ನಲುಗುವುದು, ಈ ಎಲ್ಲ ಉಪಧ್ವಾಪಗಳ ನಡುವೆ ಆಧುನಿಕ ರಾಷ್ಟ್ರೀಯವಾದಿ ಕರ್ನಾಟಕ ಒಡಮೂಡಬೇಕಾಗಿದ್ದಿತು. ಆಧುನಿಕ ಕರ್ನಾಟಕ ಉದ್ಭವವಾಗುವ ಸಂದರ್ಭದಲ್ಲಿ ಯಾವ ಸ್ಥಿತಿಗತಿಗಳು ಅದರ ಹುಟ್ಟಿಗೆ ಕಾರಣವಾದುವು ಎಂಬುದು ಒಂದು ಸಂಕೀರ್ಣವಾದ ಅಧ್ಯಯನವೇ ಆಗಿದೆ.

ವಸಾಹತು ಭಾರತದಲ್ಲಿ ರಾಷ್ಟ್ರೀಯವಾದಿ ಪ್ರಜ್ಞೆ ಬೆಳೆಯಲು ಪ್ರಪ್ರಥಮವಾಗಿ ವಸಾಹತು ಸಂಬಂಧದ ಮೂಲಕ ಸಾಧ್ಯವಾದ ಪಶ್ಚಿಮದೊಡನೆಯ ಪ್ರಭಾವವೇ ಆಗಿದೆ. ಈ ಪ್ರಭಾವದಲ್ಲಿ ಹೆಚ್ಚಿನಂಶ ಋಣಾತ್ಮಕವಾದದ್ದು ಎನ್ನಬಹುದಾದರೂ ಕೆಲವು ಸಂಗತಿಗಳು ಧನಾತ್ಮಕವಾಗಿದುದ್ದು ನಿಜ. ಧನಾತ್ಮಕವಾದ ಈ ಅಂಶಗಳ ಸಹಾಯದಿಂದಲೇ ಅಂತಿಮವಾಗಿ ವಸಾಹತುಶಾಹಿಯನ್ನು ಪರಾಭವಗೊಳಿಸಲು ಭಾರತ ಶಕ್ತಿಯನ್ನು ಪಡೆದದ್ದು ಎಂಬುದನ್ನು ನೆನೆಯಬೇಕು. ವಸಾಹತು ಆಡಳಿತದ ಅತಿ ಮುಖ್ಯವಾದ ಪ್ರಭಾವವೆಂದರೆ ಪಾಶ್ಚಾತ್ಯ ಜ್ಞಾನಕ್ಕೆ ಭಾರತೀಯರನ್ನು ಪರಿಚಯಿಸಿದುದು. ಇದರಿಂದ ಹೊಸ ರೀತಿಯ ತಾರ್ಕಿಕ ಪ್ರಜ್ಞೆ ಮತ್ತು ತೀರ್ಮಾನವನ್ನು ಜನರು ಗಳಿಸಿಕೊಂಡರು. ಜೊತೆಗೆ ಇದರಿಂದ ಪಾಶ್ಚಾತ್ಯ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಚಿಂತನೆಗಳ ಸಂಪರ್ಕ ಪಡೆಯುವುದೂ ಸಾಧ್ಯವಾಯಿತು.

ಈ ಪ್ರಭಾವಗಳಿಗೆ ಒಳಪಟ್ಟು ಕರ್ನಾಟಕದ ಜನತೆ ತಾವು ಬದುಕುತ್ತಿರುವ ನಿಕೃಷ್ಟ ಪರಿಸ್ಥಿತಿಯ ಬಗ್ಗೆ ಅರಿವು ಮೂಡಿಸಿಕೊಂಡರು. ತುಳಿತಕ್ಕೊಳಗಾದ ಯಾವುದೇ ಸಮಾಜವು ತನ್ನ ಪರಿಸ್ಥಿತಿಯ ಕಾರಣಗಳೇನೆಂದು ತಿಳಿಯಲು ತವಕಿಸುವುದು ಸಹಜವೇ ಆಗಿದೆ. ತನ್ನ ಪರಿಸ್ಥಿತಿಗೆ ತಾನೇ ಕಾರಣವೇ, ತನ್ನ ಯಃಕಶ್ಚಿತ್ ಸ್ಥಿತಿಗೆ ತನ್ನ ಹೊಣೆ ಎಷ್ಟು ಎಂದು ಚಿಂತಿಸುತ್ತದೆ. ೧೯ನೇ ಶತಮಾನದ ಆದಿಭಾಗದಲ್ಲಿ ರಾಜಾರಾಮ ಮೋಹನ್‌ರಾಯ್ ಅವರು ಈ ಪ್ರಶ್ನೆಯನ್ನು ಕೇಳಿದರು. ‘ಹಿಂದುಗಳು ವರ್ತಮಾನದಲ್ಲಿ ಅನುಸರಿಸುತ್ತಿರುವ ಧಾರ್ಮಿಕ ಪದ್ಧತಿ ಅವರ ರಾಜಕೀಯ ಅನುಕೂಲತೆಯನ್ನು ಹೆಚ್ಚಿಸುವಲ್ಲಿ ಯಾವ ರೀತಿಯಲ್ಲೂ ಸಹಕಾರಿಯಲ್ಲ ಎಂದು ವಿಷಾದದಿಂದ ಹೇಳುತ್ತಿದ್ದೇನೆ. ಜಾತಿಪದ್ಧತಿಯಿಂದಾಗಿ ತಲೆಯೆತ್ತಿರುವ ಅಸಂಖ್ಯಾತವಾದ ವಿಭಾಗಗಳು ಹಾಗೂ ಉಪಪಂಗಡಗಳು ಅವರಲ್ಲಿ ರಾಷ್ಟ್ರಪ್ರೇಮವನ್ನು ಉಂಟುಮಾಡುವಲ್ಲಿ ಖಂಡಿತವಾಗಿ ಅಡ್ಡಿಯಾಗಿವೆ. ಹಾಗೆಯೇ ಲೆಕ್ಕವಿಲ್ಲದಷ್ಟು ಧಾರ್ಮಿಕ ವಿಧಿಗಳು ಮತ್ತು ಮಡಿ-ಮೈಲಿಗೆಯ ವಿಧಾನಗಳು, ಅವರು ಯಾವುದೇ ಜಟಿಲವಾದ ಕಾರ್ಯವನ್ನು ವಹಿಕ್ಕೊಳ್ಳುವಲ್ಲಿ ಸಮಸ್ಯೆ ತಂದೊಡ್ಡುತ್ತವೆ. ತಮ್ಮ ರಾಜಕೀಯ

ಅನುಕೂಲತೆ ಹಾಗೂ ಸಾಮಾಜಿಕ ಸವಲತ್ತುಗಳ ದೃಷ್ಟಿಯಿಂದಲಾದರೂ ಅವರ ಧರ್ಮದಲ್ಲಿ ಕೆಲವು ಬದಲಾವಣೆಗಳಾಗಬೇಕಾದುದು ಅನಿವಾರ್ಯ'.[೨] ಪಾಶ್ಚಾತ್ಯ ಚಿಂತನೆಗೆ ಈಡಾದ ಮೊದಲ ತಲೆಮಾರಿನ ಭಾರತೀಯರು ಈ ಬಗೆಯಾಗಿ ಆಲೋಚಿಸಿದರಲ್ಲದೆ ಆ ಚಿಂತನೆಗಳಿಂದ ಅವರಲ್ಲಿ ಗಾಢವಾದ ಪರಿಣಾಮವಾದದ್ದೂ ಸಹಜವೇ.

ಇಂಗ್ಲಿಷ್ ವಿದ್ಯಾಭ್ಯಾಸವನ್ನು ಸ್ವೀಕರಿಸಿದ ಅನೇಕರಿಗೆ ಅದುವರೆಗೆ ಪ್ರಚಲಿತವಿದ್ದ ಧಾರ್ಮಿಕ ಹಾಗೂ ಸಾಮಾಜಿಕವಾದ ಕೆಲವು ನಂಬಿಕೆಗಳು ಬದಲಾದ ಪರಿಸ್ಥಿತಿಗೆ ಅನುಗುಣವಾಗಿಲ್ಲದ ಕಾರಣ ಸುಧಾರಣೆಯ ಅಗತ್ಯವಿರುವುದನ್ನು ಮನಗಂಡರು. ೧೮೨೮ರಲ್ಲಿ ಬ್ರಹ್ಮಸಮಾಜವನ್ನು ಸ್ಥಾಪಿಸುವುದರ ಮೂಲಕ ರಾಜಾರಾಮ್ ಮೋಹನ್‌ರಾಯ್ ಅವರು ಇದೆಲ್ಲದಕ್ಕೆ ಒಂದು ರೀತಿಯ ಸಾಂಸ್ಥಿಕ ಅಭಿವ್ಯಕ್ತಿಯನ್ನು ಕೊಟ್ಟರು. ಈ ಪ್ರಯತ್ನಗಳಿಗೆ ದಕ್ಷಿಣ ಭಾರತದಲ್ಲಿ ಪ್ರತಿಸ್ಪಂದನೆ ಸಿಕ್ಕಿತು; ವೇದಸಮಾಜ, ಮದ್ರಾಸಿನಲ್ಲಿ ದಕ್ಷಿಣ ಭಾರತೀಯ ಬ್ರಹ್ಮಸಮಾಜ ಹಾಗೂ ಪಶ್ಚಿಮ ಭಾರತದಲ್ಲಿ ಪರಮಹಂಸ ಮಂಡಲಿ ಮತ್ತು ಪ್ರಾರ್ಥನಾ ಸಮಾಜ ಸ್ಥಾಪನೆಯಾದವು. ಇವೆರಡು ಪ್ರಾಂತ್ಯಗಳ ನಡುವೆ ಜಗ್ಗಾಡಲ್ಪಟ್ಟ ಕರ್ನಾಟಕವು ಇವುಗಳ ಪ್ರಭಾವಕ್ಕೆ ಕೂಡಲೇ ಒಳಗಾಯಿತು.

ಕರ್ನಾಟಕದ ಬೌದ್ಧಿಕ ಹಾಗೂ ಸಾಹಿತ್ಯಕ ಕ್ಷೇತ್ರದಲ್ಲಿ ಸಲ್ಲಿಸಿದ್ದ ಸೇವೆಯ ಜೊತೆಗೆ ಕ್ರೈಸ್ತಧರ್ಮ ಪ್ರಚಾರಕರ ಮತಾಂತರದ ಕೆಲಸಗಳ ಬಗ್ಗೆ ಒಂದು ಬಗೆಯ ಮಿಶ್ರ ಪ್ರತಿಕ್ರಿಯೆ ಇಲ್ಲಿ ಕಂಡುಬಂದಿತು. ಮಿಷನರಿಗಳ ಪಾಂಡಿತ್ಯಪೂರ್ಣ ಗ್ರಂಥ ರಚನಾ ಕೆಲಸಗಳನ್ನು ಮುಕ್ತಕಂಠದಿಂದ ಹೊಗಳಿದರಾದರೂ ಮತಾಂತರಗೊಳಿಸುವ ಅವರ ಧರ್ಮಪ್ರಚಾರದಿಂದ ಬೇಸರವಾದದ್ದಕ್ಕೆ ಕಾರಣ, ಮತಾಂತರದಿಂದ ಜನರು ರಾಷ್ಟ್ರಬಾಹಿರರಾಗುತ್ತಾರೆಂಬ ದಿಗಿಲು. ಥಿಯೋಸೋಫಿಕಲ್ ಸೊಸೈಟಿ ಹಾಗೂ ಅದರ ಸಮರ್ಥ ಪ್ರತಿಪಾದಕಿಯಾದ ಆನಿ ಬೆಸೆಂಟರು ದಕ್ಷಿಣ ಭಾರತದ ಮಿಷನರಿಗಳ ಕಟುವಿಮರ್ಶೆಗೆ ಗುರಿಯಾದರು. ಆದಾಗ್ಯೂ ರಾನಡೆಯವರು ಪ್ರಾರಂಭಿಸಿದ ಪ್ರಾರ್ಥನಾ ಸಮಾಜವು ಸಮಾಜವನ್ನು ಹಾಗೂ ಧರ್ಮವನ್ನು ಸುಧಾರಿಸಬೇಕೆಂದು ಹೊರಟಾಗ ಜನರು ಸ್ವೀಕರಿಸಿದ್ದಕ್ಕೆ ಕಾರಣವೇನೆಂದರೆ ರಾನಡೆಯವರು ಭೂತಕಾಲದ ನಂಬಿಕೆಗಳನ್ನು ಸಂಪೂರ್ಣವಾಗಿ ಕೈಬಿಡುವ ಮಾರ್ಗವನ್ನು ಅನುಸರಿಸಲಿಲ್ಲ. ಇದು ಕನ್ನಡಿಗರಿಗೆ ಹಿಡಿಸಿತು, ಜೊತೆಗೆ ಸುಧಾರಣೆಯಲ್ಲಿ ನಂಬಿಕೆಯುಳ್ಳವರು ಹೆಚ್ಚು ಕಡಿಮೆ ಮೇಲ್ ಮಧ್ಯಮ ವರ್ಗದಿಂದ ಬಂದವರಾಗಿದ್ದರು. ಈ ಗುಂಪಿಗೆ ಸೇರಿದ ಸುಧಾರಕರು ಸಾಮಾಜಿಕ ಹಾಗೂ ಧಾರ್ಮಿಕ ಸಂಸ್ಥೆಗಳ ಆಮೂಲಾಗ್ರ ಸುಧಾರಣೆಯನ್ನು ಅಪೇಕ್ಷಿಸದಂಥ ಕೆಲವು ಕ್ಷೇತ್ರಗಳನ್ನು ಆರಿಸಿಕೊಳ್ಳುವುದು ಉಚಿತವೆನಿಸಿತ್ತು. ಆ ಕಾರಣದಿಂದಾಗಿ ಅವರಲ್ಲಿ ಬಹುತೇಕರಿಗೆ ಜಾತಿ ಭೇದ ಹಾಗೂ ಅಸ್ಪೃಶ್ಯತೆಯಂಥ ಅನಿಷ್ಟಗಳನ್ನು ತೊಡೆದು ಹಾಕುವ ಕಾರ್ಯಕ್ರಮಗಳನ್ನು ಹಾಕಿಕೊಳ್ಳಲಾಗಲಿಲ್ಲ. ಆದಾಗ್ಯೂ ಅವರು ಕೈಗೊಂಡ ಸುಧಾರಣಾ ಕ್ರಮದಿಂದ ಕೌಟುಂಬಿಕ ಪರಿಸರದಿಂದ ಮೊದಲುಗೊಂಡು ಸಾಮಾಜಿಕ ಹಾಗೂ ಧಾರ್ಮಿಕ ನಂಬಿಕೆಗಳನ್ನು ಪ್ರಭಾವಿಸುವಂಥ ಕೆಲಸವಾಯಿತು. ಉದಾರವಾದಿ ಸನ್ನಿವೇಶದಲ್ಲಿ ಮಹಿಳೆಯರ ಸ್ಥಿತಿಗತಿಗಳು ಹೆಚ್ಚು ಚಿಂತಾಜನಕವಾಗಿ ಗೋಚರಿಸತೊಡಗಿದವು.

ಕರ್ನಾಟಕದಲ್ಲಿ ದಾಸಚಳವಳಿ ಹಾಗೂ ವೀರಶೈವ ಚಳವಳಿಗಳು ಘಟಿಸಿದ್ದಾಗ್ಯೂ ಸಮಾಜದಲ್ಲಿ ಮಹಿಳೆಯರ ಸ್ಥಾನಮಾನ ಬೇರೆ ರಾಜ್ಯದ ಮಹಿಳೆಯರ ಪರಿಸ್ಥಿತಿಗಿಂತ ಭಿನ್ನವಾಗಿಯೇನೂ ಇರಲಿಲ್ಲ. ವೀರಶೈವ ಹಾಗೂ ದಾಸ–ಭಕ್ತಿ ಚಳವಳಿಗಳ ಸಂದರ್ಭದಲ್ಲಿ ಸ್ತ್ರೀಯರ ಹಕ್ಕುಗಳನ್ನು ಎತ್ತಿ ಹಿಡಿಯಲಾಗಿತ್ತಾದರೂ ಕೆಲವು ದೋಷಗಳು ವಿಧಿವಿಧಾನಗಳಲ್ಲಿ ನುಸುಳಿಕೊಂಡು ಮತ್ತೆ ಹೊರಟಲ್ಲಿಗೆ ಎಂಬಂತಾಗಿತ್ತು.

ಕರ್ನಾಟಕದಲ್ಲಿ ಸಾಮಾಜಿಕೊ-ಧಾರ್ಮಿಕ ಸುಧಾರಣೆಗಳ ಬಗ್ಗೆ ತಿಳಿಯುವಾಗ ಎರಡು ಭಾಗಗಳಾಗಿ ಮಾಡಿಕೊಳ್ಳುವುದು ಅನಿವಾರ್ಯ. ಬ್ರಿಟಿಷ್ ವಿಭಾಗ ಹಾಗೂ ಸ್ಥಾನೀಯ ರಾಜ್ಯಗಳ ವಿಭಾಗ. ಬೇರೆ ಬೇರೆ ಆಡಳಿತ ಪರಿಸ್ಥಿತಿಗಳ ಅಡಿಯಲ್ಲಿ ಈ ರಾಜ್ಯಗಳು ಇದ್ದವು ಎಂಬ ಕಾರಣಕ್ಕಾಗಿಯಲ್ಲದೇ ಬೇರೆ ಬೇರೆ ಪ್ರಭಾವಗಳ ಪ್ರಖರತೆಯಲ್ಲಿ ವ್ಯತ್ಯಾಸವಾದದ್ದರಿಂದ ಈ ವಿಭಾಗಗಳ ಸುಧಾರಣೆಯ ಗತಿಯಲ್ಲಿ ವ್ಯತ್ಯಯವಾದುದ್ದನ್ನು ಗಮನಿಸಬೇಕು. ಸುಧಾರಣಾ ಸನ್ನಿವೇಶದಲ್ಲಿ ಸ್ತ್ರೀಯರಿಗೆ ಸಂಬಂಧಿಸಿದ ಸಂಗತಿಯನ್ನು ಮೊದಲು ಪ್ರಸ್ತಾಪ ಮಾಡಬೇಕು. ಏಕೆಂದರೆ ಎಲ್ಲಾ ಸಮಾಜ ಸುಧಾರಕರ ಗಮನವನ್ನು ಮೊದಲು ಸೆಳೆದ ಸಂಗತಿಯೆಂದರೆ ಇದು. ಜೊತೆಗೆ ಆಧುನಿಕ ರಾಷ್ಟ್ರವಾಗಿ ರೂಪು ತಳೆಯುವ ಭೂಪ್ರದೇಶದಲ್ಲಿ ಜನಸಂಖ್ಯೆಯ ಅರ್ಧದಷ್ಟು ಸ್ತ್ರೀಯರಿದ್ದುದು.

## ಬ್ರಿಟಿಷ್ ಕರ್ನಾಟಕ

ಮಹಿಳೆಯರ ಶಿಕ್ಷಣ, ಬಾಲ್ಯ ವಿವಾಹ, ವಿಧವಾ ವಿವಾಹ, ದೇವದಾಸಿ ಪದ್ಧತಿ ಇತ್ಯಾದಿ ಸಮಸ್ಯೆಗಳು ಸುಧಾರಕರ ಗಮನ ಸೆಳೆದವು. ಕ್ರಿಶ್ಚಿಯನ್ ಮಿಷನರಿಗಳು ಮೊದಲು ಬಾಲಕಿಯರಿಗೆ ವಿದ್ಯಾಭ್ಯಾಸ ನೀಡುವ ಪ್ರಯತ್ನ ಮಾಡಿದರು. ಬೆಂಗಳೂರಿನಲ್ಲಿ ೧೮೪೦ರಲ್ಲಿ ಮಿಷನರಿಗಳು ಬಾಲಕಿಯರ ಮೊದಲ ಶಾಲೆಯನ್ನು ತೆರೆದರು. ಕ್ರಿಶ್ಚಿಯನ್ ಮಿಷನರಿಗಳು ಹಿಂದುಗಳ ಸಾಮಾಜಿಕ ಹಾಗೂ ಧಾರ್ಮಿಕ ನಂಬಿಕೆಗಳು ಹಾಗೂ ಆಚರಣೆಗಳನ್ನು ಪ್ರಬಲವಾದ ರೀತಿಯಲ್ಲಿ ಖಂಡಿಸಿದಾಗ ಭಾರತೀಯರಲ್ಲನೇಕರು ಆತ್ಮವೀಕ್ಷಣೆ ಮಾಡಿಕೊಳ್ಳುವಂತಾಯಿತು. ಡಿ.ಕೆ. ಕರ್ವೆ, ರಾನಡೆ ಮತ್ತು ಆರ್.ಜಿ. ಭಂಡಾರ್‌ಕರ್ ಬೊಂಬಾಯಿ ಪ್ರಾಂತ್ಯದಿಂದ, ರಘುನಾಥ ರಾವ್, ಬೆಹ್ರಾಮ್ ರಾವ್, ಜಿ. ಸುಬ್ರಮಣ್ಯ ಅಯ್ಯರ್, ಕಂದುಕೂರಿ ವೀರೇಶಲಿಂಗಮ್ ಮದರಾಸು ಪ್ರಾಂತ್ಯದಿಂದ, ಮಹಿಳೆಯರ ಪರಿಸ್ಥಿತಿಯನ್ನು ಗಮನಿಸಿ ಅದರ ಸುಧಾರಣೆಗೆ ನಿರತರಾದವರಲ್ಲಿ ಪ್ರಮುಖರು. ಕರ್ನಾಟಕದಲ್ಲಿ ಕುದುಮುಲ್ ರಂಗರಾವ್, ಅಂಬಿಲ್‌ನರಸಿಂಹ ಐಯ್ಯಂಗಾರ್, ಕರ್ಕಿ ವೆಂಕಟರಮಣಶಾಸ್ತ್ರೀ ಇನ್ನು ಕೆಲವರು ಸುಧಾರಣೆಯ ಪರಮಭಕ್ತರಾದರು.

ಭಾರತದಲ್ಲಿ ಸುಧಾರಣಾ ಚಳವಳಿಯನ್ನು ಪ್ರಾರಂಭಿಸಿದ ಇಂಡಿಯನ್ ಸೋಶಿಯಲ್ ಕಾನ್‌ಫರೆನ್ಸ್ ಸ್ಥಾಪಕರಾದ ಸುಬ್ರಮಣ್ಯ ಅಯ್ಯರ್, ಪಂತುಲು ಹಾಗೂ ರಾನಡೆ ಇವರ ಜೊತೆಗೂಡಿ ಈ ಮೇಲೆ ಹೆಸರಿಸಿದ ಕರ್ನಾಟಕ ನಾಯಕರು ಸ್ತ್ರೀ ವಿಮೋಚನೆಗೆ ನಾಂದಿ ಹಾಡಿದರು. ಈ ನಾಯಕರ ಬರಹಗಳು ಹಾಗೂ ಚಟುವಟಿಕೆಗಳು ಇನ್ನೂ ಹಲವಾರು ಮಂದಿಯ ಮೇಲೆ ಪ್ರಭಾವ ಬೀರಿ ವಿಧವಾ ವಿವಾಹಕ್ಕೆ ಪ್ರೋತ್ಸಾಹ ಹಾಗೂ ಬಾಲ್ಯ-ವಿವಾಹದ ರದ್ದತಿ ಇತ್ಯಾದಿ ಕಾರ್ಯಕ್ರಮಗಳನ್ನು ಹೆಚ್ಚು ಹುರುಪಿನಿಂದ ಹಮ್ಮಿಕೊಳ್ಳುವಂತಾಯಿತು. ಆ ಕಾಲದ ಅನೇಕ ಸುದ್ದಿ ಪತ್ರಿಕೆಗಳು, ಅವುಗಳಲ್ಲಿ ಕೆಲವನ್ನು ಹೆಸರಿಸಬಹುದಾದರೆ, 'ಕನ್ನಡ ವೃತ್ತ, ಮಂಗಳೂರ ಸಮಾಚಾರ, ಕರ್ನಾಟಕ ಪ್ರಕಾಶಿಕಾ, ಸಂಪದಭ್ಯುದಯ, ಹಿತವಾದಿ' ಇತ್ಯಾದಿಗಳು ಸುಧಾರಣಾ ಸಂಗತಿಗಳನ್ನು ಪ್ರಚಾರಮಾಡಿದವು. ಕುದುಮುಲ್ ರಂಗರಾವ್‌ರಂಥ ಬ್ರಹ್ಮಸಮಾಜಿಗಳು ಪ್ರಾಪ್ತ ವಯಸ್ಕರ ಮದುವೆಯನ್ನು ಪ್ರಚಾರ ಮಾಡಿದರು. ವಿಧವಾ ವಿವಾಹವನ್ನು ಪ್ರಚಾರ ಮಾಡುತ್ತಿದ್ದ ಅವರು ತಮ್ಮ ಮಗಳನ್ನು ಬೇರೊಂದು ಜಾತಿಯ ಹುಡುಗನಿಗೆ ಕೊಟ್ಟು ಮದುವೆ ಮಾಡಿದರು.

ಇಡೀ ಸಮಾಜವನ್ನು ತಮ್ಮ ಜೊತೆ ತೆಗೆದುಕೊಂಡು ಹೋಗುವುದು ದುಸ್ತರವಾದ ಕೆಲಸವಾಗಿತ್ತು. ಚಲನರಹಿತವಾದ, ಸತ್ವಹೀನ ಸಮಾಜದ ಕುರುಡುಗಳೆಂದು ತಿಳಿದು ಹಳೆಯ ನಂಬಿಕೆಗಳನ್ನು ಒಮ್ಮೆಲೇ ಬಿಡುವುದು ಅವರಿಂದ ಸಾಧ್ಯವಿರಲಿಲ್ಲ. ತಮ್ಮ ಚಟುವಟಿಕೆಗಳನ್ನು ಬೆಂಬಲಿಸಿ ಸ್ವೀಕರಿಸುವ ಮಾತಂತಿರಲಿ

ಕಡೆಯ ಪಕ್ಷ ಅವುಗಳನ್ನು ಸಹಿಸಿಕೊಳ್ಳುವಂಥ ವಾತಾವರಣವನ್ನು ಅವರು ನಿರ್ಮಿಸಬೇಕಾಗಿತ್ತು. ಹಳೆಯ ಪದ್ಧತಿಯನ್ನು ಹಲವರು ನಂಬಿದ್ದ ಕಾರಣದಿಂದಾಗಿ ಸಂಪೂರ್ಣವಾಗಿ ಅವನ್ನು ನಿರಾಕರಿಸುವಂತಿರಲಿಲ್ಲ. ಆ ನಂಬಿಕೆಗಳ ಬುಡವನ್ನೇ ಪಲ್ಲಟ ಮಾಡದ ಹೊರತು ಅಲ್ಪ ಸ್ವಲ್ಪ ತರ್ಕದಿಂದ ಅವರ ಮಾರ್ಗದ ದೋಷವನ್ನು ಮನವರಿಕೆ ಮಾಡಿಕೊಡುವುದು ಸಾಧ್ಯವಿರಲಿಲ್ಲ. ಹಾಗಾಗಿ ಚೆಂತ್ಸಾಲ್ ರಾವ್, ರಘುನಾಥ ರಾವ್, ಕುಡುಮುಲ್ ರಂಗರಾವ್ ಅವರು ವಿಧವಾ ವಿವಾಹ ಹಾಗೂ ಮಹಿಳೆಯ ಶಿಕ್ಷಣವನ್ನು ಮಾನ್ಯ ಮಾಡುವಂಥ ಧಾರ್ಮಿಕ ಬರಹಗಳನ್ನು ಪ್ರಕಾಶಿಸಬೇಕಾಯಿತು. ಅವರು ಬೋಧಿಸಿದಂಥ ಸುಧಾರಣೆಗಳು ಧರ್ಮಶಾಸ್ತ್ರದಲ್ಲಿ ಮಾನ್ಯವಾಗಿವೆ ಎಂಬುದನ್ನು ತೋರಿಸುವುದಕ್ಕೆ ಅವರು ಪುರಾವೆಗಳನ್ನು ತೋರಿಸಬೇಕಾದುದು ಅನಿವಾರ್ಯವಾಗಿತ್ತು. 'ಸುದರ್ಶನ' ಪತ್ರಿಕೆಯ ಅಂಕಣಗಳಲ್ಲಿ ಹಟ್ಟಂಗಡಿ ನಾರಾಯಣರಾಯರು ಬಾಲವಿವಾಹದ ವಿರುದ್ಧ ಶಾಸ್ತ್ರಗಳಲ್ಲಿ ಹೇಳಿರುವ ಹೇಳಿಕೆಗಳನ್ನು ಅಚ್ಚು ಮಾಡಿಸಬೇಕಾಯಿತು.[೩]

ಬಂಗಾಳ ಹಾಗೂ ಮಹಾರಾಷ್ಟ್ರದಲ್ಲಿ ಎದ್ದ ಈ ಚಳವಳಿಯಿಂದ ಸ್ಫೂರ್ತಿಗೊಂಡು ಕರ್ನಾಟಕದ ಬರಹಗಾರರು ಇಲ್ಲಿ ಪ್ರಾರಂಭಿಸಿದರು. ಬೋಳಾರು ಬಾಬುರಾವ್, ಗುಲ್ವಾಡಿ ವೆಂಕಟರಾವ್, ಬಿ. ವೆಂಕಟಾಚಾರ್ಯ, ಪಂಜೆ ಮಂಗೇಶರಾವ್, ಕೆರ್ಕಿ ವೆಂಕಟರಮಣಶಾಸ್ತ್ರಿ ಮುಂತಾದವರು ಈ ಕ್ಷೇತ್ರದಲ್ಲಿ ದುಡಿದ ಮೊದಲಿಗರು. ಇವರಲ್ಲಿ ಕೆಲವರು ಬಂಗಾಳಿ ಹಾಗೂ ಮರಾಠಿ ಭಾಷೆಯ ಸಾಹಿತ್ಯವನ್ನು ಕನ್ನಡಕ್ಕೆ ಅನುವಾದ ಮಾಡಿದರೆ, ಉಳಿದವರು–ಕೆರ್ಕಿ ಮೊದಲಾದವರು–ತಮ್ಮ ನೆರೆ ಹೊರೆಯಲ್ಲಿ ಹೆಣ್ಣು ಮಕ್ಕಳು ಅನುಭವಿಸುತ್ತಿರುವ ಕಾರ್ಪಣ್ಯವನ್ನು ಗಮನಿಸಿ ಆ ಅನುಭವವನ್ನೇ ಕಲಾಕೃತಿಯಾಗಿ ಪರಿವರ್ತಿಸಿದರು. ಕೆರ್ಕಿಯವರ 'ಓಗಪ್ಪ ಹೆಗ್ಗಡೆಯ ವಿವಾಹ ಪ್ರಸಂಗ' ವೆಂಬ ನಾಟಕದಲ್ಲಿ ವೃದ್ಧರು ಕಿರಿಯ ವಯಸ್ಸಿನ ಹೆಣ್ಣು ಮಕ್ಕಳನ್ನು ಮದುವೆಯಾಗುವುದನ್ನು ವಿಡಂಬಿಸಿದ್ದಾರೆ. ತತ್ಸಂಬಂಧವಾದ ವರದಕ್ಷಿಣೆ ಇವರ ಕಟುಟೀಕೆಯಿಂದ ತಪ್ಪಿಸಿಕೊಳ್ಳಲಾಗಲಿಲ್ಲ. ತಮ್ಮ ಜಾತಿಯ ಮುಖಂಡರು ಶಾಸ್ತ್ರಿಯವರ ಬರವಣಿಗೆ ಹಾಗೂ ಚಟುವಟಿಕೆಗಳನ್ನು ವಿರೋಧಿಸಿದರು. ಗುಲ್ವಾಡಿ ವೆಂಕಟರಾವ್ ಅವರೂ ಸಹ ಇದೇ ಬಗೆಯ ವಿರೋಧಕ್ಕೆ ಈಡಾಗಿ ಕಡೆಗೆ ಅವರು ಜಾತಿಯಿಂದ ಬಹಿಷ್ಕಾರಗೊಂಡರು. ಇದರಿಂದ ವಿಚಲಿತರಾಗದೆ ಈ ಲೇಖಕರು ತಮ್ಮ ಕಾರ್ಯವನ್ನು ಮುಂದುವರಿಸಿದರು. ಪಶ್ಚಿಮ ಕರ್ನಾಟಕದಲ್ಲಿ ನೂರಾರು ವಿಧವಾ ವಿವಾಹ ಗಳನ್ನು ನೆರವೇರಿಸಿ ಕಡೆಗೆ ತಾವೇ ಸ್ವತಃ ಒಬ್ಬ ವಿಧವೆಯನ್ನು ಮದುವೆಯಾದ ಅಕ್ಕಾದಾಸ್ ಗಣಪತಿ ಭಟ್ಟರ ಸಾಹಸವನ್ನು ನೆನೆಯಲೇಬೇಕು.[೪]

ಮೊದಲು ಸುಧಾರಣಾ ಸನ್ನಿವೇಶಕ್ಕೆ ಸಿಕ್ಕಿದ ಕಾರಣದಿಂದ ಬೊಂಬಾಯಿ ಪ್ರಾಂತ್ಯದಲ್ಲಿ ಬಹಳ ಬೇಗ ಚಟುವಟಿಕೆಗಳು ಪ್ರಾರಂಭವಾದವು. ವೆಂಕಟರಂಗೋ ಕಟ್ಟಿ, ಡೆಪ್ಯುಟಿ ಚನ್ನಬಸಪ್ಪ, ಶಾಂತಕವಿ, ಆರ್.ಎಚ್. ದೇಶಪಾಂಡೆ ಇವರು ಮುಂಚೂಣಿಯಲ್ಲಿದ್ದರು. ಕಟ್ಟಿಯವರನ್ನು ನಿಜವಾಗಿ ಪಥ ನಿರ್ಮಾಪಕರೆಂದು ಕರೆಯಲು ಕಾರಣ ಅವರು ಬಾಲ ವಿಧವೆಯರ ಕರುಣಾಜನಕ ಸ್ಥಿತಿಯ ಬಗ್ಗೆ ತಮ್ಮ ಬರಹಗಳಲ್ಲಿ ಒತ್ತು ಕೊಟ್ಟಿರಲ್ಲದೆ ವಿಧವಾ ವಿವಾಹವನ್ನು ಎತ್ತಿ ಹಿಡಿದರು. ತಮ್ಮ ಜಾತಿ ಮುಖಂಡರ ಕ್ರೋಧವನ್ನು ಕಡೆಗಣಿಸಿ ಅನೇಕ ವಿಧವಾ ವಿವಾಹಗಳನ್ನು ಇವರು ನೆರವೇರಿಸಿದರು.

## ಮೈಸೂರು ಸಂಸ್ಥಾನ

ಹೆಚ್ಚು ಕಡಿಮೆ ಇದೇ ರೀತಿಯಲ್ಲಿ ಮೈಸೂರು ಸಂಸ್ಥಾನದಲ್ಲಿ ಸುಧಾರಣೆಯಾಯಿತಾದರೂ, ಕೆಲವು ಸಂಗತಿಗಳಲ್ಲಿ ವ್ಯತ್ಯಾಸವಿರುವುದನ್ನು ಕಾಣಬಹುದು. ಮೈಸೂರು ಸಂಸ್ಥಾನವು ಮದರಾಸು ಸರ್ಕಾರದ

ಉಸ್ತುವಾರಿಯಲ್ಲಿ ಸರಿಸುಮಾರು ಅರ್ಧ ಶತಮಾನದ ಕಾಲ ಬ್ರಿಟಿಷ್ ಆಳ್ವಿಕೆಯಲ್ಲಿತ್ತು. ಎರಡನೆಯ ಬಾರಿಗೆ ಮೈಸೂರು ಒಡೆಯರ ಸುಪರ್ದಿಗೆ ಬಂದಿತಾದರೂ ಸುಧಾರಣಾ ಚಟುವಟಿಕೆಗಳು ಬೇರೆ ಬಗೆಯ ಅಗತ್ಯತೆಗಳನ್ನು ಪೂರೈಯಿಸುವಂತೆ ರಾಜರು ಎಚ್ಚರಿಕೆ ವಹಿಸಬೇಕಾಗಿತ್ತು. ಬ್ರಿಟಿಷ್ ಕರ್ನಾಟಕದಲ್ಲಿ ಇದ್ದವರೆಂದರೆ ಇಬ್ಬರೇ ಸ್ಪರ್ಧಿಗಳು-ದೇಶೀಯ ಸುಧಾರಕರದು ಒಂದು ಗುಂಪು, ಮತ್ತೆ ಕ್ರಿಶ್ಚಿಯನ್ ಮಿಷನರಿಗಳಾದ ವಸಾಹತುಶಾಹಿಗಳದು ಇನ್ನೊಂದು ಗುಂಪು. ಮೈಸೂರು ಸಂಸ್ಥಾನದಲ್ಲಿ ಇವುಗಳ ಜೊತೆಗೆ ಮಹಾರಾಜರ ಆಡಳಿತ ಹಾಗೂ ಯೂರೋಪಿಯನ್ ಅಂಶ ಕೂಡಿಕೊಂಡಿದ್ದವು. ಇಷ್ಟೇ ಅಲ್ಲದೆ ಮೈಸೂರಿನೊಳಗಿನ ಪಕ್ಷ ರಾಜಕಾರಣವೂ ಸಹ ಬೇರೊಂದು ಆಯಾಮವನ್ನು ನೀಡಿತು.

ಸಾಮಾಜಿಕೊ-ರಾಜಕೀಯ ಕಾರಣಗಳಿಂದಾಗಿ ಪ್ರಾಯಶಃ ಮೈಸೂರು ಪಾಶ್ಚಾತ್ಯ ಉದಾರವಾದಿ ಧೋರಣೆಯ ಪ್ರಭಾವಕ್ಕೊಳಗಾದುದು ತಡವಾಗಿ ಎಂದು ತೋರುತ್ತದೆ. ಬ್ರಿಟಿಷರು ಅರ್ಧ ಶತಮಾನ ಕಾಲ (೧೮೩೧-೮೧) ನೇರವಾಗಿ ಆಳ್ವಿಕೆ ನಡೆಸಿದ್ದರ ಫಲವಾಗಿ ಬ್ರಿಟಿಷರು ಬೆಳಸಿದ್ದಂಥ ಆಡಳಿತ ವಿಧಾನವನ್ನು ರಾಜ್ಯ ಆಗಲೇ ಬಳುವಳಿಯಾಗಿ ಪಡೆದಿತ್ತು. ತಾವು 'ಸುಸಂಸ್ಕೃತ' ರೆಂದುಕೊಂಡ ಕಾರಣ ಬ್ರಿಟಿಷರು ಭಾರತೀಯ ಸಾಮಾಜಿಕ ರಚನೆಯನ್ನು ಒಪ್ಪಲಿಲ್ಲ,[೫] ಹಾಗಾಗಿ ಮೈಸೂರಿನ ಮುಖ್ಯ ಆಯುಕ್ತನಾಗಿದ್ದ ಕಬ್ಬನ್ (೧೮೩೪-೬೧) ಕಲ್ಕತ್ತೆಯಲ್ಲಿ ಸರ್ಕಾರ ಮಂಜೂರು ಮಾಡಿದ್ದ ಎಲ್ಲ ಸಾಮಾಜಿಕ ಶಾಸನಗಳನ್ನು ಇಲ್ಲಿ ಅಳವಡಿಸಿದ. ಆದಾಗ್ಯೂ ನಿಜವಾದ ಯಜಮಾನನ ರೀತಿ ಮುಂದುವರಿದ ಕಬ್ಬನ್ ಮೈಸೂರು ಸಮಾಜದ ಶಾಂತಿ ಕದಡಲಿಲ್ಲ. ರಾಜ್ಯದಲ್ಲಿ ಪಾಶ್ಚಾತ್ಯ ಶಿಕ್ಷಣವನ್ನು ಹೆಚ್ಚಿನ ಪ್ರಮಾಣದಲ್ಲಿ ನೀಡುವಲ್ಲೂ ಸಹ ಕಬ್ಬನ್ ಹಿಂದೇಟು ಹೊಡೆದ.[೬] ೧೮೮೧ರ ಒಪ್ಪಂದದ ಪ್ರಕಾರ, ಇದನ್ನು ಬದಲಾಯಿಸುವಂತಿರಲಿಲ್ಲ, ವಸಾಹತುಶಾಹಿಗಳನ್ನು ಮೆಚ್ಚಿಸುವಂಥ ಹೊಸ ಹೊಸ ಮಾರ್ಗಗಳನ್ನು ಸ್ಥಳೀಯ ಅರಸು ಕಂಡುಕೊಳ್ಳಬೇಕಾಯಿತು; ಬ್ರಿಟಿಷ್ ಭಾರತದಲ್ಲಿ ಉದ್ಭವವಾಗಿದ್ದ ನೂತನ ಜನಾಭಿಪ್ರಾಯವು ಮೈಸೂರಿನೊಳಗಿನ ಜನಾಭಿಪ್ರಾಯವನ್ನು ಸಂಪೂರ್ಣ ಕಡೆಗಣಿಸದ ಹಾಗೆ ನೋಡಿಕೊಳ್ಳಬೇಕಾಗಿತ್ತು. ಸ್ಥಳೀಯ ಆಡಳಿತಗಾರರಿಗೆ ಸುಧಾರಣಾ ಚಳವಳಿ ಒಂದು ವರದಾನವಾಗಿ ಪರಿಣಮಿಸಿತು. ಉದಾರವಾದಿ ಧೋರಣೆಯುಳ್ಳ ರಂಗಾಚಾರ್ಲು ಅವರು ಆಗ ದಿವಾನರಾಗಿದ್ದರು. ಸ್ಥಾನೀಯ ಅಧಿಕಾರಶಾಹಿಯಲ್ಲಿ ಮದರಾಸು ವಿಶ್ವವಿದ್ಯಾಲಯದಲ್ಲಿ ಕಲಿತವರು ಅನೇಕರು ಪ್ರಮುಖ ಸ್ಥಾನಗಳನ್ನು ಅಲಂಕರಿಸಿದ್ದರು. ಮೈಸೂರಿನಲ್ಲಿ ವಾಸವಾಗಿದ್ದಂಥ ಈ ಅಧಿಕಾರಿಗಳು ಉಪಖಂಡದಲ್ಲಿ ಕಾಣಿಸಿಕೊಂಡಿದ್ದ ಸುಧಾರಣಾ ಚಟುವಟಿಕೆಯನ್ನು ಗಮನಿಸಿದ್ದರು. ಇಂಗ್ಲೀಷರು ಹಾಗೂ ಕ್ರಿಶ್ಚಿಯನ್ ಮಿಷನರಿಗಳ ಬೆಂಬಲವನ್ನು ಉಪಯೋಗಿಸಿಕೊಂಡ ಇವರು ಸಾಮಾಜಿಕ ಹಾಗೂ ಧಾರ್ಮಿಕ ಸುಧಾರಣೆಯ ಬಗ್ಗೆ ಮಾತನಾಡಲು ಪ್ರಾರಂಭಿಸಿದರು.

ಮೈಸೂರು ಸಂಸ್ಥಾನದ ವಿಶೇಷ ಸಂಗತಿಯೆಂದರೆ ಉನ್ನತ ಮಟ್ಟದ ಅಧಿಕಾರವರ್ಗದವರು, ಅದರಲ್ಲೂ ಮದರಾಸಿನಿಂದ ಬಂದವರು, ಸುಧಾರಣೆಯ ಬಗ್ಗೆ ಮಾತನಾಡತೊಡಗಿದಾಗ ಪಕ್ಷದೊಳಗಿನ ಕಲಹ ಹೆಚ್ಚು ಢಾಳಾಯಿತಲ್ಲದೆ, ಇಲ್ಲೇ ಶಿಕ್ಷಣ ಪಡೆದವರಿಗೆ ಸುಧಾರಣಾ ವಿಷಯ ಆಕರ್ಷಣೀಯವಾಗಿ ಕಾಣಲಿಲ್ಲ.[೭] ಈ ವಿಷಯ ರಾಜಕೀಯವಾಗುವ ಸಂಭವ ಇದ್ದುದರಿಂದ ಮಹಾರಾಜರು ಸಹಜವಾಗಿಯೇ ಎಚ್ಚರಿಕೆಯಿಂದ ಇರಬೇಕಾಯಿತು.[೮] ಈ ರಾಜಕಾರಣದಿಂದ ಹೊರಗಿದ್ದಂಥ ದೇಶೀಯರು ಮಾತ್ರ ಇದರಲ್ಲಿ ಕೊಂಚ ಆಸಕ್ತಿ ಹೊಂದಿ ಕೆಲವು ಸಂಸ್ಥೆಗಳನ್ನು ಸ್ಥಾಪಿಸಿದರು. ಇದರಲ್ಲಿ ಮುಖ್ಯವಾದುವೆಂದರೆ 'ಬೆಂಗಳೂರು ಲಿಟರರಿ ಯೂನಿಯನ್', 'ರಾನಡೆ ಸೊಸೈಟಿ', ಮತ್ತು 'ವಿಧವಾ ವಿವಾಹ ಸಂಘ'.

೧೮೭೦ರಲ್ಲಿ ಪ್ರಾರಂಭವಾದ ಬೆಂಗಳೂರು ಲಿಟರರಿ ಯೂನಿಯನ್ ಅಥವಾ ಸಾಹಿತ್ಯ ಸಂಘವು ಪ್ರಮುಖ ಸುಧಾರಕರಿಂದ ಸಾಮಾಜಿಕ ಸುಧಾರಣೆಯ ಬಗ್ಗೆ ಉಪನ್ಯಾಸಗಳನ್ನು ಏರ್ಪಡಿಸಿತೇ ವಿನಾ

ಸಮಸ್ಯೆಯನ್ನು ಚರ್ಚಿಸುವುದನ್ನು ಬಿಟ್ಟು ಆಚೆಗೆ ಹೋಗಲಿಲ್ಲ.[೯] ಯೂರೋಪಿಯನ್ನರೊಬ್ಬರ ನಾಯಕತ್ವದಲ್ಲಿ ರಾನಡೆ ಸೊಸೈಟಿ ಆರಂಭದ ಹಂತದಲ್ಲಿ ಬಹಳ ಹುರುಪಿನಿಂದ ಕೆಲಸ ಮಾಡಿತಾದರೂ, ತರುವಾಯದಲ್ಲಿ ಸಂಪ್ರದಾಯಸ್ಥ ದೇಶೀಯರ ಕೈಗೆ ಸಿಕ್ಕಿ, ಅವರು ಸೊಸೈಟಿಯ ಹಣವನ್ನು ದುರುಪಯೋಗ ಮಾಡಿಕೊಂಡರೆಂಬ ಕಾರಣದಿಂದ ಅದನ್ನು ಮುಚ್ಚಬೇಕಾಯಿತು.[೧೦]

ಉಳಿದ ಕೆಲವರು ಮಿಷನರಿಗಳು ಹಾಗೂ ಯೂರೋಪಿಯನ್ನರ ಸಹಾಯದಿಂದ ಬೆಂಗಳೂರು ಹಾಗೂ ಮೈಸೂರುಗಳಲ್ಲಿ 'ವಿಧವಾ ವಿವಾಹ ಸಂಘ'ಗಳನ್ನು ಸ್ಥಾಪಿಸಿದರು. ಆದರೆ ಮೊದಲನೆಯ ಸಭೆಯ ನಂತರ ಅವು ಯಾವುವೂ ಬಾಳಲಿಲ್ಲ.[೧೧] ಈ ಸೊಸೈಟಿಗಳು ಅವುಗಳಲ್ಲಿ ತೊಡಗಿಕೊಂಡ ವ್ಯಕ್ತಿಗಳ ನಡುವಿನ ಭಿನ್ನಾಭಿಪ್ರಾಯ ಇತ್ಯಾದಿಗಳ ದೆಸೆಯಿಂದ ಮುಚ್ಚಲ್ಪಟ್ಟವು ಎಂಬುದೂ ಕೂಡ ಜನಜನಿತವಾಗಿರುವಂಥ ಸಂಗತಿ.[೧೨] ಈ ರೀತಿಯ ಸನ್ನಿವೇಶದಲ್ಲಿ ಆಮೂಲಾಗ್ರ ಬದಲಾವಣೆಯನ್ನು ತರುವಂಥ ಕಾರ್ಯಕ್ರಮವನ್ನು ರೂಪಿಸುವುದು ಅಸಾಧ್ಯವೇ ಸರಿ. ಆದಾಗ್ಯೂ ೧೮೭೦ರ ದಶಕದ ಕಡೆಯ ಭಾಗದಲ್ಲಿ ಕೆಲವರು ಮಹಿಳಾ ಶಿಕ್ಷಣದ ಬಗ್ಗೆ ಆಸಕ್ತಿ ವಹಿಸಿದರು.

## ಮಹಿಳಾ ಶಿಕ್ಷಣ

ಮೈಸೂರು ಅರಮನೆಯಲ್ಲಿ ಅಧಿಕಾರಿಯಾಗಿದ್ದ ಅಂಬಿಲ್‌ನರಸಿಂಹ ಅಯ್ಯಂಗಾರ್ ಎಂಬುವವರು ಕೆಲವು ಹಿಂದೂಗಳ ಸಭೆ ಕರೆದು 'ಮೇಲ್ಜಾತಿಯ' ಹೆಣ್ಣುಮಕ್ಕಳ ವಿದ್ಯಾಭ್ಯಾಸವನ್ನು ಸಾರ್ವಜನಿಕ ವಂತಿಗೆ ಹಣದ ಸಹಾಯದಿಂದ ಪ್ರಾರಂಭಿಸುವ ಬಗ್ಗೆ ಚರ್ಚೆ ನಡೆಸಿದರು.[೧೩] ಈ ಸಭೆಯನ್ನು ಕರೆದ ರೀತಿಯಿಂದಲೇ ತಿಳಿಯುವುದೇನೆಂದರೆ ಈ ವ್ಯಕ್ತಿ ಹೆಚ್ಚು ವ್ಯವಹಾರ ಚತುರರು ಹಾಗೂ ಸಾರ್ವಜನಿಕರ ವಂತಿಗೆಯಿಂದ ಶಾಲೆಯನ್ನು ನಡೆಸುವುದೆಂದು ತೀರ್ಮಾನಿಸಿದ ಕಾರಣ ನೆರೆಹೊರೆಯ ಜನರನ್ನು ಈ ಪ್ರಯತ್ನದಲ್ಲಿ ಸೇರಿಸಿಕೊಳ್ಳಬೇಕೆಂಬುದೂ ಕೂಡ ಪ್ರಕಟವಾಗುತ್ತದೆ.

ಸಹಾನುಭೂತಿ ಹಾಗೂ ಬೆಂಬಲದ ಗೈರುಹಾಜರಿಯಲ್ಲಿ ೧೮೮೧ರಲ್ಲಿ ಮೈಸೂರಿನಲ್ಲಿ ಶಾಲೆ ಆರಂಭವಾಯಿತು, ಆಗ ಕೇವಲ ೨೮ ಮಂದಿ ವಿದ್ಯಾರ್ಥಿಗಳು ಶಾಲೆ ಸೇರಿದರು. ಯಾವುದೇ ರೀತಿಯ ವಿರೋಧವನ್ನು ಎದುರಿಸಲು ವ್ಯವಸ್ಥಾಪಕರು ಸಿದ್ಧವಿರದ ಕಾರಣ ಪಠ್ಯಕ್ರಮದಲ್ಲಿ ಯಾವ ರೀತಿಯಲ್ಲೂ ದೇಶೀಯ ಪದ್ಧತಿ, ಆಚಾರ ವಿಚಾರಗಳಿಗೆ ವ್ಯತಿರಿಕ್ತವಾದ ಸಂಗತಿಗಳು ಇರದ ಹಾಗೆ ನೋಡಿಕೊಂಡಿದ್ದರು . ಶಾಲೆಯ ಮುಖ್ಯ ಗುರಿಯೆಂದರೆ, 'ವಿಧೇಯರೂ, ಸಚ್ಚಾರಿತ್ರ್ಯವುಳ್ಳ ಮಡದಿಯರು ಹಾಗೂ ಪ್ರೀತಿಯುಳ್ಳ ತಾಯಂದಿರಾಗಿ ಬದುಕಲು ಬಾಲಕಿಯರನ್ನು ತಯಾರು ಮಾಡುವ ಹೊಣೆ' ಎಂಬುದು. ಕನ್ನಡವನ್ನು ಮಾತ್ರ ಶಾಲೆಯಲ್ಲಿ ಬೋಧಿಸುತ್ತಿದ್ದರು, ಕಾರಣ ಇಂಗ್ಲಿಷ್ ಹಾಗೂ ಪಾಶ್ಚಾತ್ಯ ಶಿಕ್ಷಣವನ್ನು ಕೊಡಿಸಿದರೆ ಅದರಲ್ಲಿ ದೇಶೀಯವಾದ ವಿಚಾರಗಳಿಗೆ ವಿರುದ್ಧವಾದ ಸಂಗತಿಗಳಿದ್ದು ಮಹಿಳೆಯರು ಅವುಗಳನ್ನು ಸ್ವೀಕರಿಸುವ ಅಪಾಯದಿಂದ ತಪ್ಪಿಸಬೇಕಾಗಿತ್ತು. ಆದಾಗ್ಯೂ ಬಡತನದಲ್ಲಿದ್ದ ಬ್ರಾಹ್ಮಣರು ಮಾತ್ರ ತಮ್ಮ ಹೆಣ್ಣು ಮಕ್ಕಳನ್ನು ಶಾಲೆಗೆ ಕಳುಹಿಸಿದರೇ ವಿನಾ ಸುಶಿಕ್ಷಿತರೂ ಮೈಸೂರು ಸಂಸ್ಥಾನದಲ್ಲಿ ಉನ್ನತಾಧಿಕಾರವನ್ನು ಹೊಂದಿದ್ದವರೂ ಆದ ಮುಂದುವರಿದ ಬ್ರಾಹ್ಮಣರು ಕಳುಹಿಸಲಿಲ್ಲ. ೧೮೮೯ರಲ್ಲಿ (೧೦ ವರ್ಷಕ್ಕಿಂತ ಮೇಲ್ಪಟ್ಟ) ವಿಳಿದ ಹೆಣ್ಣುಮಕ್ಕಳನ್ನು ಶಾಲೆಯಿಂದ ಬಿಡಿಸಿದ ಪರಿಣಾಮವಾಗಿ ಶಾಲೆಯ ಹಾಜರಾತಿ ಬಿದ್ದುಹೋಯಿತಲ್ಲದೆ ಇದರಿಂದ ಮಹಿಳಾ ಶಿಕ್ಷಣಕ್ಕೆ ಪೆಟ್ಟುಬಿದ್ದಿತು.

ಆದರೆ ಅಯ್ಯಂಗಾರರು ಪಟ್ಟುಬಿಡದೆ ಮನೆಪಾಠ ಮಾಡಲು ಇಬ್ಬರು ಪಂಡಿತರನ್ನು ನೇಮಿಸಿದರು. ಕ್ರಮೇಣ ಸಾರ್ವಜನಿಕರ ಅಭಿಪ್ರಾಯ ಬದಲಾಗಿ ಸ್ವಲ್ಪ ಸ್ವಲ್ಪವಾಗಿ ಕಲಿಯುವವರ ಸಂಖ್ಯೆ ಹೆಚ್ಚತೊಡಗಿತು. ೧೮೮೦ರ ದಶಕದ ಮಧ್ಯಭಾಗದಲ್ಲಿ, ನಂಜನಗೂಡು ಹಾಗೂ ಮೇಲುಕೋಟೆಯಲ್ಲಿ ತಲಾ ಒಂದೊಂದು ಶಾಲೆ ಪ್ರಾರಂಭವಾದವು. ಈ ಶಾಲೆಗಳು ಕೇವಲ ಬ್ರಾಹ್ಮಣ ಬಾಲಕಿಯರಿಗೆ ಮಾತ್ರ ತೆರೆಯಲ್ಪಟ್ಟವು. ಮಹಿಳಾ ಅಧ್ಯಾಪಕರನ್ನು ತರಬೇತುಗೊಳಿಸಲು ತರಬೇತು ವಿಭಾಗವು ೧೮೮೭ರಲ್ಲಿ ಪ್ರಾರಂಭವಾಯಿತು. ಸರ್ಕಾರವು ಈ ಶಾಲೆಯನ್ನು ೧೮೯೧ರಲ್ಲಿ ತನ್ನ ವಶಕ್ಕೆ ತೆಗೆದುಕೊಂಡಿತಲ್ಲದೆ ಇಲ್ಲಿ ಅಸ್ಪೃಶ್ಯರನ್ನು ಬಿಟ್ಟು ಉಳಿದ ಎಲ್ಲಾ ಕೋಮಿನವರಿಗೆ ಪ್ರವೇಶ ದೊರೆಯುವಂತಾಯಿತು.

ಮೈಸೂರು ನಗರದ ಹೊರಗಿನ ಸಾರ್ವಜನಿಕರಿಗೆ ಈ ಶಾಲೆಯ ಸುಳಿವೇ ಇಲ್ಲದಂತಿತ್ತು. ಈ ಪ್ರಯತ್ನಗಳಿಗೆ ಮೈಸೂರಿನ ಜನರು ಪ್ರತಿಕ್ರಿಯಿಸದೇ ಇರಲಿಲ್ಲ. ಉದಾರ ಮನೋಭಾವದ ರಂಗಾಚಾರ್ಲುರವರು ಮಹಿಳೆಯರು ಶಾಲೆಯಲ್ಲಿ ಸಂಗೀತ ಶಿಕ್ಷಣ ಪಡೆಯುವುದಕ್ಕೆ ವಿರೋಧ ವ್ಯಕ್ತಪಡಿಸುತ್ತಿದ್ದಾರೆಂಬ ಸಂಗತಿಯನ್ನು ತಮ್ಮ ಪತ್ನಿಯ ಮೂಲಕ ತಿಳಿದು ಸಂಬಂಧಪಟ್ಟ ಶಿಕ್ಷಕಿಯನ್ನು ಶಾಲೆಯಿಂದ ತೆಗೆದುಹಾಕಬೇಕೆಂದು ಆಜ್ಞೆ ಹೊರಡಿಸುವುದರಲ್ಲಿದ್ದರು. ಅಯ್ಯಂಗಾರರು ದಿವಾನರ ಪತ್ನಿಗೆ ವಸ್ತುಸ್ಥಿತಿಯನ್ನು ಚೆನ್ನಾಗಿ ಮನವರಿಕೆ ಮಾಡಿದ ತರುವಾಯ ದಿವಾನರು ತಮ್ಮ ಆಜ್ಞೆಯನ್ನು ಕೈಬಿಟ್ಟರೆಂದು ತಿಳಿಯುತ್ತದೆ.[೧೪]

ಶಾಲೆಗೆ ಅನುದಾನವನ್ನು ನೀಡಲು ಮುಂದಾದ ಮಹಾರಾಜರು ಅದಕ್ಕಿಂತ ಹೆಚ್ಚಿನ ಆಸಕ್ತಿಯನ್ನೇನೂ ವಹಿಸಲಿಲ್ಲ. ಅವರು ಸಂಪ್ರದಾಯವಾದಿಗಳಾದ್ದರಿಂದ ಯೂರೋಪಿನ ಪ್ರವಾಸ ಕೈಗೊಳ್ಳುವ ಆಸೆಯನ್ನು ಹತ್ತಿಕ್ಕಿ ಕಡೆಗೆ ಅದನ್ನು ರದ್ದುಪಡಿಸಿಬಿಟ್ಟರು, ಸಮುದ್ರ ದಾಟಿದವರನ್ನು ಜಾತಿಯಿಂದ ಬಹಿಷ್ಕರಿಸುವ ಪದ್ಧತಿ ಇದ್ದ ಪ್ರಯುಕ್ತ ಮಹಾರಾಜರೇ ಹಾಗೇ ತೀರ್ಮಾನ ತೆಗೆದುಕೊಂಡರು.[೧೫] ವಿದೇಶ ಪ್ರಯಾಣ ಮಾಡಿ ವಾಪಸ್ಸಾಗುವಂಥ ಬ್ರಾಹ್ಮಣನು ಶುದ್ಧೀಕರಣಕ್ಕೆ ಒಳಗಾಗಬಹುದಾಗಿದ್ದ ಅವಕಾಶವಿದ್ದಿತು, ಆದರೆ ಮಹಾರಾಜರಿಗೆ ಆ ಅನುಕೂಲ ಇರಲಿಲ್ಲ.[೧೬] ಕಾಲ ಸರಿದಂತೆ, ಆ ರೀತಿಯ ಪ್ರಯಾಣದಿಂದ ಐಹಿಕ ಸುಖಪ್ರಾಪ್ತವಾಗುವುದೆಂದು ಮನವರಿಕೆಯಾದ ಬಳಿಕ ಸಂಪ್ರದಾಯವಾದಿಗಳು ಸುಮ್ಮನಾಗಬೇಕಾಯಿತು.

ಸಂಪ್ರದಾಯಸ್ಥರು ಅಯ್ಯಂಗಾರರ ವಿರುದ್ಧ ಸುಳ್ಳುಪೊಳ್ಳು ವದಂತಿಗಳನ್ನು ಹಬ್ಬಿಸುವುದರ ಜೊತೆಗೆ ಮಹಾರಾಜರ ಹೆಸರನ್ನು ಎಳೆಯುವ ಮಟ್ಟಕ್ಕೆ ಹೋದರು.[೧೭] ಮೈಸೂರಿನ ಆಜೂಬಾಜುವಿನಲ್ಲಿದ್ದಂಥ ಉದಾರವಾದಿ ಪತ್ರಿಕೆಗಳು, ಯೂರೋಪಿಯನ್ನರು ಹಾಗೂ ಪ್ರತಿಷ್ಠಿತರು ಅಯ್ಯಂಗಾರರ ಬೆಂಬಲಕ್ಕೆ ನಿಂತರು. ವೇಲ್ಸ್‌ನ ರಾಜದಂಪತಿಗಳಿಂದ ಹಿಡಿದು ಬರೋಡದ ರಾಜದಂಪತಿಗಳವರೆಗೆ ಯಾರ್ಯಾರು ಶಾಲೆಗೆ ಭೇಟಿ ಇತ್ತರೋ ಅವರೆಲ್ಲಾ ಅಲ್ಲಿನ ಚಟುವಟಿಕೆಗಳನ್ನು ಮುಕ್ತಕಂಠದಿಂದ ಹೊಗಳಿದರು. ೧೮೯೧ರ ನಂತರ ಸರ್ಕಾರವು ಬೇರೆ ಬೇರೆ ಪಟ್ಟಣಗಳಲ್ಲಿ ಬಾಲಕಿಯರ ಶಾಲೆಗಳನ್ನು ತೆರೆಯಲು ಪ್ರಾರಂಭಿಸಿತು. ದಾನಿಗಳೂ ಕೂಡ ಈ ದಿಸೆಯಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಮುಂದೆ ಬಂದ ಕಾರಣ ೧೮೯೦ರ ವೇಳೆಗೆ ಬಾಲಕಿಯರ ಶಾಲೆಗೆ ತಗಲುವ ಖರ್ಚಿನ ಅಂದಾಜು ೧ಲಕ್ಷ ರೂಪಾಯಿಗಳನ್ನು ಮೀರಿತಲ್ಲದೆ ರಾಜ್ಯದಲ್ಲಿ ೧೪೦ ಬಾಲಕಿಯರ ಶಾಲೆಗಳು ಪ್ರಾರಂಭವಾಗಿದ್ದವು.[೧೮]

## ವಿವಾಹ

ಮೊದಲೇ ನೋಡಿದ ಹಾಗೆ ವಿವಾಹದ ವಿಷಯವಾಗಿ ಹೋರಾಡುವಂಥ ಮಂದಿಯ ಸಂಖ್ಯೆ ಇನ್ನೂ ಕಡಿಮೆಯಿದ್ದಿತು. ವೀರೇಶಲಿಂಗಮ್ ಪಂತುಲು ಅವರು ವಿಧವಾ ವಿವಾಹದ ವಿಷಯವಾಗಿ ಬಹಳ ಹೋರಾಟ ನಡೆಸಿದವರು. ಅವರು ಈ ಪದ್ಧತಿಯನ್ನು ಪ್ರಚಾರಕ್ಕೆ ತರುವ ಸಲುವಾಗಿ ಮೈಸೂರಿನಲ್ಲೇ ಬಂದು ನೆಲೆಸಿದರಾದರೂ, ೧೯೦೦ರ ವೇಳೆಗಂತೂ ಮೈಸೂರಿನಲ್ಲಿ ವಿಧವಾ ವಿವಾಹದ ವಿಷಯ ಹೆಚ್ಚು ಗಮನ ಸೆಳೆಯಲಿಲ್ಲ.[೧೯] ವೆಸ್ಲಿಯನ್ ಮಿಷನ್‌ನ ಟಿ.ಇ. ಸ್ಲೇಟರ್ ಹಾಗೂ ರಾಜಾ ಸರ್ ಟಿ. ಮಾಧವರಾವ್ ಅವರು ಪುಟ್ಟ ಹುಡುಗಿಯರ ಮದುವೆಗಳನ್ನು ನಿಲ್ಲಿಸುವಂತೆ ಸರ್ಕಾರವು ಆಜ್ಞೆ ಹೊರಡಿಸಬೇಕೆಂದು ವಿನಂತಿಸಿಕೊಂಡರು. ರಘುನಾಥ ರಾವ್, ಪಂಡಿತ ಶಿವನಾಥಶಾಸ್ತ್ರೀ ಅವರೂ ಸಹ ರಾಜ್ಯಾದ್ಯಂತ ಪ್ರವಾಸ ಕೈಗೊಂಡರು. ಆದರೆ ದೇಶೀಯರು ಹಾಗೂ ಸರ್ಕಾರದ ಬೆಂಬಲವಿಲ್ಲದೆ ವಿಧವಾ ವಿವಾಹದಂಥ ವಿಷಯ ಹೆಚ್ಚು ಫಲಪ್ರದವಾಗಲಿಲ್ಲ. ಬಾಲ್ಯವಿವಾಹದ ವಿರುದ್ಧ ಅಲ್ಲೊಂದು ಇಲ್ಲೊಂದು ಸೊಲ್ಲು ಕೇಳಿಬರುತ್ತಿದ್ದುದು ನಿಜ.

ಈ ಸಮಸ್ಯೆ ಇರುವುದನ್ನು ಓದುಗರ ಮುಂದೆ ಜೀವಂತವಿಟ್ಟಿದ್ದ ಮದರಾಸಿನ 'ದಿ ಹಿಂದೂ' ಪತ್ರಿಕೆಯ ಸೇವೆಯನ್ನು ನೆನೆಯಲೇಬೇಕು. ಮೈಸೂರು ಪಕ್ಷವನ್ನು ಬೆಂಬಲಿಸಿದ ಈ ಪತ್ರಿಕೆ ಬಾಲ್ಯವಿವಾಹದ ರದ್ದತಿಗಾಗಿ ಆಂದೋಲನ ನಡೆಸಿತು. ಮೈಸೂರು ನಗರದಲ್ಲಿ ದಿವಾನರು ಆರು ವರ್ಷದ ಬಾಲಕಿಯೊಬ್ಬಳ ವಿವಾಹದ ಸಂದರ್ಭದಲ್ಲಿ ಹಾಜರಿದ್ದ ಸುದ್ದಿಯನ್ನು ಈ ಪತ್ರಿಕೆ ಪ್ರಸಾರ ಮಾಡಿತು. ಈ ಪತ್ರಿಕೆಯ ಅಂಕಣದಲ್ಲಿ ಆರು ತಿಂಗಳ ಹೆಣ್ಣು ಮಗುವಿನ ವಿವಾಹದ ಬಗ್ಗೆಯೂ ವಿವರವಿತ್ತು.[೨೦]

ಈ ಮಧ್ಯೆ ಭಾರತ ಸರ್ಕಾರವು 'ಏಜ್ ಆಫ್ ಕನ್ಸೆಂಟ್' ಎಂಬ ಮಸೂದೆಯನ್ನು ಜಾರಿಗೊಳಿಸಿ ಹನ್ನೆರಡು ವರ್ಷ ಮತ್ತು ಅದಕ್ಕಿಂತ ಮೇಲ್ಪಟ್ಟ ವಯಸ್ಸಿನ ಬಾಲಕಿಯರು ಮಾತ್ರ ವಿವಾಹಕ್ಕೆ ಅರ್ಹರಾಗಿರುತ್ತಾರೆ ಎಂದು ಘೋಷಿಸಿತು. ತಿಲಕರ ಗುಂಪಿನವರು ಈ ಮಸೂದೆಯನ್ನು ವಿರೋಧಿಸಿದ ಪರಿಣಾಮವಾಗಿ ಮೈಸೂರಿನಲ್ಲಿ ಪರಿಸ್ಥಿತಿ ಬದಲಾಯಿತು. ಈ ಮಸೂದೆಯು ತಮ್ಮ ಸಾಮಾಜಿಕ ನಂಬಿಕೆಗಳಲ್ಲಿ ಹಸ್ತಕ್ಷೇಪ ಮಾಡುವುದರಿಂದ ಇದಾಗದು ಎಂದು ಮೈಸೂರಿನ ಉದಾರವಾದಿಗಳು ಮಸೂದೆಯನ್ನು ಟೀಕಿಸಿದರು. ಸ್ಥಳೀಯ ಪತ್ರಿಕೆಗಳೂ ಸಹ ವಿಚಿತ್ರವಾದ ರೀತಿಯಲ್ಲಿ ಬದಲಾಗಿ ಬ್ರಿಟಿಷ್ ಇಂಡಿಯಾದ ಮಸೂದೆಯನ್ನು ಟೀಕಿಸಿ ಇದರಿಂದ ಸರ್ಕಾರವು ಹಿಂದೂ ಸಾಮಾಜಿಕ ಪದ್ಧತಿಗಳನ್ನು ಬದಲಾಯಿಸುವಂಥ ಅಪಾಯಕಾರಿ ಬೆಳವಣಿಗೆಗೆ [೨೧] ನಾಂದಿಯಾಗುವುದೆಂದು ಪ್ರಕಟಿಸಿದವು. ಇದೇ ವಾದವನ್ನೇ ತಿಲಕರು ಮಂಡಿಸಿದರು. ಮೈಸೂರಿನ ಬುದ್ಧಿಜೀವಿಗಳು ಈ ವಿವಾದದಲ್ಲಿ ಸಿಕ್ಕಿಕೊಂಡರು. ಈ ವಿಷಯವಾಗಿ ಅಧಿಕಾರಶಾಹಿ ಹಾಗೂ ಪ್ರತಿನಿಧಿ ಸಭೆಯ ಸದಸ್ಯರಲ್ಲಿ ಚರ್ಚೆ ನಡೆಯತೊಡಗಿತು.

## ಸಭೆಯಲ್ಲಿ ನಡೆದ ಚರ್ಚೆ

ಮೈಸೂರು ಸರ್ಕಾರವು ಇದೇ ಮಾದರಿಯನ್ನು ಅನುಸರಿಸಬಹುದೆಂದು ಅನೇಕ ಪ್ರತಿನಿಧಿಗಳು ನಿರೀಕ್ಷಿಸಿದ್ದರು. ಆದಾಗ್ಯೂ ದಿವಾನರಾಗಿದ್ದ ಶೇಷಾದ್ರಿ ಅಯ್ಯರ್‌ರಂಥ ಧೀಮಂತ ವ್ಯಕ್ತಿಯ ಮುಂದೆ ಮಾತನಾಡಲು ಹೆಚ್ಚು ಮಂದಿಗೆ ಸಾಧ್ಯವಾಗುವಂತಿರಲಿಲ್ಲ. ತಮ್ಮ ಪ್ರತಿಕ್ರಿಯೆಯಲ್ಲಿ ದಿವಾನರು ಹೆಚ್ಚು ಎಚ್ಚರಿಕೆ ವಹಿಸಿದ್ದು ಸಹಜ. ಮೈಸೂರಿನಲ್ಲಿ ಅಂಥ ಶಾಸನದ ಅಗತ್ಯ ಕಂಡುಬರುತ್ತಿಲ್ಲ, ಎಂದು ಹೇಳಿ

ತಕ್ಷಣವೇ ಇನ್ನೊಂದು ಮಾತು ಸೇರಿಸಿದ್ದರು. ಸಂಪ್ರದಾಯಸ್ಥರ ಗುಂಪು ಹಾಗೂ ಶಾಸ್ತ್ರಗ್ರಂಥಗಳು ಈ ಕಾನೂನನ್ನು ತಿರಸ್ಕರಿಸದ ಪಕ್ಷದಲ್ಲಿ ಇಂಥ ಕಾಯಿದೆಯನ್ನು ಸರ್ಕಾರ ಹೊರಡಿಸಲು ಅಡ್ಡಿಯಿಲ್ಲ.[೨೨] ಇದರಿಂದ ಸ್ವಯಂ ಸ್ಪಷ್ಟವಾಗುವ ಅಂಶವೆಂದರೆ ದಿವಾನರಿಗೆ ಯಾವ ಗುಂಪಿನ ಅಸಮಾಧಾನವನ್ನೂ ಎದುರಿಸುವ ಮನಸ್ಸಿರಲಿಲ್ಲ, ಅದರಲ್ಲೂ ಯೂರೋಪಿಯನ್ನರು, ಮಿಷನರಿಗಳು ಹಾಗೂ ಮೈಸೂರು ಸರ್ಕಾರದ ಮೇಲೆ ಒತ್ತಡ ತಂದಿದ್ದಂಥ ರೆಸಿಡೆಂಟರು–ಇವರುಗಳ ವಿರೋಧ ಅವರಿಗೆ ಬೇಕಿರಲಿಲ್ಲ. ದಿವಾನರ ಇಚ್ಛೆಗೆ ಬಿಟ್ಟಿದ್ದರೆ, ಅವರಿಗೆ ಈ ಮಸೂದೆ ಬೇಡವಾಗಿತ್ತು. ಸಮೀಪದಲ್ಲಿ ಬ್ರಾಹ್ಮಣ ಅರ್ಚಕರು, ಬ್ರಾಹ್ಮಣ ಮಹಿಳೆಯರು ಹಾಗೂ ದೇವಸ್ಥಾನ ಇಲ್ಲದ ಕಾರಣದಿಂದ ಅವರ ಹೆಂಡತಿ ಹೊಸ ಬಂಗಲೆಗೆ ಹೋಗಲು ಉತ್ಸಾಹ ತೋರಲಿಲ್ಲವಾಗಿ ತಮ್ಮ ಬಂಗಲೆ ಪ್ರವೇಶವನ್ನು ಮುಂದೂಡಿದ ವ್ಯಕ್ತಿ ದಿವಾನರು.[೨೩]

ಪ್ರತಿನಿಧಿ ಸಭೆಯಲ್ಲಿ ದಿವಾನರು ಕೆಲವು ಬಗೆಯ ಬಾಲ್ಯವಿವಾಹವನ್ನು ರದ್ದುಗೊಳಿಸುವಂಥ ಮಸೂದೆಯನ್ನು ಮಂಡಿಸಿದಾಗ ಬಹುತೇಕ ಮಂದಿಗೆ ಆಶ್ಚರ್ಯವಾಗಿತ್ತು. ಸಂಪ್ರದಾಯಸ್ಥರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳುವ ಸಲುವಾಗಿ ಈ ರೀತಿ ಘೋಷಿಸಿದ್ದರು. ನಮ್ಮ ತಿಳುವಳಿಕೆಗೆ ತದ್ವಿರುದ್ಧವಾಗಿ ಬಾಲ್ಯವಿವಾಹವು ಶಾಸ್ತ್ರಕ್ಕೆ ವಿರೋಧವಾಗಿವೆ, ಹಾಗೆಯೇ ಸದ್ಯದ ಸಂದರ್ಭದಲ್ಲಿ ಎಂಟು ವರ್ಷಕ್ಕಿಂತ ಕಡಿಮೆ ವಯಸ್ಸಿನ ಬಾಲಕಿಯರ ವಿವಾಹವನ್ನು ರದ್ದುಪಡಿಸುವುದಕ್ಕಿಂತ ಹೆಚ್ಚಿಗೆ ಹೇಳುವುದು ಸಮಂಜಸವಲ್ಲ – ಇದೇ ರೀತಿ ೫೦ ವರ್ಷ ಮೀರಿದ ಪುರುಷರು ೧೬ ವರ್ಷಕ್ಕಿಂತ ಕಡಿಮೆ ವಯಸ್ಸಿನ ಬಾಲಕಿಯನ್ನು ವಿವಾಹವಾಗುವುದೂ ಹಿತವಲ್ಲ.[೨೪] ಸುಧಾರಣಾ ಪರವಾಗಿದ್ದ ಒಂದು ಚಿಕ್ಕಗುಂಪಿಗೆ ಇದರಿಂದ ಅಮಿತಾನಂದವಾಯಿತು. ಆದಾಗ್ಯೂ ತಾವು ಆ ಮೊದಲೇ ಸರ್ಕಾರದ ಗಮನಕ್ಕೆ ತಂದ ಸಂಗತಿಗಳಿಗೆ ಸರ್ಕಾರ ಸ್ಪಂದಿಸದೇ ಇದ್ದ ರೀತಿಯನ್ನು ಮತ್ತೆ ಸರ್ಕಾರದ ಗಮನಕ್ಕೆ ತಂದರು. ಕರಡು ಮಸೂದೆಯ ಬಗ್ಗೆ ಮಾತನಾಡುತ್ತಾ ಹಾಜರಿದ್ದ ಯೂರೋಪಿಯನ್ನರೊಬ್ಬರು ಕೊಂಚ ಮಾರ್ಮಿಕವಾಗಿಯೇ ನುಡಿದಿದ್ದಾರೆ: “(ಮಹಾರಾಜರ) ಸರ್ಕಾರಕ್ಕೆ ಕಿವಿ ಇದೆ, ಜನರಿಗೆ ಧ್ವನಿ ಇದೆ; ಪ್ರಾಮಾಣಿಕವಾಗಿ ಮತ್ತು ಸ್ಥಿಮಿತದಲ್ಲಿ ಧ್ವನಿ ಮಾತನಾಡಿದರೆ ಕಿವಿಯು ಸಹಾನುಭೂತಿಯಿಂದ ಆಲಿಸುವುದರಲ್ಲಿ ಶಂಕೆಯಿಲ್ಲ. ...... ಜನರ ಧ್ವನಿಗಾಗಿ ಸರ್ಕಾರ ಬಹಳ ಧೀರ್ಘಕಾಲ ಕಾಯಬೇಕಾಯಿತು”.[೨೫]

ಯೂರೋಪಿಯನ್ನರನ್ನು ಬಿಟ್ಟು ಈ ವಿಚಾರದ ಬಗ್ಗೆ ಬೇರೆಯವರು ಮಾತನಾಡಲು ಅಷ್ಟು ಉತ್ಸಾಹ ಪ್ರಕಟಿಸಲಿಲ್ಲ. ದಿವಾನರನ್ನು ಬಹಿರಂಗವಾಗಿ ವಿರೋಧಿಸುವುದಕ್ಕೆ ಯಾರಿಗೂ ಇಷ್ಟವಿರಲಿಲ್ಲ. ದಿವಾನರು ಸಾರ್ವಜನಿಕರ ಅಭಿಪ್ರಾಯ ಹಾಗೂ ಇಚ್ಛೆಗನುಗುಣವಾಗಿ ಈ ವಿಷಯವನ್ನು ತೀರ್ಮಾನಿಸುವರೆಂದು ನಾವು ನಂಬಿದ್ದೇವೆ ಎಂದು ಸಂಪ್ರದಾಯಸ್ಥರ ಗುಂಪು ಹೇಳಿ ಸುಮ್ಮನಾಯಿತು.[೨೬] ಪ್ರಗತಿಪರರೆಂದು ಕರೆದುಕೊಂಡ ಕೆಲವರು ೧೪ ವರ್ಷಕ್ಕಿಂತ ಕಡಿಮೆ ವಯಸ್ಸಿನ ಹೆಣ್ಣುಮಕ್ಕಳ ವಿವಾಹವನ್ನು ರದ್ದುಪಡಿಸಬೇಕೆಂದು ಆಗ್ರಹಪಡಿಸಿದರಾದರೂ, ಈ ಕಾನೂನನ್ನು ಭಂಗಗೊಳಿಸಿದವರಿಗೆ ನೀಡುವ ಶಿಕ್ಷೆ ಬಹಳ ಉಗ್ರವಾಯಿತೆಂದು ಹೇಳಿಕೆ ನೀಡಿದರು. ಇದೇ ಗುಂಪಿನವರು ವೃದ್ಧ ಪುರುಷರ ಮದುವೆ ವಯಸ್ಸನ್ನು ೫೦ ವರ್ಷಕ್ಕಿಂತ ೫೫ ವರ್ಷಕ್ಕೆ ಏರಿಸಬೇಕೆಂದು ಮನವಿ ಮಾಡಿಕೊಂಡರು.[೨೭] ಪ್ರತಿನಿಧಿ ಸಭೆಯಲ್ಲಿ ಬಹಳ ಕುತೂಹಲಕರವಾದ ಚರ್ಚೆ ನಡೆಯಿತು. ಉತ್ತಮ ಫಲಿತಾಂಶಗಳನ್ನು ಪಡೆಯಲು ಶಿಕ್ಷಣ ವ್ಯಾಪಕವಾಗುವ ತನಕ ಕಾಯಬೇಕೆಂದು ಒಬ್ಬ ಸದಸ್ಯರು ಹೇಳಿದ್ದಕ್ಕೆ ಉತ್ತರವಾಗಿ ಇನ್ನೊಬ್ಬರು ‘ಕೇವಲ ಶಿಕ್ಷಣದಿಂದ ಏನೂ ಆಗುವುದಿಲ್ಲ, ಕೇಶಬ್‌ಚಂದ್ರ ಸೇನ್ ಹಾಗೂ ತೇಲಂಗ್ ಅವರ ವಿಚಾರಗಳನ್ನೇ ತೆಗೆದುಕೊಳ್ಳಿ, ತಮ್ಮ ನಂಬಿಕೆಗೆ ವಿರುದ್ಧವಾಗಿ ಅವರು ತಮ್ಮ ಹೆಣ್ಣುಮಕ್ಕಳ ಮದುವೆ ನಡೆಸಬೇಕಾಯಿತು’,[೨೮] ಎಂದೂ ವ್ಯಂಗ್ಯವಾಡಿದರು.

ಈ ಪ್ರಯತ್ನಗಳಲ್ಲೆಲ್ಲಾ ಎದ್ದು ಕಾಣುವ ಪ್ರಸಂಗವೆಂದರೆ ಜ್ಞಾಪನಾಪತ್ರಗಳ ಸಮರ್ಪಣೆ- ಎರಡು ಪ್ರತಿನಿಧಿ ಗುಂಪುಗಳು ಹಾಗೂ ಚಿಕ್ಕಮಗಳೂರು ಪ್ರಜೆಗಳ ಪರವಾಗಿ ಒಂದೊಂದು, ೫೩ ಸದಸ್ಯರ ಒಂದು ಗುಂಪು ಶರತ್ತಿನ ಮೇಲೆ ತಮ್ಮ ಸಮ್ಮತಿ ಸೂಚಿಸಿದ್ದರು. ಆದರೆ ಜ್ಞಾಪನಾಪತ್ರದ ಒಕ್ಕಣೆಗೆ ಸರ್ಕಾರ ಮನ್ನಣೆ ನೀಡಿದ್ದರೆ ಮಸೂದೆಯನ್ನು ತಿರಸ್ಕರಿಸುವುದಾಗಿತ್ತು. ಅವರ ಪ್ರಕಾರ ಕಾನೂನು ಉಲ್ಲಂಘಿಸಿದವರಿಗೆ 'ಕೊಡುವ ಶಿಕ್ಷೆಯು ಉಗ್ರವಾಗಿರುವುದರಿಂದ ಅದನ್ನು ಕೈಬಿಟ್ಟು ಅದಕ್ಕೆ ಬದಲು ದಂಡವನ್ನು ವಿಧಿಸುವುದು- ಜೊತೆಗೆ ಕೆಲವು ವಿಶೇಷ ಸಂದರ್ಭಗಳಲ್ಲಿ ನಿಗದಿಪಡಿಸಿದ ವಯೋಮಾನಕ್ಕೆ ಮೊದಲು ವಿವಾಹವಾಗುವ ಅವಕಾಶ ಕಲ್ಪಿಸುವುದು'.[೫೯] ಈ ಕಾರಣದಿಂದ ಕಾನೂನಿನ ಸತ್ವವನ್ನೇ ದುರ್ಬಲಗೊಳಿಸುವ ಮನವಿ ಇದಾಗಿ ಪರಿಣಮಿಸಿರುವುದು ತಿಳಿಯುತ್ತದೆ.

೨೬೮ ಮಂದಿಯನ್ನೊಳಗೊಂಡ ಪ್ರಬಲವಾದ ಇನ್ನೊಂದು ಗುಂಪು ಸರ್ಕಾರವನ್ನು ಆಗ್ರಹಪಡಿಸಿದ ರೀತಿ ಹೀಗಿದೆ: 'ಈ ಪ್ರದೇಶದ ಬಹುಪಾಲು ಜನರು ಕಾನೂನಿನ ವಿರುದ್ಧ ಇದ್ದಾರೆ, ಒಂದು ವೇಳೆ ಗಣನೆಗೆ ಬಾರದ ಅಲ್ಪಸಂಖ್ಯಾತರ, ಅಂದರೆ ಲಕ್ಷದಲ್ಲಿ ಒಬ್ಬರು, ಇಚ್ಛೆಯನ್ನು ಪುರಸ್ಕರಿಸಿ ಈ ಕಾನೂನು ಜಾರಿಯಾದರೆ ಅಂತಹ ಕ್ರಮದಿಂದ ಬಹುತೇಕರ ಭಾವನೆಗಳಿಗೆ ಧಕ್ಕೆಯಾಗುವುದು ಖಂಡಿತ'.[೬೦] ಶಾಸನ ಸಭೆಯ ಒಬ್ಬ ಸದಸ್ಯರ ನೇತೃತ್ವದಲ್ಲಿ ಹೊರಟಂಥ ಇನ್ನೊಂದು ಗುಂಪು ಮಸೂದೆಯಲ್ಲಿ ವಿನಾಯಿತಿ ಕೊಡಬೇಕೆಂದು ಕೇಳಿತು. ಈ ಕಾನೂನಿನ ನಿಯಮಗಳ ವಿರುದ್ಧವಾಗಿ ಮದುವೆಯಾಗುವುದು ಶಾಸ್ತ್ರೀಯವಾಗಿ ಕೆಲವು ಜಾತಿಯವರಿಗೆ ಅನಿವಾರ್ಯವಾಗುವ ಕಾರಣ ಅವರಿಗೆ ಕಾನೂನಿನಿಂದ ವಿನಾಯಿತಿ ದೊರಕಬೇಕೆಂದು ಒತ್ತಾಯಿಸಿತು.[೬೧]

ಎರಡು ಮನವಿಪತ್ರಗಳಿಗೆ ೨೩೧ ಸದಸ್ಯರು ರುಜು ಮಾಡಿದರಾದರೂ, ಉಳಿದ ೧೨೩ ಸದಸ್ಯರು ಈ ವಿಷಯದಿಂದ ದೂರವೇ ಉಳಿದರು. ಬೇರೆ ಮೈಸೂರಿಗರ ಧೋರಣೆಯೂ ಪ್ರಾಯಶಃ ಇದೇ ಆಗಿರಬಹುದೆಂದು ತೋರುತ್ತದೆ. ಮಾತನಾಡಿದವರೆಲ್ಲರೂ, ಕೆಲವು ಯೂರೋಪಿಯನ್ನರು ಹಾಗೂ ದೇಶೀಯರನ್ನು ಹೊರತುಪಡಿಸಿ, ಮಸೂದೆಗೆ ವಿರುದ್ಧವಾಗಿಯೇ ಮಾತನಾಡಿದರು. ಆದರೆ ೧೮೯೪ರಲ್ಲಿ ದಿವಾನರು ಶಾಸನಸಭೆಯಲ್ಲಿ ಬಾಲ್ಯವಿವಾಹ ಕಾನೂನನ್ನು ಘೋಷಿಸಿದರು. ಪ್ರಜೆಗಳ ಸ್ವಾತಂತ್ರ್ಯಕ್ಕೆ ಧಕ್ಕೆ ಬರುವಂತಹ ಕ್ರಮವನ್ನು ಸರ್ಕಾರ ಕೈಗೊಂಡಿದೆ ಎಂದು ಕೆಲವರು ಅಭಿಪ್ರಾಯ ವ್ಯಕ್ತಪಡಿಸಿರುವುದಾಗಿ ದಿವಾನರು ಒಪ್ಪಿಕೊಂಡರು.[೬೨] ವಿರೋಧಿ ನಾಯಕರು ವಿವೇಚನಾ ಶೂನ್ಯತೆಯಿಂದ ಹೇಳಿಕೆ ನೀಡಿ 'ಮುಸಲ್ಮಾನರು ಹಾಗೂ ಕ್ರಿಶ್ಚಿಯನ್ನರಲ್ಲಿಯೂ ಆಕ್ಷೇಪಾರ್ಹವಾದ ಅನೇಕ ಸಂಪ್ರದಾಯಗಳಿವೆ...... ಈ ಕಾನೂನು ಹೆಚ್ಚಿನ ಪ್ರಮಾಣದಲ್ಲಿ ಬ್ರಾಹ್ಮಣರನ್ನು ತೊಂದರೆಗೀಡುಮಾಡುತ್ತದೆ, ಅವರು ಶಾರೀರಿಕವಾಗಿ ಹೆಚ್ಚು ದುರ್ಬಲರೂ ಕೂಡ. ಆದಾಗ್ಯೂ, ಈ ಕಾನೂನು ಎಲ್ಲರಿಗೂ ಅನ್ವಯವಾಗುತ್ತದೆಯೆಂದು ದಿವಾನರು ಸ್ಪಷ್ಟಪಡಿಸಿದರು'.[೬೩]

ಮೈಸೂರಿಗರು ಸಾಮಾನ್ಯವಾಗಿ ಸುಧಾರಣೆಗೆ ಒಗ್ಗುವವರಲ್ಲ ಎಂಬುದನ್ನು ತಿಳಿಯಪಡಿಸಬೇಕು. ಆದಾಗ್ಯೂ ಸರ್ಕಾರ ಮೊದಮೊದಲು ಹಿಂದೇಟು ಹೊಡೆದರೂ, ಮಹಿಳೆಯರ ವಿದ್ಯಾಭ್ಯಾಸಕ್ಕಾಗಿ ಕೆಲವು ಕ್ರಮಗಳನ್ನು ತೆಗೆದುಕೊಂಡಿತು, ನಂತರ ವಿವಾಹ ಕಾನೂನು ಜಾರಿಗೊಳಿಸಿತು. ಹೊರಗಿನವರ ದೃಷ್ಟಿಯಲ್ಲಿ ತನ್ನ ವರ್ಚಸ್ಸನ್ನು ಹೆಚ್ಚಿಸಿಕೊಳ್ಳಲು ಮೈಸೂರು ಸರ್ಕಾರವು ಯಾವಾಗಲೂ ಪ್ರಯತ್ನಿಸುತ್ತಿದ್ದುದು ನಿಜ ಸಂಗತಿ. ಹಾಗಾಗಿ ಕೆಲವು ಉದಾರವಾದಿಗಳು ಮಹಿಳಾ ವಿದ್ಯಾಭ್ಯಾಸದ ಪ್ರಯೋಗವನ್ನು ಮಾಡಿದ್ದು ರಾಷ್ಟ್ರೀಯವಾದಿಗಳು, ಯೂರೋಪಿಯನ್ನರು ಹಾಗೂ ಕ್ರಿಶ್ಚಿಯನ್ ಮಿಷನರಿಗಳ ಶ್ಲಾಘನೆಗೆ ಪಾತ್ರವಾಗಿತ್ತು. ಈ ವಲಯದಲ್ಲಿ ತಮ್ಮ ವರ್ಚಸ್ಸನ್ನು ಹೆಚ್ಚಿಸಿಕೊಳ್ಳಲು ಸಾಧ್ಯವೆಂದು ಮೈಸೂರು ಸರ್ಕಾರದವರಿಗೆ ಅನ್ನಿಸಿತು.

ಸಮಾಜದಲ್ಲಿ ಹಾಗೂ ಧರ್ಮದ ವಿಷಯದಲ್ಲಿ ಆಮೂಲಾಗ್ರವಾದ ಬದಲಾವಣೆ ತರಬೇಕೆಂದು ಮೈಸೂರು ಸರ್ಕಾರಕ್ಕೆ ನಿಜವಾಗಿಯೂ ಕಾಳಜಿ ಇರಲಿಲ್ಲ. ಅವರಿಗೆ ಸಂಪ್ರದಾಯಸ್ಥ ಮೈಸೂರಿಗರ ವಿರೋಧ ಕಟ್ಟಿಕೊಳ್ಳಲು ಇಷ್ಟವಿರಲಿಲ್ಲ. ಆದರೆ ಆಡಳಿತಕ್ಕೆ ಎಲ್ಲರನ್ನೂ ತೃಪ್ತಿಪಡಿಸುವ ಒಂದು ಕಲೆ ಕರತಲಾಮಲಕವಾಗಿತ್ತು. ವಿವಾಹ ಕಾನೂನನ್ನು ಜಾರಿಗೊಳಿಸುವ ಸಂದರ್ಭದಲ್ಲಿ ಸರ್ಕಾರ ವಾಸ್ತವವಾಗಿ ಪ್ರಾಮಾಣಿಕವಾಗಿರಲಿಲ್ಲ. ಸಂಪ್ರದಾಯಸ್ಥರು ಆಗ್ರಹಪಡಿಸಿದ ರೀತ್ಯಾ ಕಾಯಿದೆಯನ್ನು ಉಲ್ಲಂಘಿಸಿದವರಿಗೆ ಕೇವಲ ದಂಡವನ್ನು ಮಾತ್ರ ವಿಧಿಸಲಾಯಿತು. ೧೮೯೪–೧೯೦೦ರ ತನಕ ಕೇವಲ ೫೨ ಪ್ರಸಂಗಗಳನ್ನು ಮಾತ್ರ ದಾಖಲು ಮಾಡಿಕೊಳ್ಳಲಾಯಿತು. ತಪ್ಪಿತಸ್ಥರಿಂದ ಕಿಂಚಿತ್ ಪ್ರಮಾಣದ ದಂಡವನ್ನು ಪಡೆದು ಅವರನ್ನು ಬಿಟ್ಟುಬಿಡಲಾಯಿತು.

ಭಾರತದಲ್ಲಿ ಸಾಮಾಜಿಕ ಹಾಗೂ ಸಂವೈಧಾನಿಕ ಸುಧಾರಣೆಗಳ ಬಗ್ಗೆ ಮಾತನಾಡುತ್ತಿದ್ದ ಬುದ್ಧಿಜೀವಿಗಳ ದೃಷ್ಟಿಯಲ್ಲಿ ಒಳ್ಳೆಯ ಸರ್ಕಾರ, ಮಾದರಿ ರಾಜ್ಯವಾಗಿ ಕಾಣಿಸಿಕೊಳ್ಳಬೇಕೆಂಬ ತವಕ ಮೈಸೂರಿಗೆ ಯಾವಾಗಲೂ ಇದ್ದೇ ಇತ್ತು. ದಿವಾನರುಗಳಾದ ರಂಗಾಚಾರ್ಲು (೧೮೮೧–೮೩) ಹಾಗೂ ಶೇಷಾದ್ರಿ ಅಯ್ಯರ್ (೧೮೮೩–೧೯೦೧), ಅವರು ಮೈಸೂರು ಎಲ್ಲಾ ವಿಧದಲ್ಲೂ ಮುಂಚೂಣಿಯಲ್ಲಿರಬೇಕು ಎಂದು ತಿಳಿದಿದ್ದರು. ಆಗಿನ ಕಾಲದಲ್ಲಿ ಪ್ರಚಲಿತವಿದ್ದ ಬ್ರಿಟಿಷ್ ಮಾದರಿಯನ್ನು ಅನುಕರಿಸುವ ಬದಲಾಗಿ ಭಾರತೀಯ ರೀತಿಯನ್ನು ಅನುಸರಿಸಿದರು. ಸರ್ಕಾರಕ್ಕೆ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್‌ನ ಬಗ್ಗೆ ಹೆಚ್ಚು ಒಲವಿತ್ತು. ೧೮೮೭ರ ಮದರಾಸು ಕಾಂಗ್ರೆಸ್ ಅಧಿವೇಶನಕ್ಕೆ ಮೈಸೂರಿನ ಮೂವರು ಅಧಿಕಾರಿಗಳನ್ನು ಕಳಿಸಿದ್ದಷ್ಟೇ ಅಲ್ಲದೆ, ಮಹಾರಾಜರು ಕಾಂಗ್ರೆಸ್ ನಿಧಿಗೆ ೧೦೦೦ ರೂಪಾಯಿಗಳ ದೇಣಿಗೆ ನೀಡಿದರು.[೩೪]

ನಿರೀಕ್ಷೆಗೂ ಮೀರಿ ಎಲ್ಲ ಕಡೆಯಿಂದ ಶ್ಲಾಘನೆ, ಮೆಚ್ಚಿಗೆ ಬಂದವು. ಮೈಸೂರು ಭಾರತದ ಸಾಮಾಜಿಕ ಸುಧಾರಣೆಯ 'ಮಿನುಗುವ ನಕ್ಷತ್ರ' ವೆಂಬುದಾಗಿ ಹೊಗಳಿಕೆಯೂ ಬಂದಿತು.[೩೫] ವಿವಾಹ ಕಾನೂನು ಉದಾರವಾದಿಗಳಿಗೆ ಎಷ್ಟು ಗೆಲುವು ತಂದಿತೆಂದರೆ ಈ ಕಾನೂನನ್ನು 'ಬ್ರಿಟಿಷ್ ಭಾರತದ ಉಳಿದ ವಲಯಗಳಿಗೂ ವಿಸ್ತರಿಸಬೇಕೆಂದು ಭಾರತ ಸರ್ಕಾರವನ್ನು ಮನವಿ ಮಾಡಿಕೊಳ್ಳಬೇಕೆಂದು'[೩೬] ಅವರು ತೀರ್ಮಾನಿಸಿದರು.

ಸುಧಾರಣಾ ಪ್ರಕ್ರಿಯೆಯಲ್ಲಿ ಸರ್ಕಾರವೇ ಪ್ರಧಾನ ಭೂಮಿಕೆ ನಿರ್ವಹಿಸಿದುದು ಮೈಸೂರಿನ ಸುಧಾರಣೆಯಲ್ಲಿ ಎದ್ದು ಕಾಣುವ ಸಂಗತಿಯಾಗಿದೆ. ಮೊದ ಮೊದಲು ಸ್ವಲ್ಪ ಎಚ್ಚರಿಕೆಯಿಂದ ಪ್ರಾರಂಭಿಸಿದರೂ ಕ್ರಮೇಣ ಹೆಚ್ಚು ವಿಶ್ವಾಸದಿಂದ ಮುಂದುವರಿದು ಸುಧಾರಣೆಯ ಮೂಲಕ ಸರ್ಕಾರ ಮೈಸೂರಿನ ಹೊರಗೆ ತನ್ನ ಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳಲು ಪ್ರಯತ್ನಿಸಿತು. ಈ ದಿಸೆಯಲ್ಲಿ ಮೊದಲ ಹೆಜ್ಜೆ ತೆಗೆದುಕೊಂಡವರು ಮೈಸೂರಿನ ಹೊರಗಿನವರೇ (ಯೂರೋಪಿಯನ್ನರು, ಮದರಾಸಿನವರು ಹಾಗೂ ಕ್ರಿಶ್ಚಿಯನ್ ಮಿಷನರಿಗಳು). ಆದರೂ ಈ ಕಾರ್ಯವನ್ನು ತಾವೇ ಮಾಡುವುದರ ಮೂಲಕ ತನ್ನ ಪ್ರತಿಷ್ಠೆ ಹೆಚ್ಚುವುದೆಂದು ಮನವರಿಕೆ ಆದ ಕೂಡಲೇ ಆ ದಿಸೆಯಲ್ಲಿ ಕಾರ್ಯಪ್ರವೃತ್ತರಾಗಲು ಸರ್ಕಾರದವರು ವಿಳಂಬ ಮಾಡಲಿಲ್ಲ.

ವಿರೋಧಿ ಬಣದಲ್ಲಿದ್ದ ಮೈಸೂರಿನವರು ಸುಧಾರಣೆಯನ್ನು ವಿರೋಧಿಸುವ ದೃಷ್ಟಿಯಿಂದ ಹಾಗೆ ಮಾಡದೇ ಇದ್ದರೂ ಆ ನಂತರದ ಬೆಳವಣಿಗೆಯ ಬಗ್ಗೆ ಅವರಲ್ಲಿ ದಿಗಿಲಿದ್ದಿತು. ಪ್ರಾಪ್ತ ವಯಸ್ಸಿನ ಕಾಯಿದೆಯನ್ನು ೧೮೯೧ರಲ್ಲಿ ಬ್ರಿಟಿಷ್ ಭಾರತದ ವಿರೋಧಿಗಳು ವಿರೋಧಿಸಿದ ಪ್ರಮಾಣದಲ್ಲಿ ಇವರು ಈ ಕಾನೂನನ್ನು ವಿರೋಧಿಸಲಿಲ್ಲ. ಅಷ್ಟೇ ಅಲ್ಲ ಅವರು ಈ ಕಾನೂನನ್ನು ಒಪ್ಪಿಕೊಂಡರೂ ಕೂಡ,

ಇದರಿಂದ ಅವರ ಧೋರಣೆಯು ವರ್ಣನವಾಗುವುದು ಸಹಜ. ಸಮಸ್ಯೆಗಳು ಹಾಗೂ ಬೆಳವಣಿಗೆಗಳಿಗೆ ಈ ಮಂದಿ ಸಾಮಾನ್ಯವಾಗಿ ಶೀಘ್ರವಾಗಿ ಸ್ಪಂದಿಸುವ ಪ್ರವೃತ್ತಿಯವರಲ್ಲ. ಸರ್ಕಾರದ ಇಂಗಿತವನ್ನು ಅವರು ಸಂಶಯದ ದೃಷ್ಟಿಯಿಂದ ಗಮನಿಸಲು ಕಾರಣವೆಂದರೆ, ಈ ಕಾನೂನನ್ನು ತಕ್ಷಣದಲ್ಲಿಯೇ ಜಾರಿಗೊಳಿಸಬೇಕೆಂದು ಯೂರೋಪಿಯನ್ನರು, ಕ್ರಿಶ್ಚಿಯನ್ ಮಿಷನರಿಗಳು ಹಾಗೂ ರೆಸಿಡೆಂಟರು ಒತ್ತಡ ತಂದಿದ್ದರು. ಭಾರತೀಯ ಸಮಾಜವನ್ನು ಬುಡಮೇಲು ಮಾಡುವ ಪ್ರಯತ್ನವಿದು ಎಂದು ಅವರಿಗೆ ಗುಮಾನಿಯಾಗಿತ್ತು. ಇವರ ಮಾರ್ಗವನ್ನು ವಿರೋಧಿಸುವ ಮೂಲಕ ವಸಾಹತುವಿನ ಒತ್ತಡವನ್ನು ತಾವು ವಿರೋಧಿಸುವುದಾಗಿ ಅವರು ತಿಳಿದರು. ಸಂಪ್ರದಾಯ ಹಾಗೂ ಶಾಸ್ತ್ರಗಳ ಬಗ್ಗೆ ಇವರು ಹೊಂದಿದ್ದ ಅಭಿಪ್ರಾಯಕ್ಕೂ ವಸಾಹತು ಸರ್ಕಾರ ಹೇರಿದ ಸಾಮಾಜಿಕ ಶಾಸನಗಳನ್ನು ವಿರೋಧಿಸಲು ತಿಲಕರು ಸ್ಥಾಪಿಸಿದ ಧರ್ಮಸಮಿತಿಯ ಮಾರ್ಗಕ್ಕೂ ಬಹಳ ವ್ಯತ್ಯಾಸವಿದ್ದಿತು; ಈ ಕಾನೂನನ್ನು ವಿರೋಧಿಸಲು ಯಾರೊಬ್ಬರೂ ಶಾಸ್ತ್ರವನ್ನು ಉಲ್ಲೇಖಿಸಲಿಲ್ಲ. ಸರ್ಕಾರ ತನ್ನ ಪ್ರತಿಷ್ಠೆ ಹೆಚ್ಚಿಸಿಕೊಳ್ಳುವ ಚಟುವಟಿಕೆಯಲ್ಲಿ ತೊಡಗಿದ್ದಾಗ್ಯೂ ಸಹ ಸಾರ್ವಜನಿಕರಲ್ಲಿ ಮಾತನಾಡಬಲ್ಲಂಥ ಜನರನ್ನು ತನ್ನೊಡನೆ ಕೊಂಡೊಯ್ಯುವ ಉದ್ದೇಶವನ್ನೂ ಹೊಂದಿತ್ತು. ಈ ಕಾನೂನು ಜಾರಿಗೊಳಿಸಲು ನಾಲ್ಕು ವರ್ಷ ತೆಗೆದುಕೊಂಡರು. ಬೇರೆ ಬೇರೆ ಮತಸ್ಥರ ಒಪ್ಪಿಗೆಯನ್ನು ಮುಂಗಡವಾಗಿಯೇ ಪಡೆದುಕೊಂಡಿದ್ದರು. ಶಾಸ್ತ್ರವನ್ನು ಉಲ್ಲೇಖಿಸಿ ದಿವಾನರು ಕಾನೂನನ್ನು ಸಮರ್ಥಿಸಿಕೊಂಡದ್ದು ಈ ರೀತಿಯಾಗಿ.

ಯೂರೋಪಿಯನ್ನರು, ಕ್ರಿಶ್ಚಿಯನ್ ಮಿಷನರಿಗಳು ಪರಕೀಯವಾದ, ವಸಾಹತು ಸಂಸ್ಕೃತಿಯ ಪ್ರತಿನಿಧಿಗಳು. ಹಾಗಾಗಿ ಇಲ್ಲಿನ ಸಂಪ್ರದಾಯವನ್ನು ಇವರು ತುಂಬಾ ಒರಟಾಗಿ ವಿರೋಧಿಸುವ ಸಂದರ್ಭದಲ್ಲಿ ದಿವಾನರು ಹಾಗೂ ಮಹಾರಾಜರನ್ನು ಪ್ರತಿನಿಧಿಸುವ ಸರ್ಕಾರ, ಜನತೆಯನ್ನು ಪ್ರತಿನಿಧಿಸುವ ಪತ್ರಿಕೆ ಹಾಗೂ ಶಾಸನ ಸಭೆ ಸಂಪ್ರದಾಯದಲ್ಲಿ ಉತ್ತಮವಾದುದನ್ನು ಉಳಿಸಿಕೊಳ್ಳಲು ಪ್ರಯತ್ನಿಸಿದುವು. ಈ ಹಿನ್ನೆಲೆಯಿಂದ ಗಮನಿಸಿದರೆ ಆಮೂಲಾಗ್ರವಾದ ಸುಧಾರಣೆಯ ಬಗ್ಗೆ ಮೈಸೂರಿನವರು ವಿರೋಧ ವ್ಯಕ್ತಪಡಿಸಿದರೆ ಅದು ಪ್ರತಿಗಾಮಿತನವೆಂದು ತಿಳಿಯಲಾಗದು. ತಮ್ಮ ಸಂಸ್ಕೃತಿಯ ವಿರೋಧಿಗಳಾದ ವಸಾಹತುಶಾಹಿಗಳು ಮುಂದಿಟ್ಟ ಯಾವುದೇ ಬದಲಾವಣೆಯನ್ನು ವಿರೋಧಿಸುವುದು ತಮ್ಮ ಅನನ್ಯತೆಯನ್ನು ಕಾಪಾಡಿಕೊಳ್ಳುವ ಏಕೈಕ ಮಾರ್ಗವೆಂದು ಕೆಲವರಿಗೆ ಅನ್ನಿಸಿತು. ಸುಧಾರಣಾ-ವಿರೋಧಿ ಧೋರಣೆಯೆಂದು ನಾವಿದನ್ನು ಕರೆಯಲಾಗದು. ಕಾರಣ, ಆಗಿನ ವಿಶಿಷ್ಟವಾದ ಚಾರಿತ್ರಿಕ ಸಂದರ್ಭದಲ್ಲಿ ಗಮನಿಸಿದರೆ ಸುಧಾರಣಾ ವಿರೋಧವು ಆಗ ಆರಂಭವಾಗುತ್ತಿದ್ದ ರಾಷ್ಟ್ರೀಯ ಪ್ರಜ್ಞೆಯ, ಅದೆಷ್ಟೇ ಅಸಮರ್ಪಕವೆನಿಸಿದರೂ, ಒಂದು ಅಂಗವೆಂದು ಅರಿಯಬೇಕಾಗುತ್ತದೆ.

ಬ್ರಿಟಿಷ್ ಕರ್ನಾಟಕದ ಸುಧಾರಣಾವಾದಿಗಳು –ಅವರ ಸಂಖ್ಯೆ ಎಷ್ಟೇ ಇರಲಿ– ಸುಧಾರಣೆಯಲ್ಲಿ ಮೈಸೂರಿನ ಸುಧಾರಕರಿಗೆ ಹೋಲಿಸಿದರೆ ಹೆಚ್ಚು ಚಟುವಟಿಕೆಯುಳ್ಳವರೂ ಮುಂದುವರಿದವರೂ ಆಗಿದ್ದರು. ದೇಶೀಯ ಆಡಳಿತದ ಕಾರಣದಿಂದ ಈ ವ್ಯತ್ಯಾಸ ಗಮನಕ್ಕೆ ಬರುತ್ತದೆ. ಸುಧಾರಣೆಗಳಿಂದ ಮಹಾರಾಜರು ತಮ್ಮ ವರ್ಚಸ್ಸನ್ನು ಬೆಳೆಸಿಕೊಳ್ಳುವ ತವಕದಲ್ಲಿದ್ದರು ಎಂಬ ಮಾತು ನಿಜವಾದರೂ ಏಕಕಾಲದಲ್ಲಿ ಈ ಸಮಸ್ಯೆಯ ಬಗ್ಗೆ ಅವರಿಗಿದ್ದ ಕಳಕಳಿಯನ್ನಂತೂ ಪ್ರಶ್ನಿಸುವಂತಿರಲಿಲ್ಲ. ಕರ್ನಾಟಕದ ಬ್ರಿಟಿಷ್ ಹಾಗೂ ದೇಶೀಯ ಪ್ರಾಂತ್ಯಗಳ ಸಾಮಾಜಿಕ ಸುಧಾರಣೆ ಚಟುವಟಿಕೆ ಹಿನ್ನೆಲೆಯಲ್ಲಿ ಸ್ವಾತಂತ್ರ್ಯ ಚಳವಳಿ ಮಹತ್ವ ಪಡೆಯುತ್ತದೆ; ೧೯ನೆಯ ಶತಮಾನದ ಸಾಮಾಜಿಕೊ-ಧಾರ್ಮಿಕ ಸುಧಾರಣಾ ಚಳವಳಿಗಳನ್ನು ವಸಾಹತು-ವಿರೋಧಿ ರಾಷ್ಟ್ರೀಯ ಚಳುವಳಿಗೆ ನಾಂದಿ ಹಾಡಿದ್ದನ್ನು ನೆನೆಯಬೇಕಾಗುತ್ತದೆ. ಸುಧಾರಣಾ ಚಳವಳಿಯಲ್ಲಿ ಬ್ರಿಟಿಷ್ ಭಾಗವು ಹೆಚ್ಚು ಕ್ರಿಯಾತ್ಮಕವಾಗಿ ಇದ್ದ ಕಾರಣ ಸ್ವಾತಂತ್ರ್ಯ ಚಳವಳಿಯಲ್ಲೂ ಅಷ್ಟೇ ಕ್ರಿಯಾತ್ಮಕವಾಗಿ

ಮುಂದುವರಿಯಿತು, ಆದರೆ ಮೈಸೂರು ಭಾಗವು ಸುಧಾರಣೆಯಲ್ಲಿ ಮಂದಗತಿಯಲ್ಲಿ ಸ್ಪಂದಿಸಿದ ಕಾರಣ ಸ್ವಾತಂತ್ರ್ಯ ಚಳವಳಿಯ ಬಿಸಿಯನ್ನು ಶೀಘ್ರವಾಗಿ ತಾಕಿಸಿಕೊಳ್ಳಲಿಲ್ಲ; ಹಾಗಾಗಿ ಕಡೆಯ ಪಕ್ಷ ೧೯೩೮ರ ತನಕ ಮೈಸೂರು ಸಂಸ್ಥಾನ ಹಾಗೂ ವಸಾಹತು ಆಡಳಿತದ ವಿರುದ್ಧ ಇದರ ಪ್ರತಿಕ್ರಿಯೆ ಎದ್ದುಕಾಣುವಂತದ್ದಾಗಿರಲಿಲ್ಲ. ಆಡಳಿತ ಕ್ರಮ ಊಳಿಗಮಾನ್ಯ ರೀತಿಯದಾದ್ದರಿಂದ ಹೈದರಾಬಾದು ಕರ್ನಾಟಕ ಎರಡೂ ಚಳವಳಿಗಳಲ್ಲಿ ಹಿಂದೆ ಬಿದ್ದಿತು; ಕೇವಲ ೧೯೩೦ರ ನಂತರ ಈ ದಿಶೆಯಲ್ಲಿ ಅಲ್ಲಿ ಏನಾದರೂ ಸ್ವಲ್ಪ ಚಟುವಟಿಕೆ ನಡೆಯಲು ಮೊದಲಾಯಿತು ಎನ್ನಬೇಕು.

**-ಪ್ರೊ. ಎಸ್. ಚಂದ್ರಶೇಖರ್**

## ಟಿಪ್ಪಣಿಗಳು

೧ ಬೆಂಗಳೂರಿನಲ್ಲಿ ಭಾಷ್ಯಂ ದೇವಡಿ ಅವರ ಕುಟುಂಬದವರಿಂದ ಈ ಪತ್ರಿಕೆಯು ಪ್ರಾರಂಭಿಸಲ್ಪಟ್ಟಿತು. ಮೊದಮೊದಲು ಪಾಕ್ಷಿಕವಾಗಿ ಪ್ರಾರಂಭವಾದ ಪತ್ರಿಕೆ ಕೂಡಲೇ ಮುಚ್ಚಿಹೋಯಿತು. ಅನಂತರ ೧೮೭೨-೭೩ರಲ್ಲಿ ಪುನಃಶ್ಚೇತನ ಗೊಂಡು ಮತ್ತೆ ನಿಂತುಹೋಯಿತು. ವಿವರಗಳಿಗಾಗಿ ನೋಡಿ: ಗುಂಡಪ್ಪ, ಡಿ.ವಿ: ವೃತ್ತಪತ್ರಿಕೆ- ಅದರ ವೃತ್ತಾಂತ, ಅದರ ವಿಚಾರ, ಬೆಂಗಳೂರು, ೧೯೭೨

೨ ಚಾರ್ಲ್ಸ್ ಹೀಸ್ಮತ್‌ರ ಇಂಡಿಯನ್ ನ್ಯಾಷನಲಿಸಂ ಅಂಡ್ ಹಿಂದೂ ಸೋಷಿಯಲ್ ರಿಫಾರ್ಮ್, ಪ್ರಿನ್ಸ್‌ಟನ್, ೧೯೬೪, ಗ್ರಂಥದಲ್ಲಿ ಉಲ್ಲೇಖವಾಗಿದೆ.

೩ ಉಡುಪಿಯಿಂದ ಪ್ರಕಾಶವಾಗುತ್ತಿದ್ದ ಮಾಸಿಕ. ನೋಡಿ: ಗುಂಡಪ್ಪ, ಡಿ.ವಿ: ಹಲವರು ಸಾರ್ವಜನಿಕರು, ಬೆಂಗಳೂರು, ೧೯೭೨ ಹಾಗೂ ಹಾವನೂರು ಶ್ರೀನಿವಾಸ: ಹೊಸಗನ್ನಡ ಅರುಣೋದಯ, ಮೈಸೂರು, ಪು. ೪೭೨-೪೭೩

೪ ಸೂರ್ಯನಾಥ. ಯು. ಕಾಮತ್.: ಸೋಷಿಯಲ್ ರಿಫಾರ್ಮ್ ಮೂವ್‌ಮೆಂಟ್; ಎಮ್ಯಾನ್ಸಿಪೇಶನ್ ಆಫ್ ವುಮೆನ್ ಇನ್ ಕರ್ನಾಟಕ, ಕ್ಯೂ.ಜೆ.ಎಂ.ಎಸ್. ಸಂ. LXXV. ಸಂ. ೨ ಬೆಂಗಳೂರು, ೧೯೮೪, ಪು. ೨೦೮-೨೧೭

೫ ವಿವರಗಳಿಗಾಗಿ ನೋಡಿ: ದೇಸಾಯಿ, ಎ.ಆರ್.: ಸೋಶಿಯಲ್ ಬ್ಯಾಕ್‌ಗ್ರೌಂಡ್ ಆಫ್ ಇಂಡಿಯನ್ ನ್ಯಾಶನಲಿಸಂ, ಬೊಂಬಾಯಿ, ೧೯೭೯

೬ ಸುಂತರಲಿಂಗಮ್, ಆರ್.: ಪೊಲಿಟಿಕ್ಸ್ ಅಂಡ್ ನ್ಯಾಶನಲಿಸ್ಟ್ ಅವೇಕನಿಂಗ್ ಇನ್ ಸೌತ್ ಇಂಡಿಯಾ, ೧೮೫೨-೧೮೯೧. ಜೈಪುರ – ದೆಹಲಿ, ೧೯೮೦ ಹಾಗೂ ಶಾಸ್ತ್ರೀ, ಕೆ.ಎನ್.ವಿ.: ಅಡ್ಮಿನಿಸ್ಟ್ರೇಶನ್ ಆಫ್ ಮೈಸೂರ್ ಅಂಡರ್ ಸರ್ ಮಾರ್ಕ್ ಕಬ್ಬನ್, ಲಂಡನ್, ೧೯೭೬

೭ ಚಾರ್ಲ್ಸ್ ಹೀಸ್ಮತ್, ೧೯೬೪, ಪು. ೧೧೦-೧೧೨

೮ ಪರಸ್ಪರರನ್ನು ವಂಚಿಸುವ ಹುನ್ನಾರಿನಲ್ಲಿ ಮೈಸೂರಿನಲ್ಲಿ ಆಗ ಎರಡು ಗುಂಪುಗಳಿದ್ದವು. ಒಂದು ಗುಂಪನ್ನು ಮದರಾಸು ಪಕ್ಷವೆಂದು ಕರೆದಿದ್ದರು, ಇದರಲ್ಲಿ ಅಧಿಕಾರಶಾಹಿಯ ಉನ್ನತ ಅಧಿಕಾರಿಗಳು ಸೇರ್ಪಡೆಯಾಗಿದ್ದರು. ಇನ್ನೊಂದು ಪಕ್ಷವನ್ನು ಮೈಸೂರು ಪಕ್ಷವೆಂದು ನಾಮಕರಣ ಮಾಡಲಾಗಿತ್ತು, ಹೊರಗಿನವರು ಆಡಳಿತದಲ್ಲಿ ಅಧಿಕವಾಗಿರುವುದನ್ನು ಈ ಪಕ್ಷ ವಿರೋಧಿಸಿತ್ತು. ಆದರೆ ಈ ಎರಡೂ ಗುಂಪುಗಳಲ್ಲಿ ಬ್ರಾಹ್ಮಣರೇ ಅಧಿಕವಾಗಿದ್ದರು. ವಿವರಗಳಿಗೆ ನೋಡಿ: ಚಂದ್ರಶೇಖರ್, ಎಸ್.: ಡೈಮೆನ್‌ಶನ್ಸ್ ಆಫ್ ಸೋಶಿಯೋ-ಪೊಲಿಟಿಕಲ್ ಚೇಂಜ್ ಇನ್ ಮೈಸೂರ್, ನವದೆಹಲಿ, ೧೯೮೫, ಪು. ೫-೬

೯ ಗುಂಡಪ್ಪ, ಡಿ.ವಿ.: ಜ್ಞಾಪಕ ಚಿತ್ರಶಾಲೆ, ಸಂ. ೧, ಮೈಸೂರು, ೧೯೬೯, ಪು. ೧೮೫-೬

೧೦ ಅದೇ, ಸಂ. ೬, ಮೈಸೂರು, ೧೯೭೧, ಪು. ೨೫೬-೨೫೮

೧೧ ಗಸ್ತಾಫ್ ಸನ್, ಡಿ.ಆರ್.: ಮೇಕಿಂಗ್ ಆಫ್ ಎ ಮಾಡೆಲ್ ಸ್ಟೇಟ್: ೧೮೮೧-೧೯೦೧ ಮೈಕ್ರೋಫಿಲ್ಮ್‌ನಲ್ಲಿರುವ ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ, ನೆಹರೂ ಗ್ರಂಥಾಲಯ, ನವದೆಹಲಿ, ಪು. ೨೨೦

೧೨ ಡೇಯ್ಲಿ ಪೋಸ್ಟ್, ಬೆಂಗಳೂರು ೧೨ನೇ ಮಾರ್ಚಿ ೧೯೮೮-ಸ್ಥಳೀಯ ವೃತ್ತಪತ್ರಿಕೆಗಳ ಮೇಲಿನ ವರದಿಯಲ್ಲಿ (ಕೆ.ಎನ್.ಎನ್.ಪಿ), ತಮಿಳುನಾಡು ರಾಜ್ಯ ಪತ್ರಾಗಾರ. ಟಿ.ಎನ್.ಎ. ಮದರಾಸು.

೧೩ ನರಸಿಂಹ ಅಯ್ಯಂಗಾರ್, ಪಿ.ಎಸ್.: ಫಿಮೇಲ್ ಎಜುಕೇಶನ್; ರಘುನಾಥ ರಾವ್, ಸಿ.ಎಸ್.(ಸಂ): ಮೈಸೂರು, ಮದರಾಸು, ೧೯೦೮, ಪು. ೩೬-೪೨

೧೪ ಅದೇ, ಪು. ೩೯

೧೫ ಮದರಾಸು ಮೇಯ್ಲ್, ೧೦ನೇ ಮಾರ್ಚಿ ೧೮೯೧. ಟಿ.ಎನ್.ಎ

೧೬ ಡೇಯ್ಲಿ ಪೋಸ್ಟ್, ೧೭ನೇ ಮಾರ್ಚಿ ೧೮೮೮. ಮೀನಾಕ್ಷಿ ಅಯ್ಯರ್ ಎಂಬುವವರನ್ನು ೧೮೭೦ರ ದಶಕದಲ್ಲಿ ಪುನಃ ಸೇರಿಸಿಕೊಳ್ಳಬೇಕೆಂಬ ಪ್ರಯತ್ನಗಳನ್ನು ಕೈಬಿಡಬೇಕಾದುದು ಕುತೂಹಲಕಾರಿಯಾಗಿದೆ. ಈ ಪ್ರಸಂಗ ಕುರಿತು ವಿವರಗಳಿಗಾಗಿ ಗಮನಿಸಿ: ವಡಿವೇಲು, ಮೈಸೂರ್ ವರ್ಥೀಸ್, ಮದರಾಸು, ೧೯೦೦. ಪು. ೧೧೭-೧೨೧

೧೭ ಗುಸ್ತಾಫ್ ಸನ್, ಡಿ.ಆರ್.: op. cit. ಪು. ೨೧೯

೧೮ ಮೈಸೂರು ಪ್ರಜಾಪ್ರತಿನಿಧಿ ಸಭೆಯ ಕಲಾಪಗಳು, ೧೮೯೩, ಪು. ೨೦

೧೯ ಬೆಂಗಳೂರ್ ಎಕ್ಸಾಮಿನರ್, ೨೩ನೇ ಮೇ ೧೮೮೧

೨೦ ದಿ ಹಿಂದೂ, ೧೩ನೇ ಮೇ, ೧೮ನೇ ಜುಲೈ ೧೮೯೧

೨೧ ಕರ್ನಾಟಕ ಪ್ರಕಾಶಿಕ, ೨ ಮತ್ತು ೧೬ನೇ ಫೆಬ್ರವರಿ, ೨೩ನೇ ಮಾರ್ಚಿ ೧೮೯೧ ಹಾಗೂ ಖಾಸಿಮ್-ಉಲ್-ಅಕ್ಬರ್. ಉರ್ದು ಸಾಪ್ತಾಹಿಕ, ಬೆಂಗಳೂರು ೯, ೨೬ ಫೆಬ್ರವರಿ ೧೮೯೧.
ತಿಲಕರ ಅಭಿಪ್ರಾಯಗಳಿಗೆ ನೋಡಿ: ಚಾರ್ಲ್ಸ್ ಹೀಸ್ಮತ್. op. cit.

೨೨ ಪ್ರಜಾಪ್ರತಿನಿಧಿ ಸಭೆಯ ಕಲಾಪಗಳು ೧೮೯೧. ಬೆಂಗಳೂರು ೧೮೯೧, ಪು. ೩೬-೩೭

೨೩ ಗುಸ್ತಾಫ್ ಸನ್, ಡಿ.ಆರ್.: op. cit. ಪು. ೨೧೮

೨೪ ಪ್ರಜಾಪ್ರತಿನಿಧಿ ಸಭಾ ಕಲಾಪಗಳು, ಅಕ್ಟೋಬರ್ ೧೮೯೨, ಪು. ೨೪

೨೫ ಅದೇ, ಪು. ೯೩, ರೆವರೆಂಡ್ ಹೇ ಎಂಬುವವರು ಸದಸ್ಯರು.

೨೬ ಚನ್ನಗಿರಿ ಮಲ್ಹಾರಿ ರಾವ್, ಸದಸ್ಯರು. ಪ್ರ.ಪ್ರ.ಸ. ಕಲಾಪಗಳು, ಅಕ್ಟೋಬರ್, ೧೮೯೩,ಪು.೨೭

೨೭ ಅಂಬಳೆ ಅಣ್ಣಯ್ಯ ಪಂಡಿತ ಹಾಗೂ ಎಂ. ವೆಂಕಟಕೃಷ್ಣಯ್ಯ-ಸದಸ್ಯರು, ಅದೇ,ಪು.೪೪-೪೫

೨೮ ಮೊದಲನೆಯವರು ಗಾನ್ಸ್ ಶರೀಫ್ ಸಾಹೇಬರಾದರೆ ಕೊನೆಯವರು ಶ್ರೀನಿವಾಸರಾವ್ ಅವರು, ಅದೇ, ಪು. ೪೫-೪೬

೨೯ ಪರಿಷ್ಕರಣೆಯನ್ನು ಕೇಳಿ ಪ್ರಜಾಪ್ರತಿನಿಧಿ ಸಭೆ ಸದಸ್ಯರು ಸಲ್ಲಿಸಿದ ಮನವಿಗಳು, ಪ್ರ.ಪ್ರ.ಸ. ಕಲಾಪಗಳು, ೧೮೯೩, ಪು. ೧೮೯

೩೦ ಮಲ್ಹಾರಿ ರಾವ್ ಹಾಗೂ ಇತರೆ ೧೬೭ ಸಭೆಯ ಸದಸ್ಯರ ಮನವಿ, ಅದೇ, ಪು. ೧೮೭

೩೧ ಅದೇ, ಪು. ೧೮೮

೩೨ ಪ್ರ.ಪ್ರ.ಸ. ಕಲಾಪಗಳು, ೧೮೯೪, ಪು. ೨೧-೨೨

೩೩ ಅದೇ, ಪು. ೪೫

೩೪ ವಿದೇಶಿ-ರಹಸ್ಯ, ೧ ಜನವರಿ ೧೮೮೮, ಭಾರತ ಸರ್ಕಾರದ ಕಲಾಪಗಳು, ಸಂ. ೨೫-೨೬, ಎನ್.ಎ.ಐ.

೩೫ ನಟರಾಜನ್, ಎಸ್.ಎ.: ಎ ಸೆಂಚುರಿ ಆಫ್ ಸೋಶಿಯಲ್ ರಿಫಾರ್ಮ್ ಇನ್ ಇಂಡಿಯಾ, ಬೊಂಬಾಯಿ, ೧೯೫೯, ಪು. ೧೦೨

೩೬ ಗುಸ್ತಾಫ್ ಸನ್, ಡಿ.ಆರ್: op. cit. ಪು. ೨೨೮

### ಅಧ್ಯಾಯ : ಮೂರು

# ಕರ್ನಾಟಕ ಸ್ವಾತಂತ್ರ್ಯ ಚಳವಳಿಯ ಆರ್ಥಿಕ ಹಿನ್ನೆಲೆ

ರಾಷ್ಟ್ರವಾದದ ಬೆಳವಣಿಗೆಯಲ್ಲಿ ಆರ್ಥಿಕ ಅಂಶಗಳು ಬಹಳ ಮಹತ್ವದ ಪಾತ್ರವಹಿಸುತ್ತವೆ. ರಾಷ್ಟ್ರಾದ್ಯಂತ ಇದು ಹರಡಲೂ ಸಹ ಆರ್ಥಿಕ ಅಂಶಗಳು ಸಹಕಾರಿಯಾಗುತ್ತವೆ. ಪ್ರಚಲಿತವಿರುವ ಆರ್ಥಿಕ ಸ್ಥಿತಿ ಬಹುಪಾಲು ಜನಮನದಲ್ಲಿ ರಾಷ್ಟ್ರೀಯಪ್ರಜ್ಞೆಯನ್ನು ಮೂಡಿಸಲು ಪ್ರೇರಕವಾಗುತ್ತದೆ. ಈ ಮಾತು ಭಾರತದ ಮಟ್ಟಿಗೆ ಸಾಮಾನ್ಯವಾಗಿ ಕರ್ನಾಟಕದ ಮಟ್ಟಿಗೆ ವಿಶೇಷವಾಗಿ ನಿಜವಾಗಿದೆ. ಬ್ರಿಟಿಷರ ಕಾಲದಲ್ಲಿ ಕೃಷಿಯ ಮೇಲೆ ಆರ್ಥಿಕ ಪರಿಸ್ಥಿತಿಯು ಅವಲಂಬಿತವಾಗಬೇಕಾದದ್ದು ಅನಿವಾರ್ಯವಾಗಿದ್ದು ಪರಿಸ್ಥಿತಿ ಅಸ್ಥಿರವಾಗಿತ್ತು ಎಂಬುದು ನಿಜ. ಜೊತೆಗೆ ಭಾರತದ ಹಿಂದುಳಿದಿರುವಿಕೆ ಹಾಗೂ ಬಡತನಕ್ಕೆ ವಸಾಹತುಶಾಹಿಯೂ ಕಾರಣವಾಗಿದೆ. ಭಾರತದ ಆರ್ಥಿಕ ಅಭಿವೃದ್ಧಿಗೆ ಮುಖ್ಯವಾದ ತೊಡಕೆಂದರೆ ಸಾಮ್ರಾಜ್ಯಶಾಹಿ ಎನ್ನುವುದನ್ನು ನಾವು ಮರೆಯುವಂತಿಲ್ಲ.

ಒಂದು ರಾಷ್ಟ್ರದ ಸಂಪನ್ಮೂಲವನ್ನು ಅಭಿವೃದ್ಧಿಪಡಿಸಬೇಕಾದರೆ ಸರ್ಕಾರವು ಆ ದಿಸೆಯಲ್ಲಿ ಕಾರ್ಯ ಪ್ರವೃತ್ತವಾಗಬೇಕು. ಆದರೆ ಪರಕೀಯರ ಆಳ್ವಿಕೆಯಲ್ಲಿದ್ದ ಒಂದು ವಸಾಹತುವಾದ್ದರಿಂದ ಭಾರತದ ಸ್ಥಿತಿ ಅನುಕೂಲಕರವಾಗಿರಲಿಲ್ಲ. ಈ ಪರಿಸ್ಥಿತಿಯು ಅದರ ಆರ್ಥಿಕ ಹಿಂದುಳಿದಿರುವಿಕೆಯಲ್ಲಿ ಪ್ರಕಟವಾಯಿತು. ಸಾಮ್ರಾಜ್ಯಶಾಹಿ ದೊರೆಗಳ ಇಚ್ಛೆಗನುಗುಣವಾಗಿ ಭಾರತದ ಕೈಗಾರಿಕೀಕರಣವು ಕುಂಠಿತವಾಯಿತಲ್ಲದೆ ಬ್ರಿಟಿಷ್ ಆರ್ಥಿಕತೆಗೆ ಅನುಕೂಲವಾಗಲೋಸುಗ ದೇಶದ ವ್ಯವಸ್ಥಿತವಾದ ಶೋಷಣೆ ನಡೆದು ಹಿಂದುಳಿಯುವಂತಾಯಿತು.

ಬ್ರಿಟಿಷ್ ಆಳ್ವಿಕೆಯಲ್ಲಿ ವಿಶೇಷವಾಗಿ ಕೃಷಿಕರ ಹಿತರಕ್ಷಣೆಯಾಗದುದು ನಮ್ಮ ಗಮನಕ್ಕೆ ಬರುತ್ತದೆ. ಜನತೆ ಬಡತನದಲ್ಲಿತ್ತೇ ವಿನಾ ದೇಶವಲ್ಲ ಎಂಬುದನ್ನು ಒಪ್ಪಬೇಕು. ದೇಶದ ಪ್ರಚಲಿತ ಪರಿಸ್ಥಿತಿಯನ್ನು ಗಮನಿಸಿದ ಚಿಂತಕರು ಆರ್ಥಿಕ ಪರಿಸ್ಥಿತಿಯನ್ನು ಉತ್ತಮಪಡಿಸುವುದರ ಮೂಲಕ ಜನತೆಯ ಸ್ಥಿತಿಗತಿಗಳನ್ನು ಉತ್ತಮಪಡಿಸಲಾಗದೆ ಎಂದು ಆಲೋಚಿಸಲು ಮುಂದಾದರು. ಸಿದ್ಧವಾದ ಪದಾರ್ಥಗಳ ವಿಷಯದಲ್ಲಿ ಭಾರತವು ಬ್ರಿಟನ್ನಿನ ಮೇಲೆ ಅವಲಂಬಿಸಬೇಕಾದ ಪರಿಸ್ಥಿತಿಯನ್ನು ಗಮನಿಸಿ ಜನರ ಮನಸ್ಸಿನಲ್ಲಿ ಅತೃಪ್ತಿಯುಂಟಾಯಿತು. ವಿದೇಶಿ ವ್ಯಾಪಾರ ನಿರಂತರವಾಗಿ ಬೆಳೆಯುತ್ತಿದ್ದುದು ಗಮನಕ್ಕೆ ಬಂದಿತಲ್ಲದೆ, ಭಾರತದಿಂದ ರಫ್ತಾಗುತ್ತಿದ್ದ ಪದಾರ್ಥಗಳಿಗೆ ಬಹಳ ಕಡಿಮೆ ಬೆಲೆ ದೊರಕುತ್ತಿತ್ತು. ಆದರೆ ಕೈಗಾರಿಕೆಯಲ್ಲಿ ಮುಂದುವರಿದ ಇತರೆ ರಾಷ್ಟ್ರಗಳು ಸಿದ್ಧಪಡಿಸಿದ ಪದಾರ್ಥಗಳ ಮಾರಾಟದಿಂದ ಹೆಚ್ಚು ಲಾಭ ಗಳಿಸುತ್ತಿದ್ದವು. ರಾಷ್ಟ್ರಪ್ರೇಮಿಗಳಾದ ಭಾರತೀಯರನೇಕರಿಗೆ ಅನ್ನಿಸಿದ್ದೇನೆಂದರೆ, ತಮ್ಮ ರಾಷ್ಟ್ರಕ್ಕೆ ಈ ಲಾಭ ಹೇಗೆ ಸೇರ್ಪಡೆಯಾಗುತ್ತಿಲ್ಲ ಎಂದು. ವಿದೇಶಿ ಬಂಡವಾಳದಿಂದ ಈ ಕೈಗಾರಿಕೋದ್ಯಮ ನಡೆಯುತ್ತಿದ್ದರೂ ಪೌರ್ವಾತ್ಯರ ಕೌಶಲ್ಯವನ್ನು ಇಲ್ಲಿ ಅವಲಂಬಿಸಿದ್ದವು ಎಂಬುದು ನಿಜವಾಗಿದೆ.

ಜನರ ಮನಸ್ಸಿನಲ್ಲಿ ಹೊಸಬಗೆಯ ಆಲೋಚನೆ ಮೂಡತೊಡಗಿತು. ಸಮಸ್ಯೆಗಳ ಬೇರುಗಳು ಅಡಗಿರುವುದು ಎಲ್ಲಿ ಎಂದು ಚಿಂತಿಸತೊಡಗಿದರು. ಸರ್ವಾಧಿಕಾರಿಯಾಗಿದ್ದ ವಿದೇಶಿ ಆಡಳಿತದ ಬದಲು ಜನತೆಯ ಆಡಳಿತವನ್ನು ತರಲು ಜನರು ಉದ್ದೇಶಿಸಿದರು; ಇನ್ನೊಂದು ರೀತಿಯಲ್ಲಿ ಹೇಳುವುದಾದರೆ, ಭಾರತೀಯರ ಮನಸ್ಸಿನಲ್ಲಿ ಪರಕೀಯರ ಆಳ್ವಿಕೆಯಿಂದ ಬಿಡುಗಡೆ ಹೊಂದುವ ಮೊದಲ ಪ್ರಯತ್ನಗಳು ಅಂಕುರವಾಗತೊಡಗಿದವು.

ಕರ್ನಾಟಕದ ಚಾರಿತ್ರಿಕ ಹಿನ್ನೆಲೆಯನ್ನು ಗಮನಿಸುವುದಾದರೆ ವಿಜಯನಗರ ಸಾಮ್ರಾಜ್ಯದ ಅವನತಿಯ ನಂತರ ಮೈಸೂರು ಪ್ರಾಂತ್ಯವು ಒಡೆಯರ ಆಳ್ವಿಕೆಗೆ ಒಳಗಾಯಿತು. ಇದರ ತರುಣದಲ್ಲಿ ಹೈದರಾಲಿ ಹಾಗೂ ಅವನ ಮಗ ಟಿಪ್ಪು ಸುಲ್ತಾನನ ಆಳ್ವಿಕೆ ಸ್ವಲ್ಪಕಾಲ ನಡೆಯಿತು. ೧೭೯೯ರಲ್ಲಿನ ನಾಲ್ಕನೇ ಮೈಸೂರು ಯುದ್ಧದಲ್ಲಿ ಟಿಪ್ಪು ಸುಲ್ತಾನನ ಪತನವಾದಾಗ ಒಡೆಯರು ಮತ್ತೆ ಅಧಿಕಾರಕ್ಕೆ ಬಂದರು. ದೇಶೀಯ ರಾಜರು ಸಿಂಹಾಸನವೇರಿದರೂ, ಮೈಸೂರು ರಾಜ್ಯವು ಬ್ರಿಟಿಷರ ಅಧೀನದಲ್ಲಿ ಬಂದಿತು. ಬ್ರಿಟಿಷ್ ಪರಮಾಧಿಕಾರಕ್ಕೆ ವಾರ್ಷಿಕ ಕಪ್ಪವನ್ನು ಕೊಡುವುದು ಒಡೆಯರು ಅಧಿಕಾರ ವಹಿಸಿಕೊಳ್ಳುವುದಕ್ಕೆ ಪೂರ್ವಭಾವಿ ಶರತ್ತಾಗಿದ್ದಿತು. ಆಗಿನ ಪರಿಸ್ಥಿತಿಯಲ್ಲಿ ಭೂ ಕಂದಾಯವೇ ವರಮಾನದ ಪ್ರಧಾನ ಮೂಲವಾಗಿದ್ದು, ಇದು ಒಟ್ಟು ವರಮಾನದ ಶೇ. ೮೮ ಭಾಗವಾಗಿದ್ದಿತು. ಟಿಪ್ಪು ಕಾಲದಲ್ಲಿ ರೈತರು ವಿಪರೀತ ಕಂದಾಯ ತೆತ್ತು ಬಳಲಿದ್ದ ಪ್ರಯುಕ್ತ ೧೭೯೯ರ ನಂತರ ಪೂರ್ಣಯ್ಯನವರೇ ದಿವಾನರಾಗಿ ಮುಂದುವರಿದ ಕಾರಣ ಪರಿಷ್ಕೃತ ತೆರಿಗೆ ದರಗಳನ್ನು ವಿಧಿಸಿದರು. ಆದರೆ ಇದು ವಾಸ್ತವವಾಗಿ ಅನುಷ್ಠಾನಕ್ಕೆ ಬರಲಿಲ್ಲ. ಹೊಸ ದರಗಳು ಅಂದಾಜು ಖುಷ್ಕಿ ಜಮೀನಿನ ಬೆಳೆಯಲ್ಲಿ ಮೂರನೇ ಒಂದು ಭಾಗವಾಗಿಯೂ ತರಿ ಅಥವಾ ಭತ್ತದ ಬೆಳೆಯ ಅರ್ಧ ಭಾಗವಾಗಿಯೂ ವಿಧಿಸಲ್ಪಟ್ಟವು.[೧]

ಮೈಸೂರು ಪ್ರಾಂತ್ಯದಲ್ಲಿ ಭಿನ್ನ ಭಿನ್ನವಾದ ಭೂ ಅವಧಿ (land tenure) ಪದ್ಧತಿ ಜಾರಿಯಲ್ಲಿದ್ದು ೧೭೯೯ರಲ್ಲಿ ಒಡೆಯರ ಆಳ್ವಿಕೆ ಪುನರಾರಂಭವಾದಾಗಲೂ ಏಕರೂಪವಾದ ವ್ಯವಸ್ಥೆ ಅನುಷ್ಠಾನಕ್ಕೆ ಬರಲಿಲ್ಲ. ಮೈಸೂರು ಆಡಳಿತವನ್ನು ಬ್ರಿಟಿಷ್ ಸರ್ಕಾರ ೧೮೩೧ರಲ್ಲಿ ನೇರವಾಗಿ ವಹಿಸಿಕೊಳ್ಳುವ ತನಕ ಒಡೆಯರ ಆಳ್ವಿಕೆ ಇತ್ತು. ಬ್ರಿಟಿಷರು ಆಡಳಿತ ಸೂತ್ರವನ್ನು ಒಡೆಯರಿಂದ ಪಡೆದು ತಾವೇ ಹಿಡಿದುಕೊಳ್ಳುವುದಕ್ಕೆ ಅನೇಕ ಕಾರಣಗಳಿದ್ದವು. ೧೭೯೯ರ ಒಪ್ಪಂದದ ಪ್ರಕಾರ ಮೈಸೂರು ಆಡಳಿತ ಬ್ರಿಟಿಷ್ ಸರ್ಕಾರಕ್ಕೆ ಕಾಣಿಕೆ ಕೊಡುವುದನ್ನು ನಿಲ್ಲಿಸಿದುದು, ಭೂಕಂದಾಯ ವಸೂಲಿ ಸ್ಥಗಿತವಾದುದು, ರಾಜ್ಯಸರ್ಕಾರದ ಸಂಪನ್ಮೂಲ ಕಡಿತಗೊಂಡದ್ದು, ದುಂದುವೆಚ್ಚ ಹಾಗೂ ಸೈನಿಕರ ಸಂಬಳ ನೀಡದುದು ಮುಂತಾದ ಕಾರಣಗಳಿವೆ.[೨]

ನೇರವಾಗಿ ಬ್ರಿಟಿಷ್ ಸರ್ಕಾರ ಮೈಸೂರಿನ ಆಡಳಿತವನ್ನು ವಹಿಸಿಕೊಳ್ಳಲು ಕಾರಣವಾದ ಒಂದು ಘಟನೆಯೆಂದರೆ ನಗರ ದಂಗೆ. ಮೈಸೂರಿನ ನಗರ ವಿಭಾಗದಲ್ಲಿ ಸ್ಫೋಟಿಸಿದ ಕೃಷಿಕರ ಅತೃಪ್ತಿಯೇ ಈ ದಂಗೆಯ ರೂಪದಲ್ಲಿ ಪ್ರಕಟವಾಯಿತು. ಭೂ ಅವಧಿ ಪದ್ಧತಿಯು ಸಂಪೂರ್ಣವಾಗಿ ಇಲ್ಲವಾಗಿ ಅದರ ಜಾಗದಲ್ಲಿ ಅತಿಹೆಚ್ಚು ಹರಾಜು ಕೂಗಿದವರಿಗೆ ಭೂಮಿ ಸಾಗುವಳಿ ಅವಕಾಶ ದೊರೆಯುವಂತಾಯಿತು. ಹೆಚ್ಚು ತೆರಿಗೆ ವಸೂಲಿ ಮಾಡಲು ಅನುಕೂಲವಾದ ಕಾರಣದಿಂದ ಈ ಪದ್ಧತಿಯಲ್ಲಿ ರೈತರು ಹೆಚ್ಚು ಕಿರುಕುಳ ಅನುಭವಿಸಿದರು. ಇದೆಲ್ಲದರ ಒಟ್ಟು ಪರಿಣಾಮವೆಂದರೆ, ಅಗಾಧ ಪ್ರಮಾಣದ ಭೂ ಕಂದಾಯ ಬಾಕಿ ಉಳಿಯಿತು. ತಮ್ಮ ಮುಂಚಿನ ಸುಸ್ಥಿತಿಗೆ ಹೋಲಿಸಿದರೆ ನಗರದ ರೈತರ ಆರ್ಥಿಕ ಪರಿಸ್ಥಿತಿಯು ಬಹಳ ಚಿಂತಾಜನಕವಾಯಿತು. ಸ್ಥಳೀಯ ನಾಯಕರಾದ ಬೂದಿ ಬಸಪ್ಪ ಎಂಬುವವರ ನಾಯಕತ್ವದಲ್ಲಿ ರೈತರು ಸಭೆ ಸೇರತೊಡಗಿದರು. ತನಗೆ ಬೆಂಬಲ ನೀಡಿದ ಪಕ್ಷದಲ್ಲಿ ರೈತರು ಕೊಡಬೇಕಾಗಿರುವ

ಕಂದಾಯದ ಬಾಕಿಯನ್ನು ಮನ್ನಾ ಮಾಡಿಸುವುದಾಗಿ ಈ ನಾಯಕರು ಅವರಿಗೆ ಮಾತುಕೊಟ್ಟರು. ಪ್ರತಿಭಟನೆಯ ಚಿನ್ಹೆಯಾಗಿ ರೈತರು ಗ್ರಾಮಕ್ಕೆ ಮೆರವಣಿಗೆಯಲ್ಲಿ ತೆರಳುವಾಗ ಅವರನ್ನು ಚದುರಿಸಲು ಅವರ ಮೇಲೆ ಆಕ್ರಮಣ ಮಾಡಲಾಯಿತು. ಈ ಅತೃಪ್ತಿ ಹಾಗೂ ದಂಗೆಯ ಪ್ರವೃತ್ತಿ ದೊಡ್ಡಬಳ್ಳಾಪುರ, ಅರಕಲಗೂಡು ಹಾಗೂ ಚಿತ್ರದುರ್ಗದ ರೈತರಲ್ಲಿಯೂ ಕಾಣಿಸಿಕೊಂಡಿತು. ಈ ಪರಿಸ್ಥಿತಿ ಯಾವ ಮಟ್ಟಕ್ಕೆ ಹೋಯಿತೆಂದರೆ ರೈತರು ಹೆಚ್ಚೂ ಕಡಿಮೆ ತಮ್ಮ ಕೃಷಿ ಕಾಯಕವನ್ನು ನಿಲ್ಲಿಸಿಯೇಬಿಟ್ಟರು.

ನಗರ ದಂಗೆಯನ್ನು ಬ್ರಿಟಿಷರು ದಮನ ಮಾಡಿದರೆಂಬುದು ನಿಜವಾದರೂ ಮಹಾರಾಜರು ಹತಾಶೆಯಿಂದ ಕೋರಿಕೊಂಡ ನಂತರವೇ ಅವರು ಪರಿಸ್ಥಿತಿಯ ಹತೋಟಿಗೆ ಹಾಜರಾದದ್ದು. ಮುಂದೆ ಒದಗಬಹುದಾದ ವಿಪತ್ತಿನ ಅರಿವು ಬ್ರಿಟಿಷರಿಗೆ ಇದ್ದಿತಾದರೂ ಪ್ರಜ್ಞಾಪೂರ್ವಕವಾಗಿಯೇ ಅವರು ಮಹಾರಾಜರಿಗೆ ಉತ್ತಮ ಸಲಹೆ ಸೂಚನೆ ಕೊಟ್ಟಿರಲಿಲ್ಲ. ತರುವಾಯದಲ್ಲಿ ತಾವು ಪರಿಸ್ಥಿತಿಯ ಹತೋಟಿಗೆ ಪ್ರಯತ್ನಿಸಲಿಲ್ಲವೆಂಬುದನ್ನು ಅಲ್ಲಗಳೆಯುತ್ತಾ ಮಹಾರಾಜರಿಗೆ ಪೂರ್ವಭಾವಿಯಾಗಿ ಎಚ್ಚರಿಕೆ ನೀಡಿರುವುದಾಗಿಯೂ ಸಮರ್ಥಿಸಿಕೊಂಡರು.

೧೮೩೧ರಲ್ಲಿ ಬ್ರಿಟಿಷರೇ ನೇರವಾಗಿ ಮೈಸೂರಿನ ಆಡಳಿತವನ್ನು ವಹಿಸಿಕೊಂಡು ಆಯುಕ್ತರನ್ನು ನೇಮಿಸಿದರು. ಆದಾಗ್ಯೂ, ತರುವಾಯದಲ್ಲಿ ಅವರು ಭೂಅಂದಾಜು ಹಾಗೂ ಭೂಅವಧಿಯ ವಿಷಯವಾಗಿ ಏಕರೂಪ ಪದ್ಧತಿಯನ್ನು ತರಲು ಕೆಲವು ಪ್ರಯತ್ನಗಳನ್ನು ಮಾಡಿದ್ದು ನಿಜ. ಆದರೆ ಈ ಕ್ರಮ ಕೈಗೊಳ್ಳುವಾಗಲೂ ನಿರಂತರವಾಗಿ ಹಣ ಬರುವ ಮೂಲ ಇದಾಗುವುದರಿಂದ ಈ ಕೆಲಸವನ್ನು ಮಾಡುವುದು ಲಾಭಕರವೆಂದು ಅವರಿಗೆ ತಿಳಿದಿತ್ತು.

ಮೈಸೂರು ರಾಜ್ಯದ ಹಣಕಾಸಿನ ಪರಿಸ್ಥಿತಿ ಹದಗೆಡುತ್ತಿರುವ ಸಂಗತಿ ಚೆನ್ನಾಗಿ ತಿಳಿದಿದ್ದರೂ ಸಹ– ಬ್ರಿಟಿಷ್ ರೆಸಿಡೆಂಟರು ಮದರಾಸು ಸರ್ಕಾರಕ್ಕೆ ಈ ವಿಷಯವಾಗಿ ವರದಿ ಸಲ್ಲಿಸಿದ್ದರು– ಆ ದಿಶೆಯಲ್ಲಿ ಯಾವುದೇ ಮುಂಜಾಗ್ರತಾ ಕ್ರಮವನ್ನು ತೆಗೆದುಕೊಳ್ಳದ್ದರಿಂದ ನೇರ ಆಡಳಿತವನ್ನು ವಹಿಸಿಕೊಳ್ಳುವ ಸಂಚು ಬ್ರಿಟಿಷರದಾಗಿತ್ತು ಎನ್ನುವುದು ಖಚಿತವಾಗುತ್ತದೆ. ಮದರಾಸು ಸರ್ಕಾರ ತಟಸ್ಥವಾಗಿತ್ತು. ಗವರ್ನರ್ ಆಗಿದ್ದ ಲಾರ್ಡ್ ಮನ್ರೊ ಅವರು ಮಾತ್ರ ಸೆಪ್ಟಂಬರ್ ೧೮೨೫ರಲ್ಲಿ ಒಮ್ಮೆ ಮೈಸೂರಿಗೆ ಭೇಟಿಕೊಟ್ಟರು. ಮುಖ್ಯವಾಗಿ ವೆಚ್ಚವನ್ನು ಕಡಿಮೆ ಮಾಡಬೇಕೆಂದು ಮಹಾರಾಜರಿಗೆ ಎಚ್ಚರಿಕೆ ಕೊಡುವುದಕ್ಕಾಗಿ.

ಭೂಕಂದಾಯವೇ ಮುಖ್ಯವಾಗಿ ಕೃಷಿಕರ ಅತೃಪ್ತಿಯನ್ನು ಬಡಿದೆಬ್ಬಿಸಲು ಕಾರಣವಾಯಿತು. ವಿಧಿಸಿದ ಕಂದಾಯದ ಭಾರವನ್ನು ತಾಳಲಾರದೆ ಎಷ್ಟೋ ಮಂದಿ ರೈತರು ತಮ್ಮ ಜಮೀನನ್ನು ತೊರೆದುಬಿಟ್ಟ ಉದಾಹರಣೆಗಳು ಸಿಕ್ಕುತ್ತವೆ. ತೆರಿಗೆ ಶುಲ್ಕದ ಪ್ರಮಾಣ ಹೆಚ್ಚಾಗಿದ್ದ ಕಾರಣ ರೈತರು ಸಾಲ ಮಾಡಬೇಕಾದ ಪರಿಸ್ಥಿತಿ ಒದಗಿತು.

ಭೂಕಂದಾಯದ ವಿಷಯದಲ್ಲಿ, ದೇಶೀಯ ರಾಜರು ಸಂಪೂರ್ಣವಾಗಿ ಅವ್ಯವಸ್ಥೆ ಸೃಷ್ಟಿಸಿದ ಕಾರಣ ಒಂದೇ ನಗರ ದಂಗೆಗೆ ಪ್ರೇರಕವಾಗಲಿಲ್ಲ, ತೆರೆಯ ಮರೆಯಲ್ಲಿದ್ದುಕೊಂಡು ಈ ಎಲ್ಲ ಅವ್ಯವಸ್ಥೆಗೆ ಕಾರಣವಾದ ಬ್ರಿಟಿಷರ ಸಾಮ್ರಾಜ್ಯ ನೀತಿಯನ್ನು ವಿರೋಧಿಸುವುದೂ ಕೂಡ ಈ ದಂಗೆಯ ಹಿನ್ನೆಲೆಯಾಗಿರುವುದನ್ನು ನಾವು ಕಾಣುತ್ತೇವೆ. ಆದ್ದರಿಂದ ದೇಶೀಯ ರಾಜರ ವಿರುದ್ಧ ಬಂಡೇಳುವಂಥ ಪ್ರತ್ಯೇಕ ಪ್ರಯತ್ನವೆಂದು ನಗರ ದಂಗೆಯನ್ನು ತಳ್ಳಿಹಾಕುವಂತಿಲ್ಲ. ವಿಪರೀತವಾದ ಭೂಕಂದಾಯ ವಸೂಲಿಯ ಕಾರಣದಿಂದ ಜನಮನದಲ್ಲಿ ಎದ್ದ ಕ್ಷೋಭೆಯು ದಂಗೆಯ ರೂಪದಲ್ಲಿ ಬಹಿರಂಗವಾಗಿ ಪ್ರಕಟವಾಯಿತು. ಆಗಲೇ

ಸಂಕೀರ್ಣವಾಗಿದ್ದ ಸನ್ನಿವೇಶಕ್ಕೆ ಇನ್ನಿತರೇ ಸಂಗತಿಗಳೂ ಕೂಡಿಕೊಂಡವು. ರಾಜರ ದುಂದುವೆಚ್ಚ ಹಾಗೂ ಆಡಳಿತದಲ್ಲಿ ಅಸಾಮರ್ಥ್ಯ ಇವುಗಳ ದೆಸೆಯಿಂದಾಗಿ ಪ್ರಗತಿಯ ಹಾದಿಯಲ್ಲಿದ್ದಂಥ ದೇಶವೊಂದು ವಿನಾಶದ ಅಂಚಿಗೆ ಜಾರುವಂತಾಯಿತು. ಅಪಾತ್ರರಾದ ಜನರಿಗಾಗಿ ಖಜಾನೆ ಹಣ ಬರಿದಾಯಿತು. ಸೈನಿಕರ ಸಂಬಳ ಬಾಕಿ ಉಳಿಯಿತು, ಇದರ ಜೊತೆಗೆ ಕಾಲಕ್ಕೆ ಸರಿಯಾಗಿ ಮಳೆಯಾಗದೆ ಕ್ಷಾಮ ಪರಿಸ್ಥಿತಿ ತಲೆದೋರಿತು. ಈ ಎಲ್ಲ ಸಂಗತಿಗಳು ಕೂಡಿಕೊಂಡು ಆರ್ಥಿಕ ಬಿಕ್ಕಟ್ಟಿನ ಪರಿಸ್ಥಿತಿ ನಿರ್ಮಾಣವಾದಾಗ ಮಹಾರಾಜರ ಸಲಹೆಗಾರರು ಇದರ ಕಾರಣಗಳನ್ನು ತಿಳಿಯಲಾರದೆ ಹೋದರು. ಗತ್ಯಂತರವಿಲ್ಲದೆ ಸರ್ಕಾರವು ಭೂಕಂದಾಯದ ಮೂಲಕವಾಗಿ ಸಂಪನ್ಮೂಲ ಸಂಗ್ರಹಣೆ ಮಾಡಿ ಬ್ರಿಟಿಷ್ ಸರ್ಕಾರಕ್ಕೆ ಸಲ್ಲಿಸಬೇಕಾಗಿದ್ದ ಕಾಣಿಕೆಯನ್ನು ಕೊಡಲು ತೀರ್ಮಾನಿಸಿ ಆ ದಿಶೆಯಲ್ಲಿ ಮುಂದುವರಿಯಿತು. ಇದರ ಪರಿಣಾಮದಿಂದಾಗಿ ರೈತರು ಬಡವರಾದರು, ಜೊತೆಗೆ ಸರ್ಕಾರದ ದಮನಕಾರಿ ಪ್ರವೃತ್ತಿಯಡಿಯಲ್ಲಿ ಬಹಳ ಬಳಲಿದರು. ಇದರಿಂದ ಕೃಷಿಕರ ದಂಗೆ ಪ್ರಾರಂಭವಾಯಿತು. ಹಾಗಾಗಿ ಒಂದರ್ಥದಲ್ಲಿ ನಗರ ದಂಗೆಯನ್ನು ಮೈಸೂರಿನ ಆರ್ಥಿಕ ರಾಷ್ಟ್ರೀಯವಾದದ ನಾಂದಿ ಎಂದು ಬಣ್ಣಿಸಬಹುದಾಗಿದೆ.[೬]

## ಕೃಷಿಯ ವಾಣಿಜ್ಯೀಕರಣ

ಕಂದಾಯದ ಪ್ರಮಾಣ ಹೆಚ್ಚಾದ ಪರಿಸ್ಥಿತಿಯಲ್ಲೂ ಸಹ ಕೂಡಿಬಂದ ವಿದ್ಯಮಾನಗಳಿಂದಾಗಿ ಜನರು ಕೃಷಿಯ ಕಡೆಗೇ ಹೆಚ್ಚು ಹೆಚ್ಚು ತಿರುಗಿದರೇ ಹೊರತು, ತಯಾರಿಕೆ ಕಡೆ ಅಲ್ಲ. ಇದರ ಜೊತೆಗೆ ಭಾರತೀಯ ಕುಶಲಕರ್ಮಿಗಳು ತಯಾರಿಸಿದ ವಸ್ತುಗಳನ್ನು ಬ್ರಿಟನ್ನಿನಲ್ಲಿ ಕಡಿಮೆ ಬೆಲೆಗೆ ಮಾರುವಂಥ ವಾತಾವರಣ ನಿರ್ಮಾಣವಾಗಿತ್ತು. ಇದಕ್ಕೆ ಮೊದಲು ಏಷಿಯಾ ಹಾಗೂ ಯೂರೋಪಿನಲ್ಲೆಲ್ಲಾ ಭಾರತೀಯ ವಸ್ತುಗಳ ಖ್ಯಾತಿ ಹೆಚ್ಚಿತ್ತು. ನೂಲುವ ಹಾಗೂ ನೇಯುವ ಕಲೆ ತಲೆತಲಾಂತರದಿಂದ ನೂರಾರು ಮಂದಿಗೆ ಉದ್ಯೋಗ ಒದಗಿಸಿತ್ತಾದರೂ ಬದಲಾದ ಪರಿಸ್ಥಿತಿಯಲ್ಲಿ ಆ ಕಲೆ ಅವಸಾನದ ಘಟ್ಟವನ್ನು ಮುಟ್ಟುವಂತಾಯಿತು. ಮೊದಲು ಸ್ಥಿತಿವಂತರಾಗಿದ್ದ ಕುಟುಂಬದವರು ಈಗ ನಿರ್ಗತಿಕರಾಗುವಂತಾಯಿತು. ಕೃಷಿಯೇ ಈಗ ಉಳಿದಿರುವ ಏಕೈಕ ಪರ್ಯಾಯ ವ್ಯವಸ್ಥೆಯಾಗಿ ಪರಿಣಮಿಸಿದ್ದರಿಂದ ಎಲ್ಲ ಕಡೆ ಕೃಷಿಯನ್ನು ವಿಸ್ತರಿಸಬೇಕಾಗಿ ಬಂತು, ತಯಾರಿಕೆಯನ್ನು ಸಂಪೂರ್ಣ ನಿಲ್ಲಿಸಬೇಕಾಯಿತು.[೭] ಮುಖ್ಯ ಬೆಳೆಗಳನ್ನು ಗಮನದಲ್ಲಿಟ್ಟುಕೊಂಡು ಕೃಷಿ ಭೂಮಿಯನ್ನು ವಿಸ್ತರಿಸಲು ಎಲ್ಲ ಪ್ರಯತ್ನಗಳನ್ನು ಮಾಡಬೇಕಾಯಿತು. ಕೃಷಿಯೋಗ್ಯ ಭೂಮಿಯೇನೂ ಅತಿ ವೇಗದಲ್ಲಿ ವಿಸ್ತರಣೆಯಾಯಿತು, ಆದರೆ ಹೆಚ್ಚುವರಿ ಬೆಳೆ ವಿದೇಶಕ್ಕೆ ರಫ್ತಾಯಿತು. ರಾಷ್ಟ್ರೀಯ ಸಂಪತ್ತು ಹೆಚ್ಚಾದ ಕಾರಣ ರಫ್ತು ಹೆಚ್ಚಾಯಿತು ಎಂದು ಸೂಚಿಸುವುದು ಕೇವಲ ಭ್ರಮಾತ್ಮಕವಾಗುತ್ತದೆ.

ಯಾವ ಐಹಿಕ ಸಂಪತ್ತಿನ ಅಭಿವೃದ್ಧಿ ಆರ್ಥಿಕ ಸ್ಥಿತಿಯ ಮೇಲೆ ಅವಲಂಬಿಸಿರುತ್ತದೆ; ಅಂಥದ ಆರ್ಥಿಕ ಪರಿಸ್ಥಿತಿ ದೇಶದಲ್ಲಿ ಆಗ ಇರಲಿಲ್ಲ. ಹಾಗಾಗಿ ರಾಷ್ಟ್ರವಾದಿ ಚಟುವಟಿಕೆ ಹಚ್ಚಲು ಆಗ ಇದ್ದ ಆರ್ಥಿಕ ಪರಿಸ್ಥಿತಿಯೂ ಕಾರಣ ಎನ್ನುವುದನ್ನು ನೆನಪಿಡಬೇಕು. ಮೇಲಿಂದ ಮೇಲೆ ಉಂಟಾಗುವ ಬರ ಪರಿಸ್ಥಿತಿ, ಕೃಷಿಕರ ಮುಷ್ಕರ, ಭೂ ಒಡೆಯರು ಹಾಗೂ ಹಿಡುವಳಿದಾರರ ನಡುವಿನ ಕಲಹ, ಬ್ರಿಟಿಷರ ಕಂದಾಯ ನೀತಿ ಹಾಗೂ ಅವರ ಶೋಷಣೆ ಹಾಗೂ ದುಂದುವೆಚ್ಚದ ಆಪಾದನೆ– ಇತ್ಯಾದಿ ಎಲ್ಲ ಅಂಶಗಳೂ ರಾಷ್ಟ್ರವಾದಿ ಭಾವನೆ ಬೆಳೆಯಲು ಪೋಷಕವಾಗಿದ್ದವು. ತಮ್ಮ ಆರ್ಥಿಕ ಪರಿಸ್ಥಿತಿ ಸಂಪೂರ್ಣವಾಗಿ ಕುಂಠಿತವಾಗಿದೆಯೆಂದು ಭಾರತೀಯರಿಗೆ ಮನದಟ್ಟಾಗಿತ್ತು. ಈ ವಿಷಯವಾಗಿ ವೆರಾ ಆನ್‌ಸ್ಟೀ ಹೇಳುವ ಪ್ರಕಾರ ಭಾರತದಲ್ಲಿ ಆರ್ಥಿಕ ಬೆಳವಣಿಗೆ ಕುಂಠಿತವಾದ ಸಂಗತಿ ವಿಚಿತ್ರವೆನಿಸುತ್ತದೆ. ಏಕೆಂದರೆ, ೧೮ನೇ ಶತಮಾನದವರೆಗೆ ಆರ್ಥಿಕ ಪರಿಸ್ಥಿತಿ ಸುಸ್ಥಿರವಾಗಿಯೇ ಇತ್ತು. ಇದಕ್ಕೆ ಕಾರಣ ಭಾರತೀಯ ಉತ್ಪಾದನಾ

ವಿಧಾನ ಸಾಪೇಕ್ಷವಾಗಿ ಮುಂದುವರಿದ ವಿಧಾನವೇ ಆಗಿದ್ದು, ಜಗತ್ತಿನ ಯಾವುದೇ ಭಾಗದಲ್ಲಿ ಪ್ರಚಲಿತವಿದ್ದ ಕೈಗಾರಿಕಾ ಹಾಗೂ ವಾಣಿಜ್ಯ ಸಂಘಟನೆಗೆ ಹೋಲಿಸಬಹುದಾಗಿತ್ತು.[೫]

೧೮ನೇ ಶತಮಾನದ ಕೈಗಾರಿಕಾ ಕ್ರಾಂತಿಯ ಪರಿಣಾಮವಾಗಿ ಇಂಗ್ಲೆಂಡಿನಲ್ಲಿ ಕಂಡುಬಂದ ರೀತಿಯಲ್ಲಿ ಭಾರತದಲ್ಲಿ ಬದಲಾವಣೆ ಕಾಣಲಿಲ್ಲ. ಪಶ್ಚಿಮದ ಕೈಗಾರಿಕಾ ಕ್ರಾಂತಿಯಿಂದ ಭಾರತೀಯ ವ್ಯಾಪಾರ ಹಾಗೂ ಕರಕುಶಲ ಕೈಗಾರಿಕೆಯ ಮೇಲೆ ಋಣಾತ್ಮಕವಾದ ಪರಿಣಾಮವಾಯಿತು.

೧೭೯೯ರ ಟಿಪ್ಪುವಿನ ಪತನದ ನಂತರ ಕರ್ನಾಟಕದಲ್ಲಿ ಆರ್ಥಿಕಾಭಿವೃದ್ಧಿಗೆ ಪರಿಸ್ಥಿತಿ ಅನುಕೂಲಕರವಾಗಿರಲಿಲ್ಲ. ರಾಜಕೀಯವಾದ ಅವಲಂಬನೆಯ ಕಾರಣದಿಂದಾಗಿ ಕರ್ನಾಟಕದ ಆರ್ಥಿಕಾಭಿವೃದ್ಧಿ ಕುಂಠಿತವಾಯಿತು. ರಾಷ್ಟ್ರವು ವಾಸ್ತವವಾಗಿ ಸಂಪತ್ತಿನಿಂದ ಕೂಡಿತ್ತಾದರೂ ಜನರು ಬಡವರಾಗಿದ್ದರು. ೨೦ನೆಯ ಶತಮಾನದ ಆದಿಭಾಗದಲ್ಲಿ ಮಾತ್ರ ಕೈಗಾರಿಕಾ ಬೆಳವಣಿಗೆಯತ್ತ ಆರಂಭಿಕ ಪ್ರಯತ್ನಗಳು ಆದುವು ಎನ್ನಬೇಕು. ಸಮುದ್ರಕ್ಕೆ ಹೋಗುವ ಮಾರ್ಗವಿಲ್ಲದ ಕಾರಣ ಮೈಸೂರಿನ ವ್ಯಾಪಾರಕ್ಕೆ ಧಕ್ಕೆಯೊದಗಿತು. ಹಾಗೆಯೇ ಪಾರಂಪರಿಕವಾದ ಕರಕುಶಲತೆಗೂ ಕೂಡ ಪ್ರೋತ್ಸಾಹವಿಲ್ಲದ ಸಂದರ್ಭ ಒದಗಿತು.

ಪಾರಂಪರಿಕವಾದ ಕರಕುಶಲ ಕೈಗಾರಿಕೆಗಳು ವಿನಾಶವಾದ ಪರಿಣಾಮದಿಂದ ಬ್ರಿಟಿಷರ ಆಳ್ವಿಕೆಯಲ್ಲಿ, ಕೈಗಾರಿಕಾ ನಗರಗಳಾದ ಬೆಂಗಳೂರು, ಹುಬ್ಬಳ್ಳಿ, ಶ್ರೀರಂಗಪಟ್ಟಣ, ಹೊನ್ನಾವರ ಹಾಗೂ ಭಟ್ಕಳ ಮುಂತಾದ ಊರುಗಳಿಂದ ಜನರು ಗ್ರಾಮಾಂತರ ಪ್ರದೇಶಗಳಿಗೆ ಹೋಗುವಂತಾಗಿ, ಗ್ರಾಮಗಳ ಜನಸಂಖ್ಯೆಯಲ್ಲಿ ಏರುಪೇರಾಯಿತು; ಆರ್ಥಿಕವಾಗಿಯೂ ಹಳ್ಳಿಗಳಲ್ಲಿ ಬದಲಾವಣೆಯಾಯಿತು. ಈಗಾಗಲೇ ಅತಿಹೆಚ್ಚು ಕಂದಾಯದಿಂದ ನೊಂದಿದ್ದ ಬಡವರು ಇನ್ನೂ ಅಧಿಕತರವಾದ ಕಷ್ಟವನ್ನು ಅನುಭವಿಸುವಂತಾಯಿತು.

ಈಸ್ಟ್ ಇಂಡಿಯಾ ಕಂಪನಿಯ ದಿನಗಳಲ್ಲಿ ಭಾರತದ ವಾಣಿಜ್ಯ ಅಭಿವೃದ್ಧಿ ವ್ಯಾಪಾರವಾಗಿ ಸಹಜವಾಗಿಯೇ ಮುನ್ನಡೆ ಸಾಧಿಸಿತ್ತು. ಆದರೆ ಸರ್ಕಾರದ ಆನಂತರದ ಧೋರಣೆಯಲ್ಲಿ ಬದಲಾವಣೆಯಾದದ್ದಕ್ಕೆ ಮುಕ್ತವ್ಯಾಪಾರ ನೀತಿ ಕಾರಣವಾಯಿತೆಂದು ಬೇರೆ ಹೇಳುವ ಅಗತ್ಯವಿಲ್ಲ. ಸ್ಥಳೀಯ ಕೈಗಾರಿಕೆಗಳು ಮೂಲೆಗುಂಪಾದ ಕಾರಣ ಈ ಕೈಗಾರಿಕೆಗಳಲ್ಲಿ ಉದ್ಯೋಗದಲ್ಲಿದ್ದ ನೂರಾರು ಮಂದಿ ಕುಶಲಕರ್ಮಿಗಳು ನಿರುದ್ಯೋಗಿಗಳಾದರು. ಯಂತ್ರದಿಂದ ತಯಾರಿಸಿದ ಅಗ್ಗದ ಬೆಲೆಯ ಪದಾರ್ಥಗಳಿಗೆ ಹೋಲಿಸಿದರೆ ಇದೇ ಪದಾರ್ಥಗಳನ್ನು ಕೈಯಲ್ಲಿ ತಯಾರಿಸಿದಾಗ ಅವಕ್ಕೆ ಮಾರುಕಟ್ಟೆ ಸಿಕ್ಕುವುದು ಕಷ್ಟವಾಯಿತು. ಇದು ಕಾರಣವೇ ಹೊರತು ಕೈಗಾರಿಕೆಯ ಪತನಕ್ಕೆ ಕುಶಲಕರ್ಮಿಗಳ ಸಾಮರ್ಥ್ಯದಲ್ಲಿ ಏನೇನೂ ಕುಂದುಂಟಾಗಲಿಲ್ಲ. ಭಾರತೀಯ ವಿದೇಶಿ ವ್ಯಾಪಾರ ಪ್ರಧಾನವಾಗಿ ಬ್ರಿಟನ್ನಿನೊಡನೆ ಇದ್ದ ಕಾರಣ, ಭಾರತದ ಕೈಗಾರಿಕಾ ಹಿಂದುಳಿದಿರುವಿಕೆಯನ್ನು ಬ್ರಿಟಿಷರು ಪ್ರಜ್ಞಾಪೂರ್ವಕವಾಗಿಯೇ ಪ್ರೋತ್ಸಾಹಿಸಿದರು, ಇದರಿಂದ ಅವರಿಗೆ ಲಾಭ ಹೆಚ್ಚಾಗುತ್ತಿತ್ತೇ ವಿನಾ ಕಡಿಮೆಯಾಗುತ್ತಿರಲಿಲ್ಲ. ಇಲ್ಲಿ ತಯಾರಾದ ಹತ್ತಿ ಬಟ್ಟೆಗಳ ಮೇಲಿನ ತೆರಿಗೆಯನ್ನು ಹೆಚ್ಚಿಸಿದುದಕ್ಕೆ ಲಂಕಶೈರಿನ ಹಿತಕ್ಕನುಗುಣವಾಗಿ ಲೆಕ್ಕಾಚಾರ ನಡೆಯುತ್ತಿತ್ತು. ಈ ಪ್ರವೃತ್ತಿಯಿಂದ ಮೇಲಿನ ಅಂಶ ಚೆನ್ನಾಗಿ ಮನದಟ್ಟಾಗುತ್ತದೆ.

ಭಾರತೀಯ ಹತ್ತಿ ಬಟ್ಟೆಗಳನ್ನು ಇಂಗ್ಲೆಂಡಿನಲ್ಲಿ ತಯಾರಾದ ಹತ್ತಿ ಬಟ್ಟೆಗಳ ದರಕ್ಕಿಂತ ೫೦% ರಿಂದ ೬೦% ಕಡಿಮೆ ದರಕ್ಕೆ ಕೊಂಡುಕೊಳ್ಳುತ್ತಿದ್ದರು, ಹಾಗಾಗಿ ಭಾರತೀಯ ಪದಾರ್ಥಗಳ ಮೇಲೆ ೭೦% ರಿಂದ ೮೦% ತೆರಿಗೆ ವಿಧಿಸಬೇಕಾದದ್ದು ಅನಿವಾರ್ಯವೆಂದು ಸಮರ್ಥಿಸಿಕೊಂಡರು. ಭಾರತೀಯ ಕ್ಯಾಲಿಕೋದ ಆಮದಿನ ಮೇಲೆ ೭೮% ಭಾಗ ತೆರಿಗೆ ಹೇರದೇ ಇದ್ದರೆ ಅವರ ಕೈಗಾರಿಕೆ ಹಿಂದುಳಿಯುವುದಿತ್ತು.

ಹತ್ತೊಂಬತ್ತನೇ ಶತಮಾನದ ಆದಿಭಾಗದ ಭಾರತ, ಬ್ರಿಟನ್ನಿಗೆ ಕಪ್ಪ ಕಾಣಿಕೆಗಳನ್ನು ಕೊಡುವ ಅಥವಾ ಬ್ರಿಟಿಷ್ ಅರಸರು ಅದರ ಸಂಪತ್ತನ್ನು ಕೊಳ್ಳೆಹೊಡೆಯುವ ಒಂದು ನೆಲೆ ಮಾತ್ರ.[೬] ಭಾರತಕ್ಕೆ ಆಮದಾದ ಬ್ರಿಟಿಷ್ ಪದಾರ್ಥಗಳ ಮೇಲೆ ೨½% ತೆರಿಗೆ ವಿಧಿಸಿದರೆ, ಬ್ರಿಟನ್ನಿಗೆ ಆಮದಾಗುವ ಭಾರತೀಯ ಪದಾರ್ಥಗಳ ಮೇಲೆ ೧೦% ತೆರಿಗೆ ವಿಧಿಸುತ್ತಿದ್ದರು. ಬ್ರಿಟಿಷ್ ಜವಳಿ ಕೈಗಾರಿಕೆಯನ್ನು ನಿರ್ಮಾಣ ಮಾಡುವುದಕ್ಕೋಸ್ಕರ ೧೯ನೇ ಶತಮಾನದ ಪೂರ್ವಾರ್ಧದಲ್ಲಿ ಬ್ರಿಟಿಷರು ಭಾರತೀಯ ತಯಾರಕರ ವಿರುದ್ಧ tariff discrimination system ಅನ್ನು ಪ್ರಾರಂಭ ಮಾಡಿದರು. ಯಂತ್ರ ಕೈಗಾರಿಕೆಗಳ ತಾಂತ್ರಿಕ ಶ್ರೇಷ್ಠತೆಯದು ಒಂದು ಕಾರಣವಾದರೆ, ಇನ್ನೊಂದು ದೃಷ್ಟಿಯಿಂದ, ಒಂದು ಕಡೆ ಸರ್ಕಾರದ ನೇರವಾದ ಮುಕ್ತ ವ್ಯಾಪಾರದ ಅನುಕೂಲತೆಯಿಂದ ಬ್ರಿಟಿಷ್ ತಯಾರಕರು, ಭಾರತೀಯ ಮಾರುಕಟ್ಟೆಯಲ್ಲಿ ಮೇಲುಗೈ ಸಾಧಿಸಿದರು, ಹಾಗೂ ಭಾರತೀಯ ಉತ್ಪಾದನೆ ಸಂಪೂರ್ಣವಾಗಿ ನಾಶವಾಯಿತು.[೭]

ಲಂಕಶೈರ್ ಹಾಗೂ ಮ್ಯಾನ್‌ಚೆಸ್ಟರುಗಳಲ್ಲಿ ಕಚ್ಚಾ ಹತ್ತಿಗೆ ಬಹಳ ಬೇಡಿಕೆ ಇತ್ತು. ಅದರ ಅಗತ್ಯವನ್ನು ಪೂರೈಸುವ ಸಲುವಾಗಿ ಮಾತ್ರ ಭಾರತದಲ್ಲಿ ಹತ್ತಿ ಬೆಳೆಯನ್ನು ಪ್ರೋತ್ಸಾಹಿಸಿದುದು. ೧೮೫೦ರ ದಶಕದಲ್ಲಿ ಈ ಬೆಳೆಯನ್ನು ಪ್ರೋತ್ಸಾಹಿಸುವಂಥ ಅನೇಕ ಕ್ರಮಗಳನ್ನು ಕೈಗೊಂಡರಾದರೂ ಅಷ್ಟೇನೂ ಯಶಸ್ಸು ಕಾಣಲಿಲ್ಲ. ಅಮೆರಿಕಾದ ಅಂತಃಕಲಹ ಪ್ರಾರಂಭವಾದ ನಂತರವೇ ವಾಸ್ತವವಾಗಿ ಹತ್ತಿ ಬೆಳೆಗೆ ಕುಮ್ಮಕ್ಕು ಸಿಕ್ಕಿತು ಎನ್ನಬೇಕು. ಆ ಕಾಲಘಟ್ಟದಲ್ಲಿ ಯಾವ ಪ್ರಮಾಣದಲ್ಲಿ ಹತ್ತಿ ಬೆಳೆ ಜನಜನಿತವಾಗಿತ್ತೆಂದರೆ, ಕಾಳುಗಳನ್ನು ಬೆಳೆಯದಂಥ ಪರಿಸ್ಥಿತಿ ನಿರ್ಮಾಣವಾಯಿತು. ತತ್ಪರಿಣಾಮವಾಗಿ, ಬಡವರು ತುಂಬಾ ಬಳಲುವಂತಾಯಿತು. ರೈತನೊಬ್ಬ ಹತ್ತಿಯನ್ನು ಬಿತ್ತಿದನೆಂದರೆ ಪೂರ್ವಭಾವಿಯಾಗಿ ಬೆಳೆಯ ನಿರೀಕ್ಷೆಯಲ್ಲಿ ಅವನಿಗೆ ಭಾರಿ ಪ್ರಮಾಣದಲ್ಲಿ ಮುಂಗಡ ಹಣ ಕೊಡುವ ಪರಿಪಾಠ ರೂಢಿಯಾಯಿತು. ಕಚ್ಚಾ ಹತ್ತಿಗೆ ಇನ್ನಷ್ಟು ಬೇಡಿಕೆ ಬಂದ ಕಾರಣ ೧೮೬೦ರ ದಶಕದಲ್ಲಿ ಹತ್ತಿ ಬೆಳೆಗೆ ಪ್ರೋತ್ಸಾಹ ದೊರೆಯಿತು. ಉತ್ತಮ ರೀತಿಯ ಮಣ್ಣು ಹಾಗೂ ಹವಾಗುಣದ ಅನುಕೂಲವನ್ನು ಉಪಯೋಗಿಸಿಕೊಂಡು, ಕರ್ನಾಟಕದ ಧಾರವಾಡ ಹಾಗೂ ಚಿತ್ರದುರ್ಗದ ಪ್ರದೇಶಗಳಲ್ಲಿ ಹತ್ತಿ ಬೆಳೆ ಬಹಳ ವ್ಯಾಪಕವಾಗಿ ಹಬ್ಬಿತು. ವಿದೇಶಿ ತಳಿಗಳ ಸೇರ್ಪಡೆಯಾಗಿ ಋತುಮಾನದ ಅನಾನುಕೂಲತೆಯಿದ್ದರೂ ರೈತರು ಪಟ್ಟು ಬಿಡದೆ ವಿದೇಶಿ ತಳಿಗಳು ಸ್ಥಳೀಯ ಪರಿಸ್ಥಿತಿಗೆ ಬೀಜಗಳನ್ನು ಒಗ್ಗಿಸುವುದರಲ್ಲಿ ಸಫಲರಾಗುವರೆಂಬ ಆಶಾಭಾವನೆ ತಾಳಲಾಯಿತು.[೮]

ಹತ್ತಿ ಬೆಳೆಯುವ ತಾಲ್ಲೂಕುಗಳಲ್ಲಿ ಸಂಪರ್ಕವನ್ನು ಉತ್ತಮಪಡಿಸುವ ದಿಶೆಯತ್ತ ಕೂಡ ಗಮನ ಹರಿಸಲಾಯಿತು. ಹರಿಹರದ ಸಮೀಪ ತುಂಗಭದ್ರಾ ನದಿಯ ಮೇಲೆ ಒಂದು ಸೇತುವೆಯ ಅಗತ್ಯ ಇದ್ದಿತು–ಶಿವಮೊಗ್ಗ, ಕಡೂರು ಹಾಗೂ ಚಿತ್ರದುರ್ಗ ಕಡೆಯಿಂದ ಸಾಗಿಸುವ ಹತ್ತಿಯು ಈ ಸ್ಥಳದಲ್ಲಿ ಸಂಧಿಸುವ ಕಾರಣ ಇಲ್ಲಿ ವಾಹನಗಳ ಸಂಖ್ಯೆ ಅಧಿಕವಾಗಿತ್ತು.[೯] ೧೮೬೫ರಲ್ಲಿ ಪ್ರಾರಂಭವಾದ ಸೇತುವೆ ನಿರ್ಮಾಣ ಕಾರ್ಯ ಒಂದು ವರ್ಷದ ಅವಧಿಯಲ್ಲಿ ಸಾಕಷ್ಟು ಪ್ರಗತಿ ಹೊಂದಿತು. ಈ ಕ್ರಮಗಳನ್ನು ಕೈಕೊಂಡ ಬಳಿಕವೂ ಹತ್ತಿ ಕೃಷಿ ಇಳಿಮುಖವಾಯಿತು. ಆಹಾರ ಧಾನ್ಯದ ಬರಪರಿಸ್ಥಿತಿ ಮತ್ತು ಏರಿದ ಬೆಲೆಯ ನಿಮಿತ್ತ ಹತ್ತಿ ಬೆಳೆಗೆ ಕಾಲ ಅನುಕೂಲಕರವಾಗಲಿಲ್ಲ.[೧೦]

೧೮೧೪ ಹಾಗೂ ೧೮೩೨ರಲ್ಲಿ ರಫ್ತಾದ ಹತ್ತಿ ಪದಾರ್ಥಗಳ ಬೆಲೆಗಳಲ್ಲಿನ ವ್ಯತ್ಯಾಸ ಬಹಳ ಗಮನಾರ್ಹವಾದುದಾಗಿದೆ. ರಫ್ತಾದ ಭಾರತೀಯ ಹತ್ತಿ ಪದಾರ್ಥಗಳ ಬೆಲೆ ೧.೩ ದಶಲಕ್ಷ ಪೌಂಡುಗಳಿಂದ ೧ ಲಕ್ಷ ಪೌಂಡುಗಳಿಗೆ ಇಳಿದರೆ, ಆಮದಾದ ಆಂಗ್ಲ ಹತ್ತಿ ಬೆಲೆ ೨೬,೦೦೦ ಪೌಂಡುಗಳಿಂದ ೪,೦೦,೦೦೦ ಪೌಂಡುಗಳಿಗೆ ಏರಿತು.[೧೧]

ಕಚ್ಚಾ ಹತ್ತಿಯನ್ನೇ ರಫ್ತು ಮಾಡುವ ಪರಿಪಾಠದಿಂದಾಗಿ ಪರಂಪರಾಗತವಾಗಿ ಬಹಳ ಮುಖ್ಯವಾಗಿದ್ದ ಈ ಗುಡಿ ಕೈಗಾರಿಕೆಯು ಸಂಪೂರ್ಣವಾಗಿ ನಿಂತುಹೋಗುವಂತಾಯಿತು. ೧೮೬೭ರಲ್ಲಿ ಕ್ಯಾಪ್ಟನ್ ಮ್ಯಾಕ್‌ಡೊನಾಲ್ಡ್ ಎನ್ನುವವರು ಬರೆದಿರುವಂತೆ, 'ಬೆಂಗಳೂರಿನಲ್ಲಿ ಒಂದಾನೊಂದು ಕಾಲಕ್ಕೆ ೧೨,೦೦೦ ಮಗ್ಗಗಳಿದ್ದುವು, ಆದರೆ ಈಗ ಆ ಸಂಖ್ಯೆಯ ಮೂರನೇ ಒಂದು ಭಾಗ ಮಾತ್ರ ಕಾರ್ಯಪ್ರವೃತ್ತವಾಗಿವೆ' .[೧೨] ಮೈಸೂರು ಪ್ರಾಂತ್ಯಕ್ಕೆ ಪಾಶ್ಚಾತ್ಯ ತಯಾರಕರ ಆಗಮನವಾದದ್ದು ಇದಕ್ಕೆ ಕಾರಣ. ಅಂತೆಯೇ ದೊಡ್ಡ ಊರುಗಳನ್ನು ಬಿಟ್ಟು ಅನೇಕ ನೇಕಾರರು ಸಣ್ಣಪುಟ್ಟ ಊರುಗಳನ್ನು ಸೇರಿಕೊಂಡರು. ಆದರೆ ಹತ್ತಿ ಗಿರಣಿ ಅಥವಾ ಜವಳಿ ಕೈಗಾರಿಕೆ ಸಂಪೂರ್ಣವಾಗಿ ಮಾಯವಾಗಲಿಲ್ಲ. ಏಕೆಂದರೆ ತರುವಾಯದಲ್ಲಿ ಸ್ವದೇಶಿ ಚಳವಳಿಯಲ್ಲಿ ಇದಕ್ಕೆ ಮತ್ತೆ ಜೀವ ಬಂದು ಕೈಗಾರಿಕೆ ಹಾಗೂ ವಾಣಿಜ್ಯ ಇಲಾಖೆಯು ಹೆಚ್ಚಿನ ರೀತಿಯ ಪ್ರೋತ್ಸಾಹ ನೀಡಿತು.

ಅಂತಾರಾಷ್ಟ್ರೀಯವಾಗಿಯೂ ಸಹ ಹತ್ತಿ ಬಹುಮುಖ್ಯವಾದ ಬೆಳೆಯಾಗಿರುವ ಕಾರಣ ಭಾರತೀಯರ ಗಮನ ಅತ್ತ ಸಾಗಿ ೧೯೧೪ರಲ್ಲಿ ಧಾರವಾಡದಲ್ಲಿ ಹತ್ತಿ ಬಿತ್ತನೆ ಕೋಠಿ ಆರಂಭವಾಯಿತು. ಕಚ್ಚಾ ಪದಾರ್ಥಗಳ ರಫ್ತಿನ ಪ್ರಮಾಣದಲ್ಲಿ ಹೆಚ್ಚಳವಾಗಲು ರೈಲ್ವೆ ಸಾಗಣೆ ಪ್ರಾರಂಭವಾದದ್ದು ಕಾರಣವಾಗಿದೆ. ಸಾಗಣೆಯು ಅಭಿವೃದ್ಧಿ ಹೊಂದಿದ್ದರಿಂದ ಹತ್ತಿ ಬೆಳೆಯುವ ಭೂಮಿಯಲ್ಲಿ ವಿಸ್ತರಣೆಯಾಯಿತು ಎನ್ನುವುದು ನಿಜ. ಆದರೆ ದೇಶೀಯವಾಗಿ ಉತ್ಪಾದನೆಗೆ ಇದರಿಂದ ಮಾರಕವಾಯಿತು. ರೈಲ್ವೆ ಅಭಿವೃದ್ಧಿಯ ಪರಿಣಾಮವಾಗಿ ಬ್ರಿಟಿಷ್ ಪದಾರ್ಥಗಳು ಭಾರತೀಯ ಮಾರುಕಟ್ಟೆಗೆ ನುಗ್ಗುವುದು ಹೆಚ್ಚಾಯಿತು. ಆದರೆ ಭಾರತದ ಆರ್ಥಿಕ ಹಿಂದುಳಿಯುವಿಕೆ ಹಾಗೆ ಮುಂದುವರಿಯಿತು. ಮೈಸೂರು ಪ್ರಾಂತ್ಯದ ಕುಶಲಕರ್ಮಿಗಳು ತಮ್ಮ ತಮ್ಮ ಮನೆಗಳಲ್ಲೇ ಉದ್ಯೋಗವನ್ನು ಮುಂದುವರಿಸಿ, ತಮ್ಮ ನೆರೆಹೊರೆಯಲ್ಲೋ ಅಥವಾ ಸಮೀಪದ ಊರುಗಳಲ್ಲೋ ಪದಾರ್ಥಗಳನ್ನು ಮಾರಿ, ವ್ಯಾಪಾರ ಮಾಡುತ್ತಿದ್ದರು. ಸಾಗಣೆಯ ಅನುಕೂಲದಿಂದಾಗಿ ದೇಶದ ಧಾನ್ಯ ಹಾಗೂ ಇತರೆ ಕಚ್ಚಾಪದಾರ್ಥಗಳಿಗೆ ಒಂದು ಮಾರುಕಟ್ಟೆ ದೊರಕಿತಾದರೂ, ಹೊರದೇಶದ ಅಗ್ಗದ ಪದಾರ್ಥಗಳಿಗೆ ಇಲ್ಲಿ ಪ್ರವೇಶ ದೊರಕಿದ ಪರಿಣಾಮವಾಗಿ ದೇಶೀಯವಾದ ತಯಾರಿಕಾ ಕೈಗಾರಿಕೆಗಳು ಕುಗ್ಗುವುದಕ್ಕೆ ಕಾರಣವಾಯಿತು. ೧೮೯೦ರಿಂದ ೧೯೦೦ರ ಹತ್ತುವರ್ಷಗಳ ಅವಧಿಯ ರೈಲ್ವೆ ಸಾಗಣೆಯಲ್ಲಿ ನಡೆದ ವ್ಯಾಪಾರವನ್ನು ಗಮನಿಸಿದರೆ ಧಾನ್ಯ, ಕಾಳು, ಚರ್ಮ, ಎಣ್ಣೆ ಬೀಜ, ಕಚ್ಚಾ ರೇಷ್ಮೆ ಇವು ಹೆಚ್ಚಿನ ಪ್ರಮಾಣದಲ್ಲಿ ರಫ್ತಾಗಿರುವುದು ತಿಳಿಯುತ್ತದೆ– ಹಾಗೆಯೇ ಆಮದಾಗಿರುವ ಪದಾರ್ಥಗಳಲ್ಲಿ ಪ್ರಧಾನವಾಗಿ ಹದಮಾಡಿದ ಚರ್ಮ, ಹತ್ತಿ ಬಟ್ಟೆಗಳು, ಮಾದಕ ದ್ರವ್ಯ, ಉಪ್ಪು ಮತ್ತು ಇತರೆ ವಸ್ತುಗಳು ಕಂಡುಬರುತ್ತವೆ. ಮೈಸೂರು ಕುಶಲಕರ್ಮಿಯ ಆರ್ಥಿಕ ಸ್ಥಿತಿಗತಿಯು ಇತರ ಕುಶಲಕರ್ಮಿಗಳ ಪರಿಸ್ಥಿತಿಗಿಂತ ಭಿನ್ನವಾಗಿರುವುದು ಗೋಚರವಾಗುತ್ತದೆ. ಜನಗಣತಿಯ ಪ್ರಕಾರ ಸ್ಪಷ್ಟವಾಗುವುದೆಂದರೆ, ಕೈಗಾರಿಕಾ ಜನಸಂಖ್ಯೆಗೆ ಹೆಚ್ಚಿನ ಸಂಖ್ಯೆ ಏನೂ ಸೇರ್ಪಡೆಯಾಗಿಲ್ಲ.[೧೪]

ಅಮೆರಿಕಾದಿಂದ ಸರಬರಾಜಾಗುತ್ತಿದ್ದ ಹತ್ತಿಯ ಪ್ರಮಾಣ ಕುಗ್ಗುತ್ತಿದ್ದ ಕಾರಣ ಬ್ರಿಟಿಷ್ ಭಾರತೀಯ ಸರ್ಕಾರವು ರೈಲುಮಾರ್ಗವನ್ನು ತುರ್ತಾಗಿ ನಿರ್ಮಿಸಬೇಕೆಂದು ಬ್ರಿಟಿಷ್ ಹಿತಾಸಕ್ತರು ಒತ್ತಡ ತಂದದ್ದು ಮುಖ್ಯ ಸಂಗತಿಯಾಗಿದೆ.

ಮೈಸೂರು ಪ್ರಾಂತ್ಯಕ್ಕೆ ರೈಲು ಸಂಚಾರ ಶುರುವಾದ ಕಾಲದಲ್ಲಿ ರೈತರು ವಾಣಿಜ್ಯ ಬೆಳೆಗಳಿಗೆ ಹೆಚ್ಚಿನ ಪ್ರಾಶಸ್ತ್ಯ ಕೊಟ್ಟರು. ಆಯುಕ್ತರ ಆಡಳಿತ ಕಾಲದಲ್ಲಿ ಮೈಸೂರಿನಲ್ಲಿ ರೈಲು ಸಂಚಾರ ಪ್ರಾರಂಭವಾಯಿತು. ಮೈಸೂರು ಸಂಸ್ಥಾನದಲ್ಲಿ ರೈಲ್ವೆ ನಿರ್ಮಾಣಕಾರ್ಯ ಪ್ರಾರಂಭವಾದದ್ದು ಒಂದು ರೀತಿಯಲ್ಲಿ ಬ್ರಿಟಿಷ್ ಸಾಮ್ರಾಜ್ಯಶಾಹಿಗಳು ತಮ್ಮ ಕೈಗಾರಿಕೋದ್ಯಮವನ್ನು ಕುದುರಿಸಿಕೊಳ್ಳುವುದಕ್ಕಾಗಿ ಎನ್ನಬೇಕು. ಘೋಷಣೆ

ಹಾಗೂ ಸಧೃಢೀಕರಣದ ಬ್ರಿಟಿಷ್ ಮಾದರಿಗೆ ಇಲ್ಲೂ ವಿಪುಲವಾಗಿ ಅವಕಾಶ ಸೃಷ್ಟಿಯಾಯಿತು. ಪ್ರಕೃತಿ ಸಂಪನ್ಮೂಲವನ್ನು ಬಳಸಿಕೊಳ್ಳುವ ಏಕೈಕ ಉದ್ದೇಶ ರೈಲ್ವೆ ಅಭಿವೃದ್ಧಿಯಲ್ಲಿ ಕಂಡುಬರುವ ಕಾರಣ ಸಾರ್ವಜನಿಕ ಪ್ರಯೋಜನ ಇಲ್ಲಿ ಪ್ರಧಾನವಾದ ಗುರಿಯಾಗಿತ್ತು ಎಂದು ಹೇಳಲು ಬರುವುದಿಲ್ಲ. ಅದ ಕಾರಣ ಕರ್ನಾಟಕದ ಆರ್ಥಿಕತೆ ಒಟ್ಟಾರೆಯಾಗಿ, ಮೈಸೂರಿನ ಸ್ಥಿತಿಗತಿಗೆ ವಿಶೇಷವಾಗಿ ಕುಂದುಂಟಾಯಿತು. ರಾಜಕೀಯವಾಗಿ ಸಾಮ್ರಾಜ್ಯಶಾಹಿಯ ಅಧೀನದಲ್ಲಿದ್ದ ಕಾರಣ ರೈಲ್ವೆ ಅಭಿವೃದ್ಧಿಯ ಸಂಬಂಧವಾಗಿ ಮೈಸೂರಿನವರಿಂದ ಯಾವುದೇ ಬಗೆಯ ಪ್ರತಿಭಟನೆ ಆಗಲು ಅವಕಾಶವಿರಲಿಲ್ಲ. ಸಾಮ್ರಾಜ್ಯಶಾಹಿ ಆಡಳಿತಗಾರರು ಹೇರಿದ ಕಾನೂನುಗಳನ್ನು ಇಲ್ಲಿಯವರು ಮರುಮಾತಿಲ್ಲದೆ ನಡೆಸಬೇಕಾದ ಪರಿಸ್ಥಿತಿಯಿತ್ತು. ಈ ದೇಶದಿಂದ ಕಚ್ಚಾವಸ್ತುಗಳನ್ನು ಸಾಗಣೆ ಮಾಡುವ ಸಾಧನವಾಗಿ ಬ್ರಿಟಿಷರು ರೈಲ್ವೆಯನ್ನು ನಿರ್ಮಾಣ ಮಾಡಿದ್ದರು. ಆದರೆ ೧೮೭೬–೭೮ರ ಭೀಕರ ಕ್ಷಾಮ ಪರಿಸ್ಥಿತಿಯಲ್ಲಿ ಮಾತ್ರ ಮೈಸೂರಿನಲ್ಲಿ ರೈಲ್ವೆ ಕ್ಷಾಮ ಪರಿಹಾರ ಸಾಧನವಾಗಿ ಬಳಕೆಯಾಯಿತು.

ಕೃಷಿ ಹಾಗೂ ನೀರಾವರಿ ಯೋಜನೆಗಳು ಅವಜ್ಞೆಗೆ ಒಳಗಾಗಿ, ಭಯಾನಕ ಕ್ಷಾಮ ತಲೆದೋರಿದ ಕಾರಣ ರಾಷ್ಟ್ರೀಯವಾದ ಹರಡಲು ಒಂದು ರೀತಿಯಲ್ಲಿ ಕಾರಣವಾಯಿತು. ೧೯ನೇ ಶತಮಾನದ ಉತ್ತರಾರ್ಧದಲ್ಲಿ ಮೇಲಿಂದ ಮೇಲೆ ಕ್ಷಾಮ ತಲೆದೋರಿದ್ದರಿಂದ ಈಗಾಗಲೇ ತತ್ತರಿಸಿದ್ದ ಆರ್ಥಿಕ ಪರಿಸ್ಥಿತಿ ಇನ್ನಷ್ಟು ಹದಗೆಟ್ಟು ವಿಪರೀತ ಭೂಕಂದಾಯದಿಂದ ಕಂಗೆಟ್ಟ ರೈತರು ತುಂಬಾ ಕಷ್ಟಕ್ಕೊಳಗಾದರು. ಇದರ ಜೊತೆಗೆ ಕೃಷಿಯ ವಾಣಿಜ್ಯೀಕರಣವಾಗಿ ಇನ್ನಷ್ಟು ಸಂಕಟ ಹೆಚ್ಚಿತು. ನೈಸರ್ಗಿಕ ದುರಂತಗಳು ಒಂದಾದ ಮೇಲೆ ಒಂದರಂತೆ ಬರತೊಡಗಿದಾಗ ಜನರು ಹತಾಶರಾದರು. ಬಡತನ ಹಾಗೂ ದಾರಿದ್ರ್ಯವೇ ಜನರ ನಿತ್ಯದ ಬದುಕಾಗಿ ಪರಿಣಮಿಸಿತು. ದೇಶದ ನಾನಾ ಭಾಗಗಳಲ್ಲಿ ಕ್ಷಾಮ ತಲೆದೋರಿದ್ದಾಗ್ಯೂ ಇದರ ತೀವ್ರತೆಯನ್ನು ಕಡಿಮೆ ಮಾಡಲು ಕೆಲವು ಪ್ರದೇಶಗಳಲ್ಲಿ ಮಾತ್ರ ನೀರಾವರಿ ಕಾಮಗಾರಿಯನ್ನು ಕೈಗೆತ್ತಿಕೊಳ್ಳಲಾಯಿತು. ೧೮೭೬ರ ಭೀಕರ ಕ್ಷಾಮದಿಂದಾಗಿ ಇಂಥ ಆಘಾತವನ್ನು ಕಡಿಮೆ ಮಾಡುವ ಸಲುವಾಗಿ ಬ್ರಿಟಿಷರು ಪರಿಹಾರ ಕಾರ್ಯಕ್ರಮಗಳನ್ನು ಯೋಜಿಸುವುದು ಅನಿವಾರ್ಯವಾಯಿತು; ಹಾಗಾಗಿ, ಕಾಲಾನಂತರದಲ್ಲಿ ನೀರಾವರಿ ಕಾಮಗಾರಿಯೂ ಸಹ ಕ್ಷಾಮ ಪರಿಹಾರದ ಕ್ರಮವಾಗಿ ಜನರ ಕಣ್ಣಿಗೆ ಕಾಣತೊಡಗಿತು.

ಕ್ಷಾಮದ ಪರಿಹಾರ ಕಾರ್ಯದಲ್ಲಿ ಬ್ರಿಟಿಷ್ ಆಡಳಿತಗಾರರು ಹೆಚ್ಚು ಗಮನ ಕೊಡದ ಕಾರಣ ಕರ್ನಾಟಕದಲ್ಲಿ ರಾಷ್ಟ್ರೀಯವಾದ ಹಬ್ಬಲು ಕಾರಣವಾಯಿತು. ೧೮೯೬–೯೭ರ ಕ್ಷಾಮವು ಬಳ್ಳಾರಿ ಜಿಲ್ಲೆಯಲ್ಲಿ ಬಹಳ ಸಾವು ನೋವಿಗೆ ಕಾರಣವಾಗಿ ಪರಿಸ್ಥಿತಿ ಬಹಳ ಗಂಭೀರಾವಸ್ಥೆಯನ್ನು ಮುಟ್ಟಿದ್ದರೂ ಇದರ ಶಮನಕ್ಕಾಗಿ ಬ್ರಿಟಿಷರು ಏನೊಂದೂ ಕ್ರಮವನ್ನೂ ಕೈಗೊಳ್ಳಲಿಲ್ಲ.

ನೀರಾವರಿ ಕೆಲಸ ಕರ್ನಾಟಕದಲ್ಲಿ ಅತ್ಯಂತ ಕಡಿಮೆಯಾಗಿ ಕರ್ನಾಟಕವು ಕೃಷಿಯಲ್ಲಿ ತೀರಾ ಹಿಂದುಳಿದ ಪ್ರದೇಶವಾಗಿ ಕಂಡಿತು. ಹಾಗಾಗಿ, ನೀರಾವರಿಯನ್ನು ಅಭಿವೃದ್ಧಿಪಡಿಸುವುದು ಬಹಳ ಮುಖ್ಯವಾದ ಕಾರ್ಯಕ್ರಮವಾಯಿತು. ಮೈಸೂರಿನ ಆರ್ಥಿಕ ಪರಿಸ್ಥಿತಿಯ ಅಭಿವೃದ್ಧಿ ಮತ್ತು ಬೆಳವಣಿಗೆಗೆ ನೀರಾವರಿ ಅತ್ಯಗತ್ಯವಾಗಿತ್ತು ಎಂಬುದನ್ನು ಮರೆಯಲಾಗದು.

ಬಡತನದ ಸಮಸ್ಯೆಯನ್ನು ಪರಿಣಾಮಕಾರಿಯಾಗಿ ನಿಯಂತ್ರಿಸಲು ವರಮಾನದ ಸಮರ್ಪಕ ವಿತರಣೆಯಾಗಬೇಕು, ಇದು ಸಾಧ್ಯವಾಗಲು ಕೃಷಿ ಉತ್ಪನ್ನ ಅಧಿಕವಾಗಿ ದೊರೆಯಬೇಕು. ಕರ್ನಾಟಕದಲ್ಲಿ ಕೃಷಿಯ ಪ್ರಮುಖವಾದ ವಿಭಾಗಕ್ಕೆ ತೊಡಗಿಸಲು ಬಂಡವಾಳದ ಕೊರತೆ ಒಂದು ಬಗೆಯದಾದರೆ

ಹವಾಮಾನದಲ್ಲಾದ ವ್ಯತ್ಯಾಸಗಳಿಂದ ತೊಂದರೆ ದ್ವಿಗುಣವಾಯಿತು. ೧೮೭೬-೭೮ರ ಕ್ಷಾಮದಿಂದ ಕರ್ನಾಟಕದಲ್ಲಿ ಸಮಸ್ಯೆ ತಲೆದೋರಿದ್ದು ನಿಜವಾದರೂ ಸರ್ಕಾರವು ಕ್ಷಾಮ ಪರಿಹಾರ ನೀತಿಯನ್ನು ಬದಲಾಯಿಸಿದ ಕಾರಣ ಪ್ರಕೃತಿ ವಿಕೋಪಕ್ಕೆ ಆಡಳಿತ ಕ್ರೌರ್ಯವೂ ಬೆರೆತು ಹೋದಂತಾಯಿತು. ಬೆಳೆ ನಾಶವಾದ ಪ್ರಯುಕ್ತ ಧಾನ್ಯದ ದರ ಗಗನಕ್ಕೇರಿತು; ಆ ಪರಿಸ್ಥಿತಿಯಲ್ಲಿ ಧಾನ್ಯವನ್ನು ಆಮದು ಮಾಡಿಕೊಳ್ಳಲಾಗಲಿ ಅಥವಾ ಏರುವ ದರಗಳನ್ನು ನಿಯಂತ್ರಿಸಲಾಗಲಿ ಸರ್ಕಾರ ಯಾವುದೇ ಕ್ರಮ ಕೈಗೊಳ್ಳಲಿಲ್ಲ. ಪರಿಹಾರ ಕಾರ್ಯಕ್ರಮಗಳೂ ಸಹ ಬಹಳ ವಿಳಂಬವಾಗಿಯೆ ಜಾರಿಯಾದವು.[೧೫]

ಈ ಮೊದಲೇ ತಿಳಿಸಿದಂತೆ ಸರ್ಕಾರವು ಜನರ ಕಷ್ಟಪರಿಹಾರಕ್ಕಾಗಿ ನೀರಾವರಿ ಯೋಜನೆಯನ್ನು ತುರ್ತಾಗಿ ಕೈಗೊಳ್ಳದೆ ಇದ್ದದ್ದು ರಾಷ್ಟ್ರೀಯವಾದದ ಬೆಳವಣಿಗೆಗೆ ಕುಮ್ಮಕ್ಕು ನೀಡಿತೆನ್ನಬೇಕು. ಸರ್ಕಾರ ರೈಲ್ವೆ ಕೆಲಸದಲ್ಲಿ ಹೆಚ್ಚು ಮಗ್ನವಾದ ರೀತಿಯನ್ನು ಕಂಡು ಜನರು ಕಟುವಾಗಿ ಟೀಕಿಸಲು ತೊಡಗಿದರು. ಜನಸಂಖ್ಯಾ ಹೆಚ್ಚಳವೇ ಕ್ಷಾಮದಂಥ ದುರಂತಗಳಿಗೆ ಕಾರಣವೆಂದು ಸರ್ಕಾರ ಸಮಜಾಯಿಷಿ ನೀಡಲು ಮುಂದಾದಾಗ ಜಿ.ಎಸ್. ಐಯ್ಯರ್‌ರಂಥ ನಾಯಕರು ಈ ಕಾರಣವನ್ನು ತಕ್ಷಣವೇ ಅಲ್ಲಗಳೆದರು. ಜನಸಂಖ್ಯೆ ಹೆಚ್ಚಿದೆ ಎನ್ನುವುದು ಸೂಕ್ತವಾದ ಕಾರಣವಲ್ಲ, ಏಕೆಂದರೆ ಅಷ್ಟೇ ಸಂಖ್ಯೆಯಲ್ಲಿ ಜನರು ಮರಣ ಹೊಂದಿದ್ದಾರೆ ಎಂದು ಐಯ್ಯರ್ ಉತ್ತರ ನೀಡಿದರು. ನಾಯಕರ ಈ ಬಗೆಯ ಪ್ರತ್ಯುತ್ತರಗಳಿಂದ ಜನರು ಉತ್ತೇಜನಗೊಂಡು ಸ್ವಾತಂತ್ರ್ಯ ಹೋರಾಟದಲ್ಲಿ ಮುಂದಡಿಯಿಡುವಂತಾಯಿತು. ಕಡುಬಡತನ ಹಾಗೂ ಪರಿಹಾರ ಕಾರ್ಯಕ್ರಮಗಳ ಅಭಾವ ಅವೇ ಕ್ಷಾಮ ತಲೆದೋರಲು ಪ್ರಧಾನ ಕಾರಣಗಳೆಂದು ಮುಖಂಡರು ತರ್ಕ ಮಾಡಿದರು. ವಸಾಹತುಶಾಹಿಯೇ ಭಾರತವನ್ನು ಬ್ರಿಟನ್ನಿನ ಕೃಷಿಕ ಹೊರಅಂಗವಾಗಿ ಪರಿವರ್ತಿಸಿದೆ ಎಂಬುದು ಎಲ್ಲರ ವಾದವಾಯಿತು.

ನೀರಾವರಿಯನ್ನು ಬದಿಗಿಟ್ಟು ರೈಲ್ವೆ ಅಭಿವೃದ್ಧಿಯನ್ನು ಏಕಮಾತ್ರ ಕಾರ್ಯಕ್ರಮವಾಗಿ ಬ್ರಿಟಿಷ್ ಸರ್ಕಾರ ಕೈಗೊಂಡ ಪರಿಯನ್ನು ನಾಯಕರು ಬಹಳ ಕಟುವಾಗಿ ಟೀಕಿಸಿದರು.[೧೬] ಕ್ಷಾಮವನ್ನು ಹತ್ತಿಕ್ಕಲು ರೈಲ್ವೆ ಮತ್ತು ನೀರಾವರಿ ಪರಸ್ಪರ ಪೈಪೋಟಿಯಲ್ಲಿ ಸೂಕ್ತ ಪರಿಹಾರ ಸಾಧನಗಳಾಗಿ ಗೋಚರವಾದವು. ಸರ್ಕಾರದ ಮಿತವಾದ ಸಂಪತ್ತಿಗಾಗಿ ಇವೆರಡೂ ವಿಭಾಗಗಳಲ್ಲಿ ಪರಸ್ಪರ ಪೈಪೋಟಿ ನಡೆಯಿತು. ಶೇಕಡಾ ೫ ಭಾಗವನ್ನು (ರೈಲ್ವೆಗೆ ಕೊಡುವ ರೀತಿಯಲ್ಲೇ) ಕೊಡಲು ಒಪ್ಪುವುದಾದರೆ, ಹಾಗೂ ಈ ಶರತ್ತಿಗೆ ಒಪ್ಪಿ ಯಾವುದಾದರೂ ಕಂಪನಿ ಮುಂದೆ ಬಂದ ಪಕ್ಷದಲ್ಲಿ ಪರ್ಯಾಯ ದ್ವೀಪದ ಒಳಗೆ ತಕ್ಷಣದಲ್ಲಿಯೇ ಜಲಮಾರ್ಗ ನಿರ್ಮಾಣಕ್ಕೆ ಆದೇಶ ನೀಡುವುದಾಗಿ ಆರ್ಥರ್ ಕಾಟನ್ ಘೋಷಿಸಿದ. ರೈಲ್ವೆ ಅಭಿವೃದ್ಧಿಯಿಂದ ಅಸಂಖ್ಯಾತ ಬಡಪ್ರಯಾಣಿಕರಿಗೆ ಅಷ್ಟು ಲಾಭವಾಗುವುದಿಲ್ಲವೆಂದು ಆತನ ಅಭಿಪ್ರಾಯವಾಗಿತ್ತು.[೧೭]

ಇಷ್ಟಾಗಿಯೂ ರೈಲ್ವೆ ನಿರ್ಮಾಣ- ಅದು ಜನರಿಗೆ ಅನುಕೂಲದ ಭ್ರಮೆ ಉಂಟುಮಾಡಲು ಪ್ರಾರಂಭವಾಗಿದ್ದರೂ- ಕಾರ್ಯ ಭರದಲ್ಲಿ ಸಾಗಿತು. ನೀರಾವರಿ ಯೋಜನೆ ಮುಂದೆ ಜಗ್ಗದೆ ನಿಂತು ಹೋಯಿತು. ನೀರಾವರಿ ವಿಚಾರ ಬಂದಾಗ ಹಣದ ಕೊರತೆಯನ್ನು ಎತ್ತಿ ತೋರಿಸಲಾಯಿತು, ರೈಲ್ವೆ ಅಭಿವೃದ್ಧಿ ವಿಷಯದಲ್ಲಿ ಇದು ಅಡ್ಡಿ ಬರಲಿಲ್ಲ.

ಮಳೆಗಾಲದಲ್ಲಿ ಎಂದೂ ನಮ್ಮ ಲೆಕ್ಕಾಚಾರಕ್ಕೆ ಸಿಗದಂಥ ಕೃಷಿಯ ಮೇಲೆಯೇ ಭಾರತ ಪ್ರಧಾನವಾಗಿ ಅವಲಂಬಿಸಿರುವುದು. ಹಾಗಾಗಿ ಆರಂಭ ಕಾಲದಿಂದಲೂ ಮಳೆ ಮತ್ತು ಕೃಷಿಗಿರುವ ಪರಸ್ಪರಾವಲಂಬನೆಯನ್ನು ಗಣನೆಗೆ ತೆಗೆದುಕೊಳ್ಳಲಾಗದೆ, ಮಳೆ ಕಾಲಕ್ಕೆ ಕಾಲಕ್ಕೆ ಬಾರದ್ದರಿಂದ ನೀರಾವರಿಯನ್ನು ಅಭಿವೃದ್ಧಿಪಡಿಸದೆ

ಗತ್ಯಂತರವಿಲ್ಲವೆಂಬ ಸಂಗತಿ ಎಲ್ಲರ ಗಮನಕ್ಕೂ ಬಂದಿತು. ಅನೇಕ ಸಂಸ್ಥೆಗಳು ನೀರಾವರಿಯ ಪ್ರಾಮುಖ್ಯತೆಯನ್ನು ಮನದಟ್ಟು ಮಾಡುವ ದಿಶೆಯಲ್ಲಿ ಸರ್ಕಾರದ ಗಮನ ಸೆಳೆದಿದ್ದಾಗ್ಯೂ ಅಪಾರವಾದ ಹಣ ತೊಡಗಿಸಲು ಸರ್ಕಾರ ಹಿಂದೇಟು ಹೊಡೆಯಿತು. ಜೊತೆಗೆ ರೈಲ್ವೆ ಇಲಾಖೆಯ ಬೇಡಿಕೆ ಮುಗಿಯುವ ತನಕ ನೀರಾವರಿ ಪ್ರಶ್ನೆಯನ್ನು ಮುಂದು ಮಾಡಬಾರದೆಂದು ಭಾರತೀಯರಿಗೆ ತಿಳಿಸಲಾಗಿತ್ತು.

ಕೃಷಿಕ ಅರ್ಥವ್ಯವಸ್ಥೆಯಲ್ಲಿ ನೀರಾವರಿ ಬಹಳ ಪ್ರಮುಖವಾದುದೆಂದು ತಿಳಿದಿದ್ದಾಗ್ಯೂ ಬ್ರಿಟಿಷರು ತಮ್ಮ ಇಚ್ಛೆಯನ್ನು ಪೂರೈಸುವ ಸಲುವಾಗಿ ಇದರ ಕಡೆ ಗಮನ ಹರಿಸಲಿಲ್ಲ. ಭೂಕಂದಾಯವನ್ನು ಜನರಿಂದ ವಸೂಲು ಮಾಡುವ ವಿಧಾನ ಕುರಿತು ಅನೇಕ ಸಂಪುಟಗಳ ರಚನೆಯಾಗಿರುವುದಾದರೂ ಈ ಕಂದಾಯವನ್ನು ತೆರಲು ಜನರು ಸಮರ್ಥರಾಗುವ ಬಗೆ ಹೇಗೆ ಎಂಬುದು ಮಾತ್ರ ಚಿಂತಕರ ಗಮನ ಸೆಳೆಯದ ವಿಚಾರ ಆರ್ಥರ್ ಕಾಟನ್‌ರಿಗೆ ಆಶ್ಚರ್ಯ ತಂದಿತು. ನೀರಾವರಿಯ ಪ್ರಾಮುಖ್ಯತೆಯ ಬಗ್ಗೆ ಮೊದಲು ಮಾತನಾಡಿದವರು ಆರ್ಥರ್ ಕಾಟನ್‌ರೇ.[೧೭] ಭಾರತದ ಯಾವುದೇ ಭಾಗಕ್ಕಿಂತ ಕರ್ನಾಟಕವು ಮೇಲಿಂದ ಮೇಲೆ ಬರಕ್ಕೆ ತುತ್ತಾಗುತ್ತಿದ್ದ ಕಾರಣ ನೀರಾವರಿ ಪ್ರಶ್ನೆ ಇಲ್ಲಿ ಹೆಚ್ಚು ಪ್ರಸ್ತುತವಾಗಿತ್ತಾದರೂ ಈ ದಿಶೆಯಲ್ಲಿ ಕೈಗೊಂಡ ಕ್ರಮಗಳು ಮಾತ್ರ ತೀರಾ ಅಲ್ಪಪ್ರಮಾಣದವು.

೧೮೩೧-೮೧ರ ಅವಧಿಯಲ್ಲಿ ಮೈಸೂರು ಬ್ರಿಟಿಷ್ ಸರ್ಕಾರದ ನೇರವಾದ ಆಡಳಿತಕ್ಕೆ ಒಳಪಟ್ಟಿತು. ಬ್ರಿಟಿಷ್ ಆಡಳಿತ ಶುರುವಾದಾಗ ಭರ್ತಿಯಾಗಿದ್ದ ಖಜಾನೆ ಖಾಲಿಯಾಯಿತು. ಇದಕ್ಕೆ ಮುಖ್ಯ ಕಾರಣ ಬ್ರಿಟಿಷ್ ಅಧಿಕಾರಿಗಳು ಮತ್ತು ಅವರ ಅವಲಂಬಿತರು. ಬ್ರಿಟಿಷರು ಮಹಾರಾಜರಿಗೆ ಅಧಿಕಾರವನ್ನು ವಹಿಸಿದ ನಂತರವೂ ಇದೇ ಪರಿಸ್ಥಿತಿ ಮುಂದುವರಿಯಿತು. ಮಹಾರಾಜರು ಕೇವಲ ಬ್ರಿಟಿಷ್ ನೀತಿಯನ್ನು ಮುಂದುವರಿಸಿದರು. ಒಂದೇ ವ್ಯತ್ಯಾಸವೆಂದರೆ ಆಂಗ್ಲ ಅಧಿಕಾರಿಗಳ ಬದಲು ಕೆಲವು ದೇಶೀಯ ಅಧಿಕಾರಿಗಳು ಕೆಲವು ಸ್ಥಾನಗಳಲ್ಲಿ ಸ್ಥಾಪಿತರಾದರು. ಬಿಳಿಯರಿಂದ ಬಿರುದು-ಬಾವಲಿಗಳನ್ನು ಪಡೆಯುವ ತರಾತುರಿಯಲ್ಲಿದ್ದ ಆಧುನಿಕ ರಾಜರು ತಮ್ಮ ಈ ಕನಸನ್ನು ನನಸು ಮಾಡಲು ಬಿಳಿಯರು ಹೇಳಿದ್ದಕ್ಕೆ 'ಹೌದು', 'ಆಗಲಿ' ಎಂಬಂಥ ವಿಧೇಯ ವಾಕ್ಯಗಳನ್ನು ಬಳಸುವ ಅನಿವಾರ್ಯತೆಯನ್ನು ಮನಗಂಡರು. ಬ್ರಿಟಿಷ್ ಅಧಿಕಾರದಿಂದ ತಮಗೆ ಸ್ಥಾನ ದೊರಕಿರುವುದಾಗಿ ಮೈಸೂರಿನ ಅಳರಸರು ತಿಳಿದರು. ಬ್ರಿಟಿಷರು ಎಲ್ಲಿಯಾದರೂ ತಮ್ಮ ಸ್ಥಾನವನ್ನು ಕಿತ್ತುಕೊಳ್ಳುವರೆಂಬ ದಿಗಿಲು ಅವರನ್ನು ಯಾವಾಗಲೂ ಕಾಡಿತು. ಹಾಗಾಗಿ ತಮ್ಮ ಉಳಿವಿಗಾಗಿ ಬ್ರಿಟಿಷರು ಯಾವುದಕ್ಕೂ 'ಅಸ್ತು' ಎನ್ನಬೇಕಾಗಿತ್ತು; ಆದ ಕಾರಣ, ಆರ್ಥಿಕಾಭಿವೃದ್ಧಿಯನ್ನು ಗಮನದಲ್ಲಿರಿಸಿಕೊಂಡ ಯೋಜನೆಗಳಿಗೆ ಬ್ರಿಟಿಷರಿಂದ ಸುಲಭವಾಗಿ ಅಸ್ತು ದೊರೆಯುತ್ತಿರಲಿಲ್ಲ.[೧೮]

೧೯೦೧ರ ತನಕ ಬೃಹತ್ ಜಲಾಶಯಗಳಾವುವೂ ನಿರ್ಮಾಣವಾಗಲಿಲ್ಲ. ಹಾಗಾಗಿ ನೀರಾವರಿ ಬಹಳ ನಿಧಾನಗತಿಯಲ್ಲಿದ್ದಿತು. ಪಾರಂಪರಿಕ ನೀರಾವರಿ ಮೂಲಗಳಾದ ಕೆರೆಗಳನ್ನು ಸಹ ಸರಿಯಾದ ರೀತಿಯಲ್ಲಿ ನೋಡಿಕೊಂಡಿರಲಿಲ್ಲ. ದುರಸ್ತಿಕಾರ್ಯವನ್ನು ಕಾಲಕಾಲಕ್ಕೆ ಕೈಗೆತ್ತಿಕೊಳ್ಳದ ಕಾರಣ ಕೆರೆಗಳು ನಿರುಪಯುಕ್ತವಾಗುವ ಪರಿಸ್ಥಿತಿ ಒದಗಿತು. ಕೆರೆಗಳ ಉಪಯುಕ್ತತೆಯನ್ನು ಒತ್ತಿ ಹೇಳುವುದು ರೂಢಿಯಲ್ಲಿತ್ತಾದರೂ ಅವುಗಳ ಸ್ಥಿತಿ ಮಾತ್ರ ಉತ್ತಮವಾಗಲಿಲ್ಲ. ೧೮೭೦ರಲ್ಲಿ ಪ್ರತ್ಯೇಕವಾದ ಒಂದು ನೀರಾವರಿ ಇಲಾಖೆಯೇ ಅಸ್ತಿತ್ವಕ್ಕೆ ಬಂದಿತಾದರೂ ತರುವಾಯದಲ್ಲಿ ಬಹಳ ವೆಚ್ಚದ ಇಲಾಖೆಯಿದೆಂದು ಮುಚ್ಚಲಾಯಿತು.[೧೯] ಲೋಕೋಪಯೋಗಿ ಇಲಾಖೆಯ ವೆಚ್ಚವನ್ನು ಕಡಿಮೆ ಮಾಡುವ ದೃಷ್ಟಿಯಿಂದ ಸಣ್ಣಪುಟ್ಟ ಕೆರೆಗಳ ದುರಸ್ತಿ ಹಾಗೂ ಉಸ್ತುವಾರಿ ಕಾರ್ಯವನ್ನು ರೈತರಿಗೆ

ವಹಿಸಲಾಯಿತು. ಈ ಯೋಜನೆ ಫಲಕಾರಿಯಾಗಲಿಲ್ಲ. ಹಾಗಾಗಿ ಅಸಂಖ್ಯಾತವಾದ ಸಣ್ಣ ಕೆರೆಗಳು ಹಾಳುಬಿದ್ದವು. ಕೆರೆಗಳ ದುರಸ್ತಿಕಾರ್ಯದಲ್ಲಿ ರೈತರೊಡನೆ ಸರ್ಕಾರವೂ ಕೈಜೋಡಿಸಬೇಕಾದ ಅನಿವಾರ್ಯವಿತ್ತಾದರೂ ರೈತರಿಗೆ ಮಾತ್ರ ಈ ಜವಾಬ್ದಾರಿಯನ್ನು ವಹಿಸಿದ ಪರಿಣಾಮ ಹೀಗಾಯಿತೆಂದು ಹೇಳದೆ ವಿಧಿಯಿಲ್ಲ. ಕೆರೆಗಳ ಉಸ್ತುವಾರಿ ಕಾರ್ಯವನ್ನು ರೈತರು ಆಗಲೇ ಮರೆತಿದ್ದ ಪರಿಣಾಮವಾಗಿ ಮತ್ತೆ ದಕ್ಷ ರೀತಿಯಲ್ಲಿ ಅವರು ಪುನಃ ಪ್ರಾರಂಭಿಸುವ ಸ್ಥಿತಿಯಲ್ಲಿರಲಿಲ್ಲ.[೨೧] ರಾಜ್ಯವು ಮಹಾರಾಜರ ಆಳ್ವಿಕೆಗೆ ಬಂದ ನಂತರ ನೇರ ಆಡಳಿತದ ಅವಧಿಗಿಂತ ನೀರಾವರಿಯ ಸ್ಥಿತಿ ಉತ್ತಮವಾಗುವುದೆಂದು ನಿರೀಕ್ಷಿಸಲಾಗಿತ್ತು. ಮೈಸೂರು ರಾಜ್ಯದ ಒಳಗೆ ಸಾಕಷ್ಟು ಪ್ರಮಾಣದಲ್ಲಿ ನೀರಿತ್ತಾದರೂ ಸಮರ್ಪಕವಾದ ರೀತಿಯಲ್ಲಿ ಬಳಕೆಯಾಗದ ಕಾರಣ ೧೮೭೬-೭೮ರ ಕ್ಷಾಮವನ್ನು ತಡೆಗಟ್ಟಲಾಗಲಿಲ್ಲ. ಜನರ ಅಗತ್ಯಗಳನ್ನು ಪೂರೈಸುವುದಕ್ಕೆ ಇದರಿಂದ ಸಾಧ್ಯವಾಗುತ್ತಿತ್ತು. ಅನೇಕ ಸಾವು ನೋವುಗಳು ಸಂಭವಿಸಿತು; ಇದೂ ಸಾಲದೆಂಬಂತೆ ಬ್ರಿಟಿಷರು ಧಾನ್ಯವನ್ನು ರಫ್ತು ಮಾಡಿದರೂ ಕೂಡ. ಕ್ಷಾಮವು ತಲೆದೋರಿದ ಸಂದರ್ಭದಲ್ಲಿ ನೀರಾವರಿಗೆ ಹೆಚ್ಚಿನ ಆದ್ಯತೆ ಕೊಡುವ ಬದಲು ಇದರ ಪರಿಹಾರಾರ್ಥವಾಗಿ ರೈಲ್ವೆ ಅಭಿವೃದ್ಧಿಪಡಿಸುವುದು ಸರ್ಕಾರದ ಆದ್ಯತೆಯಾದದ್ದು ವಿಷಾದನೀಯ.

ಕ್ಷಾಮ ಆಯೋಗ ಕೆಲವು ಕ್ಷೇತ್ರಗಳಲ್ಲಿ ನೀರಾವರಿಯನ್ನು ತುರ್ತಾಗಿ ಕೈಗೊಳ್ಳಬೇಕೆಂದು ಒತ್ತು ನೀಡಿ ಹೇಳಿತಾದರೂ ಈ ದಿಶೆಯಲ್ಲಿ ಬ್ರಿಟಿಷರು ಯಾವ ಪ್ರಯತ್ನವನ್ನು ಮಾಡಲಿಲ್ಲ. ೧೯ನೇ ಶತಮಾನದ ಕೊನೆಯ ಭಾಗದಲ್ಲಿ ಮಾತ್ರ ಸಂಬಂಧಪಟ್ಟವರಿಗೆ ಅರಿವು ಮೂಡಿದ ಕುರುಹು ಕಾಣಿಸಿಕೊಳ್ಳುತ್ತದೆ.

ನೀರಾವರಿಯ ಪ್ರಾಮುಖ್ಯತೆಯನ್ನು ಒತ್ತಿ ಹೇಳಿದಾಗ್ಯೂ ಸಹ ಈ ದಿಶೆಯಲ್ಲಿ ಸರ್ಕಾರ ಗಮನ ಹರಿಸದೆ ಇದ್ದದ್ದರಿಂದ ಕರ್ನಾಟಕದ ಜನರಲ್ಲಿ ತಾವು ಪರಕೀಯರ ಅಧೀನದಲ್ಲಿ ಇರುವ ಭಾವನೆ ಸ್ಪಷ್ಟವಾಗಿ ರಾಷ್ಟ್ರೀಯಪ್ರಜ್ಞೆ ಅವರ ಮನಸ್ಸಿನಲ್ಲಿ ಮೂಡತೊಡಗಿತು. ಭಾರತೀಯ ಆರ್ಥಿಕ ಸಂಕಷ್ಟಗಳಿಗೆ ಬ್ರಿಟಿಷರ ವಸಾಹತು ನೀತಿಯೇ ಮುಖ್ಯ ಕಾರಣವೆಂದು ಅವರಿಗೆ ಅನ್ನಿಸಿತು.

ಮೈಸೂರಿನ ನೀರಾವರಿ ಕೆಲಸವನ್ನು ಸಮೀಕ್ಷಿಸಿದರೆ ಪರಿಹಾರ ಅಪೇಕ್ಷಿಸಿದ್ದ ದೋಷಗಳು ಕಾಣಸಿಗುತ್ತವೆ. ನೀರಾವರಿಗೆ ನೀಡಿದ ಧನ ಸಹಾಯ ಅತ್ಯಲ್ಪ ಪ್ರಮಾಣದ್ದಾದ್ದರಿಂದ ಕೆಲಸ ತ್ವರಿತ ಗತಿಯಲ್ಲಿ ಸಾಗುವಂತಿರಲಿಲ್ಲ. ಹಾಗಾಗಿ, ತಮ್ಮ ಸಮಸ್ಯೆಗಳಿಗೆ ವಾಸ್ತವಿಕ ಪರಿಹಾರಗಳು ದೊರೆಯಬೇಕಾದರೆ ನೀರಾವರಿಯೇ ಏಕೈಕ ಮಾರ್ಗವೆಂದು ಜನರಿಗೆ ಅರಿವಾಗಿದ್ದರೆ ಆಶ್ಚರ್ಯವಿಲ್ಲ.

ಮೈಸೂರು ಅಧೀನ ಸ್ಥಾನದಲ್ಲಿದ್ದುದ್ದರಿಂದ ಅಭಿವೃದ್ಧಿ ಅಷ್ಟು ಸುಲಭದ ಮಾತಾಗಿರಲಿಲ್ಲ. ಬಂಗಾಳ ವಿಭಜನೆಯ ಸಂದರ್ಭದಲ್ಲಿ ಸ್ವದೇಶಿ ಚಳವಳಿಯ ಹುರುಪನ್ನು ಕಂಡು ದಿವಾನ್ ವಿ.ಪಿ. ಮಾಧವರಾವ್ ಅವರು ನೀಡಿರುವ ಹೇಳಿಕೆಯಿಂದ ಈ ಅಭಿಪ್ರಾಯ ಸ್ಪಷ್ಟವಾಗುತ್ತದೆ; 'ನಿಮ್ಮೆಲ್ಲರ ಮನಸ್ಸಿನಲ್ಲಿರುವ ಅಭಿಪ್ರಾಯವನ್ನೇ ನಾನು ಪ್ರಕಟಪಡಿಸುತ್ತಿರುವುದಾಗಿ ನನಗೆ ಸ್ಪಷ್ಟವಾಗಿ ನಂಬಿಕೆ ಇದೆ. ಮೈಸೂರಿನ ಜನತೆಯ ಪ್ರತಿನಿಧಿಗಳಾದ ನೀವು ಒಪ್ಪುತ್ತೀರಿ, ಸ್ವದೇಶಿ ಚಳವಳಿಯ ಅಮಲಿನಲ್ಲಿ ಕೆಲವರು ಮಾರ್ಗತಪ್ಪಿದ ಚಳವಳಿಕೋರರು ಎಸಗಿರುವ ಕೃತ್ಯಗಳು ನಮ್ಮ ಸ್ವಭಾವಕ್ಕೆ, ನಂಬಿಕೆಗಳಿಗೆ ಹಾಗೂ ವಿಧಾನಗಳಿಗೆ ಸಂಪೂರ್ಣವಾಗಿ ಒಗ್ಗತಕ್ಕವಲ್ಲ. ಇದೆಲ್ಲಕ್ಕಿಂತ ಮುಖ್ಯವಾಗಿ, ನಾವು ನಮ್ಮ ಮಹಾರಾಜರಿಗೆ ಸಲ್ಲಿಸಬೇಕಾದ ಗೌರವದ ಜೊತೆಗೆ ಪರಮಾಧಿಕಾರಕ್ಕೂ ಸಲ್ಲಿಸಬೇಕಾದ ಗೌರವವಿದೆ. (ನಾವು ಹಾಗೂ ರಾಜ್ಯ- ಈ ಶಿವನಸಮುದ್ರದ ಜಲವಿದ್ಯುತ್ ಯೋಜನೆಯನ್ನು ಕೈಗೊಂಡ ನಂತರ, ಚಿನ್ನದ ಗಣಿಯ ಅಗತ್ಯವನ್ನು ಪೂರೈಸಲು). ಹಾಗಾಗಿ

ಪರಮಾಧಿಕಾರಕ್ಕೆ ತಲೆಬಾಗಬೇಕಾಗಿದೆ; ಬ್ರಿಟಿಷ್ ಸಿಂಹಾಸನಕ್ಕೆ ನಾವು ತೋರಬೇಕಾದ ನಿಷ್ಠೆಯ ಪ್ರಮಾಣ ಕಿಂಚಿತ್ತು ಕಡಿಮೆಯಾದರೂ ಆ ಪ್ರಯತ್ನಗಳನ್ನೆಲ್ಲಾ ನೀವು ತುಚ್ಛೀಕರಿಸಬೇಕು, ಅಷ್ಟೇ ಅಲ್ಲ ಬಗ್ಗು ಬಡಿಯಬೇಕು'.[೨೨]

(ಬ್ರಿಟಿಷ್ ಪ್ರೆಸಿಡೆನ್ಸಿಯಾದ) ಮದರಾಸು ಸರ್ಕಾರದ ಚೌಕಾಸಿ ವಿಧಾನಗಳಿಂದಾಗಿ ನೀರಾವರಿ ಕ್ಷೇತ್ರದಲ್ಲಿ ಮೈಸೂರು ಗಣನೀಯ ಪ್ರಗತಿ ಸಾಧಿಸದೇ ಹೋದುದು ಸಹಜವೇ ಆಗಿದೆ. ಮೈಸೂರು ಕೈಗೊಂಡ ಪ್ರತಿಯೊಂದು ಯೋಜನೆಗೂ ಮದರಾಸು ಸರ್ಕಾರ ತಡೆಯೊಡ್ಡಿದ ಪರಿಣಾಮವಾಗಿ ಹತಾಶೆಯಿಂದ ಮೈಸೂರು ತನ್ನೆಲ್ಲಾ ಯೋಜನೆಗಳನ್ನು ಕೈ ಬಿಡಬೇಕಾಯಿತು. ಈ ವಿಷಯದಲ್ಲಿ ಬಲಿಯಾದ ಮೊದಲನೆಯ ಯೋಜನೆ ಅಂದರೆ 'ಮಾರಿಕಣಿವೆ' ಜಲಾಶಯ ಯೋಜನೆ – ಚಿತ್ರದುರ್ಗದಂಥ ಜಿಲ್ಲೆಗೆ ಈ ಯೋಜನೆ ಅತ್ಯಗತ್ಯವಾಗಿದ್ದಿತು ಎಂಬುದನ್ನು ಒತ್ತಿಹೇಳುವ ಅಗತ್ಯವಿಲ್ಲ. ಮರುಭೂಮಿಯಾಗುವ ಘಟ್ಟಕ್ಕೆ ಆ ಭೂಪ್ರದೇಶ ತಲುಪುವುದನ್ನು ತಪ್ಪಿಸಲು ಏನಾದರೊಂದು ಕಾರ್ಯಕ್ರಮವನ್ನು ತುರ್ತಾಗಿ ಕೈಗೊಳ್ಳಬೇಕಾಗಿತ್ತು.. ಚಿತ್ರದುರ್ಗ ಜಿಲ್ಲೆ ಮೇಲಿಂದ ಮೇಲೆ ಕ್ಷಾಮಕ್ಕೆ ತುತ್ತಾಗುವ ಜಿಲ್ಲೆ. ಆ ಪ್ರದೇಶದಲ್ಲಿ ಒಂದು ಜಲಾಶಯ ನಿರ್ಮಾಣವಾದ ಪಕ್ಷದಲ್ಲಿ ದೀರ್ಘಾವಧಿಯಲ್ಲಿ ಜಲಕ್ಷಾಮದ ಪರಿಸ್ಥಿತಿಯನ್ನು ತಡೆಗಟ್ಟಲು ಅನುಕೂಲವಾಗುವುದು.

ನಿರ್ಮಾಣಕ್ಕಾಗಿ ಅನೇಕ ಬಾರಿ ಯೋಜನೆ ಸಿದ್ಧವಾಗಿತ್ತಾದರೂ ಮಾರಿಕಣಿವೆ ಜಲಾಶಯ ಯೋಜನೆ ಮುಂದೂಡಲ್ಪಟ್ಟಿತು. ಬ್ರಿಟಿಷ್ ಆಯುಕ್ತರ ಆಡಳಿತಾವಧಿಯಲ್ಲೇ ೧೮೫೫ರಲ್ಲಿ ಈ ಜಲಾಶಯದ ಅಗತ್ಯದ ಬಗ್ಗೆ ಮನವರಿಕೆಯಾಗಿತ್ತಾದರೂ, ೧೮೯೨ರಲ್ಲಿ ಮದರಾಸು ಸರ್ಕಾರ ಇದಕ್ಕೆ ತಡೆಯೊಡ್ಡಿತು, ಅದರ ಪ್ರಕಾರ ಈ ಯೋಜನೆ ಏನಾದರೂ ಕಾರ್ಯರೂಪಕ್ಕೆ ಬಂದ ಪಕ್ಷದಲ್ಲಿ ಮದರಾಸು ಪ್ರಾಂತ್ಯದ ನೀರಾವರಿ ಯೋಜನೆಗೆ ತೊಂದರೆಯಾಗುವುದು. ೧೮೯೨ರ ಒಪ್ಪಂದದ ಪ್ರಕಾರ ಮದರಾಸು ಸರ್ಕಾರ ಮೈಸೂರು ಪ್ರಾಂತ್ಯದೊಳಗಿನ ಯಾವುದೇ ನೀರಾವರಿ ಯೋಜನೆಗೆ ಆದ್ಯತೆಯ ಮೇರೆಗೆ ಒಪ್ಪಿಗೆ ನೀಡಬೇಕಾಗಿತ್ತು. ಪ್ರಚಲಿತವಿದ್ದ ರಾಜಕೀಯ ವಿದ್ಯಮಾನಗಳನ್ನು ಗಮನದಲ್ಲಿಟ್ಟುಕೊಂಡು ಹೇಳುವುದಾದರೆ ಈ೧೮೯೨ರ ಒಪ್ಪಂದ ಸ್ವೀಕಾರಾರ್ಹವಾಗಿರಲಿಲ್ಲ (ಈ ಒಪ್ಪಂದದ ರೀತ್ಯಾ ಮೈಸೂರು ಪ್ರಾಂತ್ಯ ಮೇಲ್ದಂಡೆಯಲ್ಲಿರುವ ಕಾರಣ ಕೆಳದಂಡೆ ಪ್ರದೇಶವಾದ ಮದರಾಸಿನ ಪೂರ್ವಾನುಮತಿ ಇಲ್ಲದೆ ಹೊಸ ನೀರಾವರಿ ಯೋಜನೆಯನ್ನು ಕೈಗೊಳ್ಳುವಂತಿರಲಿಲ್ಲ). ಮದರಾಸು ಸರ್ಕಾರ ಈ ವಿಷಯವಾಗಿ ಕೋಲಾಹಲವೆಬ್ಬಿಸಿತು, ಅದರ ಪ್ರಕಾರ ಮೈಸೂರಿನಂಥ ಊಳಿಗಮಾನ್ಯ ಸರ್ಕಾರದ ಸಂದರ್ಭದಲ್ಲಿ ಅಂತಾರಾಷ್ಟ್ರೀಯ ಜಲ ಹಕ್ಕುಗಳು ಅನ್ವಯವಾಗುವುದಿಲ್ಲ; ಪರಮಾಧಿಕಾರದ ಮತ್ತು ಮೈಸೂರಿನ ಸಂಬಂಧ ಊಳಿಗಮಾನ್ಯವಾದುದೆಂಬುದು ಈ ವಾದಕ್ಕೆ ಕಾರಣವೆನ್ನಬಹುದು.[೨೩] ಈ ಯೋಜನೆ ಅನುಷ್ಠಾನಗೊಳ್ಳಲು ೪೪ ವರ್ಷಗಳೇ ಹಿಡಿಯಿತು.

ಮೈಸೂರು ಸರ್ಕಾರ ರೆಸಿಡೆಂಟರಿಗೆ ಬರೆದು ಮದರಾಸು ಸರ್ಕಾರ ತಮ್ಮ ತಡೆಯೊಡ್ಡುವ ಕ್ರಮವನ್ನು ಪುನರ್‌ಪರಿಶೀಲಿಸುವಂತೆ ಮಾಡಬೇಕೆಂದು ಕೇಳಿಕೊಂಡ ನಂತರ ೧೮೯೪ ಫೆಬ್ರವರಿಯಲ್ಲಿ ಅಂತಿಮವಾಗಿ ಮದರಾಸು ಸರ್ಕಾರ ತನ್ನ ಸಮ್ಮತಿಯನ್ನು ನೀಡಿತು. ಆದರೆ ಪುನಃ ೧೮೯೮ರಲ್ಲಿ ಮತ್ತೆ ತಕರಾರು ತೆಗೆಯಿತು. ಮೈಸೂರು ಸರ್ಕಾರ ತನ್ನಿಂದ ಯಾವ ಲೋಪವೂ ಆಗದೆಂದು ತಿಳಿಸಿದ ನಂತರ ೧೮೯೯, ಏಪ್ರಿಲ್‌ನಲ್ಲಿ ಮದರಾಸು ಸರ್ಕಾರ ತಕರಾರು ವಾಪಸ್ಸು ಪಡೆಯಿತು.

ಕಾವೇರಿ ನದಿಗೆ ಅಡ್ಡಲಾಗಿ ಜಲಾಶಯವೊಂದನ್ನು ನಿರ್ಮಿಸುವ ಯೋಜನೆಯು ಬಹುಕಾಲದಿಂದ ಚರ್ಚಿತವಾಗುತ್ತಲೇ ಇತ್ತು (ಆದರೆ ಈ ವಿಷಯ ಪ್ರಮುಖವಾಗಿ ಕಾಣಿಸಿಕೊಂಡುದು ೧೯೦೨ರಲ್ಲಿ ನೀರಾವರಿಗೆ ಹೆಚ್ಚುವರಿ ವಿದ್ಯುತ್ತನ್ನು ಪೂರೈಸಲು ಕಾವೇರಿ ಜಲಾಶಯ ಯೋಜನೆಯನ್ನು ಹಮ್ಮಿಕೊಳ್ಳಲು

ಪ್ರಯತ್ನ ನಡೆಯಿತು. ಆದರೆ ಈ ಜಲಾಶಯ ನಿರ್ಮಾಣದಲ್ಲಿ ಮನುಷ್ಯ ನಿರ್ಮಿತ ತೊಂದರೆಗಳ ಜೊತೆಗೆ ನಿಸರ್ಗದಿಂದ ಕೂಡ ಅನೇಕ ಕಂಟಕಗಳು ತಲೆದೋರಿದವು.[೨೪]

ಪ್ರಾರಂಭದಲ್ಲಿಯೇ ಕಾವೇರಿ ಜಲಾಶಯ ಯೋಜನೆಯ ವೆಚ್ಚದ ಅಂದಾಜು ಅಧಿಕವಾಗಿತ್ತು (ರೂ. ೨೫೩ ಲಕ್ಷ). ಇಷ್ಟೊಂದು ಪ್ರಮಾಣದಲ್ಲಿ ವೆಚ್ಚ ಮಾಡಿದರೂ ತೊಡಗಿಸಿದ ಹಣಕ್ಕೆ ಲಾಭ ದೊರಕುವುದು ಖಚಿತವಾಗಿಲ್ಲದುದು ಒಂದು ದೊಡ್ಡ ಸಮಸ್ಯೆ. ಹಣಕಾಸು ಕಾರ್ಯದರ್ಶಿ ಜೆ.ಎಸ್. ಚಕ್ರವರ್ತಿಯವರು ವಾಸ್ತವವಾಗಿ ಒಂದು ರೈಲ್ವೆ ಯೋಜನೆಯ ಬಗ್ಗೆ ಹೆಚ್ಚು ಒಲವುಳ್ಳವರಾಗಿದ್ದರು.[೨೫]

ಮೇಲುನೋಟಕ್ಕೆ ತಮ್ಮ ಹಕ್ಕನ್ನು ಕಾಪಾಡಿಕೊಳ್ಳಲು ಮಾತ್ರ ಮದರಾಸು ಸರ್ಕಾರ ಕಾವೇರಿ ಜಲಾಶಯ ಯೋಜನೆಯನ್ನು ವಿರೋಧಿಸಿದರೆಂದು ಕಂಡುಬಂದರೂ ಅಂತರ್ಯದಲ್ಲಿ ಮೈಸೂರು ನೀರಾವರಿ ಕೆಲಸಗಳನ್ನು ತಡೆಯುವುದು ಅದರ ಉದ್ದೇಶವಾಗಿತ್ತು. ಮೈಸೂರಿನ ಮುಖ್ಯ ನದಿಯಾದ ಕಾವೇರಿಯಲ್ಲಿ, ಶಿಲಾತಳದ ಪರಿಣಾಮ ಜಲಮಾರ್ಗದ ಅನುಕೂಲತೆ ಇರಲಿಲ್ಲ. ಆದರೆ ನೀರಾವರಿಗೆ ಉತ್ತಮ ರೀತಿಯಲ್ಲಿ ಉಪಯೋಗಿಸಿಕೊಳ್ಳಲಾಗಿತ್ತು. ಯೂರೋಪಿಯನ್ನರಿಗೆ ಮಾತ್ರ ಅದ್ಭುತವಾದ ಇಂಜಿನಿಯರಿಂಗ್ ಸಾಹಸಗಳು ಸಾಧ್ಯ ಎಂದು ಆಂಗ್ಲರು ನಂಬಿದ್ದ ಸಂದರ್ಭದಲ್ಲಿ ಕಾವೇರಿ ನದಿಯುದ್ದಕ್ಕೂ ನಿರ್ಮಾಣವಾಗಿದ್ದ ಹಳೆಯ ಕಾಲದ ಅಣೆಕಟ್ಟು ಹಾಗೂ ಕಾಲುವೆಗಳನ್ನು ಅವರು ಕಣ್ತೆರೆದು ನೋಡುವಂತೆ ಮಾಡಲಾಯಿತು. ಸುಮಾರು ಹತ್ತು-ಹನ್ನೆರಡು ಸಂಖ್ಯೆಯಲ್ಲಿದ್ದ ಈ ಅಣೆಕಟ್ಟುಗಳನ್ನು ಒರಟುಕಲ್ಲು ಹಾಗೂ ಮರದ ಹಲಗೆಗಳ ಸಹಾಯದಿಂದ ನಿರ್ಮಿಸಿದ್ದರು.[೨೬]

ನೇರವಾದ ಬ್ರಿಟಿಷರ ಆಡಳಿತ ತಪ್ಪಿ ಮೈಸೂರು ಸಂಸ್ಥಾನಕ್ಕೆ ರಾಜ್ಯಭಾರವನ್ನು ವಹಿಸಿದ ನಂತರವೂ ಮೈಸೂರು ಅರಸರು ಬ್ರಿಟಿಷರ ನೀತಿಯನ್ನೇ ಹೆಚ್ಚೂ ಕಡಿಮೆ ಮುಂದುವರಿಸಿದ ಕಾರಣ, ನೀರಾವರಿ ಯೋಜನೆಯ ಪ್ರಗತಿಗೆ ಭಾರಿ ಅಡ್ಡಿಯುಂಟಾಯಿತು. ಕಾವೇರಿ ನದಿಗೆ ಮೆಟ್ಟೂರು ಬಳಿ ಅಣೆಕಟ್ಟೆ ಕಟ್ಟಲು ಮದರಾಸು ಸರ್ಕಾರ ಸಕಲ ಸಿದ್ಧತೆಯನ್ನೂ ನಡೆಸಿರುವಾಗ, ಮೈಸೂರು ಪ್ರಾಂತ್ಯದ ಕನ್ನಂಬಾಡಿ ಬಳಿ ಅಣೆಕಟ್ಟು ನಿರ್ಮಾಣಕ್ಕೆ ಒಪ್ಪಿಗೆ ನೀಡಿದ ಪಕ್ಷದಲ್ಲಿ ಮೆಟ್ಟೂರಿನ ಅಣೆಕಟ್ಟಿಗೆ ನೀರು ಸಾಲದಾಗುವುದೆಂದು ಮದರಾಸಿನ ದಿಗಿಲಾಗಿತ್ತು.

೧೯೧೧ರಲ್ಲಿ ಕಾವೇರಿ ಜಲಾಶಯ ಯೋಜನೆ ಆರಂಭವಾಯಿತಾದರೂ ಮದರಾಸು ಸರ್ಕಾರ ತಕರಾರು ತೆಗೆದು ತರುವಾಯದಲ್ಲಿ ಕೇವಲ ಮೊದಲನೇ ಹಂತದ ಕೆಲಸಕ್ಕೆ ಒಪ್ಪಿಗೆ ನೀಡಿತು. ಬಹಳ ದೀರ್ಘವಾದ ಪತ್ರವ್ಯವಹಾರ ನಡೆಸಿದ ನಂತರ ಮದರಾಸು ಸರ್ಕಾರ ೧೧,೦೦೦ ದಶಲಕ್ಷ ಘನಅಡಿ ನೀರನ್ನು ಹಿಡಿದಿಡುವಂಥ ಒಂದು ಜಲಾಶಯ ನಿರ್ಮಿಸಲು ಮೈಸೂರು ಸರ್ಕಾರಕ್ಕೆ ಅನುಮತಿ ನೀಡಿತು. ಈ ಪ್ರಮಾಣದ ಜಲಾಶಯದಿಂದ ಚಿನ್ನದ ಗಣಿಗೆ ಸಾಕಾಗುವಷ್ಟು ವಿದ್ಯುತ್ತನ್ನು ಮಾತ್ರ ಉತ್ಪಾದಿಸಿಕೊಳ್ಳುವ ಅವಕಾಶವಿತ್ತು. ಎರಡನೇ ಹಂತದ ಕಾರ್ಯದೊಂದಿಗೆ ಮೈಸೂರು ಮುಂದುವರಿಯತೊಡಗಿದಾಗ, ಮದರಾಸು ತಕರಾರು ತಗೆದು ನ್ಯಾಯಮಂಡಳಿಗೆ ಹೋಯಿತು. ಮೂಲ ವಿನ್ಯಾಸದ ಪ್ರಕಾರ ಮೈಸೂರು ಕೆಲಸವನ್ನು ಮುಂದುವರಿಸಬಹುದೆಂದು ನ್ಯಾಯಮಂಡಳಿ ತೀರ್ಪು ನೀಡಿತು. ಆದರೆ ಈ ತೀರ್ಪಿನ ವಿರುದ್ಧ ಮದರಾಸು ಮತ್ತೆ ತಕರಾರು ಹೂಡಿತು. ಮದರಾಸಿನ ರಾಜಕೀಯ ವರ್ಚಸ್ಸು ಹಾಗೂ ಪ್ರಭಾವದಿಂದಾಗಿ ೧೯೨೪ರಲ್ಲಿ ಹೊರಬಂದ ತೀರ್ಮಾನವು ಮದರಾಸಿಗೇ ಹೆಚ್ಚು ಅನುಕೂಲಕರವಾಗಿತ್ತು.

ಮೈಸೂರು ಪ್ರಾಂತ್ಯದ ನೀರಾವರಿ ಯೋಜನೆಯನ್ನು ಗಮನಿಸಿದರೆ ಬ್ರಿಟಿಷರ ಆಡಳಿತ ಮೈಸೂರಿನ ಹಿತ ಹಾಗೂ ಮೈಸೂರಿನ ಜನತೆಯ ಹಿತ ಕಾಯುವ ಉದ್ದೇಶ ಹೊಂದಿರಲಿಲ್ಲ ಎಂಬುದು ಚೆನ್ನಾಗಿ ತಿಳಿದುಬರುತ್ತದೆ. ಮದರಾಸು ಸರ್ಕಾರ ಹೆಜ್ಜೆ ಹೆಜ್ಜೆಗೂ ಅಡ್ಡಿಯುಂಟುಮಾಡುತ್ತಿದ್ದ ಕಾರಣ ಮೈಸೂರು ಸರ್ಕಾರ ಯಾವುದೇ ನೀರಾವರಿ ಯೋಜನೆಯನ್ನು ಕೈಗೆತ್ತಿಕೊಳ್ಳುವ ತಂಟೆಗೆ ಹೋಗಲಿಲ್ಲ. ಜೊತೆಗೆ ಬ್ರಿಟಿಷ್ ಸಾಮ್ರಾಜ್ಯಶಾಹಿಗಳು ಮೈಸೂರು ಪ್ರಾಂತ್ಯದ ಅಭಿವೃದ್ಧಿ ಯೋಜನೆಗಳನ್ನು ಪ್ರೋತ್ಸಾಹಿಸದೇ ಹೋದದ್ದು ಈ ಕಾರ್ಯಕ್ರಮ ಕುಂಠಿತವಾಗಲು ಇನ್ನೊಂದು ಕಾರಣವಾಯಿತು.

ಬ್ರಿಟಿಷರ ಆಡಳಿತ ಕಾಲದಲ್ಲಿ ಕೈಗಾರಿಕೆಯ ಬೆಳವಣಿಗೆಗೆ ಅನುಕೂಲಕರ ವಾತಾವರಣ ನಿರ್ಮಾಣವಾಗದಿದ್ದರೂ ಸಹ, ಇಲ್ಲಿನ ದಿವಾನರ ದೂರದೃಷ್ಟಿಯ ಕಾರಣ ಕೈಗಾರಿಕಾ ಅಭಿವೃದ್ಧಿ ಸಂಪೂರ್ಣವಾಗಿ ಕುಂಠಿತವಾಗಲಿಲ್ಲ ಎಂಬುದನ್ನು ನೆನಪಿಡಬೇಕು. ಆ ಸಂದರ್ಭದಲ್ಲಿ ಪ್ರಾರಂಭವಾದ ಕೆಲವು ಕೈಗಾರಿಕಾ ಸಂಸ್ಥೆಗಳಿಗೆ ಕೈಗಾರಿಕೆ ಹಾಗೂ ವಾಣಿಜ್ಯ ಇಲಾಖೆಯ ಪ್ರೋತ್ಸಾಹ ಮತ್ತು ಉತ್ತೇಜನ ದೊರೆಯಿತು. ಗುಡಿಕೈಗಾರಿಕೆ ಹಾಗೂ ಸಣ್ಣ ಕೈಗಾರಿಕೆಗಳನ್ನು ಪುನಃಶ್ಚೇತನಗೊಳಿಸುವುದು ರಾಜ್ಯ ಸರ್ಕಾರದ ಒಲುಮೆಯಾಗಿತ್ತು. ದಿವಾನ್ ಶೇಷಾದ್ರಿ ಐಯ್ಯರ್ ದೇಶೀಯವಾದ ಕೈಗಾರಿಕೆಯ ಮೇಲೆ ಒತ್ತು ಕೊಟ್ಟರು. ಹಾಗೆಯೇ ಅವರ ಉತ್ತರಾಧಿಕಾರಿಗಳೂ ಕೂಡ ಈ ಧೋರಣೆಯನ್ನು ಸಂಪೂರ್ಣವಾಗಿ ಒಪ್ಪುವುದರ ಜೊತೆಗೆ ಮುಂದುವರಿದ ಕೈಗಾರಿಕೆ ಹಾಗೂ ತಾಂತ್ರಿಕ ಶಿಕ್ಷಣವನ್ನು ನೀಡುವ ಮಹತ್ವವನ್ನು ಅರಿತರು. ಈ ತಿಳುವಳಿಕೆಯ ಫಲವಾಗಿ ಕೈಗಾರಿಕಾ ವಸ್ತು ಪ್ರದರ್ಶನವೆಂಬ ಕಲ್ಪನೆ ಜನ್ಮತಾಳಿತು.

ಈ ಶತಮಾನದ ಆರಂಭದಲ್ಲಿ ಗೋಚರವಾದ ರಾಷ್ಟ್ರೀಯವಾದಿ ದೃಷ್ಟಿಕೋನವು ಆರ್ಥಿಕ ಅಭಿವೃದ್ಧಿಯನ್ನು ಕೇವಲ ಸಾರಿಗೆ ಹಾಗೂ ವ್ಯಾಪಾರ ವಲಯಗಳಿಗೆ ಮಾತ್ರ ಸೀಮಿತಗೊಳಿಸದೆ ಸಮಗ್ರವಾಗಿ ಗ್ರಹಿಸಬೇಕಾದ ಅಗತ್ಯತೆಯನ್ನು ಮನಗಂಡಿತು. ಆರ್ಥಿಕ ಅಭಿವೃದ್ಧಿಗೆ ಇತರ ಕಾರ್ಯಕ್ರಮಗಳೊಂದಿಗೆ ಮುಖ್ಯವಾಗಿ ಬೇಕಾದದ್ದು ಆಧುನಿಕ ಕೈಗಾರಿಕೀಕರಣವೆಂಬುದನ್ನು ಅವರು ಅರಿತವರಾದರು.

ಕೈಗಾರಿಕೆಯಲ್ಲಿ ತಾವು ಎಷ್ಟು ಹಿಂದುಳಿದಿದ್ದೇವೆ ಎಂದು ತಿಳಿದಾಗ ಜನರಿಗೆ ಕೈಗಾರಿಕಾ ಅಭಿವೃದ್ಧಿಯ ಮಹತ್ವ ತಿಳಿದುಬಂತು. ಹತ್ತೊಂಬತ್ತನೆಯ ಶತಮಾನದ ಕೊನೆಯ ಭಾಗದಲ್ಲಿ ಹಾಗೂ ಇಪ್ಪತ್ತನೆಯ ಶತಮಾನದ ಆದಿಭಾಗದಲ್ಲಿ ಮೈಸೂರಿನ ದಿವಾನರು ಆರ್ಥಿಕ ಮುನ್ನಡೆಯ ವಿಷಯದಲ್ಲಿ ಹೆಚ್ಚು ಕ್ರಿಯಾಶೀಲವಾದ ಆಸಕ್ತಿ ಹೊಂದಿದರು. ಮೈಸೂರಿನ ಆರ್ಥಿಕ ಸ್ಥಿತಿಗತಿಯನ್ನು ಉತ್ತಮಪಡಿಸಲು ದಿವಾನ್ ಆನಂದರಾವ್ ಅವರು ಕೈಗೊಂಡ ಕಾರ್ಯಕ್ರಮಗಳಲ್ಲಿ ಕೈಗಾರಿಕಾ ಸಮೀಕ್ಷೆಯೂ ಒಂದು. ಇದು ಕೈಗಾರಿಕಾ ಶಿಕ್ಷಣದ ಖಚಿತವಾದ ಬುನಾದಿಯಾಗಿತ್ತೆಂಬುದು ಆಗಿನ ಅಭಿಪ್ರಾಯ.[೨೬] ಶಿಕ್ಷಣವು ಹೆಚ್ಚು ಸಾಹಿತ್ಯಕವಾದ ಸಂಗತಿಗಳಿಗೆ ವಾಲಿದ್ದಿತಲ್ಲದೆ ಕೈಗಾರಿಕಾ ಹಾಗೂ ವೈಜ್ಞಾನಿಕವಾದ ಅಂಶಗಳಿಗೆ ಅಲ್ಲಿ ಅಷ್ಟು ಮಹತ್ವ ಇರಲಿಲ್ಲ. ಇದರ ಪರಿಣಾಮವಾಗಿ ಬದುಕಿನ ಸ್ಪರ್ಧೆಯಲ್ಲಿ ಕುಶಲಕರ್ಮಿಗಳು ಹೆಚ್ಚು ಸಂಕಷ್ಟಕ್ಕೀಡಾಗುವಂತಾಯಿತು. ಮೈಸೂರಿನ ಉತ್ಪಾದನಾ ಸಾಮರ್ಥ್ಯ ಕಡಿಮೆಯಾಗಿ, ಮುಂದುವರಿದ ರಾಷ್ಟ್ರಗಳೊಡನೆ ಸ್ಪರ್ಧಿಸಲಾರದಂಥ ಪರಿಸ್ಥಿತಿ ನಿರ್ಮಾಣವಾಯಿತು. ಹಾಗಾಗಿ ಕೈಗಾರಿಕಾ ವಸ್ತು ಪ್ರದರ್ಶನವೊಂದರ ಪ್ರಾಮುಖ್ಯತೆ ಕಂಡುಬಂದಿತು. ಇದರಿಂದ ಒಮ್ಮಿಂದೊಮ್ಮೆಲೇ ಕ್ರಾಂತಿಕಾರಕವಾದ ಮಾರ್ಪಾಟಾಗುತ್ತದೆ ಎಂದು ಸರ್ಕಾರ ತಿಳಿದಿರಲಿಲ್ಲ ಎಂಬುದು ನಿಜ. ಪ್ರಗತಿಯ ಹಾದಿಯಲ್ಲಿ ಶಿಕ್ಷಣದ ಮಹತ್ವ ಗಣನೀಯವಾಗಿರುವುದಾಗಿ ಅವರು ಮನಗಂಡಿದ್ದರು.[೨೭]

ದಸರಾ ವಸ್ತುಪ್ರದರ್ಶನದ ಮುಖ್ಯ ಉದ್ದೇಶ ದಕ್ಷಿಣ ಭಾರತದ ಕೈಗಾರಿಕೆಗಳನ್ನು ಉತ್ತೇಜಿಸುವುದೇ ಆಗಿತ್ತು. ಈ ವಸ್ತುಪ್ರದರ್ಶನದಲ್ಲಿ ಬೆಳೆಯುತ್ತಿರುವ ಅನೇಕ ಕೈಗಾರಿಕೆಗಳನ್ನು ಮೈಸೂರಿನ ಜನತೆಗೆ ಪರಿಚಯ ಮಾಡಿಕೊಡಲಾಗುತ್ತಿತ್ತು. ಇಂಥ ವಸ್ತುಪ್ರದರ್ಶನಗಳು ನಡೆಯುವ ಮೊದಲು ಪ್ರಾಯಶಃ ಜನರಿಗೆ ಈ ಕೈಗಾರಿಕೆಗಳ ಅಸ್ತಿತ್ವವೂ ತಿಳಿದಿರಲಿಲ್ಲವೆಂದು ಭಾವಿಸಬಹುದಾಗಿದೆ. ಈ ಕೈಗಾರಿಕಾ ವಸ್ತುಪ್ರದರ್ಶನಗಳು ಸಾವಿರಾರು ಜನರನ್ನು ಆಕರ್ಷಿಸುವುದಲ್ಲದೆ ಐಹಿಕ ಪ್ರಗತಿ ಮತ್ತು ಸಂಪತ್ತಿನ ಅಭಿವೃದ್ಧಿಗೆ ಈ ಮಾರ್ಗ ಶ್ರೇಯಸ್ಕರವೆಂಬುದನ್ನು ತಿಳಿಯಪಡಿಸಿದುವು. ಭಾರತೀಯ ಕಾರ್ಖಾನೆಗಳು ತಯಾರಿಸಿದ ಪದಾರ್ಥಗಳನ್ನು ಜನರು ಕೊಂಡುಕೊಂಡರು. ಉದಾಹರಣೆಗೆ, ನಾಗಪಟ್ಟಣಂ ಸ್ವದೇಶಿ ಸ್ಟೀಲ್ ಟ್ರಂಕು ಹಾಗೂ ಕಬ್ಬಿಣ ತಿಜೋರಿ ತಯಾರಿಕಾ ಕಂಪನಿಗಳು ತಯಾರಿಸಿದ ಪದಾರ್ಥಗಳನ್ನು ಜನರು ಕೊಂಡರು.[೨೯]

ಕೈಗಾರಿಕೋದ್ಯಮದ ಕೊರತೆ ಬಹಳ ಮುಖ್ಯವಾದ ಅಂಶವಾಗಿದ್ದು ಇದನ್ನು ನೀಗಲು ಕಾರ್ಮಿಕರು ಮುಂದೆ ಬಂದು ಉತ್ಸಾಹ ತೋರಿದರೆ ಭಾರತದಲ್ಲಿ ಕೈಗಾರಿಕೆಯ ಅಭಿವೃದ್ಧಿ ಆಗಲು ಸಹಕಾರಿಯಾಗುವುದು. ಭಾರತೀಯರ ಕೌಶಲ್ಯ, ಕೆಲಸಗಾರಿಕೆ ಹಾಗೂ ನೈಪುಣ್ಯವನ್ನು ಬ್ರಿಟಿಷರು ಅಲ್ಲಗಳೆಯಲಿಲ್ಲ, ಆದರೆ ಕೈಗಾರಿಕೆಯಲ್ಲಿ ಹಿಂದುಳಿದಿರುವುದಕ್ಕೆ ಭಾರತೀಯರಲ್ಲಿ ಪ್ರಯತ್ನ ಹಾಗೂ ಸಾಹಸಪ್ರವೃತ್ತಿಯ ಕೊರತೆ ಇರುವುದಾಗಿ ಹೇಳಿದರು.[೩೦]

ಈ ವಾಸ್ತವಾಂಶದ ಹಿನ್ನೆಲೆಯಲ್ಲಿ ಗಮನಿಸಿ ಹೇಳುವುದಾದರೆ ಇಲ್ಲಿ ಬಂಡವಾಳ ಹಾಗೂ ಉದ್ಯಮಶೀಲತೆ ಸುಲಭವಾಗಿ ದೊರಕುವಂತಿರಲಿಲ್ಲ. ಜೊತೆಗೆ ಕುಶಲಕರ್ಮಿಗಳ ಕೊರತೆಯಿದ್ದ ಕಾರಣ ಕೈಗಾರಿಕಾ ಅಭಿವೃದ್ಧಿಗೆ ಸರ್ಕಾರವೇ ಜವಾಬ್ದಾರಿ ತೆಗೆದುಕೊಳ್ಳಬೇಕಾಗಿತ್ತು. ಏಕೆಂದರೆ ಕೈಗಾರಿಕೆಯ ಪ್ರಗತಿಗೆ ಇಲ್ಲಿ ವಾತಾವರಣ ಪೂರಕವಾಗಿತ್ತು. ಮೊದಲನೆಯ ಮಹಾಯುದ್ಧದ ಪರಿಣಾಮವಾಗಿ ಕೈಗಾರಿಕಾ ಕ್ಷೇತ್ರದಲ್ಲಿ ಮುಂದಡಿ ಇಡಬೇಕಾದ ಅಗತ್ಯತೆಯೂ ಕಾಣಿಸಿಕೊಂಡಿತ್ತು. ಆದರೆ ಮೈಸೂರು ಸರ್ಕಾರ ಕೈಗೊಂಡ ಕಾರ್ಯಕ್ರಮವೆಂದರೆ ಕೃಷಿ ಹಾಗೂ ಕೈಗಾರಿಕೆ ಸಂಬಂಧಿಸಿದಂತೆ ಕೆಲವು ಯೋಜನೆಗಳನ್ನು ಹಮ್ಮಿಕೊಳ್ಳಲು ಹಾಗೂ ಕೆಲವು ಯಂತ್ರಗಳನ್ನು ಕೊಂಡುಕೊಂಡು ಸ್ಥಾಪಿಸಲು ಅಲ್ಪ ಪ್ರಮಾಣದ ಸಾಲವನ್ನು ಮಂಜೂರು ಮಾಡಿದುದು. ಕೈಗಾರಿಕಾ ಹಾಗೂ ವಾಣಿಜ್ಯ ಸಮಿತಿಯು ಈ ಸಾಲದ ಸಹಾಯವೂ ಅಸಮರ್ಪಕವೆಂದು ಹೇಳಿತಲ್ಲದೆ ಗ್ರಾಮಾಂತರ ಹಾಗೂ ಗುಡಿ ಕೈಗಾರಿಕೆಯ ಸಲುವಾಗಿ ಹೆಚ್ಚಿನ ಧನ ಸಹಾಯ ಮಾಡಬೇಕೆಂದು ನಿಯಮಾವಳಿಯ ಕರಡು ಪ್ರತಿಯನ್ನು ತಯಾರಿಸಿ ಸಲ್ಲಿಸಿತು. ಹಣಕಾಸಿನ ಕಾರ್ಯದರ್ಶಿಗಳು ಈ ನಿಯಮಗಳಿಗೆ ತಮ್ಮ ಒಪ್ಪಿಗೆ ಸೂಚಿಸಿದರಲ್ಲದೆ ಸಣ್ಣ ಕೈಗಾರಿಕೆಯನ್ನು ಪ್ರೋತ್ಸಾಹಿಸುವ ಸಲುವಾಗಿ ಸಾಲವನ್ನು ಮಂಜೂರು ಮಾಡಲಾಯಿತು; ಈ ಕಾರ್ಯಕ್ಕಾಗಿ ತಾತ್ಕಾಲಿಕವಾಗಿ ಎರಡು ವರ್ಷಗಳ ಅವಧಿಗೆ ೨೦,೦೦೦ ರೂಪಾಯಿಗಳನ್ನು ಪ್ರತ್ಯೇಕವಾಗಿ ತೆಗೆದಿರಿಸಲಾಯಿತು.[೩೧]

ಪ್ರಸ್ತುತದಲ್ಲಿ ಕರ್ನಾಟಕವು ಕೈಗಾರಿಕೆಯಲ್ಲಿ ಮುಂದುವರಿದಿರುವುದಕ್ಕೆ ಕಾರಣ ಈ ಮೊದಲು ಕರ್ನಾಟಕದ ಕೆಲವು ನಾಯಕರು ಕೈಗಾರಿಕಾ ಅಭಿವೃದ್ಧಿಯ ಮಹತ್ವವನ್ನು ಮನಗಂಡು ಆ ದಿಶೆಯಲ್ಲಿ ಕಾರ್ಯಪ್ರವೃತ್ತರಾದದ್ದೇ ಆಗಿದೆ. ಎಂ. ವಿಶ್ವೇಶ್ವರಯ್ಯನವರು ಅಂಥ ನಾಯಕರುಗಳಲ್ಲಿ ಒಬ್ಬರು. ಇವರು ಮೈಸೂರಿನಲ್ಲಿ ಕೈಗಾರಿಕೆಗಳು ಸ್ಥಾಪನೆಯಾಗಲು ಕಾರಣಕರ್ತರು. ರಾಷ್ಟ್ರದ ಕ್ಷೇಮಸಾಧನೆಗೆ ಅತ್ಯಂತ ಮುಖ್ಯವಾದ ಮೂರು ಕ್ಷೇತ್ರಗಳೆಂದರೆ ಶಿಕ್ಷಣ, ಕೃಷಿ ಹಾಗೂ ಕೈಗಾರಿಕೆ. ವಿಶ್ವೇಶ್ವರಯ್ಯನವರು ಒಂದು ಆರ್ಥಿಕ ಸಮ್ಮೇಳನವನ್ನು ಸ್ಥಾಪಿಸಿ ಈ ಮೂರೂ ವಿಭಾಗದ ಮೇಲೆ ಬೆಳಕು ಚೆಲ್ಲುವ ಚರ್ಚೆ ನಡೆಯಲು ಕಾರಣರಾದರು. ಆರ್ಥಿಕ ಸಮ್ಮೇಳನದಲ್ಲಿ ಚರ್ಚಿತವಾದ ವಿಷಯಗಳು ವಿಶ್ವೇಶ್ವರಯ್ಯನವರು ದಿವಾನರಾದ ನಂತರ ಸ್ಪಷ್ಟ ರೂಪುಕೊಡಲು ಅನುಕೂಲವಾಯಿತು; ಇದರಿಂದ ಸರ್ವಾಂಗೀಣ ಅಭಿವೃದ್ಧಿಗೆ ಕಾರ್ಯಕ್ರಮ ರೂಪಿಸಲೂ ಸಹ ಸಹಾಯವಾಯಿತು. ಎಂ. ವಿಶ್ವೇಶ್ವರಯ್ಯನವರ ಕೆಲಸಗಳನ್ನು ಮತ್ತೊಬ್ಬ ದಿವಾನರಾದ ಮಿರ್ಜಾ ಇಸ್ಮಾಯಿಲ್ಲರು ಮುಂದುವರಿಸಿದರು.

ಯೋಜಿತ ಆರ್ಥಿಕ ಅಭಿವೃದ್ಧಿಯನ್ನು ಸಂಘಟಿಸಲು ೧೯೧೧ರಲ್ಲಿ ಪ್ರಾರಂಭವಾದ ಆರ್ಥಿಕ ಸಮ್ಮೇಳನ ೧೯೧೧ರಿಂದ ೧೯೩೦ರ ತನಕ ೨೦ ವರ್ಷಗಳ ಕಾಲ ನಡೆಯಿತು. ಅನಂತರ ಸ್ವಲ್ಪಕಾಲ ನಿಂತುಹೋಗಿ ಮರಳಿ ಸಮರೋತ್ತರ ಅಭಿವೃದ್ಧಿಗಾಗಿ ೧೯೪೩ರಲ್ಲಿ ಪುನಶ್ಚೇತನಗೊಂಡಿತು.

ಆರ್ಥಿಕ ಸಮ್ಮೇಳನದ ಉದ್ಘಾಟನಾ ಸಂದರ್ಭದಲ್ಲಿ ಮಾತನಾಡುತ್ತಾ ದಿವಾನರು ೧೯೧೯ರಲ್ಲಿ ಹೀಗೆ ಹೇಳಿದರು: 'ವಾಣಿಜ್ಯ ಹಾಗೂ ಕೈಗಾರಿಕಾ ಪ್ರಶ್ನೆಗಳ ವಿಷಯದಲ್ಲಿ ಸಾಕಷ್ಟು ಚರ್ಚೆಯಾಗಿದೆ, ಸಮರ ಕಾಲದಲ್ಲಿ ಎಲ್ಲಾ ಕೈಗಾರಿಕಾ ಚಟುವಟಿಕೆಯ ಮೇಲೆ ನಿರ್ಬಂಧ ವಿಧಿಸದಿದ್ದ ಪಕ್ಷದಲ್ಲಿ ಮೈಸೂರಿನಲ್ಲಿ ಇನ್ನೂ ಹೆಚ್ಚಿನ ಪ್ರಮಾಣದ ಕೈಗಾರಿಕಾ ಪ್ರಯತ್ನಗಳು ಆಗುತ್ತಿದ್ದುವು.' ಆದಾಗ್ಯೂ ಕೈಗಾರಿಕಾ ನೀತಿ ಏಕಮುಖವಾದದ್ದೆಂದು ಟೀಕೆ ಕೇಳಿಬಂದಿತು. ಇದಕ್ಕೆ ಕಾರಣ ಇದರಲ್ಲಿ ಸಾರ್ವಜನಿಕರ ಪಾತ್ರ ಇಲ್ಲದಿರುವುದು.[೨೫]

ಆ ಕಾರಣದಿಂದ ಮೈಸೂರಿನಲ್ಲಿ ವ್ಯಾಪಾರ ಹಾಗೂ ಕೈಗಾರಿಕಾ ವಲಯದಲ್ಲಿ ಪ್ರಯತ್ನಗಳು ಪ್ರಾರಂಭವಾದುವು. ವ್ಯಾಪಾರ ಹಾಗೂ ತಯಾರಿಕೆಯನ್ನು ವಿಸ್ತರಿಸುವುದಕ್ಕೆ ಚರ್ಚಿಸಲು ೧೯೨೦ರಲ್ಲಿ ಡ್ಯಾಲಿ ಸ್ಮಾರಕ ಭವನದಲ್ಲಿ ಮಿರ್ಜಾ ಇಸ್ಮಾಯಿಲ್ಲರು ಸಭೆ ಕರೆದರು. ವ್ಯಾಪಾರ ಮತ್ತು ಕೈಗಾರಿಕೆ ಸ್ಥಳೀಯರಿಂದ ಹೊರಗಿನವರಿಗೆ ಹಸ್ತಾಂತರವಾಗಿದ್ದ ಕಾರಣ ಕೈಗಾರಿಕಾ ಪ್ರಶ್ನೆ ಇಷ್ಟು ಗಂಭೀರ ರೀತಿಯಲ್ಲಿ ಗಮನ ಸೆಳೆಯಿತು. ಮಿರ್ಜಾ ವಿಶೇಷವಾಗಿ ಬಡನವಾಳಿನಲ್ಲಿ ಚರಕ ನೂಲುವುದನ್ನು ಪುನಃ ಪ್ರಾರಂಭಿಸುವಲ್ಲಿ ಬಹಳ ಉತ್ಸಾಹ ತೋರಿದರು.

## ಸ್ವದೇಶಿ ಚಳವಳಿ

Tariffನ ವಿಚಾರ ಕೈಗಾರಿಕೆಗಳೊಡನೆ ಸಂಬಂಧ ಹೊಂದಿದ್ದರೂ ಸಹ ಕೈಗಾರಿಕಾ ಆಯೋಗದ ಚರ್ಚೆಯಲ್ಲಿ ಇದನ್ನು ಸೇರಿಸಲಿಲ್ಲ; ಈ ಸನ್ನಿವೇಶದಲ್ಲಿ ಭಾರತದ ಹಣಕಾಸು ನೀತಿಯ ಬದಲಾವಣೆಗೆ ಸಂಬಂಧಿಸಿದ ಪ್ರಶ್ನೆಯನ್ನು ಎತ್ತಬಾರದೆಂಬುದು ಇದಕ್ಕೆ ಕಾರಣ. ಆದರೆ ಆಯೋಗದ ಚರ್ಚೆಯಲ್ಲಿ ಈ ವಿಷಯ ಬಾರದಿದ್ದುದು ಭಾರತದಲ್ಲಿ ಸಕಾರಣಿಕವಾದ ಟೀಕೆಗೆ ಅವಕಾಶ ದೊರಕಿಸಿದಂತಾಯಿತು. ಈ ಟೀಕೆಗೆ ಉತ್ತರವಾಗಿ ಭಾರತದಲ್ಲಿ ತಾತ್ವಿಕವಾದ ಮುಕ್ತವ್ಯಾಪಾರ ಅಸ್ತಿತ್ವದಲ್ಲಿಲ್ಲ ಎಂದು ಸರ್ಕಾರ ಅಭಿಪ್ರಾಯ ವ್ಯಕ್ತಪಡಿಸಿತು. ಆದರೆ ಭಾರತೀಯರಿಗೆ ಇದರಿಂದ ತೃಪ್ತಿಯಾಗಲಿಲ್ಲ. ಏಕೆಂದರೆ ಭೂಕಂದಾಯವನ್ನುಳಿದು ಬೇರೆ ರೀತಿಯ ವರಮಾನವನ್ನು ಗಳಿಸಲು Tariff ಅತ್ಯಂತ ಪ್ರಧಾನವಾದ ಮಾರ್ಗವೆಂದು ಅನ್ನಿಸಿತ್ತು.

ಆಡಳಿತದ ಈ ಕ್ರಮದಿಂದ ಆರ್ಥಿಕವಾಗಿ ತೊಂದರೆಗೆ ಒಳಗಾದ ಎಲ್ಲರೂ ಪ್ರತಿಯಾಗಿ ವಿರೋಧಿ ಚಟುವಟಿಕೆಯಲ್ಲಿ ತೊಡಗಲು ಸಜ್ಜಾದರು. ಆಂಗ್ಲರ ಪದಾರ್ಥಗಳನ್ನು ಸಾರಾಸಗಟು ದೂರೀಕರಿಸಿ ಭಾರತೀಯ ತಯಾರಿಕಾ ವಸ್ತುಗಳನ್ನೇ ಬಳಸಲು ಪ್ರತಿಜ್ಞೆ ಮಾಡಿದರು. ಭಾರತೀಯರಿಗೆ ಅತ್ಯಗತ್ಯವಾದ ಪದಾರ್ಥಗಳು ಯಾವುವು ಎಂಬುದರ ಮೇಲೆ ಇದರ ಯಶಸ್ಸು ಅವಲಂಬಿಸಿತ್ತು. ಐಷಾರಾಮದ ವಸ್ತುಗಳಾಗಿದ್ದ ಪಕ್ಷದಲ್ಲಿ ಅವುಗಳನ್ನು ನಿರಾಕರಿಸುವುದು ಕಷ್ಟವಾಗುತ್ತಿರಲಿಲ್ಲ. ಆದರೆ ಪದಾರ್ಥಗಳು ಅತ್ಯಗತ್ಯವಾದವುಗಳಾಗಿದ್ದಲ್ಲಿ ದೇಶೀಯವಾಗಿ ಅವುಗಳನ್ನು ತಯಾರಿಸಿಕೊಳ್ಳುವ ತನಕ ವಿದೇಶಿ ವಸ್ತುಗಳನ್ನು ನಿರಾಕರಿಸುವಂತಿರಲಿಲ್ಲ. ಭಾರತೀಯ ರಾಷ್ಟ್ರಪ್ರೇಮದ ಅತ್ಯುತ್ತಮ ಮಾರ್ಗವೆಂದರೆ ಭಾರತೀಯ ಅಗತ್ಯಗಳಿಗೆ ಭಾರತೀಯವಾದ ವಸ್ತುಗಳನ್ನು ಮಾತ್ರ ಉಪಯೋಗಿಸುವಂಥದ್ದು. ಈಗಾಗಲೇ ಕಚ್ಚಾವಸ್ತುಗಳ ತವರುಮನೆಯಾಗಿದ್ದ ಭಾರತ ಸಿದ್ಧ ಉತ್ಪನ್ನಗಳ ತವರುಮನೆಯಾಗಿ ಕಾಣಿಸಿಕೊಳ್ಳುವ ತವಕದಲ್ಲಿದ್ದದ್ದು ನಿಜ. ಇದನ್ನು ನನಸು ಮಾಡಿಕೊಳ್ಳಲು ಕೈಗಾರಿಕಾ ಕಾರ್ಯಗಳಿಗಾಗಿ ಭಾರತೀಯವಾದ ಬಂಡವಾಳವನ್ನು ತೊಡಗಿಸಿ ವಿದೇಶಿ

ಸ್ಪರ್ಧೆಯನ್ನು ತಡಕೊಳ್ಳುವವರೆಗೆ ರಕ್ಷಿಸಬೇಕಾದ ಅಗತ್ಯವಿದ್ದಿತು. ಭಾರತದಲ್ಲಿ ಸ್ವದೇಶಿ ಪದಾರ್ಥಗಳನ್ನು ಉತ್ತೇಜಿಸುವುದೆಂದರೆ, ಖಾಸಗಿ ಬಂಡವಾಳ ಹಾಗೂ ಲೋಕಪ್ರೀತಿಯ ಜೊತೆಗೆ ಸರ್ಕಾರದ ರಕ್ಷಣಾತ್ಮಕ ನೀತಿಯ ಸಂಯೋಗವಾಗಬೇಕಾಗಿತ್ತು. ಕೇವಲ ಸ್ವದೇಶಿ ವಸ್ತುಗಳನ್ನು ಉಪಯೋಗಿಸುವ ಗ್ರಾಹಕರು ಮಾತ್ರ ಸ್ವದೇಶಿ ಮಾರ್ಗವನ್ನು ಅನುಸರಿಸಿದ್ದಾರೆ ಎನ್ನಲಾಗದು, ಬದಲಾಗಿ ಈ ಚಳವಳಿಯಲ್ಲಿ ತೊಡಗಿಸಿಕೊಂಡಿರುವವರೆಲ್ಲಾ– ಅಂದರೆ ಬಂಡವಾಳ, ದುಡಿಮೆ ಹಾಗೂ ಸರ್ಕಾರ– ಇದರ ಅವಿಭಾಜ್ಯ ಅಂಗವೆಂದು ತಿಳಿಯಬೇಕು ಎಂದು ಗೋಖಲೆ ತಿಳಿಸಿದರು. ನಾವೇ ಸ್ವತಃ ತಯಾರಿಸುವ ಸಾಮರ್ಥ್ಯವನ್ನು ಹೊಂದುವವರೆಗೆ ವಿದೇಶಿ ವಸ್ತುಗಳ ನಿಷೇಧ ಅಥವಾ ಸ್ವದೇಶಿ ಇತ್ಯಾದಿ ಮಾತುಗಳನ್ನು ಆಡದಿರುವುದು ಒಳ್ಳೆಯದು, ಎನ್ನುವ ನಿಲುವು ಗೋಖಲೆಯವರದಾಗಿತ್ತು.[೩೩]

ಭಾರತೀಯ ದೇಶೀಯ ಕೈಗಾರಿಕೆ ಕುಂಠಿತವಾದದ್ದರ ವಿರುದ್ಧದ ಪ್ರತಿಭಟನೆಯ ದ್ಯೋತಕವಾಗಿ ಸ್ವದೇಶಿ ಚಳವಳಿ ಪ್ರಾರಂಭವಾಯಿತು ಎನ್ನಬೇಕು. ಹೊಸ ಕೈಗಾರಿಕೆಗಳನ್ನು ಅಭಿವೃದ್ಧಿಪಡಿಸಲು ಅಥವಾ ಅವಸಾನ ಸ್ಥಿತಿಯಲ್ಲಿರುವ ಕೈಗಾರಿಕೆಗಳನ್ನು ಪುನಃಶ್ಚೇತನಗೊಳಿಸುವ ದಿಶೆಯಲ್ಲಿ ಈ ಚಳವಳಿ ಒಂದು ಪ್ರತಿಭಟನೆಯ ರೂಪದಲ್ಲಿ ಪ್ರಾರಂಭವಾಯಿತು. ಮೇಲ್ವರ್ಗ ಹಾಗೂ ಮಧ್ಯಮವರ್ಗದ ಮಂದಿ ತಮ್ಮ ಎಂದಿನ ವಿದೇಶಿ ವಸ್ತುಗಳ ಆಕರ್ಷಣೆಗೆ ಒಳಗಾಗುವುದನ್ನು ಸ್ವಲ್ಪ ಮರೆತು ಅಷ್ಟೇನೂ ಉತ್ತಮವಲ್ಲದ ಭಾರತೀಯ ವಸ್ತುಗಳನ್ನು ಉಪಯೋಗಿಸುವ ತ್ಯಾಗಕ್ಕೆ ಸಿದ್ಧವಾಗಬೇಕಾಯಿತು. ಹಾಗಾಗಿ, ವಿದೇಶಿ ವಸ್ತು ನಿಷೇಧ ಹಾಗೂ ಸ್ವದೇಶಿ ಒಂದೇ ನಾಣ್ಯದ ಎರಡು ಮುಖಗಳಾಗಿ ಗೋಚರವಾಗುತ್ತವೆ. ಸ್ವದೇಶಿ ಚಳವಳಿಯಲ್ಲಿ ಜನರು ಭಾರತೀಯ ವಸ್ತುಗಳನ್ನೇ ಬಳಸಬೇಕೆಂಬ ನಿರ್ಬಂಧವಿತ್ತು ಹಾಗೂ ಹಾಗೆ ಉಪಯೋಗಿಸುವುದರಿಂದ ದೇಶದ ಆರ್ಥಿಕ ಸ್ಥಿತಿ ಮರಳಿ ಉತ್ತಮವಾಗುವುದೆಂಬ ಆಶಾಭಾವನೆಯೂ ಇತ್ತು.

ಸ್ವದೇಶಿ ಚಳವಳಿ ೧೯೦೫ರಲ್ಲಿ ಸ್ಪಷ್ಟವಾಗಿ ಗೋಚರವಾಯಿತಾದರೂ ಅದಕ್ಕೆ ಮುಂಚಿನ ದಶಕಗಳಲ್ಲಿಯೇ ಇದಕ್ಕೆ ಪೂರ್ವಸಿದ್ಧತೆ ಆಗಿದ್ದನ್ನು ಕಾಣಬಹುದು. ೧೮೪೯ರಷ್ಟು ಹಿಂದೆಯೇ ಪೂನಾದ ಗೋಪಾಲ್‌ರಾವ್ ದೇಶ್‌ಮುಖ್ ಎಂಬುವವರು ಸ್ವದೇಶಿ ವಸ್ತುಗಳನ್ನು ಉಪಯೋಗಿಸಬೇಕೆಂದು ಪ್ರಚಾರ ಮಾಡಿದರು. ಅನಂತರ ೧೮೭೦ರ ದಶಕದಲ್ಲಿ ಸ್ವದೇಶಿ ಹೆಚ್ಚು ಜನಪ್ರಿಯವಾಯಿತು. ಬೆಂಗಳೂರಿನಲ್ಲಿ ೧೮೭೪ರಲ್ಲಿ ಭಾರತದಲ್ಲಿಯೇ ತಯಾರಾದ ಹತ್ತಿ ಬಟ್ಟೆಗಳನ್ನು ವ್ಯಾಪಾರ ಮಾಡಲೆಂದೇ ಒಂದು ಕಂಪನಿ ತೆರೆಯಲಾಯಿತು. ಆ ನಂತರ ಮ್ಯಾಂಚೆಸ್ಟರ್‌ನ ಪದಾರ್ಥಗಳನ್ನು ಮಾರುವುದಿಲ್ಲ ಎಂದು ಈ ಕಂಪನಿ ತೀರ್ಮಾನಿಸಿತ್ತು.[೩೪] ಹತ್ತಿ ಬಟ್ಟೆಗಳ ಮೇಲಿನ ಸುಂಕದ ವಿರುದ್ಧ ಜನರ ಪ್ರತಿಭಟನೆ ಸ್ವಲ್ಪ ತಗ್ಗಿದಾಗ ಸ್ವದೇಶಿ ವಸ್ತುಗಳಿಗಾಗಿಯೂ ಚಳವಳಿ ಸ್ವಲ್ಪ ಕಡಿಮೆಯಾಯಿತು, ಆದರೆ ಸಂಪೂರ್ಣವಾಗಿ ನಿಂತುಹೋಗಲಿಲ್ಲ.[೩೫]

ರಕ್ಷಣಾ ತೆರಿಗೆಗಳನ್ನು ಹೆಚ್ಚಿಸಿ ಸಂಪತ್ತು ಹೊರಗೆ ಹರಿದುಹೋಗುವುದನ್ನು ತಪ್ಪಿಸಲು ಕ್ರಮ ಕೈಗೊಳ್ಳದಿರುವ ಕಾರಣ ಸರ್ಕಾರ ನಿರ್ವಹಿಸಬೇಕಾದ ಜವಾಬ್ದಾರಿಯನ್ನು ಭಾರತೀಯರೇ ನಿರ್ವಹಿಸಬೇಕಾದುದು ಅಗತ್ಯವೆಂದು ಕಂಡುಬಂದಿತು.

ಸರ್ಕಾರಿ ಬೆಲೆಗಳ ನೀತಿಯ ವಿರುದ್ಧ ಹೊರಟ ಟೀಕೆ ಲಾರ್ಡ್ ಕರ್ಜನ್‌ನ ಆಡಳಿತ ಕಾಲದಲ್ಲಿ ಹೆಚ್ಚು ಸ್ಪಷ್ಟವಾಗಿ ಕೇಳತೊಡಗಿತು. ಇದು ಮುಂದುವರಿದಂತೆಲ್ಲಾ, ಕೈಗಾರಿಕಾ ಪುನಃಶ್ಚೇತನದ ದಿಶೆಯತ್ತ ಸಾಗುವ ಚಳವಳಿ ಹೆಚ್ಚು ಪ್ರಾಮುಖ್ಯತೆಯನ್ನು ಪಡೆಯಿತು. ಆರ್ಥಿಕವಾದ ಕಾರಣದಿಂದ ಉದ್ಭವವಾಗಿದ್ದ ಈ ಅತೃಪ್ತಿಯ ಜೊತೆ ಬಂಗಾಳದ ವಿಭಜನೆಯಿಂದ ಉಂಟಾದ ರಾಜಕೀಯ ಚಳವಳಿಯು ಮಿಲನವಾಯಿತು.

ಸ್ವದೇಶಿ ಚಳವಳಿಯು ಒಂದೇ ಕ್ರಿಯೆಯ ಧನಾತ್ಮಕ ಮುಖವಾದರೆ, ವಿದೇಶಿ ವಸ್ತುಗಳ ನಿಷೇಧ ಋಣಾತ್ಮಕ ಮುಖವಾಗಿ ಕಂಡಿತು. ನಿಷೇಧವನ್ನು ನಾಯಕರು ಒಪ್ಪಿಕೊಂಡ ಕಾರಣವೆಂದರೆ, ಹಾಗೆ ಮಾಡುವುದರ ಮೂಲಕ ಬಂಗಾಳದ ವಿಭಜನೆಯನ್ನು ತಪ್ಪಿಸುವುದರತ್ತ ಒತ್ತಡ ಹೇರುವ ಅವಕಾಶವಿದ್ದುದರಿಂದ. ಇದೇ ಸಂದರ್ಭದಲ್ಲಿ ಜಪಾನ್ ದೇಶ ರಷ್ಯಾವನ್ನು ಪರಾಭವಗೊಳಿಸಿತು, ಜಪಾನೀಯರ ವಿಜಯಕ್ಕೆ ಅವರ ಪ್ರಗತಿ ಹಾಗೂ ದಕ್ಷತೆಯೇ ಕಾರಣವೆಂದು ನಂಬಲಾಯಿತು. ರಾಷ್ಟ್ರಪ್ರೇಮಿಗಳಾದ ವ್ಯಕ್ತಿಗಳು ಅಥವಾ ಸಂಸ್ಥೆಗಳು ನೀಡಿದ ವಿದ್ಯಾರ್ಥಿವೇತನವನ್ನು ಸ್ವೀಕರಿಸಿ ಅನೇಕ ವಿದ್ಯಾರ್ಥಿಗಳು ಜಪಾನಿಗೆ ತೆರಳಿ ಕೈಗಾರಿಕೆ ಹಾಗೂ ತಾಂತ್ರಿಕ ತರಬೇತಿಯನ್ನು ಗಳಿಸಿ ವಾಪಸ್ಸು ಬಂದು ಸ್ವದೇಶಿ ಚಳವಳಿಯಲ್ಲಿ ಪಾಲ್ಗೊಂಡರು.[೨೬]

೧೯೦೬ರ ಕಾಂಗ್ರೆಸ್ಸಿನ ಕಲ್ಕತ್ತಾ ಅಧಿವೇಶನವು 'ಸ್ವರಾಜ್ಯ' ವೇ ತನ್ನ ಮೂಲಗುರಿ ಎಂದು ಘೋಷಿಸಿದಾಗ ಸ್ವದೇಶಿ, ವಿದೇಶಿ ವಸ್ತು ಬಹಿಷ್ಕಾರ ಹಾಗೂ ರಾಷ್ಟ್ರೀಯ ಶಿಕ್ಷಣ ಇವುಗಳು ಈ ಗುರಿಯನ್ನು ತಲುಪುವ ಸಾಧನಗಳೆಂದು ತಿಳಿಸಿತು– ಆ ಸಂದರ್ಭದಲ್ಲಿ ಕರ್ನಾಟಕ ಸಂಪೂರ್ಣವಾಗಿ ಆ ಚಳವಳಿಯಲ್ಲಿ ಭಾಗವಹಿಸಿ ಈ ಎಲ್ಲ ಸಾಧನಗಳನ್ನೂ ಧಾರಾಳವಾಗಿ ಬಳಸಿತು. ೧೯೦೬ರಲ್ಲಿ ತಿಲಕರು ಬೆಳಗಾವಿಗೆ ಭೇಟಿ ಇತ್ತು ಸ್ವರಾಜ್ಯದ ಬಗ್ಗೆ ಭಾಷಣ ಮಾಡಿದರು. ಅಪಾರ ಸಂಖ್ಯೆಯಲ್ಲಿ ವಿದ್ಯಾರ್ಥಿಗಳು ಭಾಗವಹಿಸಿದರು. ತಿಲಕರ ಸಂದೇಶವೆಂದರೆ ಸ್ವರಾಜ್ಯ ಹಾಗೂ ಸ್ವದೇಶಿ ಚಳವಳಿ ಮಾತ್ರ ಪರಕೀಯರ ಆಳ್ವಿಕೆಯಿಂದ ದೇಶವನ್ನು ರಕ್ಷಿಸಬಹುದು ಎಂಬುದಾಗಿತ್ತು. ತಿಲಕರ ಭಾಷಣಗಳ ಪರಿಣಾಮವಾಗಿ ವಿದೇಶಿ ವಸ್ತುಗಳನ್ನು ಬೆಂಕಿಯಲ್ಲಿ ಸುಡುವ ಕಾರ್ಯಕ್ರಮ ನಡೆಯಿತು. ರಾಣೆಬೆನ್ನೂರಿನಲ್ಲಿ ವಿದೇಶಿ ವಸ್ತುಗಳನ್ನು ಸುಟ್ಟರು, ಧಾರೋಟಿ ಹಾಗೂ ಜಾನ್‌ಸನ್ ಸಕ್ಕರೆಯನ್ನು ಉಪಯೋಗಿಸುವುದಿಲ್ಲವೆಂದು ಧಾರವಾಡದಲ್ಲಿ ಜನರು ಪ್ರತಿಜ್ಞೆ ಮಾಡಿದರು. ಗಂಗಾಧರ್‌ರಾವ್ ದೇಶ್‌ಪಾಂಡೆಯವರೂ ಸಹ ಕಾಂಗ್ರೆಸ್ ಸೇರಿ ಜನರು ತಮ್ಮ ವಿದೇಶಿ ಉಡುಪುಗಳನ್ನು ಬೆಂಕಿಗೆ ಎಸೆಯಬೇಕೆಂದು ಹುರಿದುಂಬಿಸಿದರು. ಧಾರವಾಡದ ಆರ್.ಎಸ್. ಹುಕ್ಕೇರಿಕರ್ ಅಂಥವರು ತಾವು ತೊಟ್ಟಿದ್ದ ಬಟ್ಟೆ ವಿದೇಶಿ ಬಟ್ಟೆಯೇ ಇಲ್ಲವೇ ಎಂಬುದನ್ನು ಪರೀಕ್ಷಿಸದೆಯೇ ಕಳಚಿ ಬೆಂಕಿಗೆ ಎಸೆದಿದ್ದರು. ವಿದೇಶಿ ಬಟ್ಟೆಗಳು ಹಾಗೂ ಇತರೆ ವಸ್ತುಗಳನ್ನು ತಿರಸ್ಕರಿಸಬೇಕೆಂಬ ತೀರ್ಮಾನದಲ್ಲಿ ವಿದೇಶಿ ಔಷಧಗಳೂ ತ್ಯಾಜ್ಯವಾದದ್ದು ಮುಖ್ಯ ಸಂಗತಿ.[೨೭] ಸ್ವದೇಶಿ ಚಳವಳಿಯನ್ನು ಸಂಪೂರ್ಣವಾಗಿ ನಡೆಸಿದ ಉದಾಹರಣೆಗಳು ಅನೇಕ ನಡೆದವು.

ಬೆಂಕಿಕಡ್ಡಿ, ವಸ್ತ್ರ, ಪೆನ್ಸಿಲ್‌ಗಳು, ಪಾತ್ರೆ ಸಾಮಾನುಗಳನ್ನು ತಯಾರಿಸುವಂಥ ಅನೇಕ ಗಿರಣಿಗಳು ಪ್ರಾರಂಭವಾಗಿ ನೆಲೆಕಚ್ಚಿದವು. ವಾಸ್ತವವಾದ ಪ್ರಾಯೋಗಿಕ ತರಬೇತಿ ವ್ಯವಹಾರ ಜ್ಞಾನವಿಲ್ಲದೆಯೇ ರಾಷ್ಟ್ರಪ್ರೇಮದ ಪರಾಕಾಷ್ಠೆಯಲ್ಲಿ ಪ್ರಾರಂಭವಾದ ಕೈಗಾರಿಕೆಗಳಿವು ಎಂಬುದನ್ನು ನಾವು ಮರೆಯಬಾರದು. ಗಿರಣಿಗಳು ನಷ್ಟ ಅನುಭವಿಸಲು ತಂತ್ರಜ್ಞಾನದ ಅರಿವಿನ ಕೊರತೆಯೊಂದೇ ಕಾರಣವಲ್ಲ, ಬದಲಾಗಿ ವಾಣಿಜ್ಯ ಸನ್ನಿವೇಶಗಳಲ್ಲಿ ಆ ಜ್ಞಾನವನ್ನು ಅಳವಡಿಸಲು ಆಗದಂಥ ಅಸಾಮರ್ಥ್ಯ ಎನ್ನಬೇಕು.

ಸ್ವದೇಶಿ ಭಾವನೆಯಲ್ಲಿ ಬ್ಯಾಂಕುಗಳು ಹಿಂದೆ ಬೀಳಲಿಲ್ಲ. ೨೦ನೆಯ ಶತಮಾನದ ಆದಿಭಾಗದಲ್ಲಿ ದೇಶದಾದ್ಯಂತ ಸ್ವದೇಶೀಯತೆ ಹಬ್ಬುವಂಥ ಸಂದರ್ಭದಲ್ಲಿ ದಕ್ಷಿಣ ಕನ್ನಡದಲ್ಲಿ ಬ್ಯಾಂಕುಗಳು ಆಧುನಿಕ ಮಾದರಿಯಲ್ಲಿ ಕಾರ್ಯಪ್ರವೃತ್ತವಾದವು. ರಾಜ್ಯದ ಇತರೆ ಭಾಗಗಳಲ್ಲಿ ದೇಶೀಯವಾದ ಪ್ರಯತ್ನಗಳಿಂದ ಕೈಗಾರಿಕೆಗಳ ಸ್ಥಾಪನೆ ವಿಚಾರ ಮಹತ್ವ ಪಡೆದಿರುವಾಗ ಜಂಟಿ ಸ್ಟಾಕ್ ಆಧಾರದ ಮೇಲೆ ಉಡುಪಿಯಲ್ಲಿ ಬ್ಯಾಂಕೊಂದನ್ನು ಸ್ಥಾಪಿಸಲು ಗೆಳೆಯರು ಹಲವರು ಕೂಡಿ ಯೋಚಿಸಿದರು; ಇದರ ಫಲವಾಗಿ ಕೆನರಾ ಬ್ಯಾಂಕಿಂಗ್ ಕಾರ್ಪೋರೇಷನ್ ನಿಯಮಿತ, ೧೯೦೬ರ ಮೇ ತಿಂಗಳಿನಲ್ಲಿ ಪ್ರಾರಂಭವಾಯಿತು. ಅದಾದ ತರುಣದಲ್ಲಿ ಅಂದರೆ ಜುಲೈ ತಿಂಗಳಿನಲ್ಲಿ ವಾಣಿಜ್ಯ ವ್ಯವಹಾರ ಪ್ರಾರಂಭಿಸಿತು.[೨೮]

ಕರ್ನಾಟಕದಲ್ಲಿ ತಿಲಕರು ಹಾಗೂ ಸ್ವದೇಶಿ ಚಳವಳಿಗಳಿಂದ ಪ್ರಭಾವಿತರಾದ ನಾಯಕರ ಪೈಕಿ ಆಲೂರು ವೆಂಕಟರಾಯರು ಮುಖ್ಯರು. ತಿಲಕ್ ಹಾಗೂ ಗೋಖಲೆಯವರಿಂದ ಅವರು ನೇರವಾಗಿ ಕಲಿತಿದ್ದರು. ಬ್ರಿಟಿಷರನ್ನು ವಿರೋಧಿಸಿ ತಿಲಕರು ಮಾತನಾಡುವಾಗ ಆಲೂರರಿಗೆ ಸ್ಫೂರ್ತಿ ದೊರೆಯಿತು. ೧೯೦೫ರ ಸುಮಾರಿನಲ್ಲಿ ಬಂಗಾಳದ ವಿಭಜನೆಯ ಸಂದರ್ಭದಲ್ಲಿ ಆಲೂರು ವೆಂಕಟರಾಯರು ಕಾನೂನಿನಲ್ಲಿ ಪದವಿ ಪಡೆದು ವಕೀಲವೃತ್ತಿಯನ್ನು ಪ್ರಾರಂಭಿಸಿದರಾದರೂ ತರುವಾಯದಲ್ಲಿ ಧಾರವಾಡದ ತಮ್ಮ ವಕೀಲಿ ವೃತ್ತಿಗೆ ವಿದಾಯ ಹೇಳಿ ಸಂಪೂರ್ಣವಾಗಿ ವಿದೇಶಿವಸ್ತು ನಿರಾಕರಣ ಚಳವಳಿಯಲ್ಲಿ ತೊಡಗಿದರು. ಸೀಮೆಎಣ್ಣೆ, ಸಕ್ಕರೆ, ಟೀ, ಕಾಫಿಯಿಂದ ಹಿಡಿದು ಬೆಂಕಿಕಡ್ಡಿಯವರೆಗೆ- ಎಲ್ಲ ವಸ್ತುಗಳನ್ನು ಸಹ ಅವು ವಿದೇಶೀಯರಿಂದ ತಯಾರಿಸಿದವಾಗಿದ್ದರೆ ಅದನ್ನು ನಿರಾಕರಿಸಲಾಯಿತು. ಸ್ವದೇಶಿ ಚಳವಳಿಯನ್ನು ತಾವು ವಿನೂತನವಾಗಿ ಪ್ರಾರಂಭಿಸುವ ಚಿನ್ಹೆಯಾಗಿ ಆಲೂರು ವೆಂಕಟರಾಯರು ಧಾರವಾಡದಲ್ಲಿ ಕನ್ನಡ ರಾಷ್ಟ್ರೀಯ ಶಾಲೆಯನ್ನು ತೆರೆದರು. ಹಣ ಹಾಗೂ ಉಪಾಧ್ಯಾಯರ ಕೊರತೆಯಿಂದಾಗಿ ಈ ಶಾಲೆ ಫಲಪ್ರದವಾಗಿ ನಡೆಯಲಿಲ್ಲ. ಇದಾದ ಬಳಿಕ ಹೆಂಚಿನ ಕಾರ್ಖಾನೆ, ಬೆಂಕಿಕಡ್ಡಿ ಕಾರ್ಖಾನೆ ಹಾಗೂ ಪೆನ್ಸಿಲ್ ಕಾರ್ಖಾನೆ ಮುಂತಾದ ಕೈಗಾರಿಕಾ ಉದ್ಯಮಗಳನ್ನು ಆಲೂರು ವೆಂಕಟರಾಯರು ಪ್ರಾರಂಭಿಸಿದರು. ಮೊದಲನೆಯ ಮಹಾಯುದ್ಧದ ಪ್ರಾರಂಭದವರೆಗೂ ಬೆಂಕಿಕಡ್ಡಿ ಕಾರ್ಖಾನೆ ನಡೆಯಿತಾದರೂ, ರಂಜಕದ ಬೆಲೆ ಗಗನಕ್ಕೇರಿದಾಗ ಈ ಕಾರ್ಖಾನೆಯನ್ನು ಮುಚ್ಚಬೇಕಾಯಿತು.

ಸ್ವದೇಶಿ ಚಳವಳಿಯನ್ನು ಆಲೂರು ವೆಂಕಟರಾಯರು ಸ್ವಾವಲಂಬನೆಯ ಅಭಿವ್ಯಕ್ತಿಯಾಗಿ ಮನಗಂಡಿದ್ದರು- ಹಾಗಾಗಿ ಇದು ಸಾಧ್ಯವಾಗಬೇಕಾದರೆ ದೇಶೀಯವಾದ ಕೈಗಾರಿಕೀಕರಣದಿಂದ ಮಾತ್ರ ಸಾಧ್ಯವೆಂದು ಕೂಡ ಅವರಿಗೆ ಅನ್ನಿಸಿತ್ತು. ಖಾನಾಪುರದಲ್ಲಿ ಅವರು ತಮ್ಮ ನಾಲ್ಕು ಮಂದಿ ಸ್ನೇಹಿತರೊಡಗೂಡಿ ಹೆಂಚಿನ ಕಾರ್ಖಾನೆಯನ್ನು ಸಾಪಿಸಿದರು, ಸ್ವತಃ ಅವರ ಸಹೋದರ ರಾಮರಾವ್ ಅವರೇ ಇದರ ಉಸ್ತುವಾರಿಗೆ ನಿಂತಿದ್ದರು. ತಮ್ಮ ಹುಟ್ಟೂರಾದ ಆಲೂರಿನಲ್ಲಿಯೇ ನೂಲು ತಯಾರಿಕಾ ಘಟಕವೊಂದನ್ನು ವೆಂಕಟರಾಯರು ಸ್ಥಾಪಿಸಿದರಾದರೂ ಅವರ ಎಣಿಕೆಯಂತೆ ಇದು ಕೆಲಸ ಮಾಡಲಿಲ್ಲ. ಬಾಗಲಕೋಟೆಯ ಬಳಿ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಅವರು ಮಾಡಿದ ಪ್ರಯತ್ನ ಕೂಡ ಅಷ್ಟು ಫಲಕಾರಿಯಾಗಲಿಲ್ಲ. ಬೆಂಕಿಕಡ್ಡಿ ಕಾರ್ಖಾನೆಯ ವಿಚಾರವೂ ಹೀಗೆಯೇ ಆಯಿತು. ಮೇಲಿಂದ ಮೇಲೆ ಹೀಗೆ ಅವರು ಅಪಯಶಸ್ಸು ಕಂಡರೂ ಸ್ವದೇಶಿ ಚಳವಳಿಯ ಬಗ್ಗೆ ಅವರ ನಂಬಿಕೆ ಸ್ವಲ್ಪವೂ ಕುಗ್ಗಲಿಲ್ಲ. ಕ್ಷಾಮದ ಬೆನ್ನ ಹಿಂದೆಯೇ ಪ್ಲೇಗು ಎರಗಿದ ಸಂದರ್ಭದಲ್ಲಿ -ಅಂದರೆ ಅವರು ಮೆಟ್ರಿಕ್ಯುಲೇಶನ್ ಓದುತ್ತಿದ್ದಾಗಲೇ- ಜನರು ಅಪಾರವಾದ ನೋವು ನಷ್ಟಗಳಿಗೆ ಗುರಿಯಾಗುವುದನ್ನು ಕಂಡು ಬಹಳವಾಗಿ ದುಃಖಪಟ್ಟಿದ್ದರು.[೩೯]

೧೯೦೮ರ ವೇಳೆಗೆ ಕೈಗಾರಿಕಾ ಹಿಂದುಳಿದಿರುವಿಕೆಯ ಕಾರಣಗಳನ್ನು ತಿಳಿದು ಪರಿಹಾರ ಕಂಡುಕೊಳ್ಳಲು ತಕ್ಕ ಸಮಯವಿದೆಂಬ ಅರಿವು ಬ್ರಿಟಿಷ್ ಸರ್ಕಾರಕ್ಕೆ ಬಂದಿತ್ತು. ನಿಜವಾದ ರಾಷ್ಟ್ರಪ್ರೇಮಿಯು ಪ್ರಗತಿ, ಹಾಗೂ ಶಾಂತಿಗಾಗಿ ದುಡಿಯಬೇಕಾಗಿದೆಯಲ್ಲದೆ ವರ್ಗದ್ವೇಷ, ಕಾನೂನು ಉಲ್ಲಂಘನೆ ಹಾಗೂ ವಿಚ್ಛಿದ್ರಕಾರಿ ನೀತಿಯನ್ನು ಹರಡುವಂಥ ಮಾರ್ಗ ಪೊಳ್ಳು ಸ್ವದೇಶಿ ಮಾರ್ಗವೆಂದು ೧೯೦೮ರಲ್ಲಿ ಮದರಾಸಿನ ಗೌರ್ನರ್ ಕರೆಕೊಟ್ಟರು. ರಾಷ್ಟ್ರದ ಪ್ರಗತಿ ಹಾಗೂ ರಾಜಕೀಯ ಗುರಿ ಸಾಧನೆಯಾಗುವುದು ಕೈಗಾರಿಕೆ ಹಾಗೂ ವಾಣಿಜ್ಯ ವ್ಯವಹಾರದಿಂದ ಮಾತ್ರ ಎಂದು ಗೌರವಾನ್ವಿತ ಬಾಬು ಭೂಪೇಂದ್ರನಾಥ್ ಬೋಸ್ ಅವರು ಅಭಿಪ್ರಾಯ ಪಟ್ಟಿದ್ದಾರೆ; ಹಾಗಾಗಿ ಸ್ವದೇಶಿ ಚಳವಳಿಯನ್ನು ಕೈಗಾರಿಕೀಕರಣಕ್ಕೆ ಸಮೀಕರಿಸಲಾಗಿತ್ತು.[೪೦]

ಕರ್ನಾಟಕದಲ್ಲಿ ಸ್ವದೇಶಿ ಚಳವಳಿಯಲ್ಲಿ ದುಡಿಯುತ್ತಿದ್ದ ಇನ್ನೊಬ್ಬ ಧೀಮಂತರೆಂದರೆ ಡಾ. ಎನ್.ಎಸ್. ಹರ್ಡೀಕರ್. ಮರಾಠಿ ಭಾಷೆ ಚೆನ್ನಾಗಿ ತಿಳಿದಿದ್ದ 'ಕೇಸರಿ' ಪತ್ರಿಕೆಯನ್ನು ತಪ್ಪದೇ ಓದುತ್ತಿದ್ದ ಅವರು

ತಿಲಕರಿಂದ ಬಹಳವಾಗಿ ಪ್ರಭಾವಿತರಾಗಿದ್ದರು. 'ಕೇಸರಿ' ಪತ್ರಿಕೆಯ ಮೂಲಕ ಹರ್ಡೀಕರ್‌ರವರು ಸ್ವದೇಶಿ ಮಹತ್ವವನ್ನು ಅರಿತವರಾಗಿ ಪರಕೀಯರ ಆಳ್ವಿಕೆಯಿಂದ ಭಾರತವನ್ನು ಬಿಡುಗಡೆ ಮಾಡಲು ದುಡಿಮೆಗೆ ಸನ್ನದ್ಧರಾದದ್ದು ಸಹಜವೇ. ಭಾರತೀಯ ಹಬ್ಬಗಳಿಂದ ಹಿಡಿದು ಆರ್ಯ ಸಮಾಜದ ಸುಧಾರಣಾ ಚಳವಳಿಯವರೆಗೆ ಭಾರತೀಯವಾದ ಎಲ್ಲದರಲ್ಲೂ ಅವರಿಗೆ ಆಸಕ್ತಿ ಮೂಡಿತು.[೪೧]

ತಿಲಕರ ಜೊತೆ ನಿಕಟ ಸಂಪರ್ಕಹೊಂದಿದ್ದು ಜನಸಮುದಾಯವನ್ನು ಬಡಿದೆಬ್ಬಿಸುವ ರಚನಾತ್ಮಕ ಮಾರ್ಗವನ್ನು ಅನುಸರಿಸಿದ ಇನ್ನೊಬ್ಬ ವ್ಯಕ್ತಿಯೆಂದರೆ ಗಂಗಾಧರರಾವ್ ದೇಶ್‌ಪಾಂಡೆ ಅವರು. ವಿದೇಶಿ ವಸ್ತುಗಳ ನಿಷೇಧ, ಸ್ವದೇಶಿ ಪದಾರ್ಥಗಳ ಉತ್ತೇಜನ ಹಾಗೂ ರಾಷ್ಟ್ರೀಯ ಶಿಕ್ಷಣಕ್ಕೆ ಬೆಂಬಲ- ಇವು ಇವರ ಸ್ವದೇಶಿ ಚಳವಳಿಯ ಕಾರ್ಯಕ್ರಮಗಳಾಗಿದ್ದುವು. ಅವರು ಸ್ಥಳೀಯ ಶಾಲೆ ಸಮಿತಿಯ ಅಧ್ಯಕ್ಷರಾದಾಗ ತಮ್ಮ ಸ್ಥಾನವನ್ನು ಉಪಯೋಗಿಸಿಕೊಂಡು ಉಪಾಧ್ಯಾಯರಿಗೆ ಸ್ವದೇಶಿ ಚಳವಳಿಯ ಬಗ್ಗೆ ತಿಳಿಯಹೇಳಿದರು. ಉಪಾಧ್ಯಾಯರು ತಮ್ಮ ಶಿಷ್ಯರಿಗೆ ಚಳವಳಿಯ ಮಹತ್ವವನ್ನು ತಿಳಿಸಿದರು.[೪೨]

ಸ್ವದೇಶಿ ಚಳವಳಿಯ ಇನ್ನೊಬ್ಬ ನೇತಾರರು ಕಾರ್ನಾಡ್ ಸದಾಶಿವರಾಯರು- ಇವರು ತಮ್ಮ ಮನೆಯಲ್ಲೇ 'ತಿಲಕ ವಿದ್ಯಾಶಾಲ' ಎಂಬ ಹೆಸರಿನ ಒಂದು ರಾಷ್ಟ್ರೀಯ ಶಾಲೆಯನ್ನು ತೆರೆದು ಅಲ್ಲಿ, ಮಕ್ಕಳಿಗೆ ಸಾಂಪ್ರದಾಯಿಕವಾದ ಮಾದರಿಯ ಶಿಕ್ಷಣದ ಜೊತೆಗೆ ಹಿಂದಿಯನ್ನು ಕಲಿಸಿದರು. ನೂಲುವುದು, ನೇಯುವುದು ಹಾಗೂ ಕುಶಲಕಲೆಯನ್ನು ಕಲಿಸಿದರು. ತಿಲಕರ ಪ್ರಭಾವದಲ್ಲಿ ದೇಶದ ಬೇರೆ ಬೇರೆ ಭಾಗಗಳಲ್ಲಿ ಸ್ವದೇಶಿ ಕಾರ್ಖಾನೆಗಳು ಸ್ಥಾಪನೆಯಾದವು, ಸಹಜವಾಗೇ ಕರ್ನಾಟಕದಲ್ಲೂ ಕೆಲವು ಸ್ಥಾಪನೆಗೊಂಡವು. ಗದಗ್, ಹುಬ್ಬಳ್ಳಿ ಹಾಗೂ ಬಳ್ಳಾರಿಗಳಲ್ಲಿ ತಲೆಯೆತ್ತಿದ ಕಾರ್ಖಾನೆಗಳು ಸ್ವದೇಶಿ ಚಳವಳಿಯ ಶಿಶುಗಳು ಎನ್ನಬೇಕು. ಕೈಮಗ್ಗಕ್ಕೆ ಹೆಚ್ಚಿನ ಪ್ರೋತ್ಸಾಹ ದೊರಕಿತು. ಕೈಮಗ್ಗದ ಪದಾರ್ಥಗಳನ್ನು ಮಾರಲು ಬೇರೆ ಬೇರೆ ಅಂಗಡಿಗಳು ತೆರೆದು, ವಿದೇಶಿ ವಸ್ತುಗಳ ಆಮದಿನಲ್ಲಿ ಇದ್ದಕ್ಕಿದ್ದಂತೆ ಕಡಿತವುಂಟಾಯಿತು. ಕರ್ನಾಟಕ ಹಾಗೂ ಭಾರತದಲ್ಲಿ ಯಾವ ಪ್ರಮಾಣದಲ್ಲಿ ಈ ಚಳವಳಿ ಹಬ್ಬಿತು ಎನ್ನುವುದಕ್ಕೆ ಇವು ಕೆಲವು ಉದಾಹರಣೆಗಳು ಮಾತ್ರ.[೪೩]

ಕರ್ನಾಟಕದ ಜನರ ಮನಸ್ಸಿನಲ್ಲಿ ಈ ಬಗೆಯ ಪ್ರಯತ್ನಗಳಿಂದ ಸ್ವದೇಶಿ ಚಳವಳಿಯು ನೆಲೆಯೂರಲು ಸಹಾಯವಾಗಿತ್ತಾದರೂ, ಚಳವಳಿಗೆ ಪೂರ್ಣ ಪ್ರಮಾಣದ ಯಶಸ್ಸು ಲಭಿಸಿರಲಿಲ್ಲ. ಮಹಾತ್ಮ ಗಾಂಧಿಯವರು ಭಾರತೀಯ ರಾಜಕೀಯ ವಲಯದಲ್ಲಿ ಕಾಣಿಸಿಕೊಂಡಾಗ ಪರಿಸ್ಥಿತಿ ಬದಲಾದದ್ದನ್ನು ನೆನೆಯಬೇಕು. ಮಹಾತ್ಮ ಗಾಂಧಿಯವರು ಭಾರತವನ್ನು ಸ್ವಲ್ಪ ಸ್ವಲ್ಪವಾಗಿ ಸ್ವಾತಂತ್ರ್ಯದ ಕಡೆಗೆ ತೆಗೆದುಕೊಂಡು ಹೋದರು. ಸ್ವದೇಶಿ ಬಗ್ಗೆ ಪ್ರೇಮ ಹಾಗೂ ರಾಷ್ಟ್ರಪ್ರೇಮದ ಮಹತ್ವವನ್ನು ಗಾಂಧೀಜಿಯವರು ಜನರಿಗೆ ಮನವರಿಕೆ ಮಾಡಿಕೊಡುವ ಮೂಲಕ ಪರಕೀಯರ ಆಳ್ವಿಕೆಯಲ್ಲಿ ನಿರುಮ್ಮಳವಾಗಿ ಇದ್ದುಬಿಡುವ ಪ್ರವೃತ್ತಿಯನ್ನು ಖಂಡಿಸಿದರು. ಸ್ವಾತಂತ್ರ್ಯ ಹೋರಾಟದಲ್ಲಿ ಎಲ್ಲ ವಲಯದ ಜನರೂ ಭಾಗವಹಿಸಬೇಕೆಂದು ಗಾಂಧೀಜಿ ಕರೆಕೊಟ್ಟರು. ಬ್ರಿಟಿಷ್ ಪದಾರ್ಥಗಳನ್ನೆಲ್ಲಾ ಸಾರಾಸಗಟಾಗಿ ನಿರಾಕರಿಸುವುದು ಹೆಡ್ಡತನವೆಂದೂ, ಗ್ರಂಥಗಳು ಬ್ರಿಟಿಷರವೆಂದು ತ್ಯಜಿಸುವುದು ವಿವೇಕದ ಲಕ್ಷಣವಲ್ಲವೆಂದೂ ಗಾಂಧೀಜಿ ತಿಳಿಸಿದರು. ವಿದೇಶಿ ವಸ್ತುಗಳನ್ನು ನಿರಾಕರಿಸುವ ನಕಾರಾತ್ಮಕ ಮಾರ್ಗದಿಂದಷ್ಟೇ ಗಾಂಧೀಜಿ ತೃಪ್ತರಾಗಿರಲಿಲ್ಲ, ಭಾರತೀಯ ಗುಡಿ ಕೈಗಾರಿಕೆಯನ್ನು ನಿರ್ಮಾಣ ಮಾಡುವಂಥ ಸಕಾರಾತ್ಮಕವಾದ ಮಾರ್ಗದ ಬಗ್ಗೆ ಅವರು ಹೆಚ್ಚು ಉತ್ಸಾಹಿಗಳಾಗಿದ್ದರು. ಹಾಗಾಗಿ ವಿದೇಶಿವಸ್ತು ನಿರಾಕರಣೆ ಎಂಬುದು ಚರಕದಿಂದ ನೂಲುವುದು ಹಾಗೂ ಗುಡಿ ಕೈಗಾರಿಕೆಯ ಪುನಃಶ್ಚೇತನವೆಂಬ ಅರ್ಥವನ್ನು ಪಡೆದುಕೊಂಡಿತು. ತಾವು ಅಮೆರಿಕದಲ್ಲಿದ್ದಾಗ ೧೯೧೯ರಲ್ಲಿ ಎನ್.ಎಸ್. ಹರ್ಡೀಕರ್‌ರವರು

ಸಿಗರೇಟು ಸೇದುವುದನ್ನು ಅಭ್ಯಾಸ ಮಾಡಿಕೊಂಡಿದ್ದರು, ಸಿಗರೇಟು ಕೂಡ ವಿದೇಶಿ ವಸ್ತುವೆಂದು ಮನವರಿಕೆಯಾಗಿ ಅದನ್ನು ಬಿಟ್ಟು ಸ್ವದೇಶಿಯಾದ ಬೀಡಿ ಸೇದುವುದನ್ನು ಅಭ್ಯಾಸ ಮಾಡಿಕೊಂಡರು.[೪೪] ಸ್ವದೇಶಿ ಚಳವಳಿಯು ಕ್ರಮೇಣ ತನ್ನ ವೇಗವನ್ನು ಹೆಚ್ಚಿಸಿಕೊಂಡು ೧೯೨೦ರ ಹೊತ್ತಿಗೆ ಶೃಂಗಬಿಂದುವನ್ನು ಮುಟ್ಟಿತು. ಆವಾಗಲೇ ಅಸಹಕಾರ ಚಳವಳಿಯ ಜೊತೆ ಜೊತೆಗ ಗಾಂಧೀಜಿ ಖಾದಿ ಕಾರ್ಯಕ್ರಮವನ್ನು ಪ್ರಾರಂಭಿಸಿದರು. ಹಾಗಾಗಿ ಬೆಳಗಾವಿ ಹಾಗೂ ಕರ್ನಾಟಕದ ಇತರೆ ಭಾಗಗಳಲ್ಲಿ ಖಾದಿ ಕಾರ್ಯಕ್ರಮ ಪ್ರಾರಂಭವಾಯಿತು.

ಗಾಂಧೀಜಿಯವರ ಕರೆಗೆ ಕರ್ನಾಟಕದಲ್ಲಿ ರಚನಾತ್ಮಕ ಕಾರ್ಯಕ್ರಮಗಳಲ್ಲಿ ಹಮ್ಮಿಕೊಳ್ಳುವುದರ ಮೂಲಕ ಚೆನ್ನಾಗಿ ಪ್ರತಿಸ್ಪಂದನೆ ದೊರಕಿತು. ಖಾದಿ ಹಾಗೂ ಗ್ರಾಮೋದ್ಯೋಗ ಕರ್ನಾಟಕದ ಮೂಲೆ ಮೂಲೆಯಲ್ಲೂ, ಕುಗ್ರಾಮಗಳಲ್ಲೂ ಸ್ಥಾಪನೆಯಾಯಿತು. ಉತ್ತರ ಕರ್ನಾಟಕವು ಹತ್ತಿ ಬೆಳೆಯ ವಲಯವೆಂದು ಗುರ್ತಾದ ಕಾರಣ ಖಾದಿ ಉದ್ಯಮಕ್ಕೆ ಇಲ್ಲಿ ಪ್ರೋತ್ಸಾಹ ಸಿಕ್ಕಿತು. ೧೯೨೬ರಲ್ಲಿ ಜಿ.ಆರ್. ದೇಶಪಾಂಡೆ ಅವರು ಖಾದಿ ಸಂಘದ ಜವಾಬ್ದಾರಿಯನ್ನು ವಹಿಸಿಕೊಂಡರೆ ಮೈಸೂರು ಸಂಸ್ಥಾನದಲ್ಲಿ ತಗಡೂರು ರಾಮಚಂದ್ರರಾವ್ ಅವರು ಖಾದಿ ಉದ್ಯೋಗವನ್ನು ಪ್ರೋತ್ಸಾಹಿಸಿದರು.[೪೫]

ಖಾದಿಯನ್ನು ವ್ಯಾಪಕಗೊಳಿಸುವ ಉದ್ದೇಶವೆಂದರೆ ಅನೇಕ ಬಡವರಿಗೆ ಊಟ ಮತ್ತು ಬಟ್ಟೆಯನ್ನು ಕೊಡುವುದು. ಸ್ವರಾಜ್ಯದ ಅಗತ್ಯಕ್ಕಿಂತ ಬಡತನ ನಿರ್ಮೂಲನವೇ ಪ್ರಮುಖವಾದ ಅಂಶವಾಗಿತ್ತು. ಖಾದಿಯನ್ನು ವ್ಯಾಪಕವಾಗಿ ಬಳಸುವುದರಿಂದ ಮಾತ್ರ ಸ್ವರಾಜ್ಯವು ಸಾಧ್ಯವಾಗಿತ್ತು. ಭಾರತೀಯ ಕುಶಲತೆ ಹಾಗೂ ಪರಿಸ್ಥಿತಿಗೆ ಒಗ್ಗುವಂಥ ತಂತ್ರಗಾರಿಕೆಯನ್ನು ಅಭಿವೃದ್ಧಿಪಡಿಸುವ ದೃಷ್ಟಿಯಿಂದ ಗಾಂಧೀಜಿ ಖಾದಿಗೆ ಅಷ್ಟು ಒತ್ತುಕೊಟ್ಟರು. ರಾಷ್ಟ್ರೀಯ ಹೋರಾಟದಲ್ಲಿ ಖಾದಿ ಚಳವಳಿಯ ಸೇರ್ಪಡೆಯಾದಂತೆ ಆರ್ಥಿಕತೆಯನ್ನು ಪುನರ್ನಿರ್ಮಾಣ ಮಾಡುವುದು ಕೂಡ ಗಾಂಧೀಜಿಯವರ ದೃಷ್ಟಿಯಲ್ಲಿ ಒಂದು ಮಹತ್ವದ ಹೆಜ್ಜೆಯಾಗಿತ್ತು. ಹಾಲಪ್ಪನವರು ಹೇಳುವಂತೆ: ಖಾದಿ ಆಂದೋಲನವು ರಾಷ್ಟ್ರೀಯವಾದಿ ಹೋರಾಟದಲ್ಲಿ ಅತ್ಯಂತ ವಿನೂತನವೂ ಕ್ರಾಂತಿಕಾರಕವೂ ಆದ ಒಂದು ತಂತ್ರವಾಗಿದೆ. ಸ್ವಾತಂತ್ರ್ಯಗಳಿಸಲು ರಾಜಕೀಯವಾಗಿ ಸತ್ಯಾಗ್ರಹ ಸಹಕಾರಿಯಾದಂತೆ ಗಾಂಧೀಜಿಯವರಿಗೆ ಖಾದಿ ಆಂದೋಲನ ಆರ್ಥಿಕವಾದ ಬಿಡುಗಡೆಗೆ ಬೀಜಮಂತ್ರವಾಗಿತ್ತು. ಖಾದಿಯು ರಾಷ್ಟ್ರಪ್ರೇಮದ ಸಂಕೇತವಾಗಿ ಗೋಚರಿಸಿತು, ಹಾಗೆಯೇ ಖಾದಿ ಧರಿಸಿದವರು ಸ್ವಾತಂತ್ರ್ಯ ಹೋರಾಟಗಾರರೆಂಬ ಗೌರವಕ್ಕೆ ಭಾಜನರಾದರು.

ಕರ್ನಾಟಕದಲ್ಲಿ ಖಾದಿ ಚಳವಳಿಯ ಪ್ರಭಾವ ಬಹಳ ದಟ್ಟವಾಗಿತ್ತು. ಸ್ವದೇಶಿ ಚಳವಳಿಯ ಸಂಕೇತವಾದ ಖದ್ದರ್ ಕರ್ನಾಟಕದಲ್ಲಿ ಪ್ರಾರಂಭದಿಂದಲೂ ಕಾಣಿಸಿಕೊಂಡಿತು.[೪೬] ಖಾದಿ ಆಂದೋಲನದ ಪರಿಣಾಮವಾಗಿ ವಿದೇಶಿ ವಸ್ತುಗಳನ್ನು ಕರ್ನಾಟಕದ ಎಲ್ಲಕಡೆ ಬಹಿರಂಗವಾಗಿ ಸುಟ್ಟರು. ಹರ್ಡೀಕರ್ ಮಂಜಪ್ಪನವರು ಗಾಂಧೀಜಿಯವರ ಕಟ್ಟಾ ಅನುಯಾಯಿಯಾಗಿದ್ದರಲ್ಲದೆ ಅವರನ್ನು 'ಕರ್ನಾಟಕದ ಗಾಂಧಿ' ಎಂದು ಕೂಡ ಕರೆಯುತ್ತಿದ್ದರು. ಹರ್ಡೀಕರರ ಅಧ್ಯಕ್ಷತೆಯಲ್ಲಿ ಮೊಟ್ಟಮೊದಲ ಕರ್ನಾಟಕ ಖಾದಿ ಸಮ್ಮೇಳನವು ಧಾರವಾಡದಲ್ಲಿ ೨೬, ಮೇ ೧೯೨೮ರಂದು ಜರುಗಿತು.

ಹುಕ್ಕೇರಿಕರ್, ಎಚ್.ಆರ್. ವೆಂಕಟರಾಮಯ್ಯ ಹಾಗೂ ಜಾಲಿಹಾಳ್ ಅನಂತರಾವ್ ಅವರ ಸಂಯುಕ್ತ ಪ್ರಯತ್ನದ ಫಲವಾಗಿ ೧೯೩೦ರ ದಶಕದಲ್ಲಿ ಅಖಿಲ ಕರ್ನಾಟಕ ಸ್ವದೇಶಿ ಸಭಾ ಪ್ರಾರಂಭವಾಗಿ ಖಾದಿ ಸಹಕಾರ ಸಂಘಗಳ ಸ್ಥಾಪನೆಗೆ ಆರಂಭಿಕ ಹೆಜ್ಜೆಗಳನ್ನು ಇಟ್ಟರು. ವಿದೇಶಿ ವಸ್ತುಗಳ ಮಾರಾಟದ ವಿರುದ್ಧ

ಮುಷ್ಕರ ಹೂಡಿ ವ್ಯಾಪಾರಿಗಳ ಸಂಘವು ಪ್ರತಿಭಟನೆ ವ್ಯಕ್ತಪಡಿಸಿದುವು. ಕಾರವಾರ, ಕೊಟ್ಟೂರು, ಕುಂದಾಪುರ ಹಾಗೂ ಮಂಗಳೂರು ಇವು ಸ್ವದೇಶಿ ಚಳವಳಿಯಲ್ಲಿ ಮಂಚೂಣಿಯಲ್ಲಿದ್ದವು.[೪೭] ವಿದೇಶಿವಸ್ತು ನಿರಾಕರಣೆಯಲ್ಲಿ ಹೆಂಗಸರೂ ಸಹ ಮನೆ ಮನೆಗೆ ಹೋಗಿ ಅವುಗಳನ್ನು ಕಲೆಹಾಕಿ ಬೆಂಕಿಯಲ್ಲಿ ಸುಡುವ ಕಾರ್ಯದಲ್ಲಿ ತೊಡಗಿದರು.

ಖಾದಿ ತತ್ವದ ಮೂಲಕ ಜನರ ಮೇಲೆ ಹರ್ಡೀಕರ್ ಮಂಜಪ್ಪನವರು ಪ್ರಭಾವ ಬೀರಿದರು, ಕೇವಲ ಉಪದೇಶದಿಂದಲ್ಲ; ತಾವೇ ಸ್ವತಃ ಆ ತತ್ವಗಳನ್ನು ಅಳವಡಿಸಿಕೊಳ್ಳುವುದರ ಮೂಲಕ. ಖಾದಿ ಬಗ್ಗೆ ಅವರು ಬರೆದಿರುವ ಕೃತಿಯಲ್ಲಿ ಸ್ಪಷ್ಟವಾಗಿ ತಿಳಿಸಿರುವಂತೆ ನಿಜವಾದ ರಾಜಕೀಯ ಸ್ವಾತಂತ್ರ್ಯಕ್ಕೆ ಆರ್ಥಿಕ ಸ್ವಾವಲಂಬನೆ ಅತ್ಯಗತ್ಯ, ಅಥವಾ ಆರ್ಥಿಕ ರಾಷ್ಟ್ರವಾದದ ಬೆಂಬಲವಿಲ್ಲದೆ ರಾಜಕೀಯ ರಾಷ್ಟ್ರವಾದ ಪರಿಪೂರ್ಣವಲ್ಲ.

ಬೆಂಗಳೂರಿನ ಸ್ವದೇಶಿ ಸಭಾವು ಕರ್ನಾಟಕದ ಇತರ ಭಾಗಗಳಿಗೆ ತನ್ನ ಸುದ್ದಿ ಪತ್ರಿಕೆಯನ್ನು ಕಳುಹಿಸುವುದರ ಮೂಲಕ ಉಪಕಾರಿಯಾಯಿತು. ಈ ಸುದ್ದಿ ಪತ್ರಿಕೆಗಳನ್ನು ಹಂಚುತ್ತಿದ್ದ ಸ್ವಯಸೇವಕರು ದಸ್ತಗಿರಿಯಾದರು. ಮದ್ಯದಂಗಡಿಗಳ ಮುಂದೆ ಧರಣಿ ಮಾಡಿದರು, ಹಾಗೂ ಸರ್ಕಾರ ಎಷ್ಟು ಆತಂಕಗೊಂಡಿತೆಂದರೆ ದಿಗಿಲಿನಿಂದ ರಾಜಕೀಯ ಸಂಘಟನೆಗಳನ್ನು ಕಾನೂನುಬಾಹಿರವೆಂದು ಘೋಷಿಸಿತು.

ಸ್ವದೇಶಿ ತತ್ವದಲ್ಲಿ ಬಹಳ ನಿಷ್ಠೆಯುಳ್ಳ ಇನ್ನೊಬ್ಬರೆಂದರೆ ಎಂ.ಎನ್. ಕೃಷ್ಣರಾವ್ ಅವರು. ದಿವಾನ್ ಮಿರ್ಜಾ ಇಸ್ಮಾಯಿಲ್ಲರಿಗೂ ಕೂಡಾ ಈ ಚಳವಳಿ ಹಿಡಿಸಿತ್ತು. ಹಾಗಾಗಿ ಇದಕ್ಕೆ ಪೂರಕವಾದಂಥ ಕೆಲವು ಯೋಜನೆಗಳನ್ನು ಕೈಗೆತ್ತಿಕೊಂಡು ಕ್ರಮೇಣ ವಿಸ್ತರಿಸಿದರು. ಬದನವಾಳಿನ ಖಾದಿ ನೂಲುವ ಮತ್ತು ನೇಯುವ ಕೇಂದ್ರ ಕೃಷ್ಣರಾಯರಿಂದ ಸ್ಥಾಪಿತವಾಯಿತು. ಅನಂತರ ಇದಕ್ಕೆ ಮಿರ್ಜಾ ಇಸ್ಮಾಯಿಲ್ಲರ ಬೆಂಬಲ ದೊರಕಿತು. ಈಶ್ವರ ದತ್ತರ ಲೇಖನವೊಂದರಿಂದ ಮಿರ್ಜಾ ಇಸ್ಮಾಯಿಲ್ಲರು ಸ್ವದೇಶಿ ಚಳವಳಿಯಲ್ಲಿ ನಂಬಿಕೆಯುಳ್ಳವರೆಂಬ ಅಂಶ ಪ್ರಕಟವಾಗುತ್ತದೆ. ಅವರ ಪ್ರಕಾರ, ಲಾಯ್ಡ್ ಜಾರ್ಜ್ ವೇಲ್ಸ್‌ನ ಮನುಷ್ಯನಾಗಿದ್ದಂತೆ ಮಿರ್ಜಾ ಇಸ್ಮಾಯಿಲ್ಲರು ಭಾರತೀಯರಾಗಿದ್ದರೂ, ಮೂಲತಃ ಅವರು ಮೈಸೂರಿನವರಾಗಿದ್ದರು. ಬಾನುಲಿ ಪ್ರಸಾರದಲ್ಲಿ ಮಿರ್ಜಾ ಇಸ್ಮಾಯಿಲ್ಲರೇ ಒಮ್ಮೆ ಹೇಳಿದರು: 'ನಮ್ಮ ಕಾರ್ಖಾನೆಗಳಲ್ಲಿ ತಯಾರಾಗುವ ವಸ್ತುಗಳ ಬಗ್ಗೆ ನಮಗೆ ಹೆಮ್ಮೆ ಇದೆ. ಪ್ರಾದೇಶಿಕ ಚಿಂತನೆಯೆಂದು ಕರೆಸಿಕೊಳ್ಳುವ ಅಪಾಯವಿದ್ದರೂ ನಾನು ಹೇಳುವುದೇನೆಂದರೆ, ಉಳಿದೆಲ್ಲದಕ್ಕಿಂತ ಮೈಸೂರಿನವರ ಮುಂದೆ ನಾವು ಇಡಬೇಕಾದ ಆದರ್ಶಗಳೆಂದರೆ, ಮೈಸೂರು ಸಾಬೂನಿನಿಂದ ಅವರು ಕೈ ತೊಳೆಯಬೇಕು, ಮೈಸೂರು ಟವೆಲ್ಲಿನಿಂದ ಮೈ ಒರೆಸಿಕೊಳ್ಳಬೇಕು, ಮೈಸೂರು ರೇಷ್ಮೆಯನ್ನವರು ತೊಡಬೇಕು, ಮೈಸೂರು ಕುದುರೆಗಳನ್ನು ಏರಬೇಕು, ಮೈಸೂರು ಕಾಫಿಯನ್ನವರು ಕುಡಿಯಬೇಕು..........'[೪೮] ಇವು ಕೇವಲ ಪದಗಳಲ್ಲ, ಬದಲಾಗಿ ನಿಜವಾದ ನಂಬಿಕೆಯಿಂದ ಮೂಡಿದ ಮಾತುಗಳು.

ಸ್ವದೇಶಿ ಚಳವಳಿಯು ಕರ್ನಾಟಕದಲ್ಲಿ ಆಗುತ್ತಿದ್ದ ರಾಜಕೀಯ ಚಟುವಟಿಕೆಗಳಿಗೆ ಪೂರಕವಾದ ಆರ್ಥಿಕ ಅಂಗವಾಗಿ ಕಂಡುಬಂದಿತ್ತು. ಭಾರತೀಯರ, ವಿಶೇಷವಾಗಿ ಕರ್ನಾಟಕದ ಜನರ ಆರ್ಥಿಕ ಆಲೋಚನೆಗಳ ಮೇಲೆ ಈ ಚಳವಳಿ ಬಹಳ ಪ್ರಭಾವ ಬೀರಿತ. ಜೊತೆಗೆ ಇದರ ಪರಿಣಾಮಗಳಿಂದಾಗಿ ಬ್ರಿಟಿಷ್ ಆಡಳಿತದ ಬುನಾದಿ ಅಲುಗಾಡಲು ಪ್ರಾರಂಭವಾಯಿತು. ಈ ಚಳವಳಿ ಉಂಟುಮಾಡಿದ್ದ ನಿರೀಕ್ಷೆಗಳು ನಿಜವಾಗುವ ಮಟ್ಟ ತಲುಪದಿದ್ದರೂ ಇದರಿಂದ ಆದ ಸಾಧನೆಯನ್ನು ತಳ್ಳಿ ಹಾಕುವಂತಿಲ್ಲ. ಕರ್ನಾಟಕದ

ಜನರ ಮನಸ್ಸಿನಲ್ಲಿ ಸ್ವಸಹಾಯ ಹಾಗೂ ಸ್ವಾವಲಂಬನೆಯ ಚಿಂತನೆಗಳು ಭದ್ರವಾಗಿ ಬೇರೂರಲು ಕಾರಣವಾಯಿತು. ಕರ್ನಾಟಕದಲ್ಲಿ ಕಂಡುಬಂದ ಆರ್ಥಿಕ ಪ್ರಗತಿಗೆ ಈ ಅರಿವು ಪ್ರಧಾನ ಕಾರಣವೆಂಬುದನ್ನು ಮರೆಯುವಂತಿಲ್ಲ.

ಮೈಸೂರಿನಲ್ಲಿ ಕಂಡುಬಂದ ರೀತಿಯಲ್ಲೇ ಹೈದರಾಬಾದ್ ಕರ್ನಾಟಕ ಹಾಗೂ ಬೊಂಬಾಯಿ ಕರ್ನಾಟಕದಲ್ಲಿ ಆರ್ಥಿಕ ಅಭಿವೃದ್ಧಿಯ ವೇಗ ಕಂಡುಬರಲಿಲ್ಲ– ಇದು ಇದುವರೆಗಿನ ಬೆಳವಣಿಗೆಗಳನ್ನು ಗಮನಿಸಿ ಹೇಳಬಹುದಾದಂಥ ತೀರ್ಮಾನದ ಮಾತು. ಇದಕ್ಕೆ ಕಾರಣಗಳನ್ನು ಹುಡುಕುವುದು ಕಷ್ಟವಲ್ಲ. ೧೭೯೯ರ ನಂತರ ಟಿಪ್ಪುವಿನ ಗಡಿ ಪ್ರದೇಶಗಳನ್ನು ಮರುಹಂಚಿಕೆ ಮಾಡುವ ಪ್ರಸಂಗ ಒದಗಿತು. ಹಾಗಾಗಿ ಕೊಪ್ಪಳವು ನಿಜಾಮನಿಗೆ ಹೋಗುವುದರಲ್ಲಿತ್ತು, ಕೊಲ್ಹಾಪುರದ ರಾಜ, ಧಾರವಾಡ ಹಾಗೂ ಕಿತ್ತೂರಿನ ಪಾಳೆಯಗಾರರ ನಡುವೆ ಉತ್ತರ ಕರ್ನಾಟಕದ ಮರುಹಂಚಿಕೆಗಾಗಿ ಪೈಪೋಟಿ ನಡೆಯಿತು.

ಹೈದರಾಬಾದು ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ನಿಜಾಮನ ದಮನಕಾರಿ ಆಳ್ವಿಕೆಯು ಆರೋಗ್ಯಕರವಾದ ಆರ್ಥಿಕ ಬೆಳವಣಿಗೆಗೆ ಅನುಕೂಲಕರವಾಗಿರಲಿಲ್ಲ, ಹಾಗಾಗಿ ನಿಜಾಮನ ಆಡಳಿತದಲ್ಲಿ ಜನರು ಬಳಲಿದರು. ೧೮೮೯ ಹಾಗೂ ೧೮೩೦ರಷ್ಟು ಹಿಂದೆಯೇ ನಿಜಾಮನ ವಿರುದ್ಧ ಕೊಪ್ಪಳ ಹಾಗೂ ಬೀದರ್‌ನವರು ಸಿಡಿದೆದ್ದರು. ಹೈದರಾಬಾದಿನ ನಿಜಾಮನ ಆಳ್ವಿಕೆಯಲ್ಲಿ ದಿವಾನಿ ಪದ್ಧತಿಯ ಅನುಸಾರ ೬೦% ಭಾಗ ಭೂಮಿಯನ್ನು ವರ್ಗೀಕರಿಸಲಾಯಿತು, ೧೮೭೦ರ ದಶಕದ ವೇಳೆಗೆ ರೈತವಾರಿ ಲಕ್ಷಣವುಳ್ಳ ಮಾಪನ ಹಾಗೂ ಸೆಟ್ಲ್‌ಮೆಂಟ್ ಅನ್ನು ಜಾರಿಗೊಳಿಸಲಾಯಿತು. ಉಳಿದವುಗಳಲ್ಲಿ ೩೦% ಭಾಗ ಭೂಮಿಯು ಜಾಗೀರ್‌ದಾರರಿಂದ ನಿಯಂತ್ರಿಸಲ್ಪಟ್ಟರೆ, ೧೦% ಭಾಗ ಸರ್ಫೇಕಾಸ್, ಎಂದರೆ ನಿಜಾಮನ ಖಾಸಗಿ ಭೂಮಿಯಾಗಿ, ಉಳಿಸಿಕೊಳ್ಳಲಾಯಿತು.[೯] ಈ ಊಳಿಗಮಾನ್ಯ ಶೋಷಣೆಯು ಅತಿಯಾಗಿ ಬಡವರು ನಿಜವಾಗಿ ಕಂಗಾಲಾದರು.

ಇದೇ ಪ್ರಕಾರ ಬೊಂಬಾಯಿ ಕರ್ನಾಟಕ ಪ್ರದೇಶದಲ್ಲಿ ಜನರು ಮರಾಠಿಗರ ಪ್ರಾಬಲ್ಯವನ್ನು ಅನುಭವಿಸ ಬೇಕಾಯಿತು. ಮೈಸೂರಿನಲ್ಲಿ ಜನರಿಗೆ ಆ ಪ್ರಮಾಣದಲ್ಲಿ ತೊಂದರೆಯಾಗಲಿಲ್ಲ. ಮೈಸೂರು ಕನ್ನಡಿಗರಲ್ಲಿ ತಾವು ಒಂದು ಪ್ರದೇಶಕ್ಕೆ ಸೇರಿದವರೆಂಬ ಭಾವನೆ ಬಲವಾಗಿತ್ತು. ಆಳುವವರು ಹಾಗೂ ಪ್ರಜೆಗಳ ನಡುವಿನ ಸಂಬಂಧ ಒಂದು ರೀತಿಯಲ್ಲಿ ಸುಭದ್ರವಾಗಿತ್ತು– ಕನ್ನಡಿಗರಲ್ಲಿ ತಾನೊಬ್ಬ ಕನ್ನಡಿಗನೆಂಬ ಭಾವನೆ ಪ್ರಜ್ಞೆಯಲ್ಲಿ ಮೂಡಿತ್ತು. ಆದರೆ ಬೊಂಬಾಯಿ ಕರ್ನಾಟಕ ಅಥವಾ ಹೈದರಾಬಾದ್ ಕರ್ನಾಟಕದ ಜನತೆಯ ಭಾವನೆ ಬೇರೆಯದೇ ಆಗಿತ್ತು. ಕಾರಣ ತಮ್ಮನ್ನಾಳುವವರು ತಮ್ಮವರಲ್ಲೇ ಒಬ್ಬರು ಎಂಬ ಭಾವನೆ ಬೆಳೆಯುವಂತಿರಲಿಲ್ಲ. ಈ ಕಾರಣದಿಂದ ಬೊಂಬಾಯಿ ಕರ್ನಾಟಕ ಹಾಗೂ ಹೈದರಾಬಾದು ಕರ್ನಾಟಕ ಎರಡೂ ಜನತೆ ಶೋಷಣೆಯ ಅಥವಾ ದಮನದಲ್ಲಿ ನರಳಿದರು. ಹಾಗಾಗಿ ಕರ್ನಾಟಕ ರಾಜ್ಯದ ಪುನರ್ವಿಂಗಡಣೆಯ ಪ್ರಶ್ನೆ ಬಂದಾಗ ಅಭಿಪ್ರಾಯ ಭೇದ ತಲೆದೋರಿತು. ಹೈದರಾಬಾದ್ ಕರ್ನಾಟಕ ಹಾಗೂ ಬೊಂಬಾಯಿ ಕರ್ನಾಟಕದ ಜನರೊಡನೆ ತಮ್ಮ ಸಂಪತ್ತನ್ನು ಹಂಚಿಕೊಳ್ಳಬೇಕಾಗುತ್ತದೆಯೆಂದು ದಿಗಿಲುಗೊಂಡ ಮೈಸೂರಿನವರು ರಾಜ್ಯ ಪುನರ್ವಿಂಗಡಣೆಯ ಸಂದರ್ಭದಲ್ಲಿ ಹಿಂದೇಟು ಹೊಡೆದದ್ದು ಉಂಟು. ಮೈಸೂರಿನ ಹೊರಗಿರುವಂಥ ಪ್ರದೇಶಗಳು ಹಿಂದುಳಿದಿರುವ ಕಾರಣ ಅವುಗಳನ್ನು ವಿಲೀನಗೊಳಿಸಿಕೊಳ್ಳುವುದು ಆರ್ಥಿಕವಾಗಿ ಅನುಕೂಲಕರವಲ್ಲ ಎಂಬುದು ಒಂದು ಪ್ರಬಲವಾದ ವಾದವಾಗಿತ್ತು.

ಭಾಷಾವಾರು ಪ್ರಾಂತ್ಯವಾಗಿ ರಾಜ್ಯವು ಪುನರ್ವಿಂಗಡಣೆಯಾಗುವ ಸುದ್ದಿಯಿಂದ ಹೈದರಾಬಾದ್ ಕರ್ನಾಟಕದ ಜನರು ಮಾತ್ರ ತುಂಬಾ ಸಂಭ್ರಮಗೊಂಡಿದ್ದರು. ಬೊಂಬಾಯಿ ಕರ್ನಾಟಕದ ಜನರೂ

ಅಷ್ಟೇ ಉತ್ಸಾಹದಿಂದ ಈ ವಿಲೀನವನ್ನು ಎದುರು ನೋಡುತ್ತಿದ್ದು- ತಡವಾಗಿಯಾದರೂ ತಮ್ಮ ಭಾಷೆಯನ್ನಾಡುವವರ ಜೊತೆ ಬೆಸುಗೆ ಸಾಧಿಸಬಹುದೆಂಬ ಸಂತೋಷ ಅವರದಾಗಿತ್ತು.

ಅಷ್ಟಾಗಿ ಅಭಿವೃದ್ಧಿ ಹೊಂದದಿದ್ದೂ ನೈಸರ್ಗಿಕ ಸಂಪತ್ತಿನ ವಿಚಾರದಲ್ಲಿ ಮೈಸೂರಿನ ಹೊರಗಿನ ಕ್ಷೇತ್ರಗಳು ಬಹಳ ಸಮೃದ್ಧವಾಗಿದ್ದು ಅವುಗಳ ವಿಲೀನದಿಂದ ಭಾರಿ ಕಟಕವಾಗುತ್ತದೆ ಎಂಬ ಮೈಸೂರು ಪ್ರಾಂತ್ಯದವರ ದಿಗಿಲು ನಿರಾಧಾರವಾಗಿತ್ತು.

ಬ್ರಿಟಿಷರ ಕಾಲದಲ್ಲಿ ಭಾರತದಲ್ಲಿ ರಾಜ್ಯವಿಂಗಡಣೆ ಅವೈಜ್ಞಾನಿಕವಾದುದಾಗಿತ್ತು. ಈ ವಿಂಗಡಣೆಗೆ ಯಾವುದೇ ಒಂದು ಸೂತ್ರವಿದ್ದಿಲ್ಲ. ಭಾರತದಲ್ಲಿ ಬ್ರಿಟಿಷರ ಅಧಿಕಾರ ಬೆಳೆಯುವುದಕ್ಕೆ ಸಹಕಾರಿಯಾಗುವ ರೀತಿಯಲ್ಲಿ ಈ ವಿಂಗಡಣೆಯಾಗಿತ್ತು ಎನ್ನಬೇಕು. ಆರ್ಥಿಕವಾದ ಅಥವಾ ಆಯಕಟ್ಟಿನ ಕಾರಣಗಳಿಗಾಗಿಯೋ ಅಥವಾ ಆಡಳಿತಾತ್ಮಕವಾದ ಅನುಕೂಲಕ್ಕಾಗಿಯೋ ಪ್ರಾಂತ್ಯಗಳನ್ನು ನಿರ್ಮಿಸಿದ್ದರು. ಕೆಲವು ಗಡಿಗಳು ಬದಲಾವಣೆಯಾಗಲು ರಾಷ್ಟ್ರೀಯವಾದದ ಬೆಳವಣಿಗೆಯೂ ಒಂದು ಕಾರಣ. ಯಾವುದೇ ತರ್ಕವಿಲ್ಲದೆ ಕೇವಲ ಸಾಮ್ರಾಜ್ಯಶಾಹಿ ಕಾರಣಗಳಿಗಾಗಿ ರಾಜ್ಯಗಳು ವಿಂಗಡಣೆಯಾಗಿದ್ದವು.

ಆರ್ಥಿಕವಾದ ಬೆಳವಣಿಗೆ/ಹಿಂದುಳಿದಿರುವಿಕೆ ಕಾರಣದಿಂದ ಪುನರ್ವಿಂಗಡಣೆಯ ಪೂರ್ವದ ಕರ್ನಾಟಕದ ಬೇರೆ ಬೇರೆ ಭಾಗಗಳ ಹಿನ್ನೆಲೆಯನ್ನು ಗಮನಿಸಿ ಹೇಳುವುದಾದರೆ ಅವು ತೊಡಕಾಗಿದ್ದುದು ಪ್ರಸ್ತುತ ಕರ್ನಾಟಕದ ಹುಟ್ಟಿಗೆ ನಾಂದಿಯಾಗಿರುವುದು ಈ ಮೇಲಿನ ಚರ್ಚೆಯಿಂದ ಸ್ಪಷ್ಟವಾಗುತ್ತದೆ. ಆದರೆ ರಾಜ್ಯ ಪುನರ್ವಿಂಗಡಣಾ ಆಯೋಗ ಹಾಗೂ ಜವಾಹರ್‌ಲಾಲ್ ನೆಹರೂ ನೇತೃತ್ವದ ಕೇಂದ್ರ ಸರ್ಕಾರ ಕೆಲವು ನಾಯಕರ ಮನಸ್ಸಿನಲ್ಲಿದ್ದ ದಿಗಿಲನ್ನು ದೂರಮಾಡಿದವು. ಹಾಗಾಗಿ ೧೯೫೬ರ ನವೆಂಬರ್ ೧ನೇ ತಾರೀಖಿನಂದು ಕರ್ನಾಟಕದ ಉದಯವಾಯಿತು.

**-ಕೆ.ಎಸ್. ವಿಜಯಲಕ್ಷ್ಮಿ**

## ಟಿಪ್ಪಣಿಗಳು

೧ ಗೋಪಾಲ್, ಎಂ.ಎಚ್.: ದಿ ಫೈನಾನ್ಸ್ ಆಫ್ ಮೈಸೂರ್ ಸ್ಟೇಟ್: ೧೭೯೯–೧೮೩೧, ಮೈಸೂರು, ೧೯೬೦
೨ ಅದೇ, ಪು. ೧೬೩
೩ ಮುನೇಗೌಡ: ಡೆವಲಪ್‌ಮೆಂಟ್ ಆಫ್ ಕರ್ನಾಟಕ ಲೆಜಿಸ್ಲೇಚರ್, ಮೈಸೂರು, ೧೯೮೮ ಪು. ೨೫
೪ ವಿಲಿಯಂ, ಡಿ.: ಪ್ರಾಸ್ಪರಸ್ ಬ್ರಿಟಿಷ್ ಇಂಡಿಯಾ, ಡೆಲ್ಲಿ, ೧೯೬೯, ಪು. ೬೩೪
೫ ವೇರಾ ಆನ್‌ಸ್ಟೆ: ಎಕನಾಮಿಕ್ ಡೆವಲಪ್‌ಮೆಂಟ್ ಆಫ್ ಇಂಡಿಯಾ, ಲಂಡನ್, ೧೯೪೯, ಪು. ೫
೬ ಟಿಪ್ಪುವಿನ ಪತನದ ನಂತರ ಮೈಸೂರು ರಾಜ್ಯಕ್ಕೆ ಸಮುದ್ರ ಸಂಪರ್ಕವಿಲ್ಲದಂತಾಯಿತು.
೭ ದತ್ ಆರ್.ಪಿ.: ಇಂಡಿಯಾ ಟುಡೇ, ಕಲ್ಕತ್ತಾ, ೧೯೮೬, ಪು. ೧೧೭
೮ ಅದೇ, ಪು. ೧೧೮
೯ ರಿಪೋರ್ಟ್ ಆನ್ ದಿ ಅಡ್ಮಿನಿಸ್ಟ್ರೇಶನ್ ಆಫ್ ಮೈಸೂರ್ (ಆರ್.ಎ.ಎಮ್), ೧೮೭೨–೭೩, ಪು. ೧೧೪
೧೦ ಆರ್.ಎ.ಎಮ್. ೧೮೬೨–೬೩, ಪು. ೫೪
೧೧ ಆರ್.ಎ.ಎಮ್. ೧೮೬೬–೬೭, ಪು. ೪೯
೧೨ ದತ್ ಆರ್. ಪಿ.: ಪು. ೧೧೯

೧೩ ಪುಟ್ಟಸ್ವಾಮಯ್ಯ ಕೆ.: ಎಕನಾಮಿಕ್ ಡೆವಲಪ್‌ಮೆಂಟ್ ಆಫ್ ಕರ್ನಾಟಕ, ಸಂಪುಟ. ೨, ಬೆಂಗಳೂರು, ೧೯೮೦, ಪು. ೫೫೯
೧೪ ಅಡ್ರೆಸಸ್ ಆಫ್ ದಿ ದಿವಾನ್ಸ್ ಆಫ್ ಮೈಸೂರ್ ಟು ಮೈಸೂರ್ ರಿಪ್ರೆಸೆಂಟೇಟಿವ್ ಅಸೆಂಬ್ಲಿ, ೧೯೦೦–೧೯೧೨, ಸಂ. ೨, ಪು. ೩೩೩ (ಇಲ್ಲಿಂದ ಮುಂದೆ ದಿವಾನರ ಭಾಷಣಗಳು ಎಂದು ನಮೂದಿಸಲಾಗುವುದು.)
೧೫ ಪುಟ್ಟಸ್ವಾಮಯ್ಯ, ಕೆ.: ಪು. ೧೦೭೯
೧೬ ಬಿಪಿನ್ ಚಂದ್ರ: ರೈಸ್ ಅಂಡ್ ಗ್ರೋಥ್ ಆಫ್ ಎಕನಾಮಿಕ್ ನ್ಯಾಶನಲಿಸಂ ಇನ್ ಇಂಡಿಯಾ, ಡೆಲ್ಲಿ, ೧೯೭೭, ಪು. ೨೦೮
೧೭ ಆರ್ಥರ್ ಟಿ. ಕಾಟನ್: ರಿಪೋರ್ಟ್ ಆನ್ ಅರ್ಬನ್ ಪ್ರಾಜೆಕ್ಟ್ಸ್, ಮದರಾಸು, ೧೮೪೯, ಪು. ೭೩
೧೮ ಆರ್ಥರ್ ಟಿ. ಕಾಟನ್: ಪಬ್ಲಿಕ್ ವರ್ಕ್ಸ್ ಇನ್ ಇಂಡಿಯಾ, ಮದರಾಸು, ೧೮೫೫, ಪು. ೨೨.
೧೯ ಕರ್ನಾಟಕ ಪ್ರಕಾಶಿಕ: ೨೪, ಮೇ ೧೮೮೬, ಆರ್.ಎನ್.ಎಸ್.ಪಿ.
೨೦ ಫಸ್ಟ್ ಮೆಂಬರ್ಸ್ ನೋಟ್ ಆನ್ ರಿ ಆರ್ಗನೈಜೇಶನ್ ಆಫ್ ಪಿ.ಡಬ್ಲ್ಯು.ಡಿ, ೧೯೨೧, ಪು. ೩೩
೨೧ ದಿವಾನರ ಭಾಷಣಗಳು, ಸಂ. ೨, ಪು. ೨೩
೨೨ ದಿವಾನರ ಭಾಷಣಗಳು
೨೩ ದ ಕರ್ನಾಟಕ, ೬ನೇ ಆಗಸ್ಟ್ ೧೯೧೩ರ ಪೇಪರ್ ಕ್ಲಿಪಿಂಗ್ಸ್, ಮೈಸೂರು ಪ್ಯಾಲೇಸ್ ಪೇಪರ್ಸ್
೨೪ ವಿಶ್ವೇಶ್ವರಯ್ಯ ಎಂ,: ಮೆಮೈರ್ಸ್ ಆಫ್ ಮೈ ವರ್ಕಿಂಗ್ ಲೈಫ್, ಬೆಂಗಳೂರು, ೧೯೫೦, ಪು. ೪೬
೨೫ ನಾರಾಯಣರಾವ್ ಪಿ. ಎಸ್,: ಮೋಕ್ಷಗುಂಡಂ ವಿಶ್ವೇಶ್ವರಯ್ಯ – ಅವರ ಜೀವನ ಹಾಗೂ ಸಾಧನೆ, ಮೈಸೂರು, ೧೯೭೭, ಪು. ೬೩
೨೬ ದ ಶೇಫೀಲ್ಡ್ ಡೈಲಿ ಟೆಲಿಗ್ರಾಫ್, ೨೮ನೇ ಸೆಪ್ಟಂಬರ್ ೧೯೦೨, ಪೇಪರ್ ಕ್ಲಿಪಿಂಗ್ಸ್, ಮೈಸೂರು ಪ್ಯಾಲೇಸ್ ಪೇಪರ್ಸ್
೨೭ ದ ಮೈಸೂರ್ ಟೈಮ್ಸ್, ೨೬ ಅಕ್ಟೋಬರ್, ೧೯೧೦, ಪೇಪರ್ ಕ್ಲಿಪಿಂಗ್ಸ್, ಮೈಸೂರು ಪ್ಯಾಲೇಸ್ ಪೇಪರ್ಸ್
೨೮ ದ ಡೇಲಿ ಪೋಸ್ಟ್, ೩ ಸೆಪ್ಟಂಬರ್, ೧೯೦೮, ಪೇಪರ್ ಕ್ಲಿಪಿಂಗ್ಸ್, ಮೈಸೂರು ಪ್ಯಾಲೇಸ್ ಪೇಪರ್ಸ್
೨೯ ದ ಮದ್ರಾಸ್ ಮೇಯ್ಲ್, ೧೩ ಅಕ್ಟೋಬರ್ ೧೯೧೦
೩೦ ದ ಮದ್ರಾಸ್ ಮೇಯ್ಲ್, ೮ನೇ ಸೆಪ್ಟಂಬರ್ ೧೯೦೮
೩೧ ಜಿ & ಆರ್.ಎಸ್: ಕೈಗಾರಿಕೆ ಮತ್ತು ವಾಣಿಜ್ಯ, ೧೯೧೬ರ ೮೯, ರಾಜ್ಯದ ಗ್ರಾಮೀಣ ಹಾಗೂ ಗುಡಿ ಕೈಗಾರಿಕೆಯನ್ನು ಪ್ರೋತ್ಸಾಹಿಸಲು ಸಾಲದ ಹಣ ನೀಡುವ ನಿಯಮಗಳು.
೩೨ ದಿವಾನರ ಭಾಷಣಗಳು, ೧೯೧೯, ಪು. ೭೭
೩೩ ಬಿ.ಟಿ ಕೇಶವಯ್ಯಂಗಾರ್ ಪೇಪರ್ಸ್
೩೪ ಬಿಪಿನ್ ಚಂದ್ರ
೩೫ ಅದೇ, ಪು. ೧೩೧
೩೬ ಬಿ.ಪಿ. ಗಣಪತಿ ಅಯ್ಯರ್ ಕಲೆಕ್ಷನ್ಸ್
೩೭ ಜಿ.ಆರ್. ಸ್ವಾಮಿ ಪೇಪರ್ಸ್
೩೮ ಅದೇ
೩೯ ಆಲೂರು ವೆಂಕಟರಾವ್ ಕಲೆಕ್ಷನ್ಸ್
೪೦ ದ ಮದ್ರಾಸ್ ಮೇಯ್ಲ್, ೧೪ ಸೆಪ್ಟಂಬರ್, ೧೯೦೮
೪೧ ನಾರಾಯಣ ರಾವ್ ಪಿ. ಎಸ್: ಬಿಲ್ಡರ್ಸ್ ಆಫ್ ಮಾಡರ್ನ್ ಇಂಡಿಯಾ–ಡಾ. ಎನ್.ಎಸ್. ಹರ್ಡೀಕರ್, ದೆಹಲಿ, ೧೯೮೮, ಪು. ೫
೪೨ ನಾರಾಯಣ ರಾವ್ ಪಿ. ಎಸ್: ಬಿಲ್ಡರ್ಸ್ ಆಫ್ ಮಾಡರ್ನ್ ಇಂಡಿಯಾ– ಜಿ.ಆರ್. ದೇಶಪಾಂಡೆ, ದೆಹಲಿ, ೧೯೮೮, ಪು. ೩೧
೪೩ ಜಿ.ಆರ್. ಸ್ವಾಮಿ ಪೇಪರ್ಸ್
೪೪ ಪಿ.ಎಸ್. ನಾರಾಯಣ ರಾವ್
೪೫ ಹಾಲಪ್ಪ: ಹಿಸ್ಟರಿ ಆಫ್ ಫ್ರೀಡಂ ಮೂವ್‌ಮೆಂಟ್ ಇನ್ ಕರ್ನಾಟಕ, ಮೈಸೂರು, ೧೯೬೪, ಪು. ೧೫೪
೪೬ ಅದೇ, ಪು. ೪೨೭
೪೭ ಅದೇ, ಪು. ೪೨೮
೪೮ ಎಸ್. ಮಾಧವರಾವ್ ಕಲೆಕ್ಷನ್ಸ್
೪೯ ಪಿ.ಕೆ. ಬಾವ: ದ ನಿಜಾಮ್ ಬಿಟ್ವೀನ್ ದ ಮುಘಲ್ಸ್ ಅಂಡ್ ಬ್ರಿಟಿಷ್, ದೆಹಲಿ, ೧೯೮೯, ಪು. ೨೩

## ಅಧ್ಯಾಯ : ನಾಲ್ಕು

# ಕರ್ನಾಟಕದಲ್ಲಿ ಕ್ಷೋಭೆ

### ಬ್ರಿಟಿಷರ ಆಳ್ವಿಕೆಯ ಕರ್ನಾಟಕ

ವಸಾಹತು ಅಧಿಕಾರ ಪ್ರಾಯಶಃ ಬೇರೆ ಪ್ರಾಂತ್ಯಗಳಿಗಿಂತ ಹೆಚ್ಚು ಕ್ರೂರವಾಗಿ ಕರ್ನಾಟಕವನ್ನು ನಡೆಸಿಕೊಂಡಿತೆಂದು ಹೇಳಬಹುದು. ೧೭೬೩ರಿಂದ ಹಿಡಿದು ೧೮೫೭ರ ತನಕ ಕರ್ನಾಟಕದ ಒಂದಲ್ಲಾ ಒಂದು ಭಾಗ ವಸಾಹತು ಸರ್ಕಾರದೊಡನೆ ಕದನ ಮಾಡುತ್ತಲೇ ಇತ್ತು. ೧೭೯೯ರಲ್ಲಿ ಮೈಸೂರಿನ 'ಹುಲಿ' ಟಿಪ್ಪುವಿನ ಮರಣಾನಂತರವೂ ಸಹ ಕಿತ್ತೂರು(೧೮೨೪), ಮೈಸೂರು(೧೮೩೧), ಕೊಡಗು ಹಾಗೂ ಕರಾವಳಿ ಪ್ರದೇಶದ ಕರ್ನಾಟಕ(೧೮೩೪)ದ ಜನರು ವಸಾಹತುಶಾಹಿಗಳಿಗೆ ಸಿಂಹಸ್ವಪ್ನವಾಗಿದ್ದರು ಎಂಬುದನ್ನು ನೆನೆದಾಗ ಇವರ ಸ್ವಾತಂತ್ರ್ಯ ಪ್ರೇಮದ ಅಗಾಧತೆಯು ಮನವರಿಕೆಯಾಗುತ್ತದೆ.

ಆದರೆ ೧೮೫೭ರ ನಂತರ ಭಾರತದ ಇತರ ಪ್ರಾಂತ್ಯಗಳಲ್ಲಿ ಆದಂತೆಯೇ ವಸಾಹತು-ವಿರೋಧೀ ಹೋರಾಟವು ಬೇರೆ ರೀತಿಯ ತಿರುವು ಪಡೆದುಕೊಂಡಿತು. ಭಾರತದ ಸಾರ್ವಜನಿಕ ಜೀವನದಲ್ಲಿ ವಿದ್ಯಾವಂತರಾದ ಮಧ್ಯಮವರ್ಗಗಳು ಹೆಚ್ಚು ಪ್ರಭಾವಶಾಲಿಗಳಾಗತೊಡಗಿದರು, ಬ್ರಿಟಿಷರು ಅವರಿಗೆ ತಕ್ಕ ಸ್ಥಾನಮಾನಗಳನ್ನು ನೀಡಿದರು; ಅದೇ ರೀತಿಯಲ್ಲಿ ವಸಾಹತು ಆರ್ಥಿಕ ನೀತಿಯು ಗ್ರಾಮೀಣ ಜನತೆಯನ್ನು ಅತ್ಯಂತ ದುಃಸ್ಥಿತಿಗೆ ದಬ್ಬಿದ ಕಾರಣ ಜನ ಸಾಮಾನ್ಯರು ತಮ್ಮ ಚೈತನ್ಯವನ್ನೇ ಕಳೆದು ಕೊಳ್ಳುವಂಥ ಪರಿಸ್ಥಿತಿ ನಿರ್ಮಾಣವಾಯಿತು. ಶಸ್ತ್ರಾಸ್ತ್ರ ಹಾಗೂ ಯಂತ್ರೋಪಕರಣಗಳ ಸಹಾಯದಿಂದ ಬ್ರಿಟಿಷರು ಪರಸ್ಪರ ಕಾದಾಡುತ್ತಿದ್ದ ಭಾರತೀಯ ರಾಜರನ್ನು ಬೇಕೆಂದ ಕಡೆ ತಿರುಗಿಸುವುದು ಸುಲಭವಾಯಿತು; ಇದರ ಜೊತೆಗೆ ಇಂಗ್ಲಿಷ್ ಶಿಕ್ಷಣ ಪಡೆದ ಭಾರತೀಯರು ಪಾಶ್ಚಾತ್ಯ ಚಿಂತನೆಯನ್ನು ಮೈಗೂಡಿಸಿಕೊಂಡ ಕಾರಣದಿಂದ ಬ್ರಿಟಿಷರನ್ನು ಅವರ ಆಟದಲ್ಲೇ ಪರಾಭವಗೊಳಿಸುವುದು ಅಸಾಧ್ಯವೆಂಬ ಹಂತಕ್ಕೆ ತಲುಪಿತು.

ಪಾಶ್ಚಾತ್ಯರು ಹಾಗೂ ಅವರ ಸಂಸ್ಥೆಗಳ ನೆರಳಡಿಯಲ್ಲಿ ಬೆಳೆಯುವಂತಾಯಿತಾದರೂ ನವಭಾರತದ ಉದಯದ ಕುರುಹುಗಳು ಕಾಣತೊಡಗಿತು. ಕರ್ನಾಟಕದ ಜನರು ಹೊಸ ಸಂಘಟನೆಗಳು ಹಾಗೂ ಸಂಸ್ಥೆಗಳನ್ನು ಸ್ಥಾಪಿಸುವ ಅವಶ್ಯಕತೆಯನ್ನು ಮರೆಯಲಿಲ್ಲ. ಆ ಬಗೆಯ ಸಂಘಟನೆಗಳ ಸಾಮರ್ಥ್ಯ ಅವರಿಗೆ ಮನವರಿಕೆಯಾಯಿತು, ಹಾಗೂ ಸಾರ್ವಜನಿಕ ಅಭಿಪ್ರಾಯವನ್ನು ರೂಢಿಸಿ ಪಾಶ್ಚಾತ್ಯರ ಮಾದರಿಯಲ್ಲಿ ಸಾರ್ವಜನಿಕ ಕೆಲಸಗಳನ್ನು ಮುಂದುವರಿಸಲು ಇದು ಅನಿವಾರ್ಯವಾಗಿತ್ತು ಕೂಡ. ಸಾರ್ವಜನಿಕ ಸಂಘಗಳು, ವೃತ್ತಪತ್ರಿಕೆ ಹಾಗೂ ನಿಯತಕಾಲಿಕೆಗಳು ಸಾರ್ವಜನಿಕ ಕೆಲಸಗಳನ್ನು ನಿಭಾಯಿಸತೊಡಗಿದವು.

ಡಿಸೆಂಬರ್ ೧೮೮೫ರಲ್ಲಿ ಬೊಂಬಾಯಿಯಲ್ಲಿ ನಡೆದ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸಿನ ಮೊದಲನೇ ಅಧಿವೇಶನದಲ್ಲಿ ಕರ್ನಾಟಕದಿಂದ ಇಬ್ಬರು ಭಾಗವಹಿಸಿದ್ದರು. ಅವರೆಂದರೆ, ಸಭಾಪತಿ ಮುದಲಿಯಾರ್ ಹಾಗೂ ಕೋಲಾಚಲಂ ವೆಂಕಟರಾವ್, ಇಬ್ಬರೂ ಬಳ್ಳಾರಿಯವರೇ.[೧] ಕರ್ನಾಟಕದ ಮತ್ತೊಬ್ಬ ಮಹನೀಯರಾದ ನಾರಾಯಣ ಚಂದಾವರ್‌ಕರ್‌ರವರು ೧೯೦೦ರಲ್ಲಿ ಲಾಹೋರಿನಲ್ಲಿ ನಡೆದ ಅಧಿವೇಶನದ ಅಧ್ಯಕ್ಷ ಸ್ಥಾನ ವಹಿಸಿದ್ದರು. ಕರ್ನಾಟಕ ಪ್ರದೇಶದ ವಿದ್ಯಾವಂತ ಜನರೆಲ್ಲಾ ಬಾಲಗಂಗಾಧರ ತಿಲಕರ ಬರವಣಿಗೆ ಹಾಗೂ ಚಟುವಟಿಕೆಗಳಿಂದ ಪ್ರಭಾವಿತರಾದರು. ತಿಲಕರು ಪ್ರಾರಂಭಿಸಿದ ಶಿವಾಜಿ ಹಾಗೂ ಗಣೇಶನ ಹಬ್ಬಗಳು ಜನರ ಮನ್ನಣೆಗೆ ಪಾತ್ರವಾದುವು. ಕಾಂಗ್ರೆಸ್ಸಿನ ಸಂಸ್ಥಾಪಕರೆಂದೇ ಖ್ಯಾತರಾಗಿರುವ ಎ.ಓ. ಹ್ಯೂಮ್‌ರವರು ೧೮೯೩ರಲ್ಲಿ ಕರ್ನಾಟಕಕ್ಕೆ ನೀಡಿದ ಭೇಟಿ ಆ ಕಾಲದಲ್ಲಿ ನಡೆದ ಒಂದು ಪ್ರಮುಖ ಘಟನೆಯಾಗಿದೆ. ಹ್ಯೂಮ್‌ರವರು ಬೆಳಗಾವಿ ಹಾಗೂ ಧಾರವಾಡಕ್ಕೆ ಭೇಟಿ ನೀಡಿದಾಗ ರಾಷ್ಟ್ರೀಯವಾದಿಗಳು ಅವರನ್ನು ಬಹಳ ಗೌರವದಿಂದ ಬರಮಾಡಿಕೊಂಡರು.[೨]

ವಸಾಹತುಶಾಹಿ ಹೆಚ್ಚು ಗಾಢವಾಗಿ ಆಕ್ರಮಿಸಿಕೊಳ್ಳತೊಡಗಿದಂತೆ ಭಾರತೀಯ ಸಂಪನ್ಮೂಲ ಕರಗಿ ಹೋಗಿ ಜನಸಾಮಾನ್ಯರು ಕಡುಬಡತನಕ್ಕೀಡಾದರು. ಕ್ಷಾಮ ಮತ್ತು ಪ್ಲೇಗು ಬ್ರಿಟಿಷ್ ಆಡಳಿತಾವಧಿಯಲ್ಲಿ ಕಾವಲುಗಾರರಾದುವು. ೧೮೯೬ರಲ್ಲಿ ಉತ್ತರ ಕರ್ನಾಟಕ ಪ್ರದೇಶದಲ್ಲಿ ಬಂದೆರಗಿದ ಪ್ಲೇಗಿನಲ್ಲಿ ಸಹಸ್ರಾರು ಜನ ಮಡಿದರು. ಬ್ರಿಟಿಷರು ಜಾರಿಗೊಳಿಸಿದ್ದ ಬದಲಾವಣೆಗಳು, ಎಲ್ಲಾ ಅಧಿಕಾರವನ್ನು ತಮ್ಮಲ್ಲೇ ಕೇಂದ್ರೀಕರಿಸಿಕೊಂಡಿದ್ದ ಬಿಳಿಯರು, ವಸಾಹತುಶಾಹಿಗಳು ಆಚರಿಸುತ್ತಿದ್ದ ಜನಾಂಗೀಯ ಧೋರಣೆ ಇತ್ಯಾದಿಗಳಿಂದ ಬೇಸತ್ತು ಒಳಗೊಳಗೇ ಕುದಿಯುತ್ತಿದ್ದರೂ ರಾಜಕೀಯ ಪ್ರಜ್ಞೆಯುಳ್ಳವರಾಗಿದ್ದ ಆ ಜನತೆ, ಹಿಂಸಾತ್ಮಕ ಕ್ರಮಗಳ ನಿರುಪಯುಕ್ತತೆಯನ್ನು ತಿಳಿದಿದ್ದರು. ಪ್ಲೇಗು ಎರಗಿದ ಸಂದರ್ಭದಲ್ಲಿ ಪರಿಹಾರ ಕಾರ್ಯಗಳನ್ನು ಸಮರ್ಪಕವಾಗಿ ಮಾಡದೆ ಅಧಿಕಾರಶಾಹಿ ಹಾಗೂ ಸೇನೆಯ ಅಹಂಕಾರವೂ ಕೂಡಿಕೊಂಡು ಜನರ ದುಃಖ ಹಾಗೂ ಕ್ರೋಧ ದ್ವಿಗುಣವಾಗಿತ್ತು. ಪ್ರತ್ಯೇಕ ಶಿಬಿರಗಳಿಗೆ ಜನರನ್ನು ಬಲವಂತವಾಗಿ ಸಾಗಿಸಿದ ನಂತರ ಪರಿಹಾರ ಕಾರ್ಯದಲ್ಲಿ ನಿರತರಾದವರೇ ಅವರ ಆಸ್ತಿಪಾಸ್ತಿಯನ್ನು ಲೂಟಿಮಾಡಿ ಬೆಂಕಿ ಹಚ್ಚಿದರು. ೧೮೯೭ರ ಕೊನೆಯ ಹೊತ್ತಿಗೆ ಈ ಸಾಂಕ್ರಾಮಿಕ ರೋಗವು ಧಾರವಾಡ ಹಾಗೂ ಬೆಳಗಾವಿ ಜಿಲ್ಲೆಗಳಿಗೆ ವ್ಯಾಪಿಸಿತು. ಅಧಿಕಾರಶಾಹಿಯ ಅಹಂಕಾರ ಯಾವ ಮಟ್ಟಕ್ಕೆ ಹೋಗಿತ್ತೆಂದರೆ ಸೈನಿಕ ಎಂಬ ಹೆಸರು ಕಿವಿಗೆ ಬೀಳುತ್ತಲೇ ಜನರು ಹೆದರಿ ದಿಕ್ಕಾಪಾಲಾಗಿ ಓಡುತ್ತಿದ್ದರು; ಪರಿಹಾರ ತಂಡದವರು ಎಸಗಿದ ಕುಕೃತ್ಯಗಳನ್ನು ತಾಳಲಾರದೆ ಬ್ರಾಹ್ಮಣನೊಬ್ಬ ಆತ್ಮಹತ್ಯೆ ಮಾಡಿಕೊಂಡ.[೩] ಪ್ಲೇಗಿನ ಬೆನ್ನ ಹಿಂದೆಯೇ ಕ್ಷಾಮ ಬಂದೆರಗಿ ಜನ ಇನ್ನಷ್ಟು ಕಂಗಾಲಾಗುವಂತಾಯಿತು.

ಸರ್ಕಾರ ಈ ಸನ್ನಿವೇಶವನ್ನು ನಿಭಾಯಿಸಿದ ರೀತಿಯನ್ನು ಕಂಡು ಕಟುವಾಗಿ ಟೀಕಿಸಿದ ತಿಲಕರ ಬರಹಗಳನ್ನು ಜನರು ವ್ಯಾಪಕವಾಗಿ ಓದಿದರು ಹಾಗೂ ಚರ್ಚಿಸಿದರು. ಜರ್ಜರಿತರಾಗಿದ್ದ ಜನರಿಂದ ಬಲವಂತವಾಗಿ ತೆರಿಗೆ ವಸೂಲಿ ಮಾಡಿದ ರೀತಿಯಿಂದ ಜನರು ರೋಸಿಹೋದರು. ಪೂನಾದಲ್ಲಿ ರ್‍ಯಾಂಡ್ ಹಾಗೂ ಅಯರೆಸ್ಟ್ ಎಂಬುವವರನ್ನು ಕೊಂದ ಆರೋಪದ ಮೇರೆಗೆ ಚಿಪೇಕರ್ ಸೋದರರಿಗೆ ಗಲ್ಲು ಶಿಕ್ಷೆಯಾಯಿತು, ಆಗ ಜನರು ಬಹಳವಾಗಿ ಪರಿತಾಪ ಪಟ್ಟರು. ಈ ವಿದ್ಯಮಾನಗಳಿಂದಾಗಿ ವಿದ್ಯಾವಂತರ ಮನಸ್ಸಿನಲ್ಲಿ ವಸಾಹತು-ವಿರೋಧಿ ರಾಷ್ಟ್ರೀಯವಾದ ಹೆಚ್ಚು ದಟ್ಟವಾಗಿ ಕಾಣಿಸಿಕೊಳ್ಳಲು ಮೊದಲಾಯಿತು.[೪]

೧೮೯೦ರ ದಶಕದಲ್ಲಿ ಸ್ವಾಮಿ ವಿವೇಕಾನಂದರು ಬೆಳಗಾವಿಯಲ್ಲಿ ನೀಡಿದ ಉಪನ್ಯಾಸಗಳಿಂದ ಜನರು ಹೆಚ್ಚು ಧೈರ್ಯ-ಸ್ಥೈರ್ಯ ಹಾಗೂ ಆತ್ಮಗೌರವವನ್ನು ಹೊಂದುವಂತಾಯಿತು. ಭಯವನ್ನು ಬಿಡಿರೆಂದು

ವಿವೇಕಾನಂದರು ಒತ್ತಿ ಒತ್ತಿ ಹೇಳಿದ ಪರಿಣಾಮ ಅವರು ಹೋದಲ್ಲೆಲ್ಲಾ ರಾಷ್ಟ್ರಪ್ರೇಮದ ಉತ್ಕಟತೆ ಸ್ಪಷ್ಟವಾಗಿ ಗೋಚರವಾಯಿತು.

ಈ ಮಧ್ಯೆ ತಿಲಕರನ್ನು ಸೆರೆ ಹಿಡಿದದ್ದು, ಲಾರ್ಡ್ ಕರ್ಜನ್ ವೈಸ್‌ರಾಯ್ ಆಗಿ ಎಸಗಿದ ದಮನಕಾರಿ ಆಡಳಿತ, ಇದರ ಜೊತೆಗೆ ವಸಾಹತು ಹಿಂದುಳಿದಿರುವಿಕೆ- ಇವೆಲ್ಲವುಗಳೂ ಸೇರಿ ಜನರನ್ನು ಚಿಂತಾಜನಕ ಸ್ಥಿತಿಗೆ ದೂಡಿತು. ಬ್ರಿಟಿಷ್-ವಿರೋಧಿ ಭಾವನೆಗಳು ಬೆಳೆಯಲು ಈ ಎಲ್ಲ ಅಂಶಗಳೂ ಕೂಡಿ ಕೆಲಸ ಮಾಡಿವೆ. ಭಾರತೀಯ ರಾಷ್ಟ್ರೀಯ ಚಳವಳಿಯಲ್ಲಿದ್ದಂಥ ಉಗ್ರಗಾಮಿ ಪಂಥ ಭರದಲ್ಲಿ ಮುನ್ನುಗ್ಗುವಾಗ, ಮಂದಗಾಮಿ ಕಾಂಗ್ರೆಸ್ಸಿಗರು ಬ್ರಿಟಿಷ್ ಸರ್ಕಾರದ ಬಗ್ಗೆ ಉದಾರವಾದಿ ಧೋರಣೆಯನ್ನು ಹೊಂದಿದ್ದರು; ಕ್ರೂರ ಸಾಮ್ರಾಜ್ಯಶಾಹಿಯಾದ ಲಾರ್ಡ್ ಕರ್ಜನ್‌ನನ್ನು ಉದಾರವಾದಿಗಳು ಓಲೈಸುವ ಪ್ರಯತ್ನದಲ್ಲಿರುವುದನ್ನು ಕಂಡ ಉಗ್ರಗಾಮಿಗಳು ತಮ್ಮ ಕಾಯಕವನ್ನು ಮುಂದುವರಿಸಲು ಕುಮ್ಮಕ್ಕು ನೀಡಿದಂತಾಯಿತು. ಕರ್ನಾಟಕದ ರಾಷ್ಟ್ರೀಯವಾದಿಗಳಿಗೆ ಮಂದವಾದವೆಂದರೆ ಅಸಹ್ಯ ಪಟ್ಟುಕೊಳ್ಳುವಂತಾಯಿತು. ಕರ್ನಾಟಕದಲ್ಲಿ ನವ-ರಾಷ್ಟ್ರೀಯವಾದಿಗಳ ಸಂಕೇತವಾಗಿ ತಿಲಕರು ಗೋಚರವಾದರು. ಪಾಶ್ಚಾತ್ಯ ಚಿಂತನೆಯ ವಿಷಯವಾಗಿ ಬಹಳ ಮುಂದುವರಿದಿದ್ದಂಥ ಬೊಂಬಾಯಿ ಕರ್ನಾಟಕ, ಶಿಕ್ಷಣ ಹಾಗೂ ರಾಜಕೀಯ ಪ್ರಜ್ಞೆಯ ವಿಚಾರ ಬಂದಾಗ ಭಾವನಾತ್ಮಕವಾಗಿ ತಿಲಕರು ಹಾಗೂ ಅವರ ಚಿಂತನೆಗಳನ್ನು ಸ್ವೀಕರಿಸಿದರು.

ಬಂಗಾಳವನ್ನು ವಿಭಜಿಸುವ ಇಚ್ಛೆಯನ್ನು ಪ್ರಕಟಿಸಿದಾಗ ಕರ್ಜನ್‌ನ ಭಾರತ-ವಿರೋಧೀ ನೀತಿ ತಾರಕ ಬಿಂದುವನ್ನು ಮುಟ್ಟಿತ್ತು. ಬಂಗಾಳದ ವಿಭಜನೆ ರಾಷ್ಟ್ರೀಯ ಪ್ರಶ್ನೆಯಾಗಲು ಕಾರಣ ಆಧುನಿಕ ರಾಷ್ಟ್ರವಾಗಿ ಅರಳಬೇಕಾಗಿದ್ದ ಭಾರತದ ಎಲ್ಲ ರಂಗಗಳಲ್ಲೂ ಬಂಗಾಳ ಮುಂಚೂಣಿಯಲ್ಲಿತ್ತು. ಮಂದ ಮಾರ್ಗಿಗಳಾದ ಕಾಂಗ್ರೆಸ್ಸಿಗರಿಗೂ ಸಹ ಕರ್ಜನ್‌ನ ವಿನ್ಯಾಸಗಳು ಹಿಡಿಸದಾಗಿ, ಸ್ವದೇಶಿ ಚಳವಳಿಗೆ ನಾಂದಿಯಾಯಿತು.

ಬಂಗಾಳದ ವಿಭಜನೆಯನ್ನು ವಿರೋಧಿಸಿ ಸ್ವದೇಶಿ ಚಳವಳಿಯನ್ನು ಪ್ರಾರಂಭಿಸಿದಾಗ ಭಾರತೀಯ ರಾಷ್ಟ್ರೀಯ ಚಳವಳಿಯ ವ್ಯಾಪಕ ಬುನಾದಿ ಸಿದ್ಧವಾಯಿತು ಎನ್ನಬೇಕು. ಆದರೆ ಚಳವಳಿಯ ಸಾಮಾಜಿಕ ಬುನಾದಿ ವಿಸ್ತಾರವಾಗಲಿಲ್ಲ ಎನ್ನುವುದು ಬೇರೆ ಮಾತು. ಕಾಂಗ್ರೆಸ್ ನೀತಿಯಲ್ಲಿ ಈ ಬಗೆಯ ಪಲ್ಲಟವಾಗುವುದಕ್ಕೆ ನಿರ್ವಿವಾದವಾಗಿ ತಿಲಕರೇ ಕಾರಣರೆಂದು ತಿಳಿಯಬೇಕು. ಸ್ವದೇಶಿ ಚಳವಳಿಯ ನಾಲ್ಕು ಅಂಗಗಳೆಂದರೆ, ಸ್ವದೇಶಿ, ಸ್ವರಾಜ್ಯ, ವಿದೇಶಿವಸ್ತು ನಿಷೇಧ ಹಾಗೂ ರಾಷ್ಟ್ರೀಯ ಶಿಕ್ಷಣ. ಸ್ವದೇಶಿ ಘಟ್ಟದಲ್ಲಿ ತಿಲಕರು ಅನೇಕ ಬಾರಿ ಬೊಂಬಾಯಿ ಕರ್ನಾಟಕದ ಪ್ರವಾಸ ಮಾಡಿದರು. ಬಂಗಾಳದ ವಿಭಜನೆ ಬಗೆಗಿನ ಜನರ ಚಳವಳಿ ಕರ್ನಾಟಕದ ಜನತೆಗೆ ಒಂದು ಪಾಠವಾಗಿತ್ತು ಏಕೆಂದರೆ ತಮ್ಮ ಪ್ರದೇಶವು ಕೇವಲ ಎರಡು ಹೋಳುಗಳಾಗಿರದೆ ಅನೇಕ ಭಾಗಗಳಾಗಿ ಹಂಚಿಹೋಗಿರುವುದು ·ಅವರ ಗಮನಕ್ಕೆ ಬಂದಿತು. ಅಖಂಡ ಕರ್ನಾಟಕದ ಸ್ಥಾಪನೆಗಾಗಿ ಜನರು ಚಳವಳಿ ನಡೆಸಬೇಕಾದ ಅಗತ್ಯತೆಯನ್ನು ಈ ವಿಭಜನೆ ಗಮನಕ್ಕೆ ತಂದಿತು. ಆ ಸುಮಾರಿನಲ್ಲಿ ಧಾರವಾಡದಲ್ಲಿ ಕರ್ನಾಟಕ ಸಭೆಯು ಅಸ್ತಿತ್ವಕ್ಕೆ ಬರಲು ಈ ಚಳವಳಿ ಕಾರಣವಾಯಿತು. ಬೇರೆ ಭಾಷೀಯ ಗುಂಪುಗಳೂ ಪ್ರಬಲವಾಗುತ್ತಿದ್ದುದರಿಂದ ಅಖಂಡ ಕರ್ನಾಟಕದ ಪ್ರಾಮುಖ್ಯತೆ ಮತ್ತೊಮ್ಮೆ ಸ್ಪಷ್ಟವಾಯಿತು.

ಈ ಪ್ರಾಂತ್ಯದಲ್ಲಿ ಪ್ರಥಮ ಬಾರಿಗೆ ಸಾರ್ವಜನಿಕ ಸಭೆಗಳು ಹಾಗೂ ಉಪನ್ಯಾಸಗಳು ಏರ್ಪಾಟಾಗ ತೊಡಗಿದವು. ಆಲೂರು ವೆಂಕಟರಾವ್, ಕಡಪ ರಾಘವೇಂದ್ರರಾವ್, ಕೃಷ್ಣರಾವ್ ಮುದವೀಡಕರ್, ದೊಡ್ಡ ಶ್ರೀನಿವಾಸರಾವ್ ಮುಂತಾದ ತರುಣರು ಕರ್ನಾಟಕದ ಮೂಲೆ ಮೂಲೆಯನ್ನು ಸಂಚರಿಸಿ ಸ್ವದೇಶಿ

ಹೋರಾಟದ ಬಗ್ಗೆ ಭಾಷಣ ನೀಡಿದರು. ಈ ಹೋರಾಟ ಹಾಗೂ ಅದರ ಕಾರ್ಯಕ್ರಮಗಳನ್ನು ಅನೇಕರು ಸ್ವಾಗತಿಸಿದರು. ವಿದೇಶಿ ವಸ್ತುಗಳನ್ನು ಜನರು ತ್ಯಜಿಸತೊಡಗಿದರು.[೫]

ಜನರಲ್ಲಿ ರಾಜಕೀಯ ಪ್ರಜ್ಞೆ ಹರಡುತ್ತಿರುವುದರ ಸಂಕೇತವೆಂಬಂತೆ ಪ್ರಥಮ ರಾಜಕೀಯ ಸಮ್ಮೇಳನಗಳು ಜರುಗಿ ಅಲ್ಲಿ ಬಂಗಾಳದ ವಿಭಜನೆಯನ್ನು ಖಂಡಿಸಲಾಯಿತು. ಬೆಳಗಾವಿಯಲ್ಲಿ ಪಾನ ನಿರೋಧಕ್ಕೆ ಶಿಫಾರಸು ಮಾಡಲಾಯಿತು ....... ವಿದೇಶಿ ಬಟ್ಟೆಗಳನ್ನು ಆಮದು ಮಾಡಿಕೊಳ್ಳದಂತೆ ಜವಳಿ ವ್ಯಾಪಾರಿಗಳು ನಿರ್ಧರಿಸಿದರು ....... ಧಾರವಾಡದ ಕಿರಾಣಿ ಅಂಗಡಿ ವ್ಯಾಪಾರಿಗಳು ಜಾನ್‌ಸನ್ ಸಕ್ಕರೆಯನ್ನು ಕೊಳ್ಳದಂತೆ ತೀರ್ಮಾನಿಸಿದರು.[೬] ಬೆಂಕಿಕಡ್ಡಿ, ಸಿಗರೇಟು ಹಾಗೂ ಪೆನ್ಸಿಲ್ಲು ಕಾರ್ಖಾನೆಗಳು ಸ್ವದೇಶಿ ಕಾರ್ಖಾನೆಗಳಾಗಿ ಆರಂಭವಾದವು. ಬೆಳಗಾವಿಯಲ್ಲಿ ಅನೇಕರು ಚಿಮಣಿ ಎಣ್ಣೆಯನ್ನು ಬಳಸುವುದನ್ನು ನಿಲ್ಲಿಸಿ ಸ್ವದೇಶಿ ಎಣ್ಣೆ ಉಪಯೋಗಿಸಲು ಮುಂದಾದರು. ಸರ್ಕಾರ ಈ ಚಳವಳಿಯನ್ನು ಬಗ್ಗು ಬಡಿಯಲು ಕ್ರಮ ಕೈಗೊಂಡಿತು. ಎಷ್ಟು ಕಠಿಣವಾದ ಕ್ರಮಗಳನ್ನು ಸರ್ಕಾರದವರು ಕೈಗೊಂಡರೆಂದರೆ ಸ್ವದೇಶಿ ಸಭೆಗಳಲ್ಲಿ ಭಾಗವಹಿಸಿದ ಶಾಲಾ ಬಾಲಕರನ್ನು ತರಗತಿಗಳಿಂದ ಉಚ್ಚಾಟಿಸಲಾಯಿತು.[೭]

ಹೀಗೆ ಸ್ವದೇಶಿ ಚಳವಳಿಯಲ್ಲಿ ತೊಡಗಿದ ಬೊಂಬಾಯಿ ಕರ್ನಾಟಕದಲ್ಲಿ ವಿದೇಶಿ ಬಟ್ಟೆಗಳನ್ನು ಮಾರುವ ಅಂಗಡಿಗಳು ಹಾಗೂ ಸಾರಾಯಿ ಅಂಗಡಿಗಳ ಮುಂದೆ ಧರಣಿ ಕೂರುವುದು ರೂಢಿಯಾಯಿತು. ಬೆಳಗಾವಿಯ ಮುಷ್ಕರಕಾರರನ್ನು ಒಂದು ವಾರ ಸೆರೆವಾಸಕ್ಕೆ ಗುರಿಪಡಿಸಲಾಯಿತು.[೮] ಶೈಕ್ಷಣಿಕ ಸಂಸ್ಥೆಗಳ ಬಹಿಷ್ಕಾರ ಅಷ್ಟು ಜನಪ್ರಿಯವಾಗಿರಲಿಲ್ಲವಾದರೂ, ರಾಷ್ಟ್ರೀಯ ಶಾಲೆಗಳನ್ನು ಸ್ಥಾಪಿಸುವ ದಿಶೆಯಲ್ಲಿ ಪ್ರಯತ್ನಗಳಾದವು. ಧಾರವಾಡದಲ್ಲಿ ಆಲೂರು ವೆಂಕಟರಾಯರು, ಬೆಳಗಾವಿಯಲ್ಲಿ ಕಾಕ ಕಾಲೇಳ್ಕರ್ ಅವರು, ನವಲಗುಂದದಲ್ಲಿ ಸಹಸ್ರಬುದ್ಧೆ ಘೊಂಡೋಪಂತ್ ಅವರು ಅಂಥ ಶಾಲೆಗಳನ್ನು ಸ್ಥಾಪಿಸಿದರು. ಬೆಳಗಾವಿ, ಬಿಜಾಪುರ ಹಾಗೂ ಧಾರವಾಡಲ್ಲಿ ಕೆಲವು ಸ್ವದೇಶಿ ಕೈಗಾರಿಕೆಗಳು ಸ್ಥಾಪನೆಯಾದವು. ೧೯೦೭ರಲ್ಲಿ ಧಾರವಾಡದಲ್ಲಿ ಕರ್ನಾಟಕ ಕೈಗಾರಿಕಾ ಸಮ್ಮೇಳನ ಜರುಗಿತು ಈ ಚಳವಳಿಯ ಹಿಂದೆ ಸ್ಫೂರ್ತಿಯಾಗಿದ್ದವರು ಆಲೂರು ವೆಂಕಟರಾಯರು. ಆರ್.ಎಚ್. ದೇಶಪಾಂಡೆ ಮುಂತಾದವರು ಆಲೂರರಿಗೆ ಒತ್ತಾಸೆಯಾಗಿ ನಿಂತರು; ಆದಾಗ್ಯೂ ಆರ್.ಆರ್. ದಿವಾಕರರಂಥ ಪ್ರಮುಖರಾದ ಸ್ವಾತಂತ್ರ್ಯ ಹೋರಾಟಗಾರರು ಅಭಿಪ್ರಾಯ ಪಡುವಂತೆ ಜನರಲ್ಲಿ ಅರಿವು ಸ್ಪಷ್ಟವಾಗಿ ಮೂಡಿರಲಿಲ್ಲ. ಏನೇ ಆಗಲಿ ಈ ತಿಳಿವಳಿಕೆಯ ಫಲವಾಗಿ ರಾಷ್ಟ್ರೀಯವಾದಿ ಪ್ರಚಾರವನ್ನು ಪ್ರಖರಗೊಳಿಸಲು ತಮ್ಮ ಪ್ರದೇಶದಲ್ಲೇ ಒಂದು ಕಾಂಗ್ರೆಸ್ ವೃತ್ತವನ್ನು ಹೊಂದುವುದು ಅತ್ಯವಶ್ಯಕವೆಂದು ಜನರಿಗೆ ವೇದ್ಯವಾಯಿತು.[೯]

ಸ್ವಾತಂತ್ರ್ಯ ಹೋರಾಟದ ಸ್ವದೇಶಿ ಚಳವಳಿ ಘಟ್ಟದಲ್ಲಿ ಸ್ಪಷ್ಟವಾಗಿ ಗೋಚರವಾದ ಒಂದಂಶವೆಂದರೆ ಕರ್ನಾಟಕದ ಎಲ್ಲ ರಾಷ್ಟ್ರೀಯವಾದಿ ನಾಯಕರು ಭಾವನಾತ್ಮಕವಾಗಿ ತಿಲಕರ ಪ್ರಭಾವಕ್ಕೆ ಒಳಗಾದರು. ತನ್ಮೂಲಕ ತಿಲಕರು ಹಾಗೂ ಉಗ್ರವಾದಿ ಗುಂಪಿನ ವರ್ಚಸ್ಸು ಹೆಚ್ಚಲು ಕಾರಣವಾಯಿತು. ಸೂರತ್ ಅಧಿವೇಶನದಲ್ಲಿ ಕಾಂಗ್ರೆಸ್ ಉಗ್ರಗಾಮಿಗಳು ಹಾಗೂ ಮಂದಗಾಮಿಗಳು ಎಂದು ಎರಡು ಭಾಗವಾದದ್ದನ್ನು ಆಲೂರರು ಒಂದು ಕಡೆ ಪ್ರಸ್ತಾಪಿಸಿದುದನ್ನು ಇಲ್ಲಿ ಸ್ಮರಿಸಿಕೊಳ್ಳುವುದು ಪ್ರಸ್ತುತ. ಈ ಘಟನೆಯು ಕರ್ನಾಟಕದ ಮೇಲೆ ತಿಲಕರ ಪ್ರಭಾವವನ್ನು ಪ್ರಕಟಿಸುವುದರ ಜೊತೆಗೆ ಕರ್ನಾಟಕದ ಆರಂಭಿಕ ರಾಷ್ಟ್ರೀಯವಾದಿಗಳ ಧೋರಣೆ ಹಾಗೂ ಒಲವುಗಳನ್ನು ತಿಳಿಸುತ್ತದೆ.

"(ಸೂರತ್) ಕಾಂಗ್ರೆಸ್ ಅಧಿವೇಶನದಲ್ಲಿ ನಾನು ಮತ್ತು ಅಪಾರ ಸಂಖ್ಯೆಯಲ್ಲಿ ನನ್ನ ಗೆಳೆಯರು ಭಾಗವಹಿಸಿದೆವು. ಅಲ್ಲಿ ನಡೆದ ಒಂದು ಘಟನೆ ಗಮನಾರ್ಹವಾದುದು. ಕರ್ನಾಟಕದ ಅಭ್ಯರ್ಥಿಗಳಿಗೆಂದು

ಗೊತ್ತುಪಡಿಸಿದ ಸ್ಥಳವು ಭಾಷಣ ವೇದಿಕೆಯಿಂದ ಸ್ವಲ್ಪ ದೂರದಲ್ಲಿಯೇ ಇತ್ತು. ತಿಲಕರು ಮಾತನಾಡಲು ಪ್ರಾರಂಭಿಸಿದ ಕೂಡಲೇ ಗಲಾಟೆ ಶುರುವಾಯಿತು ........ ಯಾರೋ ಒಬ್ಬರು ಅವರತ್ತ ಒಂದು ಕುರ್ಚಿ ಎಸೆದರು. ಇಡೀ ವಾತಾವರಣದಲ್ಲಿ ಉದ್ವೇಗ ಹಾಗೂ ಗಲಿಬಿಲಿ ತಾಂಡವವಾಡಿತು. ತಿಲಕರಿಗೇನಾದರೂ ಪೆಟ್ಟಾಯಿತೇ ಎಂದು ನಾವು ಆತಂಕಗೊಂಡಿದ್ದೆವು. ನಾನು ಹಾಗೂ ಶ್ರೀನಿವಾಸರಾವ್ ಕೌಜಲಗಿ ವೇದಿಕೆ ಹತ್ತಿರ ಓಡಲು ಶುರು ಮಾಡಿದೆವು; ನಮ್ಮ ಸ್ನೇಹಿತರು ನಮ್ಮನ್ನು ಹಿಂಬಾಲಿಸಿದರು. ಶ್ರೀನಿವಾಸರಾವ್ ಒಂದು ಕುರ್ಚಿ ಎಡವಿದಾಗ ಅವರ ಪೇಟ ಬಿದ್ದುಹೋಯಿತು. ತಮ್ಮ ಪೇಟವನ್ನು ಎತ್ತಿಕೊಳ್ಳುವುದಕ್ಕೆ ಅವರು ಬಗ್ಗಿದಾಗ, ಯಾರೋ ಅವರ ಕುತ್ತಿಗೆಯನ್ನು ಹಿಡಿದು ಅದುಮಿ ಗುದ್ದತೊಡಗಿದರು. ಏಕಾಏಕಿ ಈ ರೀತಿಯಾಗಿ ಅವರ ಮೇಲೆ ಎರಗಿದ ಆಸಾಮಿಯನ್ನು ಕಂಡು ನನಗೆ ಕೋಪ ತಡೆಯಲಾಗಲಿಲ್ಲ. ನನ್ನ ಕೈಯಲ್ಲಿದ್ದ ಏಕೈಕ ಅಸ್ತ್ರವಾದ ಕೊಡೆಯಿಂದ ಆ ಆಸಾಮಿಯನ್ನು ನಾನು ಬಡಿಯತೊಡಗಿದೆ......"[೧೦]

ತಿಲಕರ ಅವಧಿಯ ರಾಷ್ಟ್ರೀಯವಾದಿಗಳ ಇನ್ನೊಂದು ಪ್ರಧಾನವಾದ ಲಕ್ಷಣವೆಂದರೆ ಇವರಲ್ಲಿ ಯಾರೂ ಸಾಮಾಜಿಕ-ಧಾರ್ಮಿಕ ಸುಧಾರಣಾ ಚಳವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿರಲಿಲ್ಲ. ಈ ಲಕ್ಷಣದಿಂದ ಇವರ ಸಾಮಾಜಿಕ ನೆಲೆ, ಹಿನ್ನೆಲೆ ಅರ್ಥವಾಗುತ್ತದೆ ಹಾಗೆಯೇ ಇವರು ತಿಲಕರ ರಾಷ್ಟ್ರೀಯವಾದಕ್ಕೆ ಬದ್ಧರಾಗಿರುವುದೂ ತಿಳಿದುಬರುತ್ತದೆ. ತಿಲಕರ ಚಿಂತನೆಯ ಪ್ರಕಾರ ಕಾಂಗ್ರೆಸ್ಸು ಹಾಗೂ ಭಾರತೀಯ ರಾಷ್ಟ್ರೀಯ ಚಳವಳಿಯು ಸಾಮಾಜಿಕ-ಧಾರ್ಮಿಕ ಬದಲಾವಣೆಯ ಸಾಧನವಾಗಬೇಕಾಗಿರಲಿಲ್ಲ. ಸಾಮಾಜಿಕ-ರಾಜಕೀಯ ಹಾಗೂ ಕಾಂಗ್ರೆಸ್ ಚಳವಳಿಗಳು ಸಮಾನಾಂತರ ಚಳವಳಿಗಳಾಗಿ ನಡೆದವು. ೧೮೯೫ರವರೆಗಾದರೂ ಕೆಲವರು ಸುಧಾರಣಾ ಚಳವಳಿಗಾರರು ಕಾಂಗ್ರೆಸ್ ಚಟುವಟಿಕೆಯಲ್ಲಿ ಭಾಗವಹಿಸಿದರು. ಆದರೆ ಕಾಂಗ್ರೆಸ್ ಉತ್ಸಾಹಿಗಳು ಸುಧಾರಣಾ ಪ್ರಶ್ನೆಯ ಬಗ್ಗೆ ಯಾವ ಆಸ್ಥೆಯನ್ನು ಹೊಂದಿರಲಿಲ್ಲ. ಭಾರತೀಯ ಸಾಮಾಜಿಕ ಅಧಿವೇಶನವನ್ನು (ಇಂಡಿಯನ್ ಸೋಶಿಯಲ್ ಕಾನ್‌ಫರೆನ್ಸ್) ಕಾಂಗ್ರೆಸ್ ಮಂಟಪದಲ್ಲಿ (ಚಪ್ಪರ) ನಡೆಸಬಾರದೆಂದು ತಿಲಕರು ೧೮೯೫ರಲ್ಲಿ ಖಡಾಖಂಡಿತವಾಗಿ ನಿರಾಕರಿಸಿದ ಬಳಿಕ ಇವೆರಡೂ ಗುಂಪಿನ ಸಂಬಂಧ ಕಡಿದಂತೆಯೇ ಆಯಿತು. ಕಾಂಗ್ರೆಸ್ಸು ಸಾಮಾಜಿಕ ಸಮಸ್ಯೆಗಳನ್ನು ಎತ್ತಿಕೊಳ್ಳುವುದರ ಬಗ್ಗೆ ಎಷ್ಟು ವಿರೋಧವಿತ್ತೆಂದರೆ ಗಾಂಧಿಯವರು ಸಾರ್ವಜನಿಕ ಜೀವನದಲ್ಲಿ ಕಾಣಿಸಿಕೊಂಡಾಗ ತಿಲಕರ ಕಟ್ಟಾ ಅನುಯಾಯಿಗಳು ಕಾಂಗ್ರೆಸ್ಸಿನೊಡನೆ ಸಂಬಂಧ ಕಡಿದುಕೊಂಡರು.[೧೧] ಆರಂಭದ ಈ ಮಾದರಿಯ ರಾಷ್ಟ್ರವಾದಿಗಳ ಧೋರಣೆಯನ್ನು ಉಪಯೋಗಿಸಿಕೊಂಡು ವಸಾಹತುಶಾಹಿಗಳು ರಾಷ್ಟ್ರವಾದಿಗಳು ಹಾಗೂ ಸುಧಾರಣಾವಾದಿ ದಕ್ಷಿಣ ಭಾರತೀಯರ ನಡುವೆ ಕಂದಕವನ್ನು ಸೃಷ್ಟಿಸಿದರು. ದಕ್ಷಿಣ-ಭಾರತೀಯರು ಪ್ರಧಾನವಾಗಿ ಸಾಮಾಜಿಕ ಹಾಗೂ ಧಾರ್ಮಿಕ ಸುಧಾರಣೆಗೆ ಮನಸೋತವರಾಗಿದ್ದರು. ಈ ಬೆಳವಣಿಗೆಯಿಂದ ಜಾತಿವಾರು ಸಂಘಗಳು ತಲೆಯೆತ್ತುವುದಕ್ಕೆ ಅವಕಾಶವಾಯಿತು. ಕ್ರಮೇಣ ವಸಾಹತು ಸರ್ಕಾರ ಬ್ರಾಹ್ಮಣೇತರರು ಹಾಗೂ ಹಿಂದುಳಿದ ವರ್ಗಗಳ ಚಳವಳಿಗಳಿಗೆ ತೋರಿಕೆಯ ಬೆಂಬಲ ಸೂಚಿಸಿತು.

ಸೂರತ್‌ನ ನಂತರ ಸರ್ಕಾರವು ಕ್ರಾಂತಿಕಾರಿಗಳು ಹಾಗೂ ಉಗ್ರಗಾಮಿಗಳನ್ನು ಬಗ್ಗು ಬಡಿಯಲು ಅತ್ಯಂತ ಕ್ರೂರವಾಗಿ ನಡೆದುಕೊಂಡಿತು. ೧೯೦೮ರಲ್ಲಿ ತಿಲಕರನ್ನು ಆರುವರ್ಷಗಳ ಸೆರೆವಾಸದ ಶಿಕ್ಷೆಗೆ ಗುರಿಪಡಿಸಲಾಯಿತು. ತಿಲಕರನ್ನು ಅವರ ಅನುಯಾಯಿಗಳಿಂದಷ್ಟೇ ಅಲ್ಲದೆ ದೇಶದ ಹೊರಗೆ ಕೊಂಡೊಯ್ದು ಆಗಿನ ಬರ್ಮಾದ ಮ್ಯಾಂಡಲೇ ಸೆರೆಮನೆಯಲ್ಲಿ ಇಡಲಾಯಿತು. ಇನ್ನೊಬ್ಬ ಉಗ್ರಗಾಮಿ ಲಾಲಾ ಲಜಪತರಾಯ್ ರಾಜಕೀಯ ನಿವೃತ್ತಿಯನ್ನು ಘೋಷಿಸಿ ಅಮೆರಿಕಾಕ್ಕೆ ಹೊರಟುಹೋದರು, ಬಿಪಿನ್ ಚಂದ್ರಪಾಲರೂ ಸಹ ರಾಜಕೀಯದಿಂದ ನಿವೃತ್ತಿಯನ್ನು ಘೋಷಿಸಿದರು. ಹಾಗಾಗಿ ಕರ್ನಾಟಕದ ರಾಷ್ಟ್ರೀಯವಾದಿಗಳು-ಇವರು ಉಗ್ರಗಾಮಿ ನಾಯಕರ ಮೇಲೆ ಬಹಳವಾಗಿ ಅವಲಂಬಿತರಾಗಿದ್ದರು. ನಾಯಕರಿಲ್ಲದೆ

ದಲುಬುವಂತಾಯಿತು. ಸರ್ಕಾರವು ಕ್ರೂರವಾದ ಕಾನೂನುಗಳನ್ನು ಮುಂದೊಡ್ಡಿ ಜನರನ್ನು ಚಿತ್ರಹಿಂಸೆಗೊಳಿಸುವಲ್ಲಿ ನಿರತವಾಯಿತು. ಇದರ ಫಲವಾಗಿ ಅನೇಕ ರಾಷ್ಟ್ರೀಯವಾದಿ ವೃತ್ತಪತ್ರಿಕೆಗಳು ತಮ್ಮ ಸರ್ಕಾರಿ ವಿರೋಧಿ ದನಿಯನ್ನು ತಗ್ಗಿಸಿಕೊಳ್ಳಬೇಕಾಯಿತು ಇಲ್ಲವೇ ಪ್ರಕಟಣೆ ನಿಲ್ಲಿಸಬೇಕಾಯಿತು.[೧೨]

ತಿಲಕರಿಗೆ ಶಿಕ್ಷೆ ವಿಧಿಸಿದ ನಂತರ, ಬೆಳಗಾವಿಯಲ್ಲಿ ಗಣೇಶ ವಿಸರ್ಜನೆಯ ಮೆರವಣಿಗೆ ಸಂದರ್ಭದಲ್ಲಿ ಕೆಲವು ಹುಡುಗರು 'ತಿಲಕ್ ಮಹಾರಾಜ್‌ಕಿ ಜೈ' ಎಂದು ಘೋಷಣೆ ಕೂಗಿದ್ದನ್ನು ಬಿಟ್ಟರೆ ಬೇರೆ ಯಾವ ಬಹಿರಂಗವಾದ ಪ್ರತಿಭಟನೆ ಕಾಣಿಸಲಿಲ್ಲ– ಈ ವಿಷಯದಲ್ಲಿ ಬಂಗಾಳ ಮತ್ತು ಮಹಾರಾಷ್ಟ್ರ ಮುಂದಿದ್ದವು. ತಿಲಕರು ದೂರವಾದ ನಂತರ ಕರ್ನಾಟಕದ ರಾಷ್ಟ್ರೀಯವಾದಿ ಚಟುವಟಿಕೆಗಳು ಸ್ತಬ್ಧವಾದವು. ಇದಕ್ಕಿದ್ದ ಅಷ್ಟಿಷ್ಟು ನೆಲೆಯನ್ನು ಉಳಿಸಿಕೊಳ್ಳುವುದು ಕಷ್ಟವಾಯಿತು. ಏಕೆಂದರೆ, ಶಾಲೆ–ಕಾಲೇಜುಗಳನ್ನು ಬಹಿಷ್ಕರಿಸಿ ರಾಷ್ಟ್ರೀಯ ಶಾಲೆಗಳನ್ನು ಸೇರುವುದು ಸಾಧ್ಯವೆಂದು ತೋರಲಿಲ್ಲ; ಬಹುತೇಕರು ಮೇಲ್ಮಧ್ಯಮ ವರ್ಗದ ಅಥವಾ ಕೆಳಮಧ್ಯಮ ವರ್ಗದ ಜನರಾದ್ದರಿಂದ ಇಂಗ್ಲಿಷ್ ಶಿಕ್ಷಣದ ಮೇಲೆ ಅವಲಂಬಿಸಬೇಕಾದದ್ದು ಅನಿವಾರ್ಯವಾಗಿತ್ತು. ರಾಷ್ಟ್ರೀಯ ಶಾಲೆಯ ಅವರ ಪ್ರಮಾಣಪತ್ರಗಳನ್ನು ಅನೂರ್ಜಿತಗೊಳಿಸುವುದಾಗಿ ಸರ್ಕಾರ ಬೆದರಿಕೆ ಹಾಕಿದಾಗ ಅವರೆಲ್ಲ ರಾಷ್ಟ್ರೀಯ ಶಾಲೆಯನ್ನು ತ್ಯಜಿಸಿದರು. ಹೋರಾಟದ ಈ ಹಂತದಲ್ಲಿ ಯಾರೂ ಸರ್ಕಾರವನ್ನು ಬಹಿಷ್ಕರಿಸಲಿಲ್ಲ.[೧೩]

ಬ್ರಿಟಿಷ್ ಕರ್ನಾಟಕದ ರಾಷ್ಟ್ರೀಯವಾದಿ ಚಟುವಟಿಕೆಯು ಸ್ಥೂಲವಾಗಿ ಉಗ್ರಗಾಮಿ ಆಲೋಚನೆಯನ್ನು ಅನುಸರಿಸಿತ್ತಾದರೂ ಕಾಂಗ್ರೆಸ್ಸಿನ ಒಟ್ಟಾರೆ ರಾಷ್ಟ್ರೀಯವಾದಿ ಚಟುವಟಿಕೆಯೊಡನೆ ಇದನ್ನು ಹೋಲಿಕೆ ಮಾಡಲು ಸಾಧ್ಯವಿಲ್ಲ. ಉದಾಹರಣೆಗೆ ಅವರಲ್ಲಿ ಯಾರನ್ನೂ ಮಂದಗಾಮಿ ಅಥವಾ ಉದಾರವಾದಿಗಳೆಂದು ಕರೆಯುವಂತಿರಲಿಲ್ಲ. ಹಾಗೆಯೇ ಕಾಂಗ್ರೆಸ್ಸಿನವರಲ್ಲೂ ಸಹ ಯಾರಿಗೂ ಸಾಮಾಜಿಕ–ಧಾರ್ಮಿಕ ಸುಧಾರಣೆಯ ಸಮಸ್ಯೆಗಳ ಬಗ್ಗೆ ಒಲವಿರಲಿಲ್ಲ. ಸಾಮಾಜಿಕ–ಧಾರ್ಮಿಕ ಸುಧಾರಣೆಗೆ ಒಲಿದವರು ಉಗ್ರಗಾಮಿಗಳೆಂದು ಕಂಡುಬಂದ ಕಾಂಗ್ರೆಸ್ಸಿನವರ ಚಟುವಟಿಕೆಯಿಂದ ತಮ್ಮನ್ನು ದೂರ ಮಾಡಿಕೊಂಡದ್ದು ಪ್ರಾಯಶಃ ಈ ಕಾರಣದಿಂದ. ಆರಂಭಿಕ ರಾಷ್ಟ್ರೀಯವಾದಿ ಚಟುವಟಿಕೆಯ ಇನ್ನೊಂದು ಪ್ರಮುಖ ಲಕ್ಷಣವೆಂದರೆ ಅವರಲ್ಲಿ ಅನೇಕರು ವಸಾಹತುಶಾಹಿ ಸೃಷ್ಟಿಸಿದ ಉದಾರವಾದಿ ವೃತ್ತಿಗಳಿಂದ ಬಂದವರಾಗಿದ್ದರು. ಹಾಗಾಗಿ ಗ್ರಾಮೀಣ ಜನಸಮುದಾಯಕ್ಕೆ ಸಂಬಂಧಿಸಿದ ಸಮಸ್ಯೆಗಳ ಬಗ್ಗೆ ಅವರಾರಿಗೂ ಅಷ್ಟು ಕಾಳಜಿ ಇರಲಿಲ್ಲ. ಕೃಷಿಕ ವರ್ಗದ ಸಮಸ್ಯೆಗಳನ್ನು ಅವರು ಕೈಗೆತ್ತಿಕೊಳ್ಳದ ಕಾರಣ ಇವರು ಗ್ರಾಮೀಣ ಜನರನ್ನು ಯಾವ ರೀತಿಯ ಚಟುವಟಿಕೆಗೂ ಹಚ್ಚಲಾಗಲಿಲ್ಲ. ರೈತರನ್ನು ಸಂಘಟಿಸಬೇಕೆಂದು ತಿಲಕರು ಘೋಷಿಸಿದ್ದರಾದರೂ ಕರ್ನಾಟಕದಲ್ಲಿನ ಅವರ ಅನುಯಾಯಿಗಳು ಈ ಸಮಸ್ಯೆಗಳ ಬಗ್ಗೆ ಏನೂ ಕ್ರಮ ಕೈಗೊಳ್ಳಲಿಲ್ಲ. ಹಾಗಾಗಿ ಕರ್ನಾಟಕದಲ್ಲಿ ರಾಷ್ಟ್ರೀಯವಾದಿ ಚಟುವಟಿಕೆ ಸೀಮಿತವಾಗಿದ್ದು ಸಾಮಾನ್ಯವಾಗಿ ಕರ್ನಾಟಕದ ರಾಜಕೀಯದ ಮೇಲೂ ವಿಶೇಷವಾಗಿ ಸ್ವಾತಂತ್ರ್ಯ ಚಳವಳಿಯ ಮೇಲೂ ಪ್ರಭಾವ ಬೀರಿದ್ದನ್ನು ಕಾಣುತ್ತೇವೆ.

ಆರಂಭಿಕ ರಾಷ್ಟ್ರೀಯವಾದಿಗಳಲ್ಲಿ ಅನೇಕರು ಹಿಂದೂ ಪುನರುತ್ಥಾನವಾದಿಗಳಾಗಿದ್ದ ಕಾರಣ ವಸಾಹತು ಆಡಳಿತಗಾರರ ಒಡೆದು ಆಳುವ ನೀತಿಗೆ ಸುಲಭದಲ್ಲಿ ಈಡಾದರು. ಇವರು ಮುಸಲ್ಮಾನರು ಹಾಗೂ ಕ್ರಿಶ್ಚಿಯನ್ನರು, ವಿಶೇಷವಾಗಿ ಮುಸಲ್ಮಾನರು ಪರಕೀಯರೆಂದು ಗಾಢವಾಗಿ ನಂಬಿದ್ದರಲ್ಲದೆ ಅದನ್ನೇ ಪ್ರಚಾರ ಮಾಡಿದರು; ಇದರ ಜೊತೆಗೆ ಶಿವಾಜಿಯು ಈ ಹೊರದೇಶೀಯರಾದ ಮುಸಲ್ಮಾನ ದೊರೆಗಳನ್ನು ಹೊಡೆದೋಡಿಸಿ ಭಾರತದಲ್ಲಿ 'ಹಿಂದೂ ರಾಜ್ಯ' ವನ್ನು ಸ್ಥಾಪಿಸಲು ಪ್ರಯತ್ನಿಸಿದನೆಂದು ತಿಳಿಸಿದರು.[೧೪] ಆ ಬಗೆಯ ಪ್ರಚಾರದಿಂದ ತರುವಾಯದ ರಾಜಕೀಯ ಹಾಗೂ ರಾಷ್ಟ್ರೀಯವಾದಿ ಚಳವಳಿಯ ಮೇಲೆ ಗಾಢ

ವಾದ ಪ್ರಭಾವವುಂಟಾಯಿತು. ಅದೇ ಪ್ರಕಾರ ಶಿವಾಜಿ ಹಾಗೂ ಗಣೇಶನ ಹಬ್ಬಗಳು ಹಾಗೂ ಗೋರಕ್ಷಣಾ ಚಳವಳಿಗಳಿಂದ ಉದ್ಭವವಾದ ಕರ್ಷಣದಿಂದಾಗಿ ಈ ಮಾದರಿಯ ರಾಷ್ಟ್ರವಾದಿ ಓತದಿಂದ ಮುಸ್ಲಿಮರು ಹಾಗೂ ಕ್ರಿಶ್ಚಿಯನ್ನರು ದೂರವಾದದ್ದು ಅನಿವಾರ್ಯ. ಸಾಮಾಜಿಕ ಹಾಗೂ ಧಾರ್ಮಿಕ ಸುಧಾರಣಾ ವಿಷಯಗಳನ್ನು ಕೈಗೆತ್ತಿಕೊಳ್ಳಲು ಹಿಂಜರಿದ ಕಾರಣ ಆರಂಭಿಕ ರಾಷ್ಟ್ರವಾದಿಗಳ ಉದ್ದೇಶವನ್ನು ಸಮಾಜದ ಹಿಂದುಳಿದ ಹಾಗೂ ನೊಂದ ವರ್ಗದವರು ಶಂಕಿಸುವಂತಾಯಿತು. ಈ ವರ್ಗದ ಜನರೂ ಸಹ ಬ್ರಿಟಿಷರ ಒಡೆದು ಆಳುವ ನೀತಿಗೆ ಪಕ್ಕಾಗಿ ಆರಂಭಿಕ ಕಾಲದ ರಾಷ್ಟ್ರವಾದಿ ಚಳವಳಿಯಲ್ಲಿ ಪಾಲ್ಗೊಳ್ಳಲಿಲ್ಲ. ಅವರಲ್ಲಿ ಹಲವರು ಕಾಂಗ್ರೆಸ್ ಚಳವಳಿಯು, ಅದರಲ್ಲೂ ಉಗ್ರವಾದಿಗಳಾದವರು, 'ಬ್ರಿಟಿಷ್ ರಾಜ್' ನ ಸ್ಥಾನದಲ್ಲಿ 'ಬ್ರಾಹ್ಮಣ ರಾಜ್' ಅನ್ನು ಸ್ಥಾಪಿಸಲು ಹೊರಟಿದೆ ಎಂದು ಶಂಕಿಸಿದರು.[೧೫] ಈ ಗುಂಪಿನಲ್ಲಿ ಎದ್ದು ಕಾಣುವ ವ್ಯಕ್ತಿಯೆಂದರೆ ಸತ್ಯಶೋಧಕ ಸಮಾಜದ ಸ್ಥಾಪಕರೂ ಹಿಂದುಳಿದ ವರ್ಗದ ಚಳವಳಿಯ ನೇತಾರರೂ ಆದ ಜ್ಯೋತಿರಾವ್ ಫೂಲೆ ಅವರು. ಫೂಲೆ ಅವರು ಆರಂಭಿಸಿದ ಚಳವಳಿಯು ಕ್ರಮೇಣ ಬ್ರಾಹ್ಮಣೇತರರ ಚಳವಳಿಯಾಗಿ ಬೆಳವಣಿಗೆಗೊಂಡಿತು. ಬೊಂಬಾಯಿ ಕರ್ನಾಟಕದಲ್ಲಿ ಈ ಚಳವಳಿಯ ನೇತೃತ್ವವನ್ನು ಬ್ರಾಹ್ಮಣೇತರ ಪರಿಷತ್ತು ವಹಿಸಿದರೆ, ಮದರಾಸು ಪ್ರಾಂತ್ಯದಲ್ಲಿ ಜಸ್ಟೀಸ್‌ಪಕ್ಷ, ಮೈಸೂರು ಪ್ರಾಂತ್ಯದಲ್ಲಿ ಪ್ರಜಾಮಿತ್ರ ಮಂಡಲಿ ವಹಿಸಿದ್ದವು. ತಿಲಕರ ಕಾಲಘಟ್ಟದಲ್ಲಿ ಪ್ರಾರಂಭವಾದ ಈ ಎಲ್ಲ ಚಳವಳಿಗಳು ಕಾಂಗ್ರೆಸ್ ನಾಯಕತ್ವವನ್ನು ಕಟುವಾಗಿ ಟೀಕಿಸಲು ಕಾರಣ ಆಗ ಕಾಂಗ್ರೆಸ್ ಬ್ರಾಹ್ಮಣಮಯವಾಗಿತ್ತು. ಈ ಗುಂಪಿನವರ ಹೆಚ್ಚುತ್ತಿದ್ದ ಪ್ರಜಾಸತ್ತಾತ್ಮಕ ಆಸೆಗಳಿಗೆ ಕಾಂಗ್ರೆಸ್ ಪಕ್ಷವು ಸಹಾನುಭೂತಿ ತೋರದ ಕಾರಣ ಈ ವಿಭಾಗಗಳೂ ಕೂಡ ಕಾಂಗ್ರೆಸ್ ಪಕ್ಷವನ್ನು ದೂರೀಕರಿಸಿದವು.

## ೧೮೮೧-೧೯೧೦ರ ಮೈಸೂರಿನಲ್ಲಿ ರಾಷ್ಟ್ರವಾದದ ಹುಟ್ಟು ಮತ್ತು ಬೆಳವಣಿಗೆಯ ಮೇಲೆ ಪರಿಣಾಮ ಬೀರಿದ ಅಂಶಗಳು

೧೯೬೮ರಲ್ಲಿ ಸಂಸ್ಥಾನಗಳ ಸ್ವಾತಂತ್ರ್ಯ ಹೋರಾಟದ ಇತಿಹಾಸದ ಮೇಲೆ ಬರೆಯುತ್ತಾ ಆರ್.ಎಲ್. ಹಂಡ ಅವರು ಸಂಸ್ಥಾನಗಳ ರಾಷ್ಟ್ರವಾದಿ ಚಳವಳಿಯನ್ನು ಗಣನೆಗೆ ತೆಗೆದುಕೊಳ್ಳದ ಸ್ವಾತಂತ್ರ್ಯ ಚಳವಳಿಯ ಅಧ್ಯಯನವು ಅಪೂರ್ಣ ಹಾಗೂ ದೋಷಯುಕ್ತ[೧೬]ವೆಂದು ತೀರ್ಮಾನಿಸಿದರು. ಈಗ ಪರಿಸ್ಥಿತಿ ಬಹಳ ಸುಧಾರಿಸಿದೆಯಾದರೂ, ದಕ್ಷಿಣ ಭಾರತದ ಬಗ್ಗೆ ವಿಶೇಷವಾಗಿ ಸಂಸ್ಥಾನಗಳಲ್ಲಿನ ಸ್ವಾತಂತ್ರ್ಯ ಚಳವಳಿಯ, ಬಗೆಗಿನ ಅಧ್ಯಯನ ಅಸಮಗ್ರವೆಂದು ಅನಿವಾರ್ಯವಾಗಿ ಹೇಳಬೇಕಾಗಿದೆ. ಸಂಶೋಧಕರು ಭೇದಿಸಲಾಗದಂಥ ರಾಜ್ಯಗಳಿಗೇ ವಿಶೇಷವಾದಂಥ ಸಮಸ್ಯೆಗಳು ಇದ್ದಿರಬಹುದಾಗಿದೆ. ಸಂಸ್ಥಾನದ ಪ್ರಜೆಗಳ ರಾಷ್ಟ್ರವಾದಿ ಚಳವಳಿಯ ಬಗೆಗೆ ಅಧ್ಯಯನ ಮಾಡುವ ಸಂದರ್ಭದಲ್ಲಿ ಎರಡು ಬಗೆಯ ಹೊರೆಯನ್ನು ಪ್ರಜೆಗಳು ಹೊತ್ತಿದ್ದನ್ನು ನೆನೆಯಬೇಕು. ಒಂದು, ಬ್ರಿಟಿಷ್ ವಸಾಹತುಶಾಹಿ ಮತ್ತು ಎರಡು ಸಂಸ್ಥಾನದ ಏಕಚಕ್ರಾಧಿಪತ್ಯ; ಈ ಕಾರಣದಿಂದ ಸಂಶೋಧಕನ ಸಮಸ್ಯೆ ಜಟಿಲವಾಗುತ್ತದೆ.[೧೭]

ಮೈಸೂರು ಸಂಸ್ಥಾನದಲ್ಲಿನ ರಾಷ್ಟ್ರವಾದಿ ಚಳವಳಿಯ ಬೆಳವಣಿಗೆಯ ಉಗಮವನ್ನು ಗುರುತಿಸುವಲ್ಲಿ ಈ ಲೇಖನವು ಪ್ರಥಮ ಪ್ರಯತ್ನವಾಗಿದೆ. ಸಂಸ್ಥಾನದ ರಾಷ್ಟ್ರವಾದಿ ಚಳವಳಿಯ ದಿಕ್ಕನ್ನು ನಿರ್ಧರಿಸಿದ, ಪ್ರಭಾವಿಸಿದ ಅಂಶಗಳನ್ನು ವಿಶ್ಲೇಷಿಸುವ ಪ್ರಯತ್ನ ಕೂಡ ಇಲ್ಲಿದೆ. ಹತ್ತೊಂಬತ್ತನೆಯ ಶತಮಾನದ ಮಧ್ಯ ಭಾಗದಲ್ಲಿ ಮೈಸೂರು ಸಂಸ್ಥಾನವು ಹಾಗೆ ಇರಲು ಕಾರಣಗಳೇನು ಎಂದು ತಿಳಿಸುವ ವಿವರಕ್ಕೆ ಹೋಗದೆ ಈ ಶೀರ್ಷಿಕೆಗೆ ಔಚಿತ್ಯವಾದಂಥ ಘಟನೆಗಳಿಗೆ ಮಾತ್ರ ಗಮನವನ್ನು ಕೇಂದ್ರೀಕರಿಸಲಾಗಿದೆ. ಮೊದಲ ಅರ್ಧ ಭಾಗದಲ್ಲಿ ಮೈಸೂರಿಗರು ರಾಷ್ಟ್ರವಾದಿ ಚಿಂತನೆಯನ್ನು ರೂಪಿಸಿಕೊಳ್ಳುವಲ್ಲಿ ಎದುರಿಸಿದ ಸಮಸ್ಯೆಯ

ಕುರಿತು ಚರ್ಚಿಸಲಾಗಿದೆ. ನಂತರದ ಬೆಳವಣಿಗೆಗಳಲ್ಲಿ ಈ ವಿಷಯವು ಹೇಗೆ ಅಭಿವ್ಯಕ್ತಿಯನ್ನು ಕಂಡುಕೊಂಡಿತು ಎನ್ನುವುದು ಎರಡನೆಯ ಭಾಗದ ವಸ್ತುವಾಗಿದೆ.

೧೮೫೦ರ ದಶಕದಲ್ಲಿ ಸ್ಥಾಪಿಸಲಾದ ಸಾರ್ವಜನಿಕ ಸಂಘಗಳು ರಾಜ್ಯಗಳ ವ್ಯವಹಾರದಲ್ಲಿ ಯಾವ ಸಂಬಂಧವನ್ನು ಹೊಂದಿರಲಿಲ್ಲ.[೧೮] ನೇರವಾಗಿ ರಾಜಕೀಯವಲ್ಲದ್ದರಿಂದ ಸಾಮಾಜಿಕ–ಧಾರ್ಮಿಕ ಸುಧಾರಣಾ ಸಂಘಟನೆಗಳು ಆಳರಸರಿಂದ ತಕ್ಷಣದಲ್ಲೇ ಪ್ರತಿಸ್ಪಂದನೆಯನ್ನು ಪಡೆದವು. ಅದರಲ್ಲೂ ವಿಶೇಷವಾಗಿ ಮೈಸೂರು ಮತ್ತು ಬರೋಡಾ ಸಂಸ್ಥಾನಗಳ ರಾಜರು ಇಂಡಿಯನ್ ಸೋಷಿಯಲ್ ಕಾನ್ಫರೆನ್ಸ್‌ನ ಕಾರ್ಯಕ್ರಮಗಳನ್ನು ಕೈಗೆತ್ತಿಕೊಂಡವು.[೧೯] ಬ್ರಿಟಿಷ್ ಪ್ರಾಂತ್ಯಗಳಲ್ಲಿ ಇನ್ನೂ ಚರ್ಚಿತವಾಗುತ್ತಿದ್ದ ಕಾರ್ಯಕ್ರಮಗಳನ್ನು ಮೊದಲು ಅನುಷ್ಠಾನಕ್ಕೆ ತರುವುದರಲ್ಲಿ ಮೈಸೂರು ಮುಂದಾಗುತ್ತಿತ್ತು.[೨೦] ಮೈಸೂರಿನಲ್ಲಿ ಸುಧಾರಣಾ ಚಳವಳಿಯಲ್ಲಿದ್ದವರು ರಾಷ್ಟ್ರವಾದಿಗಳೂ ಆಗಿದ್ದರಿಂದ ಬ್ರಿಟಿಷ್ ಭಾರತದಲ್ಲಿ ಹೆಚ್ಚು ಉಗ್ರವಾದಿಗಳಾಗಿದ್ದವರು ಮೈಸೂರಿನ ಗುಣಗಾನ ಮಾಡತೊಡಗಿದರು.[೨೧]

ಮೈಸೂರಿನ ಆಳರಸರು ಒಂದು ಅಧಿಕಾರರಹಿತ ಪ್ರತಿನಿಧಿ ಸಭೆಯನ್ನು ಸ್ಥಾಪಿಸುವುದರ ಮೂಲಕ ರಾಜಕೀಯ ಸಂಘವನ್ನು ಸ್ಥಾಪಿಸಬೇಕೆಂಬ ಆರಂಭಿಕ ರಾಷ್ಟ್ರವಾದಿಗಳ ಪ್ರಯತ್ನವನ್ನು ತಪ್ಪಿಸಿದರು.[೨೨] ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ಗಿಂತ ಐದು ವರ್ಷ ಮೊದಲು ಪ್ರಾರಂಭವಾದ ಈ ಸಭೆಯು ಏಕಾಧಿಪತ್ಯದ ವಿರುದ್ಧ ಮೈಸೂರಿನ ರಾಷ್ಟ್ರವಾದಿಗಳು ಸೋಲೊಪ್ಪುವ ರೀತಿಯಲ್ಲಿ ಕಾಲ್ತೊಡಕಾಯಿತು. ಭಾರತ ಸರ್ಕಾರವು ಆ ಬಗೆಯ ಪ್ರಾತಿನಿಧಿಕ ಸಭೆಗಳ ಮಾಧ್ಯಮದ ಮೂಲಕವಾಗಿ ಆಡಳಿತ ನಡೆಸಲನುಕೂಲವಾಗುವಂತೆ ಜನತೆಯ ಇಚ್ಛೆಯನ್ನು ಅರಿಯುವುದು ಸೂಕ್ತವೆಂದು[೨೩] ಬ್ರಿಟಿಷ್ ಇಂಡಿಯಾ ಪ್ರೆಸ್ ಮತ್ತು ರಾಷ್ಟ್ರವಾದಿಗಳು ಆಗ್ರಹಪಡಿಸಿದರು. 'ಪ್ರಜಾಪ್ರಭುತ್ವದ ಪೌರ್ವಾತ್ಯ ಪರಿಕಲ್ಪನೆ' ಯನ್ನು ಆ ಬಗೆಯ ಸಭೆ ಪ್ರತಿನಿಧಿಸುವುದಾಗಿ ಭಾವಿಸಿದರೆ ವಿಧಾನ ಮಂಡಳವು 'ಪಾಶ್ಚಾತ್ಯ ಪರಿಕಲ್ಪನೆ'[೨೪]ಗೆ ಹತ್ತಿರವಾದುದೆಂದು ಕೀರ್ತಿಸಲಾಯಿತು. ಭಾರತೀಯ ರಾಷ್ಟ್ರವಾದಿಗಳು ಇದನ್ನೇ ಸಾಕಾರಗೊಳಿಸಲು ಆ ಕಾಲದಲ್ಲಿ ತುಡಿಯುತ್ತಿದ್ದರು ಕೂಡ.

ಬ್ರಿಟಿಷ್ ಭಾರತದಲ್ಲಿ ರಾಷ್ಟ್ರವಾದಿಗಳು ಸಮಾನತೆಗೆ ಆಗ್ರಹ ಪಡಿಸಿದಂತೆ ಮೈಸೂರಿಗರು ಕೇಳಲು ಸಾಧ್ಯವಿರಲಿಲ; ದೇಶೀಯರಿಗೆ ಭಾರತೀಯ ನಾಗರೀಕ ಸೇವೆಗಳ ಪರೀಕ್ಷೆಗಳಲ್ಲಿ ಅವಕಾಶ ಮತ್ತು ಆಡಳಿತದಲ್ಲಿ ಪ್ರವೇಶ ನೀಡಬೇಕೆನ್ನುವ ಒತ್ತಾಯ ಇದಾಗಿತ್ತು. ಬ್ರಿಟಿಷ್ ಭಾರತದ ರಾಷ್ಟ್ರವಾದಿಗಳು ಮತ್ತು ತರುವಾಯ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ದೇಶೀಯ ಸಂಸ್ಥಾನಗಳ ಜನರ ಸಮಸ್ಯೆಗಳನ್ನು ಕೈಗೆತ್ತಿಕೊಳ್ಳಲೇ ಇಲ್ಲ. ಮೈಸೂರು ಆಡಳಿತದ ಬಗ್ಗೆ ರಾಷ್ಟ್ರವಾದಿಗಳು ಎಷ್ಟು ಗೌರವವನ್ನು ಇಟ್ಟುಕೊಂಡಿದ್ದರೆಂದರೆ ೧೮೯೪ರಷ್ಟು ಹಿಂದೆಯೇ ಅದು ವೃತ್ತಪತ್ರಿಕೆಯೊಂದನ್ನು ನಿಲ್ಲಿಸಿ ಮುದ್ರಣಾಲಯವನ್ನು ತನ್ನ ವಶಕ್ಕೆ ತೆಗೆದುಕೊಂಡ ಸುದ್ದಿಯನ್ನೂ ರಾಷ್ಟ್ರವಾದಿಗಳು ಹೆಚ್ಚು ಚರ್ಚಿಸಲಿಲ್ಲ. ಕಾಂಗ್ರೆಸ್ ಅಧಿವೇಶನದಲ್ಲಿ ಕೂಡ ಅದರ ಪ್ರಸ್ತಾಪವಾಗಲಿಲ್ಲ. ಮೈಸೂರು ರಾಜರು ಕಾಂಗ್ರೆಸ್ಸಿಗರ ಪ್ರೀತಿಗೆ ಪಾತ್ರರಾಗಿದ್ದರಲ್ಲದೇ ೧೮೮೭ರಲ್ಲಿ ನಡೆದ ಮದರಾಸು ಅಧಿವೇಶನಕ್ಕೆ ರೂ. ೧,೦೦೦/- ವನ್ನು ದೇಣಿಗೆ ನೀಡಿದರು. ಜೊತೆಗೆ ಅಧಿವೇಶನದಲ್ಲಿ ತಮ್ಮ ಪ್ರತಿನಿಧಿಗಳು ಭಾಗವಹಿಸುವುದಕ್ಕೆ ಅವಕಾಶ ಕಲ್ಪಿಸಿಕೊಟ್ಟರು.[೨೫] ೧೯೦೨ರಲ್ಲಿ ಕೃಷ್ಣರಾಜೇಂದ್ರ ಒಡೆಯರ್‌ರವರು ಮದರಾಸಿನ ಕಾಂಗ್ರೆಸ್ ಕೈಗಾರಿಕಾ ವಸ್ತುಪ್ರದರ್ಶನವನ್ನು ಉದ್ಘಾಟಿಸಲು ಆಹ್ವಾನಿತರಾದರು.

ಮೈಸೂರು ಆಡಳಿತದ ವಿರುದ್ಧ ಬ್ರಿಟಿಷ್ ವಸಾಹತುವಿಗೆ ಯಾವುದೇ ಅಹವಾಲು ಇರಲಿಲ್ಲ. ಇದಕ್ಕೆ ಕಾರಣವೆಂದರೆ ವಸಾಹತು ಆಡಳಿತ ಅಪೇಕ್ಷಿಸಿದುದನ್ನೆಲ್ಲಾ ಸಂಸ್ಥಾನವು ಶಿರಸಾವಹಿಸಿ ನೆರವೇರಿಸುತ್ತಿತ್ತು.

ಮೈಸೂರಿನಲ್ಲಿ ಜಾರಿಯಲ್ಲಿದ್ದ 'ಏಕವ್ಯಕ್ತಿ ಆಡಳಿತ' ವನ್ನು ಅವರು ಶ್ರದ್ಧೆಯಿಂದ ಬೆಂಬಲಿಸುತ್ತಿದ್ದರು.[೨೨] 'ಆಡಳಿತ ದಕ್ಷತೆ ಮತ್ತು ಉತ್ತಮ ಸರ್ಕಾರ' ವೆಂಬ ಹೆಸರಿನಲ್ಲಿ ಇದೆಲ್ಲಾ ನಡೆಯಲು ಅವಕಾಶವಿದ್ದಿತು; ಕಾರಣ ಬ್ರಿಟಿಷ್ ಭಾರತದಲ್ಲಿ ಜವಾಬ್ದಾರಿಯುತ ಸ್ಥಾನಗಳಿಗೆ ಭಾರತೀಯರನ್ನು ನೇಮಕ ಮಾಡಲಾಗದೆಂಬ ತೀರ್ಮಾನವನ್ನು ತೆಗೆದುಕೊಂಡಿದ್ದರು. ಅದೇ ಕಾರಣಕ್ಕೆ ಭಾರತೀಯ ರಾಷ್ಟ್ರವಾದಿಗಳು 'ದೇಶೀಯ ಆಡಳಿತ' ವನ್ನು ಬೆಂಬಲಿಸುತ್ತಿದ್ದರು; ತಮ್ಮ ಆಡಳಿತವನ್ನು ತಾವೇ ನಡೆಸಲು ಎಷ್ಟು ಸಮರ್ಥರೆಂದು ತೋರಿಸಲು ಮೈಸೂರಿನ ಉದಾಹರಣೆಯನ್ನು ಅವರು ಕೊಡುತ್ತಿದ್ದರು.

'ಮಾದರಿ ಭಾರತೀಯ ಸಂಸ್ಥಾನ' ವೆಂಬ ಕೀರ್ತಿಯನ್ನು ಗಳಿಸಿಕೊಂಡ ಮೈಸೂರು ಸಂಸ್ಥಾನದಲ್ಲಿ ಯಾವುದೇ ರೀತಿಯ ದಬ್ಬಾಳಿಕೆ ನಡೆದರೂ ಕೇಳುವವರಿಲ್ಲದಂತಾಯಿತು. ಏಕಾಧಿಪತ್ಯದ ವೈಪರೀತ್ಯಗಳನ್ನು ಖಂಡಿಸುವ ದಿಶೆಯಲ್ಲಿ ಸಾರ್ವಜನಿಕರ ಅಭಿಪ್ರಾಯವನ್ನು ಕಲೆಹಾಕುವ ಪ್ರಯತ್ನಗಳನ್ನು ಮೈಸೂರಿನವರು ಕೈಗೊಂಡಾಗ ಶಾಸನಸಭೆಯಲ್ಲಿ ದಿವಾನರು ಬಹಿರಂಗವಾಗಿಯೇ ಆ ರೀತಿಯ ಎಲ್ಲ ಪ್ರಯತ್ನಗಳನ್ನೂ 'ಧ್ವಂಸ' ಮಾಡಿ 'ಮಣ್ಣು' ಮಾಡಿರುವುದಾಗಿ ಘೋಷಿಸಿದರು.[೨೩]

ಇಷ್ಟೊಂದು ಪ್ರತಿರೋಧವನ್ನು ದಾಟಿಕೊಂಡು ಮೈಸೂರಿನ ಆರಂಭ ಕಾಲದ ರಾಷ್ಟ್ರವಾದಿಗಳು ಏಕಾಧಿಪತ್ಯದ ವಿರುದ್ಧ ಹೋರಾಡಬೇಕಾಯಿತು. ನಾಡಿನ ಹೊರಗಿನ ರಾಷ್ಟ್ರವಾದಿಗಳು ಮೈಸೂರು ರಾಜರು ಹಾಗೂ ದಿವಾನರ ಅಧೀನರಂತೆ ವರ್ತಿಸಿದಾಗ ಅವರಿಗೆ ದಿಗ್ಭ್ರಮೆಯಾಯಿತು. ಜನರ ಹಿತಕ್ಕಾಗಿ ಚಿಂತಿಸುವ ಬದಲು 'ಇಬ್ಬಗೆಯ ಗುಲಾಮಗಿರಿ' ಯಲ್ಲಿ ತೊಳಲಾಡುವವರನ್ನು ಕೇಳುವವರೇ ಇಲ್ಲದಂಥ ಪರಿಸ್ಥಿತಿ ಇತ್ತು. ಮೈಸೂರು ಪ್ರಾಂತ್ಯದ ರಾಷ್ಟ್ರವಾದಿಗಳು ಇದರಿಂದ ಅಸಂತೃಪ್ತರಾದದ್ದು ಸಹಜವೇ ಆಗಿದೆ. ಭಾರತೀಯ ರಾಷ್ಟ್ರವಾದವನ್ನು ವಿರೋಧಿಸುತ್ತಿದ್ದ ಆಂಗ್ಲೊ-ಇಂಡಿಯನ್ ಪತ್ರಿಕೆಗಳು ಸಂಸ್ಥಾನಗಳಿಗೆ ಸಂಬಂಧಿಸಿದ ವಿಷಯಗಳನ್ನು ಕೈಗೆತ್ತಿಕೊಳ್ಳುತ್ತಿದ್ದುದು ಒಂದು ವ್ಯಂಗ್ಯವಾಗಿ ತೋರುತ್ತದೆ. ಕಾಂಗ್ರೆಸ್ಸಿಗರ ಧೋರಣೆಯಿಂದ ರೋಸಿಹೋದ ಒಬ್ಬರು ಮುಂದಗಾಮಿ ರಾಷ್ಟ್ರವಾದಿ ಪತ್ರಕರ್ತರು ಹೀಗೆ ಬರೆದರು "…….ಸಂಸ್ಥಾನಗಳ ಜನರ ಸಮಸ್ಯೆಗಳಿಗೆ ಸಂಬಂಧಿಸಿದಂತೆ- ಮದರಾಸು ಮೇಲ್ ಕಾಂಗ್ರೆಸ್ಸಿನವರಿಗೆ ಮನವಿ ಮಾಡಿರುವುದು ಹೆಚ್ಚು ಫಲ ನೀಡುವುದಿಲ್ಲವೆಂಬುದು ನನ್ನ ತಿಳಿವಳಿಕೆ. ಅವರಲ್ಲಿ ಕೆಲವರನ್ನು ನಾವು ಮಾತನಾಡಿಸಿದ್ದೇವೆ; ಕೆಲವರಂತೂ ಸಂಸ್ಥಾನಗಳ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳುವ ಪ್ರಥಮ ಪ್ರಯತ್ನವನ್ನೂ ಮಾಡದಂಥವರು……" [೨೪]

ಮೈಸೂರಿನ ರಾಷ್ಟ್ರವಾದಿಗಳು ಯಾವ ವರ್ಗಕ್ಕೆ ಸೇರಿದವರೆಂಬುದನ್ನು ನಾವು ತಿಳಿಯುವುದು ಅತ್ಯಾವಶ್ಯಕವಾಗಿದೆ. ಶೇಕಡಾ ೮೦ ಭಾಗದ ಜನರು ಕೃಷಿಯ ಮೇಲೆ ಜೀವನ ನಡೆಸುವವರಾದ್ದರಿಂದ ಸರ್ಕಾರದ ವರಮಾನವೂ ಭೂಮಿಯಿಂದಲೇ ಬರುವಂಥಾದ್ದಾಗಿತ್ತು. ಮೈಸೂರು ಪ್ರಾಂತ್ಯವು ಆಗ ಪ್ರಚಲಿತವಿದ್ದ ರೈತವಾರಿ ಪದ್ಧತಿಯ ಪ್ರಕಾರ ನಿಯಂತ್ರಣಕ್ಕೊಳಗಾಗಿದ್ದ ಪ್ರಾಂತ್ಯಗಳಲ್ಲೊಂದು. ರವೀಂದರ್ ಕುಮಾರ್‌ರವರು ಅಭಿಪ್ರಾಯ ಪಡುವಂತೆ ಗ್ರಾಮೀಣ ಸಮಾಜವು- ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ- ರೈತವಾರಿ ವಲಯಗಳಲ್ಲಿ ಆಗುತ್ತಿದ್ದ ಬದಲಾವಣೆಗಳಲ್ಲಿ ಪ್ರಧಾನ ಭೂಮಿಕೆಯನ್ನು ನಿರ್ವಹಿಸುವಂತೆ ಇರಲಿಲ್ಲ.[೨೫] ಇದಕ್ಕೆ ವಾಸ್ತವಿಕವಾದ ಕಾರಣವೆಂದರೆ ಗ್ರಾಮಾಂತರ ಪ್ರದೇಶಗಳನ್ನು ವಸಾಹತು ವ್ಯವಸ್ಥೆ ಹೆಚ್ಚು ವ್ಯಾಪಕವಾಗಿ ಪ್ರವೇಶಿಸದಿದ್ದುದು, ಹಾಗೆಯೇ ಗ್ರಾಮೀಣ ಕೃಷಿಕ ಆರ್ಥಿಕ ವ್ಯವಸ್ಥೆಯನ್ನು ನಗರವಾಸಿ ಶ್ರೀಮಂತರು ಮತ್ತು ವ್ಯಾಪಾರಸ್ಥರು ಬದಲಾಯಿಸಲು ಮುಂದಾಗದುದು. ಮೈಸೂರು ಪ್ರಾಂತ್ಯಕ್ಕೆ ಈ ಮಾತು ಹೆಚ್ಚು ಅನ್ವಯವಾಗಲು ಕಾರಣವೆಂದರೆ, ಆಗಿನ ಕಾಲದಲ್ಲಿ ಇಲ್ಲಿ

ದೊಡ್ಡ ಜಮೀನುದಾರರು ಯಾರೂ ಇರಲಿಲ್ಲ. ೫೦೦ ಎಕರೆಗಳಷ್ಟು ಜಮೀನನ್ನು ಹೊಂದಿದ್ದವು ಕೇವಲ ೮೯ ಕುಟುಂಬಗಳು; ವಿಭಕ್ತ ಕುಟುಂಬಗಳಾಗಿ ಇವು ಹೆಚ್ಚಿದ ಕಾರಣ ಈ ಜಮೀನು ಹಂಚಿಹೋದದ್ದನ್ನು ನಾವು ಕಾಣುತ್ತೇವೆ. 'ಬೊಂಬಾಯಿ ಮತ್ತು ಮದರಾಸು ಪ್ರಾಂತ್ಯಗಳಲ್ಲಿ ರೈತವಾರಿ ಪದ್ಧತಿಯ ಅಧೀನದಲ್ಲಿದ್ದಾಗ್ಯೂ ಸಹ ಜಮೀನುದಾರರು ಇದ್ದರೆಂಬುದು ನಿಜವಾದರೂ ದೊಡ್ಡ ಜಮೀನುದಾರರ ವರ್ಗವು ಮೈಸೂರಿನ ಪ್ರಾಂತ್ಯದಲ್ಲಿತ್ತು ಎಂದು ತಿಳಿಯಲಾಗದು' ಎಂದು ಲೀಲಾ ಡೆಲ್‌ಕಿನ್ ಹೇಳುತ್ತಾರೆ.[೨೦]

ನಗರ ಪ್ರದೇಶದ ಶ್ರೀಮಂತರು ತಮ್ಮ ಶ್ರೀಮಂತಿಕೆಯ ಕೊಂಚ ಭಾಗವನ್ನೂ ಸಹ ಗ್ರಾಮೀಣ ಪ್ರದೇಶದಲ್ಲಿ ಹೂಡಲು ಮನಸ್ಸು ಮಾಡಲಿಲ್ಲ. ರೈತವಾರಿ ಪದ್ಧತಿಯಡಿಯಲ್ಲಿ ಮೇಲಿಂದ ಮೇಲೆ ತೆರಿಗೆ ತೆರಬೇಕಾಗಿ ಬಂದ ಕಾರಣ ನಗರ ಪ್ರದೇಶದಲ್ಲಿ ಕೃಷಿ ಭೂಮಿಯ ಬಾಡಿಗೆಯಲ್ಲಿ ಬದುಕುತ್ತಿದ್ದ ಮಂದಿ ತುಂಬಾ ತೊಂದರೆಗೀಡಾದರು. ಇದರಿಂದ ಕೃಷಿಕ ಜೀವನ ಅತ್ಯಂತ ಕಷ್ಟದಾಯಕವಾಗಿ ಪರಿಣಮಿಸಿತಲ್ಲದೆ ಕೃಷಿಕ ಆರ್ಥಿಕತೆಯೊಳಗಡೆಯೇ ಬಂಡವಾಳ ನಿರ್ಮಾಣ ಮಾಡುವ ಸಾಧ್ಯತೆಯನ್ನು ತಪ್ಪಿಸಿತು; ಕೃಷಿಯ ಹೊರಗಿನಿಂದ ಕೂಡ ಬಂಡವಾಳ ಬರುವುದಕ್ಕೂ ಈ ಪದ್ಧತಿ ತಡೆಯೊಡ್ಡಿತ್ತು.[೨೧] ಹಾಗಾಗಿ ನಗರ ಮತ್ತು ಗ್ರಾಮೀಣ ಪ್ರದೇಶಗಳ ನಡುವೆ ಕಂದರವೇರ್ಪಟ್ಟಿತು. ಕೃಷಿಕ ಅರ್ಥವ್ಯವಸ್ಥೆಯಲ್ಲಿ ತಮಗೆ ಯಾವ ಬಗೆಯಾದ ಲಾಭವೂ ಇಲ್ಲದ ಕಾರಣ ನಗರವಾಸಿಗರು ಗ್ರಾಮಾಂತರ ಪ್ರದೇಶಕ್ಕೆ ಹೋಗಿ ಅಲ್ಲಿ ಬಂಡವಾಳ ಹೂಡುವ ಗೋಜಿಗೆ ಹೋಗಲಿಲ್ಲ. ಈ ಕಂದರದಿಂದಾಗಿ ರಾಷ್ಟ್ರವಾದಿ ವಿಚಾರಗಳು ಗ್ರಾಮೀಣ ಪ್ರದೇಶಕ್ಕೆ ಹೋಗುವಲ್ಲಿ ಕೂಡ ವಿಳಂಬವುಂಟಾಯಿತು.[೨೨] ಮೈಸೂರು ಸಂಸ್ಥಾನದ ವಿಷಯದಲ್ಲಿ ಇದು ಇನ್ನೂ ಹೆಚ್ಚು ಸ್ಪಷ್ಟವಾಗಿ ಗೋಚರಿಸಿತು.

ಸರಿಯಾಗಿ ಸಂಘಟನೆಗೊಳ್ಳದ ಕಾರಣ– ೧೯೩೦ರ ದಶಕದ ಕಡೆಯ ಭಾಗದವರೆಗಂತೂ ಇದು ಸರಿಯಾಗಿ ಸಂಘಟನೆಯಾಗಿರಲಿಲ್ಲವೆಂಬುದು ನಿಜ ಸಂಗತಿ– ಕೃಷಿಕ ಸಮಾಜವು ತೆರಿಗೆ ತೆತ್ತು ದುರ್ಬಲವಾಯಿತು; ಈ ಕಾರಣದಿಂದಾಗಿ ಸಮೀಪದ ಜಿಲ್ಲಾ ಕೇಂದ್ರ, ಪಟ್ಟಣ ಮತ್ತು ನಗರಗಳ ಕಡೆ ವಲಸೆ ಹೋಗುವ ಮೂಲಕ ಇವರು ಪ್ರತಿಕ್ರಿಯೆ ವ್ಯಕ್ತಪಡಿಸಿದರು. ವಾಸ್ತವವಾಗಿ ನಗರ ಪ್ರದೇಶದ ಶ್ರೀಮಂತರು ಮತ್ತು ಮಧ್ಯಮವರ್ಗದವರು ಹಾಗೂ ಸರ್ಕಾರ, ಈ ಗ್ರಾಮೀಣ ಜನತೆಯ ದುಡಿಮೆಯ ಮೇಲೆ ಅವಲಂಬಿತ ರಾಗಿದ್ದರು. ಮೌನ ತಬ್ಬಿದ ಈ ಬಹುಸಂಖ್ಯಾತ ಬಡವರು ಅಸಂಘಟಿತರಾಗಿದ್ದಾಗ್ಯೂ ಕ್ಷಾಮ, ಬರಗಾಲ ಮುಂತಾದ ಆಪತ್ತಿನ ಕಾಲದಲ್ಲಿ ತಮ್ಮ ಅತೃಪ್ತಿಯನ್ನು ಅಭಿವ್ಯಕ್ತಗೊಳಿಸಲು ಹಿಂಸಾತ್ಮಕ ಮಾರ್ಗ ಹಿಡಿಯುತ್ತಿದ್ದುದನ್ನು ಕಾಣಬಹುದಾಗಿದೆ.[೨೩] ಇಡೀ ದೇಶದಲ್ಲಿ ಸಮರ್ಪಕವಾದ ರೀತಿಯಲ್ಲಿ ಸಂಘಟನೆ ಇಲ್ಲದ ಕಾರಣ ಬಹುಸಂಖ್ಯಾತ ಬಡವರ ಅತೃಪ್ತಿಯನ್ನು ರಚನಾತ್ಮಕವಾಗಿ ಬಳಸಿಕೊಳ್ಳಲು ಸಾಧ್ಯವಾಗಲಿಲ್ಲ; ಮೈಸೂರು ಪ್ರಾಂತ್ಯವು ಇದಕ್ಕೆ ಅಪವಾದವಾಗಿರಲಿಲ್ಲ.

ಇಲ್ಲಿಂದ ಮುಂದೆ ನಮ್ಮ ಗಮನವನ್ನು ನಗರ ಕೇಂದ್ರಗಳಿಗೆ ಹರಿಸಬಹುದು. ೧೯ನೇ ಶತಮಾನದಲ್ಲಿ ಮೈಸೂರು ಭಾಗದಲ್ಲಿ ಬಹಳ ಕಡಿಮೆ ಸಂಖ್ಯೆಯ ನಗರ ಕೇಂದ್ರಗಳಿದ್ದವು. ಅದರಲ್ಲೂ ಈ ನಗರ ಕೇಂದ್ರಗಳು ಕೈಗಾರಿಕೀಕರಣದ ಹೆಚ್ಚು ಪ್ರಭಾವವನ್ನು ಅನುಭವಿಸಿರಲಿಲ್ಲ. ಬೆಂಗಳೂರು ಹಾಗೂ ಸುತ್ತಮುತ್ತಲಿನ ಕೈಮಗ್ಗಗಳು ಮತ್ತು ಕೋಲಾರದ ಚಿನ್ನದ ಗಣಿಯನ್ನುಳಿದು ಇಲ್ಲಿ ಹೇಳಿಕೊಳ್ಳುವಂಥ ಕೈಗಾರಿಕೆಯೇನೂ ಇದ್ದಿಲ್ಲ. ಮೈಸೂರು ಭೂಆವೃತ ರಾಜ್ಯವಾಗಿದ್ದ ಪರಿಣಾಮವಾಗಿ ಹೊರಗಿನಿಂದ ಸುಲಭವಾಗಿ ಬಂಡವಾಳ ಹರಿದುಬರುವುದಕ್ಕೆ ಅಡ್ಡಿಯಾಗಿತ್ತು. ಮೈಸೂರಿನ ದಿವಾನರಾಗಿದ್ದ ವಿಶ್ವೇಶ್ವರಯ್ಯ ಹಾಗೂ ಮಿರ್ಜಾ ಇಸ್ಮಾಯಿಲ್ಲರು ಮೇಲಿಂದ ಮೇಲೆ ಈ ಸಮಸ್ಯೆಯನ್ನು ಮುಂದೊಡ್ಡುತ್ತಿದ್ದರು. ೧೯ನೇ ಶತಮಾನದ

ಅಂತಿಮ ಭಾಗದಲ್ಲಿ ಮೈಸೂರಿನ ಪ್ರಾಂತ್ಯಕ್ಕೆ ರೈಲ್ವೆ ಜಾಲ ಲಭ್ಯವಾಯಿತು; ಶ್ರೀಮಂತ ವ್ಯಾಪಾರೀವರ್ಗದ ಜನನವಾಗುವುದಕ್ಕೆ ವಿಳಂಬವಾಗಲು ಈ ಕಾರಣವನ್ನು ನಾವು ನೆನೆಯಬೇಕು. ವಾಸ್ತವವಾಗಿ ಮೈಸೂರು ಪ್ರಾಂತ್ಯದ ಪಟ್ಟಣಗಳಲ್ಲಿ ವಾಸವಾಗಿದ್ದವರಲ್ಲಿ ಸುಮಾರು ಅರ್ಧಭಾಗದಷ್ಟು ಮಂದಿ ಬ್ರಾಹ್ಮಣರಾಗಿದ್ದರು; ಹಾಗಾಗಿ ವ್ಯಾಪಾರಕ್ಕೂ ಅವರಿಗೂ ಹೆಚ್ಚು ಸಂಬಂಧವಿರಲಿಲ್ಲ.[೩೪]

ವ್ಯಾಪಕವಾಗಿ ಸಮಾಜವನ್ನೇ ಗಣನೆಗೆ ತೆಗೆದುಕೊಂಡು ವಿಶ್ಲೇಷಿಸುವುದಾದರೆ, ದಕ್ಷಿಣ ಭಾರತೀಯ ಸಮಾಜವು ಸಾಮಾನ್ಯವಾಗಿ ಬದಲಾವಣೆಗೆ ಒಗ್ಗದ ರೀತಿಯಲ್ಲೇ ರೂಪಿತವಾಗಿತ್ತು. ಬಂಗಾಳ ಅಥವಾ ಬೊಂಬಾಯಿ ಪ್ರೆಸಿಡೆನ್ಸಿಗಳಲ್ಲಿ ನಾವು ಕಾಣುವಂತೆ ವ್ಯಾಪಾರಿಗರ ವರ್ಗವನ್ನು ಇಲ್ಲಿ ಗುರುತಿಸಲಾರೆವು. ದಕ್ಷಿಣ ಪ್ರಾಂತ್ಯವೇ ಇದಕ್ಕೆ ನಿಧಾನವಾಗಿ ಪ್ರತಿಕ್ರಿಯಿಸಿತು ಎನ್ನಬೇಕು. ಅದರಲ್ಲೂ ಮೈಸೂರು ಇನ್ನೂ ನಿಧಾನವೆಂದು ತಿಳಿಯಬೇಕು. ಆರ್ಥಿಕತೆಯ ಬದಲಾವಣೆಯ ಗತಿಯೂ ಕೂಡ ಇಲ್ಲಿ ತೀರಾ ಮಂದವಾಗಿತ್ತು. ಉತ್ತರ ಭಾರತದ ರೀತಿಯಲ್ಲೇ ದಕ್ಷಿಣ ಭಾರತವೂ ಸಹ ಕೈಗಾರಿಕೆ ಮತ್ತು ವಾಣಿಜ್ಯ ಕ್ಷೇತ್ರದಲ್ಲಿ ಬೆಳವಣಿಗೆ ಸಾಧಿಸಿದ್ದರೆ ಮಧ್ಯಮ ವರ್ಗದ ಸಾಮಾಜಿಕ ಸಂಘಟನೆ ಮತ್ತು ಬೆಳವಣಿಗೆಯೂ ಕೂಡ ಅದೇ ಮಾದರಿಯಲ್ಲಿ ಪ್ರಕಟವಾಗುತ್ತಿತ್ತು. ಆದರೆ ಹಾಗಾಗಲಿಲ್ಲ. ಆದರೆ ದಕ್ಷಿಣ ಭಾರತವು ಮಾತ್ರ ಇಂಗ್ಲಿಷ್ ಭಾಷೆ ಮತ್ತು ಉನ್ನತ ಶಿಕ್ಷಣವನ್ನು ದಕ್ಕಿಸಿಕೊಳ್ಳುವುದರಲ್ಲಿ, ಬಂಗಾಳವನ್ನು ಬಿಟ್ಟರೆ, ಅತ್ಯಂತ ಕ್ಷಿಪ್ರಗತಿಯಲ್ಲಿ ಮುಂದುವರಿದಿದ್ದಿತು. ಕ್ರಿಶ್ಚಿಯನ್ ಮಿಷನರಿಗಳ ಶೈಕ್ಷಣಿಕ ಚಟುವಟಿಕೆಗೆ ಪ್ರೋತ್ಸಾಹ ನೀಡಿದ ಮೈಸೂರು ೧೮೯೩ರ ನಂತರ ಉನ್ನತ ಶಿಕ್ಷಣಕ್ಕಾಗಿ ಉದಾರವಾಗಿ ಧನಸಹಾಯ ಮಾಡಿತು; ಹಾಗಾಗಿ ಹೆಚ್ಚು ಪ್ರಗತಿಯನ್ನು ನಾವು ಈ ವಲಯದಲ್ಲಿ ಕಾಣುತ್ತೇವೆ. ಶ್ರೀಮಂತ ಜಮೀನುದಾರರು ಅಷ್ಟಾಗಿ ಇಲ್ಲದ ಸಂದರ್ಭದಲ್ಲಿಯೂ ಸಹ ನಗರ ಪ್ರದೇಶಗಳಿಗೆ– ಕೆಲವು ವೇಳೆ ಭೂಮಿ ಕಾಣಿಯನ್ನು ಮಾರಿಕೊಂಡು– ವಲಸೆ ಬಂದ ಬ್ರಾಹ್ಮಣ ಸಮುದಾಯದವರು ಶಿಕ್ಷಣದ ಪ್ರಯೋಜನವನ್ನು ಪಡೆದುಕೊಂಡವರಲ್ಲಿ ಮೊದಲಿಗರಾದರು. ೧೮೯೧ರ ಹೊತ್ತಿಗೆ ಬ್ರಾಹ್ಮಣ ಜನಾಂಗದ ಪುರುಷರಲ್ಲಿ ಶೇಕಡಾ ೬೩.೮ ರಷ್ಟು ಮಂದಿ ಅಕ್ಷರಸ್ಥರಾಗಿದ್ದರು. ಪ್ರೆಸಿಡೆನ್ಸಿಗಳೂ ಸೇರಿದಂತೆ ಇತರೆ ಎಲ್ಲಾ ರಾಜ್ಯಗಳ ಸರಾಸರಿ ಅಕ್ಷರಸ್ಥರನ್ನು ಗಮನಿಸಿ ಹೇಳುವುದಾದರೆ ಮೈಸೂರಿನ ಬ್ರಾಹ್ಮಣ ಪುರುಷ ಅಕ್ಷರಸ್ಥರು ಮೂರನೇ ಸ್ಥಾನದಲ್ಲಿದ್ದರು.[೩೫] ವಾಸ್ತವವಾಗಿ ೧೮೮೫ರ ನಂತರ ಮದರಾಸು ನ್ಯಾಯಶಾಸ್ತ್ರ ವಿದ್ಯಾಲಯಗಳಲ್ಲಿ ವ್ಯಾಸಂಗ ಮಾಡುತ್ತಿದ್ದವರ ಪೈಕಿ ಶೇಕಡಾ ೨೦ ಭಾಗದ ವಿದ್ಯಾರ್ಥಿಗಳು ಮೈಸೂರು ಪ್ರಾಂತ್ಯಕ್ಕೆ ಸೇರಿದವರು.[೩೬]

ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಯಲ್ಲಿ ಉತ್ತರ ಮತ್ತು ದಕ್ಷಿಣದಲ್ಲಿ ಕಂಡುಬರುವ ವ್ಯತ್ಯಾಸಗಳನ್ನು ತಿಳಿಯಲು ನಾವು ಮೇಲೆ ಉಗಮಿಸಿ ಬರುತ್ತಿದ್ದ ಮಧ್ಯಮವರ್ಗವನ್ನು ಗಮನಿಸಬೇಕು– ರಾಜಕಾರಣದಲ್ಲಿಯೂ ಸಹ ಇದು ಬಹು ಪ್ರಧಾನಪಾತ್ರ ವಹಿಸಿತು. ಈ ಮಧ್ಯಮವರ್ಗದವರಲ್ಲಿ ಬೇರೆ ಬೇರೆ ವಲಯಗಳಲ್ಲಿ ಸೇವೆ ಸಲ್ಲಿಸುತ್ತಿದ್ದವರನ್ನು ನಾವು ಕಾಣಬಹುದು. ಉದಾಹರಣೆಗೆ, ವೈದ್ಯ ವೃತ್ತಿ, ಕಾನೂನು, ಇಂಜಿನಿಯರಿಂಗ್, ಪತ್ರಿಕೋದ್ಯಮ, ಬೋಧನೆ ಇತ್ಯಾದಿ. ಈ ಹಿನ್ನಲೆಯಲ್ಲಿ ಸಚಿವ ಸಂಪುಟದ ಸ್ಥಾಯಿ ಸಮಿತಿಯು ೧೮೯೦ರ ದಶಕದಲ್ಲಿ ಇಬ್ಭಾಗವಾಗಲು ಕಾರಣವೇನೆಂಬುದು ಕುತೂಹಲದ ಅಂಶವಾಗಿದೆ. ನಗರ ಪ್ರದೇಶವನ್ನು ಪ್ರತಿನಿಧಿಸುವ ಸದಸ್ಯರು ಇಂಗ್ಲಿಷ್ ಭಾಷೆಯಲ್ಲಿ ಮಾತನಾಡಿದಾಗ ಗ್ರಾಮೀಣ ಪ್ರದೇಶದ ಪ್ರತಿನಿಧಿಗಳು ತಮಗೆ ಅರ್ಥವಾಗುವುದಿಲ್ಲವೆಂದು ಅಹವಾಲು ತೆಗೆದರು, ಮತ್ತು ಆಂಗ್ಲಭಾಷೆ ಮಾತನಾಡುತ್ತಿದ್ದ ಸದಸ್ಯರು ರೈತರ ಸಮಸ್ಯೆಗಳನ್ನು ಗಂಭೀರವಾಗಿ ಪರಿಗಣಿಸುತ್ತಿಲ್ಲವೆಂದೂ ದೂರಿದರು.[೩೭] ಸುಶಿಕ್ಷಿತರಲ್ಲಿ ಬಹುತೇಕ ಮಂದಿ ಬ್ರಾಹ್ಮಣ ಕುಟುಂಬದಿಂದ ಬಂದವರಾಗಿದ್ದರು.

ದಕ್ಷಿಣ ಭಾರತೀಯ ರಾಷ್ಟ್ರವಾದಿ ಚಳವಳಿಯಲ್ಲಿ ಮದರಾಸಿನ ಕೆಲವು ಅಪವಾದವನ್ನು ಬಿಟ್ಟು, ಎದ್ದು ಕಾಣುವ ಒಂದು ಸಂಗತಿಯೆಂದರೆ ಬ್ರಾಹ್ಮಣರು ಇದರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿದ್ದುದು. ಮೈಸೂರು ಸಂಸ್ಥಾನದಲ್ಲಿ ಈ ಅಂಶ ಇನ್ನೂ ಹೆಚ್ಚು ಢಾಳಾಗಿ ಕಾಣುತ್ತದೆ; ಈ ಬ್ರಾಹ್ಮಣ ಸಮುದಾಯದವರು ಮೇಲೆ ಹೆಸರಿಸಿದ ವೃತ್ತಿಗಳಲ್ಲಿ ತೊಡಗಿದ್ದವರು.[೩೮]

ಈ ಸಂಗತಿಗಳಿಂದ ಪ್ರಭಾವಿತರಾಗಿ ಮೈಸೂರಿಗರು ತಮ್ಮ ಅಭೀಷ್ಟಗೆ ಅಭಿವ್ಯಕ್ತಿ ಕೊಡಬೇಕಾದುದು ಅನಿವಾರ್ಯವಾಗಿತ್ತು. ಬ್ರಿಟಿಷ್ ಭಾರತದಲ್ಲಿ ರಾಷ್ಟ್ರವಾದಿಗಳು ಯೂರೋಪಿಯನ್ನರನ್ನು ಬಿಟ್ಟು ದೇಶೀಯರಿಗೆ ಉದ್ಯೋಗ ಕಲ್ಪಿಸಬೇಕೆಂದು ಕರೆಕೊಟ್ಟರೆ, ತಿರುವಾಂಕೂರು ಮತ್ತು ಕೊಚ್ಚಿನ್‌ನಂಥ ಪ್ರಾಂತ್ಯಗಳಲ್ಲಿ ಜನರು 'ಪರಕೀಯರಾದ ಮದ್ರಾಸಿಗಳಿಗೆ' ಬದಲಾಗಿ ತಮ್ಮ ರಾಜ್ಯದವರಿಗೇ ಆದ್ಯತೆ ನೀಡಬೇಕೆಂದು ಆಗ್ರಹಪಡಿಸುತ್ತಿದ್ದರು. ಮೈಸೂರು ಪ್ರಾಂತ್ಯದಲ್ಲಿ ಸುಮಾರು ನಾಲ್ಕು ದಶಕಗಳ ಕಾಲ, ಅಂದರೆ, ೧೮೭೦ರಿಂದ ೧೯೧೦ರ ತನಕ ಈ 'ಪರಕೀಯರ ದಬ್ಬಾಳಿಕೆ' ಯ ವಿರುದ್ಧ ಆರಂಭಿಕ ರಾಷ್ಟ್ರವಾದಿಗಳ ಹೋರಾಟ ನಡೆಯಿತು. ಸರ್ಕಾರದ ಸವಲತ್ತುಗಳನ್ನು ಅನುಭವಿಸುವ ವಿಷಯಕ್ಕೆ ಸಂಬಂಧಿಸಿದಂತೆ ಯೂರೋಪಿಯನ್ನರು ಹಾಗೂ ಮೈಸೂರೇತರರ ನಡುವೆ ಅವರ ದೃಷ್ಟಿಯಲ್ಲಿ ಏನೂ ವ್ಯತ್ಯಾಸ ಕಾಣಿಸಲಿಲ್ಲ.[೩೯] ಮೈಸೂರಿನವರು ಕೆಲವು ಉದ್ಯೋಗಗಳಿಗೆ ಅರ್ಹರಲ್ಲ ಎಂದು ಕಂಡುಬಂದಲ್ಲಿ ಆ ಸ್ಥಾನಗಳಲ್ಲಿ ಯೂರೋಪಿಯನ್ನರನ್ನು ಬೇಕಾದರೆ ನೇಮಿಸಿ ಆದರೆ ಮದರಾಸಿಗರನ್ನು ಮಾತ್ರ ನೇಮಿಸಬೇಡಿ ಎಂದು ಕೂಗೆಬ್ಬಿಸಿದರು.[೪೦]

ಆರಂಭಿಕ ಭಾರತೀಯ ರಾಷ್ಟ್ರವಾದಿಗಳು ಇಂಡಿಯನ್ ಸಿವಿಲ್ ಸರ್ವಿಸ್‌ಗೆ ಏಕಕಾಲಕ್ಕೆ ಪರೀಕ್ಷೆಗಳನ್ನು ನಡೆಸುವುದರ ಬಗ್ಗೆ ತೀವ್ರವಾದ ತಕರಾರು ತೆಗೆದರು, ಸಂದರ್ಭಕ್ಕನುಸಾರವಾಗಿ ಮೈಸೂರಿನವರು ತಮ್ಮ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಿದರು. ಇದರ ಪ್ರಕಾರ 'ಪರಕೀಯ ಮದ್ರಾಸಿಗರು ಭಾರತದ ಶ್ರೀಮಂತಿಕೆಯನ್ನು ಬ್ರಿಟಿಷರು ಕೊಳ್ಳೆ ಹೊಡೆದು ಸಾಗಿಸಲು ಸಹಕಾರಿಯಾಗುತ್ತಿದ್ದಾರೆ' ಎಂದು ಸ್ಪಷ್ಟವಾಗಿ ತಿಳಿಸಿದ್ದರು.[೪೧] ಆದರೆ ಬರೀ ಈ ವಿಚಾರಗಳನ್ನು ಕುರಿತಷ್ಟೇ ಮೈಸೂರಿನ ರಾಷ್ಟ್ರವಾದಿಗಳು ಮಾತನಾಡಿದರೆಂದು ತಿಳಿದರೆ ತಪ್ಪಾದೀತು. ಯೂರೋಪಿಯನ್ನರು ಭಾರತೀಯರನ್ನು ಅಮಾನುಷವಾಗಿ ನಡೆಸಿಕೊಳ್ಳುತ್ತಿರುವುದರ ಬಗ್ಗೆ ಅವರು ಮಾತನಾಡಿದರು, ಬ್ರಿಟಿಷ್ ವಸಾಹತು ರಾಷ್ಟ್ರಗಳಲ್ಲಿ ಭಾರತೀಯರು ಬದುಕುತ್ತಿರುವ ಸ್ಥಿತಿಯ ಬಗ್ಗೆ, ಕಾಂಗ್ರೆಸ್ಸನ್ನು ಬೆಂಬಲಿಸಿದರು, 'ಶಿಕ್ಷಿತವರ್ಗ' ಕಾಂಗ್ರೆಸ್ಸಿಗೆ ಬೆಂಬಲ ನೀಡಬೇಕೆಂದು ಒತ್ತಾಯಿಸಿದರು, ರಾಷ್ಟ್ರವಾದಿ ನಾಯಕರು ದಸ್ತಗಿರಿಯಾಗಿ ಸೆರೆವಾಸ ಅನುಭವಿಸುವಾಗ ಅವರಿಗೆ ಸಹಾನುಭೂತಿ ವ್ಯಕ್ತಪಡಿಸಿದರು; ಸಾಮಾನ್ಯವಾಗಿ ಅವರ ಎಲ್ಲ ಬೇಡಿಕೆಗಳಿಗೂ ಬೆಂಬಲ ಸೂಚಿಸಿದರು.[೪೨] ಆದರೆ ಕೆಲವು ಸಂದರ್ಭಗಳಲ್ಲಿ ಅವರು ಹೊತ್ತ ಹೊಣೆ ಗುರುತರವಾಗಿ ಕೆಲವು ವೇಳೆ ವಿಚಿತ್ರ ಸನ್ನಿವೇಶಗಳಲ್ಲಿ ಅವರು ಸಿಲುಕುವಂತೆ ಆದ ಕಾರಣ ಮೈಸೂರಿನ ಹೊರಗಿನ ರಾಷ್ಟ್ರವಾದಿಗಳಿಗಿಂತ ಭಿನ್ನವಾದ ರೀತಿಯಲ್ಲಿ ಅವರು ಧೋರಣೆ ತಳೆಯುವುದನ್ನು ನಾವು ಕಾಣಬಹುದು. ಪಕ್ಕದ ಮದರಾಸು ಪ್ರೆಸಿಡೆನ್ಸಿಯ ಬ್ರಿಟಿಷ್ ಭಾರತೀಯ ರಾಷ್ಟ್ರವಾದಿಗಳು ದೇಶೀಯ ಸಂಸ್ಥಾನದ ಪ್ರಜೆಗಳು ಇಂಡಿಯನ್ ಇಂಪೀರಿಯಲ್ ಲೆಜಿಸ್ಲೇಟಿವ್ ಕೌನ್ಸಿಲ್ ಸಿವಿಲ್ ಸರ್ವೀಸುಗಳಿಗೆ ಪ್ರವೇಶವಾಗುವುದನ್ನು ವಿರೋಧಿಸಿದರು.[೪೩] ಇಂಥದ್ದನ್ನು ಮೈಸೂರಿಗರು ವಿರೋಧಿಸಿದ್ದು ಸಹಜ.

ಮೈಸೂರಿನ ರಾಷ್ಟ್ರವಾದಿಗಳು (ಸ್ವಲ್ಪ ಮಟ್ಟಿಗೆ ಮದರಾಸು ಮತ್ತು ಬೊಂಬಾಯಿನ ರಾಷ್ಟ್ರವಾದಿಗಳಂತೆಯೇ) ಮೂಲತಃ ಸರ್ಕಾರದ ಪ್ರೋತ್ಸಾಹ ಹಾಗೂ ಸರ್ಕಾರಿ ಅಧಿಕಾರ ಸ್ಥಾನಗಳ ಬಗ್ಗೆ ಮಾತ್ರ ಹೆಚ್ಚು ಆಸಕ್ತಿಯುಳ್ಳವರಾಗಿದ್ದರು. ಭೂಮಿಯಿಂದ ಅವರಿಗೆ ಹೆಚ್ಚು ಲಾಭವಾಗುವ ಸಂಭವ ಇರಲಿಲ್ಲ. ೧೮೮೧ರಿಂದ ಕಾರ್ಯೋನ್ಮುಖವಾಗಿದ್ದ ಪ್ರತಿನಿಧಿ ಸಭೆಯಲ್ಲಾಗಲಿ, ಅವರು ಸಂಪಾದಿಸುತ್ತಿದ್ದ ವೃತ್ತಪತ್ರಿಕೆಗಳಲ್ಲಾಗಲಿ

ಭೂಕಂದಾಯದ ಬಗ್ಗೆ ಎಲ್ಲೂ ಉಲ್ಲೇಖ ಸಿಕ್ಕುವುದಿಲ್ಲ. ಕಳೆದ ಶತಮಾನದ ಕಡೆಯ ವರ್ಷಗಳಲ್ಲಿ ಮಾತ್ರ ರೈತರ ಬೆಂಬಲವನ್ನು ಗಳಿಸಿಕೊಳ್ಳುವ ದೃಷ್ಟಿಯಿಂದ 'ಪರಕೀಯ ಮದ್ರಾಸಿಗಳ'[೪೪] ವಿರುದ್ಧ ಅವರನ್ನು ಹುರಿದುಂಬಿಸುವ ಹುನ್ನಾರ ನಡೆಯಿತು. ಆದರೆ ಇದು ಕೇವಲ ತಾತ್ಕಾಲಿಕ ಪ್ರಯತ್ನವಾಗಿ ಪರಿಣಮಿಸಿತು. ರಾಷ್ಟ್ರವಾದಿಗಳೆಂದು ಕರೆಸಿಕೊಳ್ಳುವವರಿಂದಲೇ ಹೊರತು 'ಮದರಾಸಿಗಳಿಂದ' ತಮಗೆ ಅನ್ಯಾಯವಾಗುತ್ತಿಲ್ಲ ಎಂದು ಗ್ರಾಮೀಣ ಪ್ರದೇಶದ ರೈತರು ತಿಳಿದುಕೊಳ್ಳಲು ಬಹಳ ಸಮಯ ಹಿಡಿಯಲಿಲ್ಲ. ಬ್ರಿಟಿಷ್ ಸಾಮ್ರಾಜ್ಯಶಾಹಿಗಳು ತಮ್ಮ ಲಾಭಕ್ಕೋಸ್ಕರ ಈ ಬೆಳವಣಿಗೆಯನ್ನು ಉಪಯೋಗಿಸಿಕೊಂಡಿದ್ದ ರೀತಿಯಲ್ಲೇ ಮೈಸೂರು ಏಕಾಧಿಪತ್ಯ ಕೂಡ ತನ್ನ ಪಾತ್ರ ವಹಿಸಿತು. ಹಾಗೆ ನೋಡಿದರೆ ಪ್ರಭುತ್ವದ ಅಧಿಕಾರವನ್ನು ನಿಯಂತ್ರಿಸುತ್ತಿದ್ದ ಮೈಸೂರಿನ ಏಕಾಧಿಪತ್ಯವೇ ಎಲ್ಲ ಬೆಳವಣಿಗೆಗಳಿಗೂ ಕಾರಣ ಎನ್ನಬೇಕು. ಪರಸ್ಪರ ಜಗಳವಾಡಿಕೊಳ್ಳುತ್ತಿದ್ದ ಗುಂಪುಗಳು ಸರ್ಕಾರದ ಮಧ್ಯಪ್ರವೇಶವನ್ನು ಕೋರಿ ಅದರ ತೀರ್ಮಾನವನ್ನು ಒಪ್ಪಿಕೊಳ್ಳಲೇಬೇಕಾಗಿತ್ತು.

ಈ ಶತಮಾನದ ಮೊದಲನೆಯ ಮತ್ತು ಎರಡನೆಯ ದಶಕದಲ್ಲಿ ಬೇರೆ ಬೇರೆ ಸಾಮಾಜಿಕ ಹಿನ್ನೆಲೆಯಿದ್ದ ಗುಂಪುಗಳು ಸಂಘರ್ಷದ ಹಾದಿ ಹಿಡಿದುದರ ಪರಿಣಾಮವಾಗಿ ಬ್ರಾಹ್ಮಣರು-ಬ್ರಾಹ್ಮಣೇತರರೆಂಬ ಎರಡು ಬಣಗಳು ನಿರ್ಮಾಣವಾಯಿತು.[೪೫]

ಹಾಗಾದರೆ ಮೈಸೂರಿನ ರಾಷ್ಟ್ರವಾದಿಗಳ ಸ್ಥಿತಿಯೇನಾಯಿತು? ಅವರಲ್ಲನೇಕರು ಜಾತಿವಾದಿಗಳೆಂದು ಹಣೆಪಟ್ಟಿ ಹಚ್ಚಿಕೊಂಡರೆ, ಉಳಿದವರು ಬದಲಾಗುತ್ತಿದ್ದ ಪರಿಸ್ಥಿತಿಯೊಡನೆ ಹೊಂದಾಣಿಕೆ ಮಾಡಿಕೊಂಡರು. ಮಂದಗಾಮಿ ರಾಷ್ಟ್ರವಾದಿ ಧೋರಣೆಯನ್ನು ತಾಳಿದ ಹೊಸ ಗುಂಪು ಆರಂಭಿಕ ರಾಷ್ಟ್ರವಾದಿಗಳಂತೆಯೇ ತನ್ನ ಅನುಕೂಲಕ್ಕಾಗಿ ಸರ್ಕಾರವನ್ನು ಓಲೈಸಿಕೊಳ್ಳಲು ಮುಂದಾದವು, ಕಾಂಗ್ರೆಸ್ಸಿಗೆ ಬೆಂಬಲವಿತ್ತರು, ಹಿಂದು-ಮುಸ್ಲಿಂ ಐಕ್ಯತೆಗಾಗಿ ಮನವಿ ಮಾಡಿದರು, ರಾಜದ್ರೋಹ ಕಾಯಿದೆಯ ವಿರುದ್ಧ ದನಿಯೆತ್ತಿದರು, ಉಗ್ರಗಾಮಿ ನಾಯಕರ ಬಂಧನದ ವಿರುದ್ಧ ಪ್ರತಿಭಟಿಸಿದರು.[೪೬]

ಇಷ್ಟೆಲ್ಲದರ ನಡುವೆ ರಾಷ್ಟ್ರವಾದವೆಂದರೇನು ಎಂಬ ಪ್ರಶ್ನೆ ಉಳಿಯುತ್ತದೆ. ಮೈಸೂರಿಗರ ಚಟುವಟಿಕೆಗಳನ್ನು ರಾಷ್ಟ್ರವಾದಿ ಚಟುವಟಿಕೆಗಳೆಂದು ಕರೆಯಬಹುದೇ? ಹಾಗಿದ್ದರೆ, ಯಾವ ವರ್ಗಕ್ಕೆ ಅದು ಸೇರುತ್ತದೆ? ಇಂಥ ಪ್ರಶ್ನೆಗಳು ಉದ್ಭವವಾಗುತ್ತವೆಯಾದರೂ ಉತ್ತರ ಮಾತ್ರ ಸಿಕ್ಕುವುದಿಲ್ಲ.

ಸುರೇಂದ್ರನಾಥ ಬ್ಯಾನರ್ಜಿಯವರು ಸರಿಯಾಗಿಯೇ ಕರೆದಂತೆ ವಸಾಹತು ಆಡಳಿತದಲ್ಲಿ ಭಾರತವು 'ನಿರ್ಮಾಣವಾಗುತ್ತಿರುವ ರಾಷ್ಟ್ರ' ಸುಶಿಕ್ಷಿತ ಮೇಲ್ವರ್ಗದ ಭಾರತೀಯರು ನಿರ್ಮಾಣವಾಗುತ್ತಿದ್ದ ರಾಷ್ಟ್ರದಲ್ಲಿ ಮಂಚೂಣಿಯಲ್ಲಿದ್ದರು. ಹಾಗೆಯೇ ಪಾಶ್ಚಾತ್ಯ ಪರಿಕಲ್ಪನೆಯ 'ರಾಷ್ಟ್ರವಾದಿ' ಮಾದರಿಯನ್ನು ಅವರು ಸ್ವೀಕರಿಸಿ ಅದರಂತೆಯೇ ಕಾರ್ಯೋನ್ಮುಖರಾಗಿದ್ದರು. ಇದರಲ್ಲಿ ಒಂದು ವ್ಯತ್ಯಾಸವೆಂದರೆ ಆ ತತ್ತ್ವವನ್ನು ಭಾರತೀಯ ಸನ್ನಿವೇಶಕ್ಕೆ ಹೊಂದಿಕೆಯಾಗುವಂತೆ, ಅದರ ಮಿತಿಗಳೊಡನೆ ಅವರು ಅಳವಡಿಸಿಕೊಂಡರು. ತಮ್ಮ ಹೋರಾಟಗಳ ಮೂಲಕ ಅವರು ಗಳಿಸಿಕೊಂಡ ಅನುಭವದ ಆಧಾರದ ಮೇಲೆ ರಾಷ್ಟ್ರವಾದವೆಂದರೇನು ಎಂಬುದನ್ನು ಅವರು ಆವಿಷ್ಕಾರ ಮಾಡಿಕೊಂಡಿದ್ದರು. ಈ ಪರಿಕಲ್ಪನೆ ಬದಲಾಗುತ್ತಾ ಹೋಯಿತು. ಅವರಲ್ಲಿ ಪ್ರತಿಭಾವಂತರಾಗಿದ್ದವರು ಬದಲಾಯಿಸಿಕೊಂಡು ಹೊಂದಿಸಿಕೊಂಡರೆ ಉಳಿದವರು ಸಂಕುಚಿತವಾದ ಇಚ್ಛೆಯುಳ್ಳರಾದ್ದರಿಂದ ತಮ್ಮ ಮುಖಂಡರಕ್ಕೆ ತೋರಿದ ರೀತಿಯ ರಾಷ್ಟ್ರವಾದವನ್ನು ಮಂಡಿಸಲು ಮುಂದಾದರು. ಕೆಲವರು ಧಾರ್ಮಿಕ ರಾಷ್ಟ್ರವಾದವನ್ನು ಮುಂದಿಟ್ಟರೆ, ಇನ್ನು ಕೆಲವರು ಜನಾಂಗೀಯ, ಆರ್ಥಿಕ, ಭಾಷೀಯ

ಚಿಂತನೆಗಳನ್ನು ಮುಂದೊಡ್ಡಿದರು. ಹಾಗಾಗಿ ಭಾರತದಲ್ಲಿ ಅನೇಕ ರಾಷ್ಟ್ರವಾದಿ ಚಿಂತನೆಗಳು ಚಲಾವಣೆಗೆ ಬರುವಂಥ ಸನ್ನಿವೇಶವೇರ್ಪಟ್ಟಿತು.

'ರಾಷ್ಟ್ರವಾದ' ವು ಬದಲಾಗುವ ಒಂದು ತತ್ವವಾಗಿದೆಯಲ್ಲದೆ ಇತಿಹಾಸ ಈ ಅನಿಸಿಕೆಯನ್ನು ಸಾಧಿಸಿ ತೋರಿಸಿದೆ. ಬೇರೆ ಬೇರೆ ರಾಷ್ಟ್ರಗಳಲ್ಲಿ ಬೇರೆ ಬೇರೆ ಆಯಾಮಗಳನ್ನು ಇದು ಪಡೆದು ಕೊಂಡಿದೆಯಲ್ಲದೆ ಒಂದು ರಾಷ್ಟ್ರದ ಒಳಗಡೆಯೇ ಸ್ಥಳೀಯ ಸನ್ನಿವೇಶಕ್ಕನುಗುಣವಾಗಿ ಬದಲಾಯಿಸಿದೆ. ೧೯ನೇ ಶತಮಾನದಲ್ಲಿ ಸಾಮಾನ್ಯವಾಗಿ ಪ್ರಚಲಿತವಿದ್ದ ಸನ್ನಿವೇಶವನ್ನು ಗಣನೆಗೆ ತೆಗೆದುಕೊಳ್ಳುವುದಾದರೆ ಟ್ಯಾಗೋರರು ಹೇಳಿದಂತೆ ಭಾರತವು 'ಅನೇಕ ರಾಷ್ಟ್ರಗಳನ್ನು ಒಂದು ಭೌಗೋಳಿಕ ಪಾತ್ರೆಗೆ ಅಡಕ ಮಾಡಿದ ಹಾಗೆ' ಇದ್ದಿತು; ಹಾಗೆಯೇ ಅದು ಭಾರತ ರಾಷ್ಟ್ರವು ನಿರ್ಮಾಣವಾಗುತ್ತಿದ್ದ ಕಾಲವಾದ್ದರಿಂದ, ಮೈಸೂರಿನ ರಾಷ್ಟ್ರವಾದಿಗಳು ಕಂಡುಕೊಂಡಿದ್ದ ರಾಷ್ಟ್ರವಾದಿ ಪರಿಕಲ್ಪನೆಯು ಒಂದು ಆರಂಭಿಕ ಪ್ರಯತ್ನವೆಂದು ತಿಳಿಯಬೇಕಾಗಿದೆ. ತನ್ನದೇ ಆದ ಸಮಸ್ಯೆಗಳನ್ನು ಎದುರಿಸುತ್ತಿದ್ದ ಮೈಸೂರು ಸಹಜವಾಗಿಯೇ ತನ್ನ ಪರಿಸ್ಥಿತಿಗೆ ಹೊಂದುವ ಕ್ರಮವನ್ನು ಅನುಸರಿಸಬೇಕಾಗಿದ್ದಿತು. ಈ ಹಿನ್ನೆಲೆಯಲ್ಲಿ ನೋಡಿದಾಗ ಮೈಸೂರಿಗರ ಚಟುವಟಿಕೆಗಳು ವಿಶಾಲಾರ್ಥದಲ್ಲಿ ರಾಷ್ಟ್ರವಾದಿಯಾಗಿದ್ದುವೆಂದು ಹೇಳಬಹುದು. ಅವರ ಕ್ರಿಯೆಯಲ್ಲಿ ಸ್ವಾರ್ಥಮೂಲವಾದ ಅಂಶವಿದ್ದುದನ್ನು ನಾವು ಗಣಿಸಬೇಕು; ಏಕೆಂದರೆ ಅವರ ವರ್ತನೆಯು ವಸಾಹತು ಸಂದರ್ಭದಲ್ಲಿ ಸಹಜವಾಗಿ ಕಾಣುತ್ತದೆ, ಮತ್ತು ಅದೆಲ್ಲ ಆರಂಭಿಕ ಪ್ರಯತ್ನವೆನ್ನುವುದನ್ನು ನಾವು ಮರೆಯಬಾರದು. ಆದರೆ ಇಷ್ಟಾಗಿಯೂ ರಾಷ್ಟ್ರದ ಹಿತಚಿಂತನೆಯು ಅವರ ದೃಷ್ಟಿಯಿಂದ ದೂರವಾಗಿರಲಿಲ್ಲ. ಎಂಬುದನ್ನು ನೆನೆಯಬೇಕು. ಈ ಹಿನ್ನೆಲೆಯಲ್ಲಿ ನೋಡಿದಾಗ ಮೈಸೂರಿನ ರಾಷ್ಟ್ರವಾದಿ ಚಟುವಟಿಕೆಯು, ಕ್ಷೇತ್ರೀಯವಾದ ವಿಲಕ್ಷಣತೆಯ ಜೊತೆಯಾಗಿ ಸಮಕಾಲೀನ ರಾಷ್ಟ್ರವಾದಿ ಚಳವಳಿಯನ್ನು ಪ್ರತಿನಿಧಿಸುತ್ತದೆಯೆಂದು ಹೇಳಬಹುದು. ಮದರಾಸಿ–ಮೈಸೂರಿನ ಭಿನ್ನತೆ ಇರಲಿ ಅಥವಾ ಬ್ರಾಹ್ಮಣ–ಬ್ರಾಹ್ಮಣೇತರ ಸಂಘರ್ಷವೇ ಇರಲಿ, ಈ ಹಿನ್ನೆಲೆಯೊಳಗೆಯೇ ಅವುಗಳನ್ನು ವೀಕ್ಷಿಸುತ್ತಾ, ಅವುಗಳಿಗೆ ಸಲ್ಲಬೇಕಾದ ಅರ್ಹ ವಿನಾಯಿತಿಯನ್ನು ಅಗತ್ಯವಾಗಿ ನೀಡಬೇಕು. ಆದರೆ ಅದೇ ರೀತಿಯ ರಾಷ್ಟ್ರವಾದಿ ಚಿಂತನೆಗಳು ಹಾಗೂ ಉಪಕರಣಗಳು ಇಂದಿಗೂ ಪ್ರಸ್ತುತವೆಂದು ನಾವು ತಿಳಿಯಬೇಕಾದ ಅಗತ್ಯವಿಲ್ಲ. ವಸಾಹತು ಸಂದರ್ಭದ ಗತಿತಾರ್ಕಿಕತೆಯಲ್ಲಿ ಮಾತ್ರ ಅವು ಪ್ರಸ್ತುತವಾಗಿ ತೋರುತ್ತವೆ.

**-ಪ್ರೊ. ಎಸ್. ಚಂದ್ರಶೇಖರ್**

## ಟಿಪ್ಪಣಿಗಳು

೧ ದಿವಾಕರ್, ಆರ್.ಆರ್.: ಕಾಂಗ್ರೆಸ್ ಮತ್ತು ಕರ್ನಾಟಕ; ಕರ್ನಾಟಕ ಪರಂಪರೆ, (ಸಂ): ಸಂಪದ್ಗಿರಿ ರಾವ್, ಬೆಂಗಳೂರು, ೧೯೭೦, ಪು. ೪೮೩–೫೦೫

೨ ಹಾಲಪ್ಪ, ಜಿ.ಎಸ್. (ಸಂ): ಹಿಸ್ಟರಿ ಆಫ್ ಫ್ರೀಡಮ್ ಮೂವ್‌ಮೆಂಟ್ ಇನ್ ಕರ್ನಾಟಕ, ಸಂ. ೨, ಬೆಂಗಳೂರು, ೧೯೬೪, ಪು. ೭೧

೩ ವಿವರಗಳಿಗೆ ನೋಡಿ: ಆಲೂರು ವೆಂಕಟರಾವ್: ನನ್ನ ಜೀವನ ಸ್ಮೃತಿಗಳು, ಸಂ. ೧

೪ ಪೂನಾ Executions ನ ವಿಚಾರವನ್ನು ಹೆಚ್ಚು ತಿಳಿಯಲು ನೋಡಿ, ಕರ್ನಾಟಕ ಪ್ರಕಾಶಿಕ, ಬೆಂಗಳೂರು, ೨ ಮೇ ೧೮೯೮

೫ ಕರ್ನಾಟಕ ವೃತ್ತ, ಧಾರವಾಡದ ಸಾಪ್ತಾಹಿಕ, ೫ ಸೆಪ್ಟಂಬರ್ ೧೯೦೫, ೧೦, ೧೭ ಅಕ್ಟೋಬರ್ ೧೯೦೫, ೩ ನವೆಂಬರ್, ೧೨ ಡಿಸೆಂಬರ್ ೧೯೦೫ ಮತ್ತು ೧೯೦೧. ಆರ್.ಎಸ್.ಎನ್.ಪಿ, ನವದೆಹಲಿ

೬ ಅದೇ, ೩ ನವಂಬರ್ ೧೯೦೫
೭ ಅದೇ, ೧೨ನೇ ಡಿಸೆಂಬರ್ ೧೯೦೫ ಮತ್ತು ೯ನೇ ಜನವರಿ ೧೯೦೭
೮ ಅದೇ, ೧೮ನೇ ಆಗಸ್ಟ್ ೧೯೦೮
೯ ದಿವಾಕರ್, ಆರ್.ಆರ್.ಎಸ್.ಪಿ. ೪೮೫
೧೦ ಆಲೂರು ವೆಂಕಟರಾವ್: ನನ್ನ ಜೀವನ ಸ್ಮೃತಿಗಳು, ಸಂ. ೨, ಪು. ೬೪-೬೫
೧೧ ವಿವರಗಳಿಗೆ ನೋಡಿ: ಆಲೂರು ವೆಂಕಟರಾವ್, ಕರ್ನಾಟಕತ್ವದ ಜಾಗೃತಿ, ಧಾರವಾಡ ೧೯೫೬
೧೨ ಬ್ರಿಟಿಷ್ ಕರ್ನಾಟಕದಲ್ಲಿ ಮುಚ್ಚಿಹೋದ ನಾಲ್ಕು ವೃತ್ತಪತ್ರಿಕೆಗಳೆಂದರೆ: ಧಾರವಾಡ ವೃತ್ತ, ರಾಜಹಂಸ, ಚಂದ್ರೋದಯ ಮತ್ತು ಕರ್ನಾಟಕ ವೃತ್ತ
೧೩ ಹಾಲಪ್ಪ, ಜಿ.ಎಸ್.: ಎನ್ ೨, ಪು. ೮೯
೧೪ ಉದಾಹರಣೆಗೆ ನೋಡಿ ಮುಮುಕ್ಷು. ಕನ್ನಡ ಸಾಪ್ತಾಹಿಕ, ೧೨ ಮೇ ೧೯೦೮ in ಆರ್.ಎಸ್.ಎಸ್.ಪಿ. ಜನವರಿ-ಮಾರ್ಚ್ ೧೯೦೮. ಎಸ್.ಎ.ಐ.
೧೫ ವಿವರಗಳಿಗೆ ನೋಡಿ: ಓಮ್‌ವೆಡ್ ಗೇಲ್: ಕಲ್ಚರಲ್ ರಿವೋಲ್ಟ್ ಇನ್ ಎ ಕಲೋನಿಯಲ್ ಸೊಸೈಟಿ, ನಾನ್ ಬ್ರಾಹ್ಮಿನ್ ಮೂವ್‌ಮೆಂಟ್ ಇನ್ ವೆಸ್ಟರ್ನ್ ಇಂಡಿಯಾ, ಬೊಂಬಾಯಿ, ೧೯೮೦
೧೬ ಹಂಡ, ಆರ್.ಎಲ್.: ಹಿಸ್ಟರಿ ಆಫ್ ಫ್ರೀಡಮ್ ಸ್ಟ್ರಗಲ್ ಇನ್ ಪ್ರಿನ್ಸ್‌ಲಿ ಸ್ಟೇಟ್, ನವದೆಹಲಿ, ೧೯೬೮, ಪು. ೧. ಕಾಂಗ್ರೆಸ್ ಪಾರ್ಟಿ ಅಂಡ್ ಪ್ರಿನ್ಸ್‌ಲಿ ಸ್ಟೇಟ್ಸ್, ಗ್ರಂಥ(ಬೊಂಬಾಯಿ ೧೯೮೧)ವನ್ನು ಎಸ್.ಎಚ್. ಪಾಟೀಲರು ಬರೆದಿರುವರಾದರೂ ದೇಶೀಯ ಸಂಸ್ಥಾನಗಳ ಸ್ವಾತಂತ್ರ್ಯ ಚಳವಳಿಯ ಬಗ್ಗೆ ಸಾಮಾನ್ಯ ಮಾಹಿತಿ ಒದಗಿಸುವಂಥ ಗ್ರಂಥ ಇದೊಂದೇ ಎಂದು ಹೇಳಬಹುದು.
೧೭ ನೇರವಾಗಿ ದೇಶೀಯ ರಾಜರ ಮತ್ತು ಪರೋಕ್ಷವಾಗಿ ಬ್ರಿಟಿಷರ ಆಳ್ವಿಕೆಯಲ್ಲಿದ್ದ ಕಾರಣ ದೇಶೀಯ ಸಂಸ್ಥಾನಗಳ ಜನರನ್ನು 'ಇಬ್ಬಗೆಯ ಗುಲಾಮ' ರೆಂದು ವರ್ಗಿಸುವುದು ರೂಢಿಯಾಗಿತ್ತು.
೧೮ ಮದ್ರಾಸ್ ನೇಟಿವ್ ಅಸೋಸಿಯೇಷನ್ ಆಗಲಿ ಅಥವಾ ಮದರಾಸು ಮಹಾಜನ ಸಭಾ ಆಗಲಿ ದಕ್ಷಿಣ ರಾಜ್ಯಗಳ ದೇಶೀಯರ ಸಮಸ್ಯೆಗಳ ಬಗ್ಗೆ ಎಂದೂ ಪ್ರಸ್ತಾಪ ಮಾಡಲಿಲ್ಲ. ಬ್ರಿಟಿಷ್ ಭಾರತದಲ್ಲಿ ಉಳಿದ ಅನೇಕ ಸಾರ್ವಜನಿಕ ಸಂಘಗಳ ನಿಲುವು ಕೂಡ ಇದೇ ಬಗೆಯಾಗಿತ್ತು. ಸಾಮಾನ್ಯ ಮಾಹಿತಿಗಾಗಿ ಅನಿಲ್ ಸೀಲರ ಪುಸ್ತಕ ನೋಡಿ: ದಿ ಎಮರ್ಜೆನ್ಸ್ ಆಫ್ ಇಂಡಿಯನ್ ನ್ಯಾಶನಲಿಸಂ. ಕಾಂಪಿಟೇಶನ್ ಅಂಡ್ ಕೊಲಾಬೊರೇಶನ್ ಇನ್ ಲೇಟರ್ ೧೯ ಸೆಂಚುರಿ, ನವದೆಹಲಿ, ೧೯೬೮, ಹಾಗೂ ಸುಂತರಲಿಂಗಮ್, ಆರ್. ಅವರ ಪೊಲಿಟಿಕ್ಸ್ ಅಂಡ್ ನ್ಯಾನಲಿಸ್ಟ್ ಅವೇಕನಿಂಗ್ ಇನ್ ಸೌತ್ ಇಂಡಿಯಾ ೧೮೫೨-೧೮೯೧ ಜೈಪ್ಪುರ-ದೆಹಲಿ ೧೯೮೦
೧೯ ವಿವರಗಳಿಗಾಗಿ ನೋಡಿ: ಚಂದ್ರಶೇಖರ್, ಎಸ್.: ರಿಫಾರ್ಮ್ ರಿಯಾಕ್ಷನ್ ಅಂಡ್ ರೆಜೀಮ್: ಮೈಸೂರು ೧೮೮೧-೧೯೦೦, ಕ್ಯೂ.ಜೆ.ಎಂ.ಎಸ್. ಸಂ. LCCVI, ಸಂ. ೧-೨, ಪು. ೧೩೧-೧೪೪, ಬೆಂಗಳೂರು, ೧೯೮೫. ಜೊತೆಗೆ, ಜಮುನ, ಎಂ: ಸೋಷಿಯಲ್ ಚೇಂಜ್ ಇನ್ ಮೈಸೂರ್ ವಿತ್ ಸ್ಪೆಷಲ್ ರೆಫರೆನ್ಸ್ ಟು ವಿಮೆನ್: ೧೮೮೧-೧೯೦೦ (ಅಪ್ರಕಟಿತ ಎಂ.ಫಿಲ್. ನಿಬಂಧ).
೨೦ ಡಷ್ಕಿನ್ ಲೀಲಾ: ನಾನ್ ಬ್ರಾಹ್ಮಿನ್ ಮೂವ್‌ಮೆಂಟ್ ಇನ್ ಪ್ರಿನ್ಸ್‌ಲಿ ಮೈಸೂರ್, ಪೆನ್ಸಿಲ್ವೇನಿಯಾ, ೧೯೭೪, ಪು. ೭೫
೨೧ ಬ್ರಿಟಿಷ್ ಭಾರತದ ರಾಷ್ಟ್ರವಾದಿಗಳು, ಭಾರತ ಸ್ವಾತಂತ್ರ್ಯ ಗಳಿಸಿಯಾದ ಬಳಿಕ ದಶಕಗಳ ನಂತರವೂ ಸಾಮಾಜಿಕ ಸುಧಾರಣೆಯ ಬಗ್ಗೆ ಬರೆದವರೂ ಸಹ, ಮೈಸೂರನ್ನು 'ಸಮಾಜ ಸುಧಾರಣೆಯ ಹೊಳೆಯುವ ನಕ್ಷತ್ರ'ವೆಂದು ಕರೆದರು. ಉದಾಹರಣೆಗೆ ನೋಡಿ: ನಟರಾಜನ್, ಎಸ್.: ಎ ಸೆಂಚುರಿ ಆಫ್ ಸೋಶಿಯಲ್ ರಿಫಾರ್ಮ್ ಇನ್ ಇಂಡಿಯಾ; ಬೊಂಬಾಯಿ, ೧೯೫೯
೨೨ ನನ್ನ ಸಹೋದ್ಯೋಗಿ ಅಶ್ವತ್ಥನಾರಾಯಣರು ಈ ಅಂಶವನ್ನು ನನ್ನ ಗಮನಕ್ಕೆ ತಂದದ್ದಕ್ಕಾಗಿ ಅವರಿಗೆ ನಾನು ಆಭಾರಿ.

೨೩ ಮೈಸೂರು ಸರ್ಕಾರವನ್ನು ಸಾಮಾನ್ಯವಾಗಿ ಜನರು ಕೊಂಡಾಡುತ್ತಿದ್ದರು, ಅದನ್ನೊಂದು 'ಮಾದರಿ ರಾಜ್ಯ' ವೆಂದು ಕರೆಯುತ್ತಿದ್ದರು. ಉದಾಹರಣೆಗೆ ನೋಡಿ: ನಗೈ ನೀಲಲೋಚನಿ (ನಾಗ ಪಟ್ಟಣಂನಿಂದ ಪ್ರಕಟವಾಗುವ ಸಾಪ್ತಾಹಿಕ) ೯ ನವೆಂಬರ್ ೧೯೮೧. ದೇಶೀಯ ವೃತ್ತಪತ್ರಿಕೆಗಳ ಬಗ್ಗೆ ವರದಿ (ಇನ್ನು ಮುಂದೆ ಆರ್.ಎನ್.ಎನ್.ಪಿ ಎಂದಾಗುತ್ತದೆ), ಮದರಾಸು, ತಮಿಳುನಾಡು ಪತ್ರಾಗಾರ.

೨೪ ಮಿರ್ಜಾ ಇಸ್ಮಾಯಿಲ್: ರಿಕಲೆಕ್ಷನ್ ಅಂಡ್ ರಿಫ್ಲೆಕ್ಷನ್, ಲಂಡನ್, ೧೯೫೪, ಪು. ೨೨

೨೫ ಹೆಟ್ನೆ ಬ್ಯೂರ್ನ್: ಪೊಲಿಟಿಕಲ್ ಎಕಾನಮಿ ಆಫ್ ಇನ್ಡೈರೆಕ್ಟ್ ರೂಲ್ ಮೈಸೂರು ೧೮೮೧–೧೯೪೭, ನವದೆಹಲಿ, ೧೯೭೮, ಪು. ೧೭೯

೨೬ ವಿವರಗಳಿಗಾಗಿ ನೋಡಿ: ಚಂದ್ರಶೇಖರ್, ಎಸ್.: ಡೈಮೆನ್ಷನ್ಸ್ ಆಫ್ ಸೋಷಿಯೋ ಪೊಲಿಟಿಕಲ್ ಚೇಂಜ್ ಇನ್ ಮೈಸೂರ್: ೧೯೧೮–೧೯೪೦, ನವದೆಹಲಿ, ೧೯೮೫, ಅಧ್ಯಾಯ ೧

೨೭ ೧೮೯೦ರ ದಶಕದ ಆದಿಭಾಗದಲ್ಲಿ, ಪ್ರತಿನಿಧಿ ಸಭೆಯಲ್ಲಿ ಹೆಚ್ಚು ವಾಚಾಳಿಯಾಗಿದ್ದ ಸದಸ್ಯರೆಲ್ಲಾ ಒಟ್ಟಾಗಿ ಒಂದು ಸ್ಥಾಯಿ ಸಮಿತಿಯನ್ನು ರಚಿಸಿಕೊಂಡರು. ಸಭೆಯು ಸಮಾವೇಶಗೊಂಡ ಸಂದರ್ಭದಲ್ಲಿ ಈ ಮಿತಿಯು ಮುಖ್ಯವಾದ ತೀರ್ಮಾನಗಳನ್ನು ತೆಗೆದುಕೊಳ್ಳುವಾಗ ಸರ್ಕಾರವು ತನ್ನೊಡನೆ ಸಮಾಲೋಚಿಸಬಹುದೆಂದು ತಿಳಿಸಿತ್ತು. ದಿವಾನ್ ಶೇಷಾದ್ರಿ ಅಯ್ಯರ್ ಆರಂಭದಲ್ಲಿ ಈ ಸಮಿತಿಗೆ ಪ್ರೋತ್ಸಾಹ ನೀಡಿದರಾದರೂ, ಅವರ ವಿಷಯದಲ್ಲೇ ಸಮಿತಿ ಟೀಕೆ ಮಾಡಲು ಪ್ರಾರಂಭಿಸಿದಾಗ ಪ್ರೋತ್ಸಾಹವನ್ನು ಹಿಂತೆಗೆದುಕೊಂಡರು. ಸಮಿತಿಯ ಅಸ್ತಿತ್ವವೇನಾಯಿತೆಂದು ಪ್ರಶ್ನಿಸಿದಾಗ ಈ ರೀತಿ ಅವರು ಉತ್ತರಿಸಿದರು. ವಿವರಗಳಿಗಾಗಿ ನೋಡಿ: ಮೈಸೂರು ಪ್ರಜಾ ಪ್ರತಿನಿಧಿ ಸಭೆಯ ಕಲಾಪಗಳು, ಈ ವರ್ಷಗಳಿಗೆ, ೧೮೯೦, ಪು. ೧ ಹಾಗೂ ೧೮೯೨ ಮತ್ತು ೧೮೯೩

೨೮ ಕರ್ನಾಟಕ (ಬೆಂಗಳೂರಿನಿಂದ ಪ್ರಕಟವಾಗುತ್ತಿದ್ದ ಇಂಗ್ಲಿಷ್ ಮತ್ತು ದೇಶೀ ಭಾಷೆಯ ಪಾಕ್ಷಿಕ) ೬ ಜನವರಿ ೧೯೧೭. ಇದರ ಸಂಪಾದಕರು ಬೆಂಗಳೂರಿನಲ್ಲಿ ಸಾರ್ವಜನಿಕ ವ್ಯವಹಾರಗಳ ಗೋಖಲೆ ಸಂಸ್ಥೆಯನ್ನು ಸ್ಥಾಪಿಸಿದವರೂ, ಗೋಖಲೆಯವರ ಅನುಯಾಯಿಗಳೂ ಆಗಿದ್ದ ಡಿ.ವಿ. ಗುಂಡಪ್ಪನವರು. ಅನೂಚಾನವಾಗಿ ಹಾಗೂ ೧೯೩೮ರ ವರೆಗೆ ರಾಜ್ಯಗಳಿಗೆ ಸಂಬಂಧಿಸಿದಂತೆ ಇದೆ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನ ನಿಲುವಾಗಿತ್ತು.

೨೯ ರವೀಂದರ್ ಕುಮಾರ್: ಅಕೇಶನಲ್ ರೈಟಿಂಗ್ಸ್ ಆನ್ ಹಿಸ್ಟರಿ ಅಂಡ್ ಸೊಸೈಟಿ; ನ್ಯಾಶನಲಿಸಂ ಅಂಡ್ ಸೋಶಿಯಲ್ ಚೇಂಜ್: ಸಂ. ೩, ನವದೆಹಲಿ, ೧೯೮೩

೩೦ ಭಾರತದ ಜನಗಣತಿ, ಮೈಸೂರು ೧೯೨೧
ಲೀಲಾ ಡಶ್ಕಿನ್: ಉಲ್ಲೇಖಿಸಿದೆ. ೩೮–೪೧, ಹಾಗೂ ಗುಸ್ತಫ್‌ಸನ್, ಡಿ.ಆರ್ : ದಿ ಮೇಕಿಂಗ್ ಆಫ್ ಎ ಮಾಡಲ್ ಸ್ಟೇಟ್, ಮೈಸೂರು ೧೮೮೧–೧೯೦೨; ಅಪ್ರಕಟಿತ ಪಿ.ಎಚ್.ಡಿ. ನಿಬಂಧ– ವಿಸ್ಕಾನ್ಸಿನ್ ವಿಶ್ವವಿದ್ಯಾಲಯ, ೧೯೬೯

೩೧ ವಿವರಗಳಿಗೆ ನೋಡಿ: ನೀಲಮಣಿ ಮುಖರ್ಜಿ: ರೈತ್ವಾರಿ ಸಿಸ್ಟಂ ಇನ್ ಮದ್ರಾಸ್, ಕಲ್ಕತ್ತ, ೧೯೬೨ ಪೀಠಿಕೆ, ಪು. xvi, ಮತ್ತು ಪುಟಗಳು ೨೫೪–೩೧೩, ಜೊತೆಗೆ, ಭಾಟಿಯಾ, ಬಿ.ಎಂ.: ಗ್ರೋಥ್ ಅಂಡ್ ಕಾಂಪೋಸಿಷನ್ ಆಫ್ ಮಿಡ್ಲ್ ಕ್ಲಾಸ್ ಇನ್ ಸೌತ್ ಇಂಡಿಯಾ ಇನ್ ನೈನ್‌ಟೀಂತ್ ಸೆಂಚುರಿ; ೧೯೮೬.

೩೨ ಮೈಸೂರಿನ ಈ ಅಂತರ ಉಂಟಾಗಲು ಕಾರಣಗಳು ಮತ್ತು ಇದರಿಂದ ಆದ ರಾಜಕೀಯ ಬದಲಾವಣೆಯನ್ನು ತಿಳಿಯಲು ನೋಡಿ ಮೇನರ್, ಜೆ.: ಪೊಲಿಟಿಕಲ್ ಚೇಂಜ್ ಇನ್ ಎನ್ ಇಂಡಿಯನ್ ಸ್ಟೇಟ್: ಮೈಸೂರು, ೧೯೧೭–೧೯೫೫, (ನವದೆಹಲಿ ೧೯೭೭). ಆದಾಗ್ಯೂ, ಇದು ಕೇವಲ ಮೈಸೂರಿಗಷ್ಟೇ ಸೀಮಿತವಾದದ್ದಲ್ಲ, ಮದರಾಸು ಪ್ರೆಸಿಡೆನ್ಸಿಯ ದಕ್ಷಿಣ ಮತ್ತು ಪಶ್ಚಿಮದ ಜಿಲ್ಲೆಗಳು ಹಾಗೂ ದಕ್ಷಿಣ ದೇಶೀಯ ಸಂಸ್ಥಾನಗಳು ಇದೇ ಬಗೆಯ ಅನುಭವವನ್ನು ಹೊಂದಿದ್ದವು (ಬೇರೆ ಕಾರಣಗಳಿಗಾಗಿ ಹೈದರಾಬಾದನ್ನು ಬಿಟ್ಟು). ನೋಡಿ: ಭಾಟಿಯಾ, ಬಿ.ಎಂ. ಮತ್ತು ಮುಖರ್ಜಿ, ಎನ್. ಈಗಾಗಲೇ ಉಲ್ಲೇಖಿಸಿದೆ.

೩೩ ವಿಕೋಪಕ್ಕೆ ತುತ್ತಾದ ಸಂದರ್ಭಗಳಲ್ಲೆಲ್ಲ ಅಂಗಡಿ ಲೂಟಿ ಇತ್ಯಾದಿ ವಿಧ್ವಂಸಕ ಕೃತ್ಯಗಳಿಗೆ ಅವರು ಇಳಿದಿದ್ದರಿಂದ ಅವರ ನಡತೆಯನ್ನು 'ಅಪರಾಧ' ವೆಂದು ಕರೆದು ಬಗ್ಗು ಬಡಿಯಲಾಯಿತು. ಉದಾಹರಣೆಗೆ ನೋಡಿ: ಆರ್.ಎನ್.ಎನ್.ಪಿ, ೧೮೭೬–೭೮ ಮತ್ತು ೧೯೧೮–೧೯

೩೪ ಡಶ್ಕಿನ್, ಎಲ್.: ಉಲ್ಲೇಖಿಸಿದೆ. ಪು. ೫೮

೩೫ ಸತಿಯಾನಾಥನ್, ಎಸ್.: ಹಿಸ್ಟರಿ ಆಫ್ ಎಜುಕೇಶನ್ ಇನ್ ಮದ್ರಾಸ್ ಸ್ಟೇಟ್, ೧೮೯೪, ಪು. ೩

೩೬ ದ ಹಿಂದು, ೧೮ ಮಾರ್ಚ್ ೧೮೮೨

೩೭ ಗುಸ್ತಾಫ್‌ಸನ್, ಡಿ.ಆರ್. ಅವರು ಪ್ರತಿನಿಧಿ ಸಭೆಯ ಮೇಲಿನ ಅಧ್ಯಾಯದಲ್ಲಿ ಈ ವಿಷಯದ ಬಗ್ಗೆ ಚೆನ್ನಾಗಿ ಚರ್ಚಿಸಿದ್ದಾರೆ.

೩೮ 'ಬ್ರಾಹ್ಮಣರು ಮತ್ತು ಗೋವು' ಗಳನ್ನು ಬಿಟ್ಟು ಸರ್ಕಾರವು ಉಳಿದೆಲ್ಲರಿಗ ಸಹಕಾರಿಯಾಗಿದೆ ಎಂದು ಒಂದು ರಾಷ್ಟ್ರವಾದಿ ಪತ್ರಿಕೆ ಬರೆದದ್ದು ಕುತೂಹಲಕರವಾಗಿದೆ. ವೃತ್ತಾಂತ ಬೋಧಿನಿ, ೩ ಮಾರ್ಚ್ ೧೮೯೧ (ಆರ್.ಎನ್.ಎನ್.ಪಿ). ಇನ್ನೊಂದು ಪತ್ರಿಕೆ ಬರೆಯಿತು, ಇಂಗ್ಲಿಷ್ ಶಿಕ್ಷಣ ಮತ್ತು ಇಂಗ್ಲಿಷ್ ನಾಗರೀಕತೆಯು ಮಧ್ಯಮ ವರ್ಗಗಳ ನಿರೀಕ್ಷೆಗಳನ್ನು ಹೆಚ್ಚಿಸಿದೆ. ಇಂಗ್ಲೀಷ್ ಶಿಕ್ಷಣದ ಮೂಲಕ ಬಿ.ಎ. ಮತ್ತು ಎಂ.ಎ. ಪದವಿ ಪಡೆಯುವವರು ಸರ್ಕಾರಿ ಉದ್ಯೋಗಗಳನ್ನು ಪಡೆಯುವಲ್ಲಿ ತೃಪ್ತರಾಗುತ್ತಾರೆ – ರೂ. ೪೦/– ಮತ್ತು ರೂ. ೩೦/– ಪಗಾರ ಸಿಕ್ಕರೆ ಸಾಕು, ಇದಕ್ಕೆ ಸರಳವಾದ ಕಾರಣವೆಂದರೆ ಅವರಿಗೆ ಬೇರೆ ಯಾವುದೇ ಉದ್ಯೋಗವನ್ನು ಮಾಡಲು ಬರುವುದಿಲ್ಲ. ಕೆಳವರ್ಗದವರು ಒಂದು ದಿನಕ್ಕೆ ಕೇವಲ ಒಂದು ಹೊತ್ತು ಊಟ ಮಾಡಿ ಬದುಕುತ್ತಿದ್ದಾರೆನ್ನುವುದು ಎಲ್ಲರಿಗ ತಿಳಿದಿದೆಯಾದರೂ ಮಧ್ಯಮ ವರ್ಗದವರೂ ಸರಿಯಾದ ಉದ್ಯೋಗ ಸಿಗದ ಕಾರಣ ತೊಳಲಾಡುತ್ತಿದ್ದಾರೆ ಎಂಬುದು ಜನಜನಿತವಾದ ವಿಷಯ. ಹಾಗಾಗಿ ಸರ್ಕಾರಿ ಸೇವೆಯನ್ನು ಬಿಟ್ಟು ಜೀವನೋಪಾಯಕ್ಕಾಗಿ ಬೇರೆ ಏನೂ ಉದ್ಯೋಗ ಮಾಡಲರಿಯದ ಸುಶಿಕ್ಷಿತ ನಿರುದ್ಯೋಗಿ ಅಥವಾ ಅರೆ– ಉದ್ಯೋಗಿಗಳನ್ನು ಮಧ್ಯಮ ವರ್ಗದವರೆಂದು ನಿರೂಪಿಸಬಹುದು. ಆ ಕಾಲದಲ್ಲಿನ ತಿಳಿವಳಿಕೆ ಇದಾಗಿತ್ತು. ವಿವರಗಳಿಗೆ ನೋಡಿ: ವೃತ್ತಾಂತ ಚಿಂತಾಮಣಿ, ೪ ಸೆಪ್ಟಂಬರ್ ೧೮೯೫

೩೯ ೧೯೧೦ರ ತನಕ ಸರ್ವೇ ಸಾಮಾನ್ಯವಾಗಿ ಎಲ್ಲ ಮೈಸೂರು ಪ್ರಾಂತ್ಯದ ಪತ್ರಿಕೆಗಳು ಹೊರಗಿನ ಮದ್ರಾಸಿಗರ ದಬ್ಬಾಳಿಕೆಯ ವಿರುದ್ಧ ಕಟುಟೀಕೆ ಮಾಡುತ್ತಿದ್ದುವೆಂದು ಹೇಳಿದರೆ ಉತ್ಪ್ರೇಕ್ಷೆಯಾಗಲಾರದು. ಅಂಥ ಬರವಣಿಗೆಯ ಕಟುವಾದ ಮಾದರಿಗಾಗಿ ನೋಡಿ: ಸರ್ವೋದಯ, ೨೫ ಜೂನ್ ೧೯೮೭. ಕರ್ನಾಟಕ ಪ್ರಕಾಶಿಕ, ೧೮೮೩–೧೮೯೪, ಹಾಗೂ ಗುಸ್ತಾಫ್‌ಸನ್, ಡಿ.ಆರ್. ಉಲ್ಲೇಖಿಸಿದೆ, ವಿಶೇಷವಾಗಿ, ಮದ್ರಾಸಿಗಳು ಮತ್ತು ಮೈಸೂರಿಗರು ಎಂಬ ಅಧ್ಯಾಯ.

೪೦ ಅಕ್ಟೋಬರ್ ೧೮೮೯ರಲ್ಲಿ ಮೈಸೂರಿನಲ್ಲಿ ರೆಸಿಡೆಂಟರನ್ನು ಭೇಟಿಯಾಗಿದ್ದ ನಿಯೋಗದ ಬೇಡಿಕೆ ಇದು. ೪ ಅಕ್ಟೋಬರ್ ೧೮೮೩ರ ದ ಹಿಂದು ಪತ್ರಿಕೆಯಲ್ಲಿ ಇದು ವರದಿಯಾಗಿದೆ.

೪೧ ಕರ್ನಾಟಕ ಪ್ರಕಾಶಿಕ, ಮೇ ೧೮೮೬ರ ಎರಡನೇ ವಾರ. ಹೆಚ್ಚಿನ ವಿವರಗಳಿಗೆ ನೋಡಿ: ಚಂದ್ರಶೇಖರ್, ಎಸ್.: ಎಮರ್ಜೆನ್ಸ್ ಆಫ್ ನೇಟಿವ್ ಪೊಲಿಟಿಕ್ಸ್, ಮೈಸೂರು, ೧೮೮೧–೧೯೨೦, ಕ್ಯು.ಜೆ.ಎಂ.ಎಸ್. ಸಂ. LXXXIV, ಏಪ್ರಿಲ್–ಜೂನ್ ೧೯೮೩, ಸಂಚಿಕೆ. ೨, ಪು. ೧೨೮–೧೪೮

೪೨ ಕರ್ನಾಟಕ ಪ್ರಕಾಶಿಕ, ೪ ಜನವರಿ ೧೮೯೩, ೨೫ ಜುಲೈ ೧೮೯೨, ೧೨ ಸೆಪ್ಟಂಬರ್ ೧೮೯೨, ೬ ಸೆಪ್ಟಂಬರ್ ೧೮೯೪, ೩ ಅಕ್ಟೋಬರ್ ೧೯೦೨, ೨೭ ಜುಲೈ ೧೮೯೬, ೨೨ ಜೂನ್ ೧೮೯೭, ೨೦ ಜನವರಿ ೧೮೯೬, ೧೬ ಡಿಸೆಂಬರ್ ೧೮೯೫ ಇತ್ಯಾದಿ. ೩೦ ಅಕ್ಟೋಬರ್ ೧೮೯೮, ೧೨ ಸೆಪ್ಟೆಂಬರ್ ೧೮೯೮.

೪೩ ಸ್ವದೇಶ ಮಿತ್ರನ್, ೬ ಮತ್ತು ೨೬ನೇ ಜೂನ್ ೧೯೧೬, ಹಾಗೂ ವೆಸ್ಟ್‌ಕೋಸ್ಟ್ ಸ್ಪೆಕ್ಟೇಟರ್, ೨೨ ಜನವರಿ ೧೯೧೩. ಉಗ್ರವಾದಿ ಹಾಗೂ ಮುಂದಗಾಮಿ ರಾಷ್ಟ್ರವಾದವನ್ನು ಪ್ರತಿನಿಧಿಸುವ ರಾಷ್ಟ್ರವಾದಿ ಪತ್ರಿಕೆಗಳಿವು. ದೇಶೀಯ ಪ್ರಜೆಗಳು ಭಾರತ ಸರ್ಕಾರಿ ಸೇವೆಗೆ ಪ್ರವೇಶಿಸುವುದನ್ನು ವಿರೋಧಿಸಿದ ಈ ಪತ್ರಿಕೆಗಳು ಅದಕ್ಕೆ ನೀಡಿದ ಕಾರಣವೆಂದರೆ, ಸಂಸ್ಥಾನಿಗರು ದೇಶಿ ಸಂಸ್ಥಾನಗಳಲ್ಲಿ ಬ್ರಿಟಿಷ್ ಭಾರತದ ಪ್ರಜೆಗಳ ಪ್ರವೇಶವನ್ನು ವಿರೋಧಿಸುತ್ತಾರೆನ್ನುವುದು.

೪೪ ವಿವರಗಳಿಗಾಗಿ ನೋಡಿ: ಚಂದ್ರಶೇಖರ್, ಎಸ್.: ಸಂ. ೧೧, ಅಧ್ಯಾಯ ೧

೪೫ ನೋಡಿ: ಡಷ್ಕಿನ್, ಎಲ್. ಉಲ್ಲೇಖಿಸಿದೆ. ಮೇನರ್, ಜೆ., ಚಂದ್ರಶೇಖರ್, ಎಸ್. ಮತ್ತು ಹೆಟ್ನೆ, ಬಿ. ಉಲ್ಲೇಖಿಸಿದೆ.

೪೬ ನೋಡಿ: ಮೈಸೂರ್ ಸ್ಟಾರ್, ೧೫ ಜೂನ್ ೧೯೦೮, ೧೫ ಜನವರಿ ೧೯೧೪, ೧೨ ಆಗಸ್ಟ್ ೧೯೧೨. ಒಕ್ಕಲಿಗರ ಪತ್ರಿಕೆ, ೭ ಜನವರಿ ೧೯೧೪. ಹೊಸದಾಗಿ ಮೇಲೆ ಬರುತ್ತಿದ್ದ ಶಕ್ತಿಗಳ ಅಂದರೆ ಬ್ರಾಹ್ಮಣೇತರರ, ಮುಖವಾಣಿಯಾಗಿ ಈ ಎರಡು ಪತ್ರಿಕೆಗಳು ಪ್ರಕಟವಾಗುತ್ತಿದ್ದವು.

ಅಧ್ಯಾಯ : ಐದು

# ಸಾಹಿತ್ಯ ಮತ್ತು ರಾಷ್ಟ್ರವಾದ : ಕನ್ನಡ ಸಾಹಿತ್ಯದಲ್ಲಿ ಕಂಡಂತೆ

ಗತಕಾಲದ ಘಟನೆಗಳನ್ನೆಲ್ಲ ಸಾಹಿತ್ಯ ಒಳಗೊಂಡಿರುತ್ತದೆಯೆಂದು ಹೇಳಿದರೆ ಉತ್ಪ್ರೇಕ್ಷೆಯಾಗದು; ವರ್ತಮಾನದ ಸಂದರ್ಭದಲ್ಲಿ ಗತಕಾಲದ ಚಿತ್ರವನ್ನು ಕಟ್ಟಿಕೊಡುವ ಸೃಜನಾತ್ಮಕ ಮನಸ್ಸು ಭವಿಷ್ಯದ ಬಗ್ಗೆ ದಿಕ್ಸೂಚಿಯಾಗಿಯೂ ಕೆಲಸ ನಿರ್ವಹಿಸುತ್ತದೆ.

ಸಾಹಿತ್ಯ ಮತ್ತು ಇತರ ಸಮಾಜ ವಿಜ್ಞಾನಗಳ ನಡುವೆ ಗೆರೆಯೇ ಇಲ್ಲದಂಥ ಸಂದರ್ಭ ಒಂದು ಕಾಲದಲ್ಲಿತ್ತು. ಅದು ಎಲ್ಲ ಕಾಲಕ್ಕೂ ಸಲ್ಲುವ ಆದರ್ಶವೆಂದು ತಿಳಿಯಬೇಕಾಗಿಲ್ಲ. ಆದಾಗ್ಯೂ ಚರಿತ್ರೆಯ ಪುನರ್ನಿರ್ಮಾಣಕ್ಕೆ, ಅದರಲ್ಲೂ, ಕ್ರಿ.ಶ. ೧೮೦೦ರ ವರೆಗಿನ ದಕ್ಷಿಣ ಭಾರತೀಯ ಇತಿಹಾಸವನ್ನು ಅರಿಯಲು ಇಂದಿಗೂ ಸಾಹಿತ್ಯದ ಬೇರೆ ಬೇರೆ ಪ್ರಕಾರವೇ ಮೂಲವಾಗಿರುವುದು ಸರ್ವವಿದಿತವಾಗಿದೆ. ಆಧುನಿಕ ಭಾರತದ ಚರಿತ್ರೆಯತ್ತ ಒಂದು ನೋಟ ಬೀರಿದರೆ ವ್ಯತ್ಯಾಸ ಗೊತ್ತಾಗುತ್ತದೆ; ಆದರೂ ಎಲ್ಲಿಯೂ ಕೂಡ ಚರಿತ್ರೆಗೆ ಸಾಹಿತ್ಯ ಮೂಲವಾಗಿರುವ ಸಂಗತಿ ದಾಖಲಾಗಿಲ್ಲ. ಚರಿತ್ರೆಗೆ ಆಕರವಾಗಿ ಸಾಹಿತ್ಯ ಕೃತಿಗಳು ತಮ್ಮ ಪ್ರಾಮುಖ್ಯತೆಯನ್ನು ಕಳೆದುಕೊಂಡಿವೆ ಎಂಬುದು ಇದರ ಅರ್ಥವಲ್ಲ.[೧] ಆದರೆ ಆಧುನಿಕ ಇತಿಹಾಸಕಾರ ಸಾಹಿತ್ಯ ಕೃತಿಗಳನ್ನು ಉಪಯೋಗಿಸಿ ಕೊಳ್ಳಲು ಅಷ್ಟು ಉತ್ಸಾಹ ತೋರುವಂತೆ ಕಾಣುವುದಿಲ್ಲ.

ಪ್ರಾಚೀನ ಮತ್ತು ಮಧ್ಯಯುಗೀನ ಇತಿಹಾಸ ರಚನೆಗೆ ಲೇಖಕರು ಸಾಹಿತ್ಯವನ್ನು ಮುಖ್ಯ ಆಕರವನ್ನಾಗಿ ಬಳಸಿಕೊಂಡಂತೆಯೇ ಆಧುನಿಕ ಇತಿಹಾಸದ ರಚನೆಗೂ ಸಾಹಿತ್ಯವನ್ನು ಬಳಸಿಕೊಳ್ಳಬಹುದಾಗಿದೆ. ಸಮಕಾಲೀನ ಸಮಾಜದ ಸಮಾಜಿಕ-ರಾಜಕೀಯ ಘಟನೆಗಳು ಮತ್ತು ಬದಲಾವಣೆಗಳ ಸೂಕ್ಷ್ಮವೂ, ಉತ್ತಮವೂ ಆದ ಪ್ರತಿಫಲನೆಗಾಗಿ ಸಾಹಿತ್ಯ ಕೃತಿಗಳ ಕಡೆ ಗಮನ ಹರಿಸಬೇಕಾದುದು ಇಂದಿಗೂ ಅತ್ಯಗತ್ಯವಾಗಿದೆ.

ರಾಷ್ಟ್ರವಾದ ಮತ್ತು ಸಾಹಿತ್ಯ ಪರಸ್ಪರ ಪ್ರಭಾವ ಬೀರುತ್ತಾ ದೃಢವಾಗುತ್ತಾ ಹೋದವು ಎಂಬ ಸಂಗತಿಯನ್ನು ದಾಖಲಿಸಲು ಪ್ರಸ್ತುತ ಪ್ರಬಂಧ ಪ್ರಯತ್ನಿಸುತ್ತದೆ. ಆಧುನಿಕ ಭಾರತದಲ್ಲಿ ಭಿನ್ನ ಭಿನ್ನ ಸಂಸ್ಕೃತಿಗಳ ನಡುವಿನ ಸಂಘರ್ಷವನ್ನು ಪ್ರಾಯಶಃ ಸಾಹಿತಿಗಳಷ್ಟು ಸಮರ್ಪಕವಾಗಿ ಬೇರೆ ವರ್ಗದ ಜನರು ಪಡಿಮೂಡಿಸಿಲ್ಲವೆಂದು ಹೇಳಬಹುದಾಗಿದೆ. ಜಾನಪದ ಮತ್ತು ಅನುಭಾವೀ ಪರಂಪರೆಯ ಮೇಲೆ ವಸಾಹತುಶಾಹಿ ಮತ್ತು ರಾಷ್ಟ್ರವಾದ ಏನು ಪರಿಣಾಮ ಉಂಟುಮಾಡಿದುವು ಎಂಬುದನ್ನು ಈ ಲೇಖನ ಹೆಚ್ಚು ತಿಳಿಸದಿದ್ದರೂ ಅಲ್ಲಿ ಇಲ್ಲಿ ಅದರ ಪ್ರಸ್ತಾಪ ಮಾಡಿದ್ದೇವೆ. ಹಾಗಾಗಿ ಈ ಚರ್ಚೆಯ ಕೇಂದ್ರದಲ್ಲಿ 'ಸುಶಿಕ್ಷಿತ' ಬರಹಗಾರರು ಅಂದರೆ ಇಂಗ್ಲೀಷ್ ಶಿಕ್ಷಣ ಪಡೆದ ಲೇಖಕರ ಬರಹಗಳನ್ನು ಹೆಚ್ಚು ಬಳಸಿಕೊಳ್ಳಲಾಗಿದೆ.

ಇಂಗ್ಲಿಷ್ ಶಿಕ್ಷಣದ ಲಾಭ ಗಳಿಸಿದವರು ಮೇಲ್ಜಾತಿ ಮಧ್ಯಮವರ್ಗದವರು ಎಂಬುದು ಎಲ್ಲರಿಗೂ ತಿಳಿದಿದೆ. ಉಗಮವಾಗುತ್ತಿದ್ದ ಸಾಮಾಜಿಕ ಪುನರುತ್ಥಾನ ರೀತಿಯನ್ನು ಈ ವರ್ಗದವರ ಭಾವನೆಗಳು ಪ್ರಕಟಿಸಿದವು. ರಾಷ್ಟ್ರೀಯ ರಾಜಕಾರಣದಲ್ಲಿ ಪ್ರಭಾವಶಾಲಿಯಾಗಿದ್ದ ವರ್ಗವೂ ಇದೇ. ಇವರ ಸಾಹಿತ್ಯ ಚಟುವಟಿಕೆಗಳಿಗೂ ರಾಜಕೀಯ ಚಿಂತನೆಗಳಿಗೂ ನೇರವಾದ ಸಂಬಂಧವಿರುವುದನ್ನು ಕಾಣಬಹುದಾಗಿದೆ.

ರಾಜಕೀಯ ರಾಷ್ಟ್ರವಾದಿ ಭಾರತದಲ್ಲಿದ್ದಂತೆಯೇ ಆಧುನಿಕ ಭಾರತೀಯ ಸಾಹಿತ್ಯವು ಸೃಜನಾತ್ಮಕ ಮನಸ್ಸಿನೊಳಗಿನ ಪರಸ್ಪರ ವಿರೋಧಾತ್ಮಕವಾದ ಧೋರಣೆಗಳ ಫಲಿತವಾಗಿದೆ. ಅಂದರೆ, ಭಾರತೀಯ ರಾಜಕೀಯ ಪದ್ಧತಿ ಮತ್ತು ಸಾಹಿತ್ಯ ತಮ್ಮ ಸಮೃದ್ಧಿ ಸಾಧನೆಗಾಗಿ ಪಾಶ್ಚಾತ್ಯ- ವಸಾಹತು ಸಂಬಂಧಗಳ ಮೇಲೆ ತುಂಬಾ ಅವಲಂಬಿಸಿದವು. ರಾಜಕೀಯ ರಾಷ್ಟ್ರವಾದಿಗಳು ಸಂಪೂರ್ಣವಾಗಿ ಪಾಶ್ಚಾತ್ಯ ಚಿಂತನೆಗಳಿಗೆ ಪಕ್ಕಾಗಿ ಹೋಗದಂತೆ ತಮ್ಮನ್ನು ತಾವು ಕಾಪಾಡಿಕೊಂಡ ರೀತಿಯಲ್ಲೇ ಸಾಹಿತಿಗಳೂ ಸಹ ವಸಾಹತುಶಾಹಿ ಹಾಗೂ ಪಾಶ್ಚಾತ್ಯ ಸಂಸ್ಕೃತಿಯ ಬಗ್ಗೆ ಬಹಳ ಎಚ್ಚರಿಕೆ ವಹಿಸಿದ್ದರು.

ಭಾರತೀಯ ರಾಷ್ಟ್ರವೊಂದು ನಿರ್ಮಾಣವಾಗುತ್ತಿದ್ದ ಹಾಗೆಯೇ ಆಧುನಿಕ ಸಾಹಿತ್ಯವೂ ಕೂಡ ರೂಪುಗೊಳ್ಳುತ್ತಿತ್ತು. ವಸಾಹತು ಸಂದರ್ಭದೊಳಗಡೆಯೇ ಅವಮಾನದ ವಿರುದ್ಧ ಪ್ರತಿಭಟಿಸುವ ರಾಜಕೀಯ-ರಾಷ್ಟ್ರವಾದೀ ಮಾರ್ಗಗಳು ತಲೆಯೆತ್ತುತ್ತಿದ್ದಂತೆಯೇ ವಸಾಹತು ಸಂಪರ್ಕ ಮತ್ತು ಅನುಭವದ ಪರಿಣಾಮವಾಗಿ ಸಾಹಿತ್ಯಕವಾಗಿ ಪ್ರತಿಭಟಿಸುವ ಮಾದರಿಗಳು ಗೋಚರವಾಗತೊಡಗಿದವು. ಹಳೆಯ ಅನುಭಾವೀ ಜಾಡಿನಿಂದ ಬಿಡಿಸಿಕೊಂಡು ಪ್ರತಿಭಟನೆಯ ಹೊಸ ತಂತ್ರಗಳು ಬದಲಾದ ಸನ್ನಿವೇಶದಲ್ಲಿ ಸಿದ್ಧವಾದವು. ಭಾರತೀಯ ಸಾಹಿತ್ಯ ಪುನರುತ್ಥಾನದ ಸಂದರ್ಭದಲ್ಲಿ ಭಿನ್ನ ಭಿನ್ನ ಪ್ರಾದೇಶಿಕ ಮಾದರಿಗಳು ಹುಟ್ಟಿಕೊಂಡಿದ್ದನ್ನೂ ಸಹ ನಾವು ಗಮನಿಸಬೇಕು.

ಸ್ಥಳೀಯ ಘಟನೆಗಳಿಂದ ಪ್ರೇರಿತರಾಗಿ ಬೇರೆ ಬೇರೆ ಭಾಷೆಗಳು ಮತ್ತು ಆ ಭಾಷೆಗಳ ಸಾಹಿತಿಗಳು ತಮ್ಮ ದರ್ಶನ ಮತ್ತು ಅನುಭವಗಳಿಗೆ ಅಭಿವ್ಯಕ್ತಿ ನೀಡಿದರು. ಪ್ರಾದೇಶಿಕ ವೈಶಿಷ್ಟ್ಯತೆ ಮತ್ತು ಸಂಸ್ಕೃತಿಗಳ ಪ್ರತಿಫಲನವನ್ನು ಈ ಕೃತಿಗಳಲ್ಲಿ ನಾವು ಕಾಣಬಹುದು. ರಾಷ್ಟ್ರವಾದಿ ನಾಯಕರು ನಮ್ಮ ಭಾರತದಲ್ಲಿ ಅನೇಕ ರಾಷ್ಟ್ರಗಳ ಸಂಯುಕ್ತವೇ ಅಸ್ತಿತ್ವದಲ್ಲಿರುವುದರಿಂದ ಯಾವ ಒಂದು ಭಾಷೆ ಅಥವಾ ಒಂದು ಸಂಸ್ಕೃತಿ ಇನ್ನೊಂದರ ಮೇಲೆ ದಬ್ಬಾಳಿಕೆ ಮಾಡಬಾರದೆಂದು ಸ್ಪಷ್ಟವಾಗಿ ತಿಳಿದಿದ್ದರು.

ಈ ಬಗೆಯ ವೈವಿಧ್ಯ ಮತ್ತು ರಚನಾತ್ಮಕ ಬೆಳವಣಿಗೆಯನ್ನು ಗಮನದಲ್ಲಿರಿಸಿಕೊಂಡು ರಾಷ್ಟ್ರ ನಿರ್ಮಾಣ ಮಾಡಬೇಕೆಂದು ಅವರ ಗುರಿಯಾಗಿತ್ತು. ಭಾರತೀಯ ಪುನರುತ್ಥಾನದ ಉಗಮವನ್ನು ಭಾರತವು ಪಾಶ್ಚಾತ್ಯ ಸಂಸ್ಕೃತಿಯೊಡನೆ ನಡೆಸಿದ ಸಂಘರ್ಷದಲ್ಲಿ ಗುರುತಿಸಬೇಕಾಗಿದೆ; ಭಾರತೀಯ ರಾಷ್ಟ್ರವಾದ ಮತ್ತು ಇಂಗ್ಲಿಷ್ ವಸಾಹತುಶಾಹಿಯ ಪರಸ್ಪರ ವಿರೋಧವಾದ ಧೋರಣೆಯಲ್ಲಿ ಇದು ಪ್ರಕಟವಾಗುತ್ತದೆ. ಸಾಂಸ್ಕೃತಿಕ ಸಂಘರ್ಷವಿದ್ದಿತೆಂದು ಈಗಾಗಲೇ ಒಪ್ಪಿಕೊಂಡಿರುವೆವಾದರೂ, ಸಾಹಿತ್ಯಕ ಪುನರುತ್ಥಾನವನ್ನು ಎರಡು ಸಾಹಿತ್ಯಗಳ ಸಂಘರ್ಷದ ಸಂದರ್ಭದಲ್ಲಿ ಕಾಣಲು ಸಾಧ್ಯವೆ ಎಂಬುದು ಸಂಶಯಾಸ್ಪದವಾಗಿದೆ. ಈ ಶಂಕೆಯನ್ನು ದೂರಮಾಡಲೆಂಬಂತೆ ಹೊಸ ಸಾಹಿತ್ಯ ಪುನರುತ್ಥಾನವು ಇಂಗ್ಲಿಷ್ ಸಾಹಿತ್ಯ ಕೃತಿಗಳನ್ನು ಪ್ರಾದೇಶಿಕ ಭಾಷೆಗಳಿಗೆ ಭಾಷಾಂತರ ಮಾಡಿಕೊಂಡಿತು ಇಲ್ಲವೇ ರೂಪಾಂತರಿಸಿತು. ಊಳಿಗಮಾನ್ಯ ಪದ್ಧತಿ ಇದ್ದ ರಾಜ್ಯಗಳಲ್ಲಿ ರಾಜಕೀಯವಾಗಿ ಹಳೆಯ ಮಾದರಿಯೇ ಮುಂದುವರಿದ ರೀತಿಯಲ್ಲಿ ೧೯ನೇ ಶತಮಾನದಲ್ಲಿ ಸಾಹಿತ್ಯಕವಾಗಿಯೂ ಹಳೆಯ ಮಾದರಿಗಳು ಮುಂದುವರಿದಿದ್ದವು. ಇವೆಲ್ಲವರ ನಡುವೆ

ಉದಾರವಾದಿ ಬರಹಗಳ ಪರಿಚಯವೂ ಜನರಿಗೆ ಆಗಿತ್ತು. ಉದಾಹರಣೆ ಮಿಲ್, ಬೆಂಥಮ್, ವಾಲ್ಟೇರ್, ರೂಸೋ ಮತ್ತಿತರರ ಬರವಣಿಗೆಗಳ ಓದಿನ ಪರಿಣಾಮವಾಗಿ ಪ್ರಜಾಪ್ರಭುತ್ವದ ಬಗ್ಗೆ ಹಾಗೂ ವೈಯುಕ್ತಿಕ ಸ್ವಾತಂತ್ರ್ಯದ ಬಗ್ಗೆ ಉದಾರವಾದೀ ಪರಿಕಲ್ಪನೆಗಳು ಮೂಡತೊಡಗಿದವು. ಭಾರತೀಯ ರಾಷ್ಟ್ರವಾದಿಗಳ ಮೊದಲೆರಡು ತಲೆಮಾರುಗಳ ಜನರ ಕೇಂದ್ರ ಆಶಯ ಇದೇ ಆಗಿರುವುದನ್ನು ನಾವು ಮನಗಾಣಬಹುದಾಗಿದೆ. ಆದರೆ ಭಾರತೀಯ ಸೃಜನಾತ್ಮಕ ಮನಸ್ಸು ವಸಾಹತುಶಾಹಿಯ ವಿರುದ್ಧ ಸೆಟೆದು ನಿಲ್ಲುವಂತೆ ಏಕೆ ಪ್ರೇರಣೆಯಾಯಿತೆಂದರೆ, ಕ್ರಿಶ್ಚಿಯನ್ ಮಿಷನರಿಗಳು ಹಾಗೂ ವಸಾಹತುಶಾಹಿಗಳು ಭಾರತೀಯ ಧರ್ಮ ಮತ್ತು ಸಂಸ್ಕೃತಿಯನ್ನು ತುಂಬಾ ಕಟುವಾದ ಟೀಕೆಗೆ ಗುರಿಪಡಿಸಿದ್ದರಿಂದ.

೧೯ನೇ ಶತಮಾನದ ಮಧ್ಯ ಭಾಗದಲ್ಲಿ ದಕ್ಷಿಣ ಭಾರತದಲ್ಲಿ ಇದರ ಅನುಭವವಾಯಿತು. ಇದಕ್ಕೆ ಪ್ರತಿಕ್ರಿಯೆಯಾಗಿ ಪುನರುತ್ಥಾನದ ಉಗಮವಾಯಿತು. ಪಾಶ್ಚಾತ್ಯ ಜನಾಂಗೀಯ ಹಾಗೂ ಸಾಂಸ್ಕೃತಿಕ ಆಕ್ರಮಣದ ವಿರುದ್ಧ ಕ್ಷೀಣವಾಗಿಯಾದರೂ ಮೊಟ್ಟಮೊದಲು ದನಿಯೆತ್ತಿದವರು ಬಂಗಾಳದವರು, ಉಳಿದವರು ಅದನ್ನು ಅನುಸರಿಸಿದರು. ಮಹಾರಾಷ್ಟ್ರ ಒದಗಿಸಿದ ನಾಯಕತ್ವದಿಂದಾಗಿ ಉಳಿದ ದಕ್ಷಿಣ ರಾಜ್ಯಗಳು ಎಚ್ಚೆತ್ತುಕೊಂಡವು.

ಭಾರತೀಯ ನವೋದಯದಲ್ಲಿ ಮೂರು ಮುಖ್ಯ ಧಾರೆಗಳನ್ನು ಕಾಣಬಹುದು. ಆಗಿನ ಕಾಲದಲ್ಲಿ ತುಂಬಾ ಉಗ್ರವಾದಿಯೆಂದು ಕಂಡಿದ್ದ ಬ್ರಹ್ಮ ಸಮಾಜ, ಪುನರುತ್ಥಾನವಾದಿಯಾಗಿದ್ದ ಆರ್ಯ ಸಮಾಜ ಹಾಗೂ ಇವೆರಡಕ್ಕಿಂತ ಭಿನ್ನವಾದ ಮೂರನೇ ಮಾದರಿಯೊಂದು ಕಾಣಿಸಿಕೊಂಡಿತು. ಆದಾಗ್ಯೂ ಈ ಮೂರು ಪಂಥಗಳು ವಸಾಹತು ವಿರೋಧಿಯಾಗಿದ್ದುದರ ಜೊತೆಗೆ ರಾಷ್ಟ್ರವಾದಿಗಳಾಗಿದ್ದವು.

ತನ್ನ ಹಿನ್ನೆಲೆಗೆ ಆಧುನಿಕ ಭಾರತೀಯ ಸಾಹಿತ್ಯಕ ನವೋದಯವು ಈ ಮೂರು ಧಾರೆಗಳನ್ನು ಇಟ್ಟುಕೊಂಡಿತ್ತು. ಸ್ವಲ್ಪ ಅಪವಾದವನ್ನು ಬಿಟ್ಟು, ಹೆಚ್ಚೂ ಕಡಿಮೆ ಕರ್ನಾಟಕ ಪುನರುತ್ಥಾನವಾದಿ ಜಾಡಿನಲ್ಲೇ ಸಾಗಿತ್ತು.[೨]

ರಾಷ್ಟ್ರವಾದದ ಸಂದರ್ಭದಲ್ಲಿ ಕನ್ನಡ ಸಾಹಿತ್ಯದ ಸಾಮಾನ್ಯ ಧೋರಣೆಗಳನ್ನು ನಮ್ಮ ಸದ್ಯದ ಉದ್ದೇಶಕ್ಕಾಗಿ ಗಮನಿಸಲಾಗಿದೆ. ಕರ್ಕಿ ವೆಂಕಟರಮಣ ಶಾಸ್ತ್ರಿಯವರನ್ನುಳಿದು ೧೯ನೇ ಶತಮಾನದ ಕರ್ನಾಟಕದಲ್ಲಿ ಆ ಕಾಲದ ದಕ್ಷಿಣ ಭಾರತೀಯ ರಾಜಕೀಯ ರಾಷ್ಟ್ರವಾದಿಗಳಲ್ಲಿದ್ದಂತೆಯೇ ಕರ್ನಾಟಕ ಸಾಹಿತ್ಯ ಮತ್ತು ಸಾಹಿತಿಗಳಲ್ಲಿ ಒಂದು ಬಗೆಯ ದ್ವಂದ್ವವನ್ನು ಕಾಣುತ್ತೇವೆ. ಕನ್ನಡ ಸಾಹಿತ್ಯದಲ್ಲಿ ಇದು ಸ್ಪಷ್ಟವಾಗಿ ಗೋಚರಿಸುತ್ತದೆ. ಅವರ ಬರಹಗಳಲ್ಲಿ ಭಾರತೀಯ ಸ್ತ್ರೀತ್ವ ಮತ್ತು ಸಮಾಜ ಸುಧಾರಣೆ ಬಗೆಗಿನ ಕಾಳಜಿಯನ್ನು ಕಾಣುತ್ತೇವೆಯಾದರೂ ಅವರ ಕ್ರಿಯೆಯಲ್ಲಿ ಇದು ಗೈರುಹಾಜರಾಗಿದೆ.[೩]

ಈ ದ್ವಂದ್ವದ ಉಗಮವೇನು ಎಂದು ತಿಳಿಯುವಾಗ ಕ್ಷೇತ್ರೀಯವಾದ ಜಾತಿ ಸಮಸ್ಯೆಗಳು, ತಮ್ಮ ತತ್ವಗಳಲ್ಲಿ ದೃಢವಾದ ನಂಬಿಕೆ ಇಲ್ಲದಿರುವುದು, ಸಮಾಜದಲ್ಲಿ ಸ್ಥಾನಮಾನಗಳು ಹೋಗಿಬಿಡುತ್ತವೆ ಎಂಬ ದಿಗಿಲು–ಇವೆಲ್ಲ ಗೋಚರವಾಗುತ್ತವೆ. ಮೇಲು ದರ್ಜೆಯ ಬ್ರಾಹ್ಮಣ ಸಮುದಾಯದಿಂದ ಬಂದಂಥ ಈ ಬರಹಗಾರರು ತಮ್ಮ ಬರವಣಿಗೆಗಳಿಗಾಗಿ ಮರಾಠಿ ಮತ್ತು ಬಂಗಾಳಿ ಭಾಷೆಗಳ ಸುಧಾರಣಾವಾದಿ ಮಾದರಿಗಳನ್ನು ತೆಗೆದುಕೊಳ್ಳುವ ದ್ವಂದ್ವ ನಮ್ಮ ಕಣ್ಣಿಗೆ ಕಾಣುತ್ತದೆ. ದಕ್ಷಿಣ ಭಾರತೀಯ ಸಾಹಿತ್ಯಕ ಸಂದರ್ಭದಲ್ಲಿ ಸರ್ವವ್ಯಾಪಿಯಾದ ಇನ್ನೊಂದು ಮುಖ್ಯವಾದ ಪ್ರಭಾವವೆಂದರೆ ಲೋಕಮಾನ್ಯ ತಿಲಕರದು. ತಿಲಕರು

ವಸಾಹತು ಸನ್ನಿವೇಶದಲ್ಲಿ ಸಾಮಾಜಿಕ-ಧಾರ್ಮಿಕ ಸುಧಾರಣೆಯನ್ನು ಕೆಲವು ವೇಳೆ ವಿರೋಧಿಸಿದ್ದರೂ ಕನ್ನಡ ಸಾಹಿತ್ಯ ಮತ್ತು ಸಾಹಿತಿಗಳ ಮೇಲೆ ಅವರ ಪ್ರಭಾವ ಅಪಾರವಾಗಿತ್ತು. ಈ ಅಂಶವು ವಾಸ್ತವವಾಗಿ ಆಗ ಪ್ರಚಲಿತವಿದ್ದ ದ್ವಂದ್ವವನ್ನು ಹೆಚ್ಚು ಅರ್ಥಪೂರ್ಣವಾಗಿ ವಿವರಿಸುತ್ತದೆ. ದಕ್ಷಿಣ ಭಾರತದ ಸುಶಿಕ್ಷಿತ ಮಧ್ಯಮ ವರ್ಗದವರಿಗೆ ತಿಲಕರ ಪರಿಕಲ್ಪನೆಯ ರಾಷ್ಟ್ರ ಹೆಚ್ಚು ಆಪ್ಯಾಯಮಾನವಾಯಿತು. ಭಾವನಾತ್ಮಕವಾಗಿ ತಿಲಕರ ರಾಷ್ಟ್ರವಾದಿ ಕಲ್ಪನೆ ಹೆಚ್ಚು ಒಗ್ಗಿದ ಕಾರಣ ಮಧ್ಯಮ ವರ್ಗದವರ ಕ್ರಿಯೆಯನ್ನು ಕ್ರಮಬದ್ಧಗೊಳಿಸಲು ಸಹಾಯಕವಾಯಿತು. ಸಾಹಿತ್ಯಕ ವಲಯದಲ್ಲಿ ವಿಶೇಷವಾಗಿ, ತಿಲಕರು ತೀರಿಕೊಂಡು ಗಾಂಧೀಜಿಯವರು ಮೇಲೆ ಬಂದ ನಂತರವೂ ಈ ಮಾದರಿ ಮುಂದುವರಿಯಿತು.

ಕರ್ನಾಟಕದ ಛಿದ್ರೀಕರಣವನ್ನು ನಾವು ಇಲ್ಲೇ ನೆನಪಿಸಿಕೊಳ್ಳಬೇಕು. ಕನ್ನಡ ರಾಷ್ಟ್ರೀಯತೆಗೆ ತನ್ನ ಪ್ರತ್ಯೇಕವಾದ ಚಿಹ್ನೆಯನ್ನು ಬೆಳೆಸಿಕೊಳ್ಳಲು ಸಾಧ್ಯವಾಗಲಿಲ್ಲ. ಬಿಡಿಬಿಡಿಯಾಗಿ ಅವರನ್ನು ಬೇರೆ ಬೇರೆ ಇಟ್ಟು ತಮ್ಮ ತಮ್ಮಲ್ಲೇ ಅವರು ಪೈಪೋಟಿಗಿಳಿಯುವಂತೆ ಮಾಡುವುದು ವಸಾಹತುಶಾಹಿಯ ಹವಣಿಕೆಯಾಗಿತ್ತು. ಹಾಗಾಗಿ ೧೯ನೇ ಶತಮಾನದ ಸಾಹಿತಿಗಳು– ಬಂಗಾಳಿ ಮತ್ತು ಮರಾಠಿ ಭಾಷೆಗಳಲ್ಲಿ ಕೃತಿ ರಚಿಸಿದ್ದಂತೆ– ತಮ್ಮ ಬರಹಕ್ಕಾಗಿ ಗತಕಾಲದ ನೆನಪುಗಳಿಗೆ ಕೈಹಾಕಲು ಪ್ರಯತ್ನಿಸುವಾಗ ಗತಕಾಲವೆಂಬುದು ಅವರ ಸ್ಪರ್ಶಕ್ಕೆ ನಿಲುಕದಂತಾಯಿತು[೪].

ಭಾವನಾತ್ಮಕವಾಗಿ ಕನ್ನಡ ಬರಹಗಾರರು ತಿಲಕ್ ವಾದದ ಜೊತೆ ಸಂಬಂಧವಿರಿಸಿಕೊಂಡಿದ್ದ ಕಾರಣ ಸಹಜವಾಗಿಯೇ revivalism ಬಗ್ಗೆ ಅವರಿಗೆ ಮೋಹವಿತ್ತು. ಶಿವಾಜಿ ಮತ್ತು ಗಣೇಶನ ವಿಗ್ರಹಗಳು ಅವರಿಗೆ ಸ್ಫೂರ್ತಿ ನೀಡಿದವು. ಆದರೆ ಸಾಹಿತ್ಯಕವಾಗಿ ಅವರು ಸುಧಾರಣೆಯನ್ನು ಬಯಸಿದರು, ಅದರಲ್ಲಿ ವಿಶೇಷವಾಗಿ ಸ್ತ್ರೀಪಾತ್ರಗಳು ಅವರನ್ನು ಆಕರ್ಷಿಸಿದ ರೀತಿಯಲ್ಲಿ ತಿಲಕ್‌ವಾದ ಪ್ರತಿನಿಧಿಸಿದ ಪೌರುಷದ ಪಾತ್ರಗಳು ಆಕರ್ಷಿಸಲಿಲ್ಲ. ತಮ್ಮೊಳಗಿನ ಈ ದ್ವಂದ್ವದ ಕಡೆ ಅವರು ಹೆಚ್ಚು ಗಮನ ಹರಿಸಿದಂತೆ ತೋರುವುದಿಲ್ಲ. ತಮ್ಮ ನಂಬಿಕೆಗಳು ಮತ್ತು ಅನುಭವಗಳನ್ನು ಸೃಜನಾತ್ಮಕವಾಗಿ ಕಂಡರಿಸದ ಕಾರಣದಿಂದಲೋ ಏನೋ ಅವರ ಬರವಣಿಗೆಗಳು ಉತ್ತಮ ಕಲಾಕೃತಿಗಳಾಗಿ ಒಡಮೂಡದೇ ಓದುಗರನ್ನು ಪ್ರಭಾವಿಸಲಿಲ್ಲ. ಸಮಾಜ ಸುಧಾರಣೆಯ ಅಂಶಗಳು ಸಾಕಷ್ಟಿದ್ದರೂ ಅಕ್ಷರಸ್ಥ ಜನಸಮೂಹವನ್ನು ಸೆಳೆಯುವಲ್ಲೂ ಸಹ ಅವು ಸೋತವು. ಈ ಕೃತಿಗಳು ಸಾಮಾಜಿಕ ಮೂಢನಂಬಿಕೆಗಳನ್ನು ಸಾಹಿತ್ಯಕವಾಗಿ ಟೀಕೆ ಮಾಡಲು ಪ್ರಯತ್ನಿಸಿದವಾದರೂ, ತಮ್ಮ ಪ್ರಾಂತೀಯ ಸಂಸ್ಕೃತಿ ಹಾಗೂ ಸಂದರ್ಭದಿಂದ ಇವು ಪಡಿಮೂಡದ ಕಾರಣ ಪರಿಣಾಮಕಾರಿಯಾಗಿ ಇವು ಓದುಗರನ್ನು ಮುಟ್ಟಲಾರದೇ ಹೋದವು. ೧೯ನೇ ಶತಮಾನದಲ್ಲಿ ಆರಂಭವಾದ ಅನೇಕ ಸಾಮಾಜಿಕ ಸುಧಾರಣಾ ಸಂಘಟನೆಗಳನ್ನು ಮತ್ತು ಸಮಾಜಗಳು ಕಷ್ಟದಲ್ಲೇ ಉಸಿರು ಹಿಡಿದು ಬದುಕಿದ್ದು ಒಂದು ಕುತೂಹಲದ ಸಂಗತಿಯಾಗಿದೆ. ಬೆಂಗಳೂರು ಮತ್ತು ಮೈಸೂರು ನಗರಗಳಲ್ಲಿ ಸ್ಥಾಪಿತವಾದ ವಿಧವಾ-ವಿವಾಹ ಸಂಘಗಳು ಇದಕ್ಕೆ ಉತ್ತಮ ಉದಾಹರಣೆಯಾಗಿವೆ.

ಅನೇಕ ಸುಧಾರಣಾವಾದಿ ಲೇಖಕರ ವೈಚಾರಿಕ ನಾಟಕಗಳು ರಂಗದ ಮೇಲೆ ಪ್ರಯೋಗವಾಗದ ಕಾರಣ ಸಮಾಜದ ಮೇಲೆ ಅವು ಪ್ರಭಾವ ಬೀರುವ ಪ್ರಶ್ನೆಯೇ ಉದ್ಭವವಾಗುವುದಿಲ್ಲ. ಜೊತೆಗೆ ಸಾಹಿತಿಗಳು ಹಾಗೂ ಓದುಗರು ಒಂದೇ ವರ್ಗ ಮತ್ತು ಜಾತಿಗೆ ಸೇರಿದವರಾಗಿದ್ದರು. ಈಗಾಗಲೇ ನಾವು ಗಮನಿಸಿದಂತೆ, ಈ ಹಿನ್ನೆಲೆಯಲ್ಲಿ ಗಮನಿಸಿದಾಗ ಆರಂಭಿಕ ನವೋದಯ ಕಾಲದ ಬರಹಗಾರರು ಯಥಾಸ್ಥಿತಿವಾದಿಗಳೂ, revivalistರೂ ಆಗಿ ತೋರುತ್ತಾರೆ. ಸಾಹಿತ್ಯಕವಾಗಿ ಅವರ ಧೋರಣೆ ಹಾಗಿಲ್ಲದಿದ್ದರೂ ಸಮಾಜದ ಮೇಲೆ ಅವರ ಕೃತಿಗಳಿಂದ ಆದ ಪರಿಣಾಮವನ್ನು ಗಮನಿಸಿ ನಾವು ಈ ತೀರ್ಮಾನಕ್ಕೆ ಬರುವುದು ಅನಿವಾರ್ಯವಾಗುತ್ತದೆ.

ಬಂಗಾಳ ಮತ್ತು ಮಹಾರಾಷ್ಟ್ರಗಳಲ್ಲಿ ಸಾಹಿತ್ಯಕ ಕೃತಿಗಳು ಸುಶಿಕ್ಷಿತ ಸಮಾಜವನ್ನು ಬಡಿದೆಬ್ಬಿಸಿ ಸಂಘರ್ಷಾತ್ಮಕ ಚಟುವಟಿಕೆಯಲ್ಲಿ ಧುಮುಕುವಂತೆ ಮಾಡಿದರೆ, ದಕ್ಷಿಣದಲ್ಲಿ ಈ ವಿಷಯವಾಗಿ ಹೆಪ್ಪುಗಟ್ಟಿದ ಮೌನವನ್ನು ಮಾತ್ರ ನಾವು ಕಾಣುತ್ತೇವೆ.[೫] ರಾಷ್ಟ್ರವಾದಿ ರಾಜಕೀಯ ಸಂಸ್ಥೆಗಳು ತಣ್ಣಗಿನ ಮಂದಗಾಮಿ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡ ಸನ್ನಿವೇಶವನ್ನು ನೆನೆಯುವಾಗ ಇದಕ್ಕಿಂತ ಪ್ರಾಯಶಃ ಭಿನ್ನವಾದ ರೀತಿಯಲ್ಲಿ ಅವರು ವರ್ತಿಸುವ ಪರಿಸ್ಥಿತಿಯಿರಲಿಲ್ಲವೇನೋ ಎನ್ನಿಸುತ್ತದೆ.

ಸಮಾಜ ಸುಧಾರಣೆ ಹಾಗೂ ವಿಚಾರವಾದಿ ಸಮಾಜ ಸುಧಾರಕರನ್ನು ಟೀಕಿಸುವಂಥ ಸಾಹಿತ್ಯ ಕೃತಿಗಳು ಮೇಲ್ಜಾತಿ ಸುಶಿಕ್ಷಿತ ಜನರ ಅಪ್ರಕಟಿತ ಸುಧಾರಣಾ-ವಿರೋಧಿ ಧೋರಣೆಗೆ ಕುಮ್ಮಕ್ಕು ನೀಡಿದವು.[೬] ಉಗ್ರಗಾಮಿ ಸುಧಾರಣಾ-ವಿರೋಧಿ ನೆಲೆಯ ತಿಲಕರ ದೃಷ್ಟಿಕೋನವನ್ನು ಪ್ರತಿನಿಧಿಸುವಂಥ ಬರವಣಿಗೆ ಇದಾಗಿತ್ತು ಎಂಬುದನ್ನು ನೆನೆಯಬೇಕು. ಹತ್ತಿರದ ಪರಿಸರದಿಂದ ಸ್ಫೂರ್ತಿಗೊಂಡು ಉದ್ಭವವಾದ ಈ ನಾಟಕಗಳು ಹೆಚ್ಚು ಜನಪ್ರಿಯವೂ ಪ್ರಭಾವಶಾಲಿಯೂ ಆಗಿದ್ದವು. ದಕ್ಷಿಣ ಭಾರತದಲ್ಲಿ ತಿಲಕರ ಪ್ರಭಾವವನ್ನು ಅರಿಯಲು ಈ ಅಂಶವನ್ನು ನಾವು ಗಣನೆಗೆ ತೆಗೆದುಕೊಂಡಾಗ ಸಾಹಿತ್ಯ ಮತ್ತು ಸಮಾಜದ ನಡುವಿನ ಸಂಬಂಧ ಕೂಡ ಸ್ಪಷ್ಟವಾಗುತ್ತದೆ. ಆದಾಗ್ಯೂ ಈ ತರಂಗಗಳಿಂದ ಸಮಾಜದ ಮೇಲೆ ಹೆಚ್ಚು ಪರಿಣಾಮವಾಗಲಿಲ್ಲ ಎಂಬುದೂ ನಿಜವೇ.

ಸುಶಿಕ್ಷಿತ ವರ್ಗದ ಜನರು ಈ ಬರಹಗಳನ್ನು ಸ್ವೀಕರಿಸಿದರೆಂಬುದು ಸತ್ಯವಾದರೂ ತತ್ಪರಿಣಾಮವಾಗಿ ಇದನ್ನು ರಾಜಕೀಯ ರಾಷ್ಟ್ರವಾದಿ ಕ್ರಿಯೆಯಾಗಿ ಪರಿವರ್ತಿಸುವ ಪ್ರಯತ್ನವನ್ನು ಮಂದಿ ಮಾಡಲಿಲ್ಲ. ಕರ್ನಾಟಕದ ಯಾವ ಭಾಗದಲ್ಲಿಯೂ ಸುಧಾರಣಾ-ವಿರೋಧಿ ಸಂಘಟನೆಗಳು ತಲೆಯೆತ್ತಲಿಲ್ಲ.

ದ್ವಂದ್ವ ಮತ್ತು ತಿಲಕರ ಪ್ರಭಾವ ಮುಂದುವರಿದವೆಂಬುದನ್ನು ಅಲ್ಲಗಳೆಯಲಾಗದು. ಗಾಂಧಿ ಯುಗದಲ್ಲಿ ಈ ಪ್ರಭಾವವು ಕಡಿಮೆಯಾಯಿತು ಇಲ್ಲವೇ ರಾಷ್ಟ್ರೀಯ ಮುಖ್ಯ ಪ್ರವಾಹದಲ್ಲಿನ ಸಾಹಿತ್ಯಕ-ಸಾಂಸ್ಕೃತಿಕ ನಾಯಕರ ಚಟುವಟಿಕೆಯನ್ನು ಇಲ್ಲವಾಗಿಸಿತು. ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮದ ಜೊತೆ ಕೂಡ ಈ ಗುಂಪು ಸಕಾರಾತ್ಮಕವಾಗಿ ಸ್ಪಂದಿಸಲಿಲ್ಲ.[೭] ರಾಜಕೀಯ ರಾಷ್ಟ್ರವಾದಿಗಳ ಧೋರಣೆಯೊಡನೆ ಇದು ಸರಿಯಾಗಿ ಹೊಂದಿಕೊಂಡಿತ್ತು.

ಗಾಂಧೀಜಿಯವರು ಮೇಲೆ ಕಾಣಿಸಿಕೊಂಡ ನಂತರ ಸಮಾಜ ಸುಧಾರಣೆ, ಸ್ವಾತಂತ್ರ್ಯ ಹೋರಾಟ ಮತ್ತು ಭಾಷಾವಾರು ಪ್ರಾಂತ್ಯಗಳಿಗಾಗಿ ಚಳವಳಿಯನ್ನು ತಿಲಕರ ಪಂಥದವರು ಪ್ರಾರಂಭಿಸಲಿಲ್ಲ. ತಿಲಕೋತ್ತರ ಯುಗದಲ್ಲಿ ಅವರಲ್ಲನೇಕರು ಮೂಲೆಗುಂಪಾದರು ಇಲ್ಲವೇ ಬಲಪಂಥೀಯ ಸಂಘಟನೆಗಳನ್ನು ಸೇರಿಕೊಂಡರು ಅಥವಾ ಅಖಂಡ ಕರ್ನಾಟಕ ಚಳವಳಿಯಲ್ಲಿ ಪಾಲ್ಗೊಂಡರು.

ಸಾಹಿತ್ಯಕ ಪುನರುಜ್ಜೀವನ ಮತ್ತು ರಾಷ್ಟ್ರವಾದಿ ಚಳವಳಿಗಳೆರಡೂ ೨೦ನೇ ಶತಮಾನದ ಆರಂಭದ ಎರಡು ದಶಕಗಳಲ್ಲಿ ಹೆಚ್ಚು ಸದೃಢಗೊಂಡವು ಎನ್ನಬೇಕು. ಆ ಕಾಲಮಾನದಲ್ಲೇ ಅಸಂಖ್ಯಾತವಾಗಿ ಸಾಹಿತ್ಯಕ ಸಂಘಗಳು ಸ್ಥಾಪನೆಗೊಂಡವು. ಕರ್ನಾಟಕದಲ್ಲಿನ ಹೋಂ ರೂಲ್ ಲೀಗ್‌ಗಳು ಅವುಗಳನ್ನು ಸ್ಥಾಪಿಸಿದ ಆನಿ ಬೆಸೆಂಟರನ್ನು ಅನುಸರಿಸುವುದಕ್ಕಿಂತ ಹೆಚ್ಚಾಗಿ ತಿಲಕರ ಅನುಯಾಯಿಗಳಾಗಿದ್ದವು. ತಿಲಕ್ ಪಂಥದವರ ದೃಷ್ಟಿಯಲ್ಲಿ ಬೆಸೆಂಟ್ ಪುರಾಣ ಪಾತ್ರವಾದ 'ಪೂತನಿ' ಯನ್ನು ಹೋಲುವಂತಿದ್ದರು.[೮] ತರುವಾಯದಲ್ಲಿ ಮಾತ್ರ ನವೋದಯವು ಹೆಚ್ಚು ಅರ್ಥಪೂರ್ಣವಾದ ಘಟ್ಟವನ್ನು ತಲುಪಿತು. ಬೇಂದ್ರೆ,

ಕೆ.ವಿ. ಪುಟ್ಟಪ್ಪ, ಮಾಸ್ತಿ, ಶಿವರಾಮ ಕಾರಂತ– ಎಲ್ಲರೂ ಜ್ಞಾನಪೀಠ ವಿಜೇತರು – ಗಾಂಧೀಯುಗದಲ್ಲಿ ಮುಂಚೂಣಿಗೆ ಬಂದರು.

ಈ ಬೆಳವಣಿಗೆಗಳ ಜೊತೆ ಜೊತೆಗೆ ಕಾಣಿಸಿಕೊಂಡ ಬ್ರಾಹ್ಮಣೇತರ ಸಾಮಾಜಿಕ ಪ್ರಜಾಸತ್ತಾತ್ಮಕ ಚಳವಳಿಯು ತಿಲಕ್ ವಾದದ ಪರಿಧಿಯ ಹೊರಗೆ ಉಳಿಯಿತು. ತಿಲಕ್ ವಾದದ ಸಾಮಾಜಿಕ ಸಾಂಪ್ರದಾಯಿಕತೆ ಇವರ ಮೇಲೆ ಮೂಡಿದ ನಕಾರಾತ್ಮಕ ಪ್ರಭಾವವನ್ನು ಗಣನೆಗೆ ತೆಗೆದುಕೊಳ್ಳಬೇಕು. ಸ್ವಾಮಿ ವಿವೇಕಾನಂದ ಮಾದರಿಯ ಸುಧಾರಣೆ ಮತ್ತು ರಾಷ್ಟ್ರವಾದ ಸಕಾರಾತ್ಮಕವಾದ ಹಿನ್ನೆಲೆಯನ್ನು ಒದಗಿಸಿದರೆ ತಿಲಕ್ ಮಾದರಿಯ ಸಾಮಾಜಿಕ ಸಾಂಪ್ರದಾಯಿಕತೆ ನಕಾರಾತ್ಮಕವಾದ ಹಿನ್ನೆಲೆಯನ್ನು ಒದಗಿಸಿದವು. ಕನ್ನಡ ಬರವಣಿಗೆಯಲ್ಲಿ ಇದು ಸ್ಪಷ್ಟವಾಗಿ ಗೋಚರಿಸುತ್ತದೆ.

ಗಾಂಧೀಯುಗದಲ್ಲಿ ರಾಷ್ಟ್ರವಾದಿ ಚಳವಳಿ ಮತ್ತು ಸಾಹಿತ್ಯ ಪರಸ್ಪರ ಸದೃಢಗೊಳಿಸಿಕೊಂಡು ಅಭಿವೃದ್ಧಿ ಹೊಂದಿದವು. ಭಿನ್ನ ಭಿನ್ನ ಹಿನ್ನೆಲೆಯ ಬರಹಗಾರರು ಸಾಮಾಜಿಕ ವಾಸ್ತವತೆ ಮತ್ತು ರಾಜಕೀಯ ಉಗ್ರಗಾಮಿತ್ವವನ್ನು ಮೀರಲು ಯತ್ನಿಸಿದರು. ಕನ್ನಡದ ಶ್ರೇಷ್ಠ ಬರಹಗಾರರು ಈ ಸಾಲಿಗೆ ಸೇರುತ್ತಾರೆ. ರಾಜಕೀಯ ವಲಯದಲ್ಲಿ ಪ್ರಗತಿಪರರು ಮತ್ತು ವಿಚಾರವಾದಿಗಳು ರಾಷ್ಟ್ರವಾದಿ ಚಳವಳಿಯು ಸಮಗ್ರವಾಗಬೇಕೆಂದು ಬಯಸಿದಂತೆಯೇ ಕೆಲವು ಲೇಖಕರೂ ಕೂಡ ಅದೇ ಅಪೇಕ್ಷೆಯನ್ನು ಪ್ರಕಟಿಸಿದರು. ಹಾಗಾಗಿ ವಸಾಹತು–ವಿರೋಧಿ ಚಳವಳಿಯು ಕೇವಲ ರಾಜಕೀಯವಾದದ್ದಾಗಿರದೆ ಸಮಗ್ರವೆಂದು ಅವರು ಭಾವಿಸಿದರು. ಯೂರೋಪಿನ ವಾಸ್ತವವಾದವನ್ನು ಸೃಜನಾತ್ಮಕ ಬರವಣಿಗೆಯಲ್ಲಿ ಅಳವಡಿಸಿಕೊಳ್ಳುವುದರ ಮೂಲಕ ಸಾಮಾಜಿಕ–ಆರ್ಥಿಕ ವೈವಿಧ್ಯ ಮತ್ತು ವೈರುಧ್ಯಗಳನ್ನು ಗಮನಿಸಿ ಬರೆಯಲು ಅನುಕೂಲವಾಯಿತು. ಅತ್ಯಂತ ಪ್ರಭಾವಿಯಾದ ಸಾಹಿತ್ಯಕ ಪ್ರಕಾರಗಳೆಂದರೆ ಕಾದಂಬರಿ, ಸಣ್ಣಕತೆ, ಭಾವಗೀತೆ ಮತ್ತು ನಾಟಕಗಳು.

ದೇಶೀಯ ಭಾಷೆಗಳ ಬೆಳವಣಿಗೆಗೆ ಗಾಂಧೀವಾದ ನೀಡಿದ ಪ್ರೋತ್ಸಾಹದ ಜೊತೆಗೆ ಭಾಷಾವಾರು ಪ್ರಾಂತ್ಯಗಳ ನಿರ್ಮಾಣಕ್ಕೆ ಸಿಕ್ಕಿದ ಉತ್ತೇಜನ ಕೂಡಿಕೊಂಡು ರಾಷ್ಟ್ರೀಯ ಉತ್ಸಾಹಕ್ಕೆ ನಾಂದಿಯಾಯಿತು. ಕನ್ನಡ ರಾಷ್ಟ್ರೀಯತೆಯು ಆ ಕಾಲಕ್ಕೆ ಹರಿದು ಹಂಚಿಹೋಗಿದ್ದು ರಾಷ್ಟ್ರವಾದಿ ಚಳವಳಿಯಲ್ಲಿ ಪಾಲ್ಗೊಳ್ಳಲು ಕನ್ನಡಿಗರಿಗೆ ಸ್ಫೂರ್ತಿ ದೊರೆಯಿತು. “ಭಾರತ ಮಾತೆಯ” ತನುಜಾತೆ ತಾನೆಂದು ಕನ್ನಡತಾಯಿ ಘೋಷಿಸ ಬೇಕಾದ ಅನಿವಾರ್ಯತೆಯನ್ನು ಕನ್ನಡಿಗರು ಮನಗಂಡರು. ಕರ್ನಾಟಕವು ಕನ್ನಡಿಗರಿಗೆ ಮಾತೆಯಾದರೆ ಭಾರತಾಂಬೆಯು ಕನ್ನಡ ಮಾತೆಯ ತಾಯಿಯಾಗಿ ಕಂಡಳು. ವಸಾಹತುಶಾಹಿ ನಿರ್ಮಾಣ ಮಾಡಿದ ಸಂದಿಗ್ಧವನ್ನು ಮೀರಲು ಈ ಮಾರ್ಗದಿಂದ ಜನರಿಗೆ ಸಾಧ್ಯವಾಯಿತು; ಹಾಗಾಗಿ ಬೃಹತ್‌ರಾಷ್ಟ್ರಕ್ಕೂ ತಮ್ಮ ನಾಡಿಗೂ ಇರುವ ಸಂಬಂಧವನ್ನು ಸ್ಪಷ್ಟವಾಗಿ ಕಲ್ಪಿಸಿಕೊಳ್ಳಲು ಸಾಧ್ಯವಾಯಿತು.[೯] ಸುತ್ತಮುತ್ತಲ ಬೆಳವಣಿಗೆಗಳು ಸಮಕಾಲೀನ ಕನ್ನಡ ಸಾಹಿತ್ಯ(ದಕ್ಷಿಣ ಭಾರತ)ದ ಮೇಲೆ ಪ್ರಭಾವ ಬೀರಿದ್ದವು. ಹಿಂದುಳಿದ ವರ್ಗದ ಚಳವಳಿಯ ಕಾವು ಕೂಡ ಅಲ್ಲಿ ಪ್ರಕಟಗೊಂಡಿದೆ. ಪುರಾಣ ಪ್ರಸಂಗಗಳ ನೆರವಿನಿಂದ ಪುರೋಹಿತಶಾಹಿಯ ಕುತಂತ್ರವನ್ನು ವ್ಯಂಗ್ಯ ಮಾಡಲಾಯಿತು.[೧೦]

ಕನ್ನಡ ಸಾಹಿತ್ಯದಲ್ಲಿ ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮದ ಅರ್ಥಪೂರ್ಣ ಅಭಿವ್ಯಕ್ತಿಯನ್ನು ಕಾಣಬಹುದಾಗಿದೆ. ತನ್ನ ಅಭಿವ್ಯಕ್ತಿಗಾಗಿ ಈ ಕಾರ್ಯಕ್ರಮವನ್ನು ಬಳಸಿಕೊಳ್ಳದ ಬರಹಗಾರ ಆ ಕಾಲದಲ್ಲಿ ಇರಲಿಲ್ಲ ಎಂದರೆ ಉತ್ಪ್ರೇಕ್ಷೆಯಾಗದು. ವಸಾಹತು-ವಿರೋಧಿ ಹೋರಾಟದಲ್ಲಿ ನೇರವಾಗಿ ಚಳವಳಿಗೆ ಅವರು ಧುಮುಕದಿದ್ದರೂ ಸಾಂಸ್ಕೃತಿಕ ಕ್ಷೇತ್ರದಲ್ಲಿ ಅವರು ತುಂಬಾ ಕ್ರಿಯಾಶಾಲಿಗಳಾಗಿದ್ದರಲ್ಲದೆ ಭಾಷಾವಾರು

ಪ್ರಾಂತ್ಯ ರಚನೆಯ ಹೋರಾಟವು ವಿಶಾಲವಾದ ವಸಾಹತು-ವಿರೋಧಿ ಚಳವಳಿಯೊಡನೆ ವಿರೋಧ ಸಂಬಂಧ ತಾಳದಂತೆ ನೋಡಿಕೊಂಡರು. ನಿಯೋಜಿತ ಪ್ರಾಂತ್ಯಗಳಲ್ಲಿ ಆಯಾ ಭಾಷೆಗಳ ವಾರ್ಷಿಕ ಸಾಹಿತ್ಯ ಸಮ್ಮೇಳನಗಳನ್ನು ಏರ್ಪಡಿಸುವುದರ ಮೂಲಕ ಸಮಸ್ಯೆಯು ಜನರ ದೃಷ್ಟಿಯಿಂದ ದೂರವಾಗದಂತೆ ಎಚ್ಚರಿಕೆ ವಹಿಸಿದರು. ಅವರು ಬರೆದ ಹಾಡುಗಳು ರಾಷ್ಟ್ರಗೀತೆಗಳಾದುವಲ್ಲದೆ ಜನರು ಮತ್ತು ರಾಷ್ಟ್ರವಾದಿ ವೇದಿಕೆಯ ನಡುವೆ ಸಂಪರ್ಕ ಮಾಧ್ಯಮವಾಗಿ ಕೆಲಸ ನಿರ್ವಹಿಸಿದುವು. ಮೊರೆಯುತ್ತಿದ್ದ ವಸಾಹತು-ವಿರೋಧಿ ಹೋರಾಟದ ಮೂಲಕ ಸಾಹಿತಿಗಳು ಸ್ಫೂರ್ತಿಗಳಿಸಿದರೆ, ಹೋರಾಟದ ಮುಂಚೂಣಿಯಲ್ಲಿದ್ದ ನಾಯಕರು ಸಾಹಿತಿಗಳ ರಚನೆಗಳ ಮೂಲಕ ಚೈತನ್ಯ ಪಡೆದರು.

ರಾಷ್ಟ್ರವಾದಿ ನಾಯಕರ ಗುಣಗಾನ ಮಾಡುವಂಥ ಗೀತೆಗಳು, ನಾಟಕಗಳು ಮತ್ತು ಕಾದಂಬರಿಗಳು ರಚಿತವಾದುವಲ್ಲದೆ, ಜನರು ಅವರ ಮಾದರಿಯನ್ನನುಸರಿಸುವಂತೆ ಕರೆ ನೀಡಿದವು. ಭಾರತ ಮತ್ತು ಭಾರತ ರಾಷ್ಟ್ರವಾದಿ ಚಳವಳಿಯೇ ತಮ್ಮ ಬರವಣಿಗೆಯ ಸರ್ವಸ್ವವೆಂದು ಅವರು ನಂಬಿರಲಿಲ್ಲವೆಂಬುದು ನಿಜವಾದರೂ ಸಂಕಷ್ಟಕ್ಕೀಡಾದ ಅಸ್ಪೃಶ್ಯರು, ರೈತರು ಹಾಗೂ ಮಹಿಳೆಯರು ಮತ್ತು ದುಡಿಯುವ ಅಸಂಖ್ಯಾತ ಜೀವಿಗಳ ಬವಣೆಯನ್ನು ಗಮನಿಸಿ ತಮ್ಮ ಬರವಣಿಗೆಯ ಮೂಲಕ ಅವುಗಳಿಗೆ ಅಭಿವ್ಯಕ್ತಿ ಕೊಡಲು ಅವರು ಪ್ರಯತ್ನಿಸಿದರು.[೧೧] ಸಮಗ್ರ ಸಮಾಜದ ಸಂಕ್ರಮಣ ಕಾಲದ ತೊಳಲಾಟವನ್ನು ಅಕ್ಷರದಲ್ಲಿ ಮೂಡಿಸಲು ಈ ಬರಹಗಾರರು ಪ್ರಾಮಾಣಿಕ ಪ್ರಯತ್ನ ಮಾಡಿದರು. ಸಾಮಾಜಿಕ ಹಾಗೂ ರಾಷ್ಟ್ರೀಯ ಬದುಕಿನ ಸಂಕೀರ್ಣತೆಯನ್ನು ಹಿಡಿದಿಡುವಲ್ಲಿ ಅವರು ಯಶಸ್ವಿಯಾಗುವುದನ್ನು ನಾವಿಲ್ಲಿ ಕಾಣಬಹುದಾಗಿದೆ. ಅಸ್ಪೃಶ್ಯತೆಯಂಥ ಕಳಂಕ, ಕೆಳಮಧ್ಯಮ ವರ್ಗದ, ರೈತಾಪಿ ವರ್ಗದ ಸಾಮಾಜಿಕ-ಆರ್ಥಿಕ ಹಾಗೂ ಸಾಂಸ್ಕೃತಿಕ-ರಾಜಕೀಯ ವರ್ತನೆಯನ್ನು ಕಂಡರಿಸುವ ಪ್ರಕ್ರಿಯೆಯಲ್ಲಿ ಆ ವರ್ಗಗಳ ಭಾವನೆಗಳು, ಮೌಲ್ಯಗಳು, ಸಮಸ್ಯೆ ಹಾಗೂ ಸೂಕ್ಷ್ಮತೆಯನ್ನು ಪ್ರಕಟಪಡಿಸಿದ್ದಾರೆ. ಅವರ ಬರವಣಿಗೆಗಳಲ್ಲಿ ಬ್ರಾಹ್ಮಣ-ಬ್ರಾಹ್ಮಣೇತರ ಸಂಘರ್ಷವು ಕೂಡ ಸೂಕ್ಷ್ಮವಾದ ಅಭಿವ್ಯಕ್ತಿಯನ್ನು ಕಂಡಿದೆ.[೧೨] ಈ ವರ್ಗಗಳ ಹೋರಾಟ ಮತ್ತು ಅವರ ರಾಜಕೀಯ ಅರಿವಿನ ಬಗ್ಗೆ ಕೂಡ ಇವರ ಬರವಣಿಗೆಗಳಲ್ಲಿ ಸ್ಥಳಾವಕಾಶ ದೊರೆತಿದೆ. ಹಾಗೆ ಮಾಡುವ ಮೂಲಕ ಯಾವ ಲೇಖಕನೂ ಸಹ ರಾಷ್ಟ್ರವಾದಿ ಚಳವಳಿಗೆ ವಿರುದ್ಧವಾದ ಚಿಂತನೆಯನ್ನು ಹರಿಯಬಿಡಲಿಲ್ಲ. ವಾಸ್ತವವಾಗಿ ಕುವೆಂಪು ಅವರ ಬರವಣಿಗೆಗಳು ಜಾತೀಯ ಚಳವಳಿಗಾರರನ್ನು ಮುಖ್ಯಪ್ರವಾಹಕ್ಕೆ ಸೆಳೆದು ರಾಷ್ಟ್ರೀಯ ಚಳವಳಿಗೆ ಹಚ್ಚುವಲ್ಲಿ ಪ್ರಯತ್ನಿಸಿದುವು.

ಕೇವಲ ಪ್ರಚಾರಕ್ಕೋಸ್ಕರವಾಗಿ ಈ ವಿಚಾರಗಳ ಬಗ್ಗೆ ಸಾಹಿತಿಗಳು ಬರೆಯುವ ಉತ್ಸಾಹ ತೋರಿದವರಲ್ಲ; ಸಮಕಾಲೀನ ಸಂಗತಿಗಳು ಅವರ ಪ್ರಜ್ಞೆಯ ಒಂದು ಅವಿಭಾಜ್ಯ ಅಂಗವಾಗಿದ್ದ ಕಾರಣ ಅವರ ಸೃಜನಾತ್ಮಕ ಬರವಣಿಗೆಗಳಲ್ಲಿ ಅನಿವಾರ್ಯವಾಗಿ ಅಭಿವ್ಯಕ್ತಿ ಕಂಡವು ಎನ್ನಬೇಕು. ದಬ್ಬಾಳಿಕೆ ಹೆಚ್ಚಿದ ಸನ್ನಿವೇಶದಲ್ಲಿ ನಾಯಕರುಗಳು ಹಿಂದೇಟು ಹೊಡೆಯುವಾಗ ಜನಸಾಮಾನ್ಯರು ಮುಂದೇನು ಮಾಡಬೇಕೆಂದು ಅರಿಯದವರಾಗಿದ್ದರು; ಆ ಸಂದರ್ಭದಲ್ಲಿ ಸಾಹಿತಿಗಳು ರಾಷ್ಟ್ರವಾದಿ ಚಳವಳಿಯ ಬಗ್ಗೆ ಆಶಾವಾದವನ್ನು ತೋರಿದ್ದು ಸಹಜವಾಗೇ ಇದೆ. ಐತಿಹಾಸಿಕ ಮತ್ತು ಪೌರಾಣಿಕ ಪಾತ್ರಗಳು ಹಾಗೂ ಉಪಕರಣಗಳನ್ನು ಉಪಯೋಗಿಸಿಕೊಂಡು ನಾಯಕರುಗಳು ಹಾಗೂ ಜನತೆಯ ಆಲಸ್ಯವನ್ನು ವಿಡಂಬಿಸಿ ಕ್ರಿಯೆಗಾಗಿ ಹುರಿದುಂಬಿಸಿದರು.[೧೩]

ಸಾಹಿತ್ಯಕ ಕೃತಿಗಳಲ್ಲಿ ಕಂಡ ಸೈದ್ಧಾಂತಿಕ ನೆಲೆಗೂ ವಾಸ್ತವವಾಗಿ ಕಾಣಿಸಿಕೊಂಡ ತತ್ವಕ್ಕೂ, ಈ ಮೊದಲೇ ತಿಳಿಸಿದಂತೆ ದ್ವಂದ್ವವಿದ್ದಿತು. ತಿಲಕರ ಪೌರುಷದ ಮತ್ತು ವೀರ ರಾಷ್ಟ್ರವಾದದ ಪರಿಕಲ್ಪನೆ

ಹಾಗೂ ಮಹಾತ್ಮ ಗಾಂಧಿಯ ಅಹಿಂಸಾ ಮಾರ್ಗದ ನಡುವೆ ಡೋಲಾಯಮಾನವಾದ ಸ್ಥಿತಿಯಲ್ಲಿ ತಿರುಗಾಡುವಂತಾಯಿತು. ಕೆಲವು ವೇಳೆ ಅವರು ಗಾಂಧೀವಾದಕ್ಕಿಂತ ತಿಲಕ್‌ವಾದದ ಕಡೆ ಆಕರ್ಷಿತರಾದಂತೆ ಗೋಚರವಾಯಿತು. ಕರ್ನಾಟಕದ ರಾಷ್ಟ್ರವಾದಿ ವಿನ್ಯಾಸವು ಅಸಮರ್ಪಕವಾಗಿದ್ದ ಕಾರಣ (ದಕ್ಷಿಣದ ಬೇರೆ ಪ್ರಾಂತ್ಯಗಳಲ್ಲಿದ್ದಂತೆ) ಗಾಂಧಿ ಆದರ್ಶಗಳನ್ನು ಕೆಲವು ವೇಳೆ ಧಿಕ್ಕರಿಸುತ್ತಾ ಹೆಚ್ಚು ಹೆಚ್ಚು ತಿಲಕರ ಪ್ರಭಾವಕ್ಕೆ ಒಳಗಾಯಿತು. ವಸಾಹತು-ವಿರೋಧಿ ಹೋರಾಟ ಹಾಗೂ ರಾಷ್ಟ್ರೀಯ ಸಮಗ್ರೀಕರಣದ ಪ್ರಕ್ರಿಯೆಯ ಹಾದಿಯಲ್ಲಿ ಅಡ್ಡಿಯಾತಂಕಗಳು ತಲೆದೋರಿದಾಗ, ಇದಕ್ಕೆ ಮುಖ್ಯವಾಗಿ ವಸಾಹತು ಹಾಗೂ ರಾಷ್ಟ್ರವಾದಿ ನಾಯಕತ್ವ ಕಾರಣ, ಜನಸಾಮಾನ್ಯರಿಗೆ ಸ್ಫೂರ್ತಿ ತುಂಬುವ ಯಾವುದೇ ಸಂಕೇತವನ್ನು ಬರಹಗಾರರು ಉತ್ಸಾಹದಿಂದ ತಮ್ಮದಾಗಿಸಿಕೊಂಡರು.

ತಿಲಕ್ ವಾದದಲ್ಲೇ ಈ ಬಗೆಯ ಸಂಕೇತಗಳು ಹಾಗೂ ಉಪಕರಣಗಳು ಲಭ್ಯವಾಗಿದ್ದವು. ತಿಲಕರ ಸಂಕೇತಗಳು ಗಾಂಧಿತತ್ವಕ್ಕೆ ಅನುಕೂಲಕರವಾಗಿಲ್ಲವೆಂಬುದನ್ನು ಇಲ್ಲಿಯೇ ದಾಖಲು ಮಾಡಬೇಕು. ರಾಷ್ಟ್ರ ಹಾಗೂ ಸಮಾಜದ ಬಗ್ಗೆ ಗಾಂಧೀಜಿಯವರು ಹೊಂದಿದ್ದ ಪರಿಕಲ್ಪನೆಯು ತಿಲಕರ ಪರಿಕಲ್ಪನೆಗಿಂತ ಭಿನ್ನವಾಗಿದ್ದಿತು. ಭಾರತೀಯರು ಪೌರುಷದಿಂದ ಪುನಶ್ಚೇತನ ಪಡೆಯಬೇಕೆಂದು ತಿಲಕರು ಬಯಸಿದ್ದರೆ, ಮಹಾತ್ಮ ಗಾಂಧಿಯವರು ವ್ಯಕ್ತಿ ಹಾಗೂ ಸಮಾಜದ ನೈತಿಕ ಹಾಗೂ ಆಧ್ಯಾತ್ಮಿಕ ಪುನಶ್ಚೇತನವನ್ನು ಬಯಸಿದ್ದರು. ಆದರೆ ಸರ್ವಾಂಗೀಣ ಪುನಶ್ಚೇತನದ ತತ್ವವು ಇಲ್ಲದ ಸನ್ನಿವೇಶದಲ್ಲಿ ಲೇಖಕರು ತಿಲಕರ ಮಾರ್ಗವನ್ನೇ ಆದರ್ಶವಾಗಿ ಸ್ವೀಕರಿಸಬೇಕಾದುದು ಅನಿವಾರ್ಯವಾಯಿತು.

ಅಂಥ ಉಪಕರಣಗಳು ವಿದ್ಯಾವಂತ ಯುವಕರು ಮತ್ತು ವಿದ್ಯಾರ್ಥಿಗಳ ಮೇಲೆ ಅತ್ಯಂತ ಪ್ರಭಾವ ಬೀರಿದವು. ಆದಾಗ್ಯೂ ಅವರಲ್ಲಿ ಶ್ರೇಷ್ಠ ಮಟ್ಟದ ಚಿಂತಕರಾದ ಬೇಂದ್ರೆ ಮತ್ತು ಕುವೆಂಪು ರವರು ರಾಷ್ಟ್ರವಾದಿ ಚಳವಳಿ ಹಾಗೂ ನಾಯಕತ್ವದ ಇತಿಮಿತಿಗಳನ್ನು ಅರಿತವರಾಗಿದ್ದರಲ್ಲದೆ ಬಡವ-ಬಲ್ಲಿದ, ಉಚ್ಚ-ನೀಚವೆಂಬ ದ್ವಂದ್ವವಿಲ್ಲದ ಒಂದು ಆಂತರಿಕ ವ್ಯವಸ್ಥೆಗಾಗಿ ಹಂಬಲಿಸಿದರು. ವಿಶೇಷವಾಗಿ ಕುವೆಂಪುರವರು "ವಿಶ್ವ ಮಾನವ" ಹಾಗೂ "ವಿಶ್ವಪ್ರಜ್ಞೆ" ಗೆ ಒತ್ತುಕೊಟ್ಟರು. ಇದನ್ನೇ ಮಾರ್ಕ್ಸ್ ವಾದದ ಪರಿಭಾಷೆಯಲ್ಲಿ "ಲೋಕತಾಂತ್ರಿಕ ಅಂತರ ರಾಷ್ಟ್ರೀಯತೆ" ಎಂದು ಕರೆಯಬಹುದು.[೨]

ಈ ಪ್ರಕಾರವಾಗಿ ಕನ್ನಡ ಸಾಹಿತಿಗಳ ಮೂಲಕ ಕನ್ನಡ ಸಾಹಿತ್ಯವು ರಾಷ್ಟ್ರೀಯ ಚಳವಳಿಗೆ ತನ್ನದೇ ಆದ ರೀತಿಯಲ್ಲಿ ಕೊಡುಗೆ ನೀಡಿತು.

-ಪ್ರೊ. ಎಸ್. ಚಂದ್ರಶೇಖರ್

**ಟಿಪ್ಪಣಿಗಳು**

೧ ಸಾಹಿತ್ಯ ಕೃತಿಯೊಂದು ಕೇವಲ ಒಂದು ಮೂಲ ಅಥವಾ ದಾಖಲೆ ಎಂದು ಯಾವ ಸಾಹಿತಿಯೂ ಒಪ್ಪುವುದಿಲ್ಲ.

೨ ವಿವರಗಳಿಗಾಗಿ ನೋಡಿ: ಚಂದ್ರಶೇಖರ್, ಎಸ್.: ಸುಧಾರಣೆ, ಪ್ರತಿಕ್ರಿಯೆ ಹಾಗೂ ಮೈಸೂರಿನ ಆಡಳಿತ. ಕ್ಯೂ.ಜೆ.ಎಂ.ಎಸ್. ಸಂಪುಟ ೭೬, ಸಂಚಿಕೆಗಳು ೧-೨, ಬೆಂಗಳೂರು, ೧೯೮೫, ಪು. ೧೩೧-೧೪೪

ಅದೇ ಲೇಖಕರ ಪೂರ್ವ ಕನ್ನಡ ನವೋದಯ ಸಾಹಿತ್ಯದಲ್ಲಿ ಸಾಮಾಜಿಕ ಗತಿಶೀಲತೆ. ಶೂದ್ರ, ಕನ್ನಡ ಮಾಸಿಕ, ಸಂಪುಟ ೧೪, ಸಂಚಿಕೆ ೬, ಏಪ್ರಿಲ್ ೧೯೮೮. ಬೆಂಗಳೂರು, ಪು. ೧೫–೨೨

೩ ಚಂದ್ರಶೇಖರ್, ಎಸ್.: ಸಂ. ೨

೪ ದಕ್ಷಿಣ ಭಾರತೀಯ ಇತಿಹಾಸಕಾರನಿಗೆ ಆಧುನಿಕ ಕರ್ನಾಟಕ ಚರಿತ್ರೆ ಎಂದರೆ ಒಡೆಯರು ಮತ್ತು ಅವರ ಕಾಲದ ಮೈಸೂರೇ ಆಗಿರುತ್ತದೆ, ಕರ್ನಾಟಕ ಚರಿತ್ರೆಯ ಮೇಲುಮಿತಿಯು ವಿಜಯನಗರ ಚಕ್ರಾಧಿಪತ್ಯ ಪತನವಾದ ಘಟ್ಟಕ್ಕೆ ಸೀಮಿತಗೊಳಿಸುತ್ತದೆ.

೫ ವಿವರಗಳಿಗಾಗಿ ನೋಡಿ: ನಟರಾಜನ್, ಎಸ್.: ಎ ಸೆಂಚುರಿ ಆಫ್ ಸೋಶಿಯಲ್ ರಿಫಾರ್ಮ್ ಇನ್ ಇಂಡಿಯಾ, ಬೊಂಬಾಯಿ, ೧೯೫೯. ಹಾಗೂ ಹೀಮ್ಸಾತ್, ಸಿ: ನ್ಯಾಶನಲಿಸಂ ಅಂಡ್ ಹಿಂದೂ ಸೋಶಿಯಲ್ ರಿಫಾರ್ಮ್, ಪ್ರಿನ್ಸ್‌ಟನ್, ೧೯೬೪

೬ ಚಂದ್ರಶೇಖರ್, ಎಸ್.: ಶೂದ್ರದಲ್ಲಿ ಪುಟ ಸಂಖ್ಯೆ ೨

೭ ಇದಕ್ಕೆ ಆಲೂರು ವೆಂಕಟರಾವ್ ಮತ್ತು ಅವರ ಗೆಳೆಯರು ಉತ್ತಮ ಉದಾಹರಣೆ.

೮ ಬೆಸೆಂಟರನ್ನು ಪೂತನಿ ಎಂದು ಕರೆದವರು ಕಾಪರ್ಡೆ,ಎಂ.ಎಸ್. ಜೋಯಿಸರೊಡನೆ ಮಾಡಿದ ಸಂದರ್ಶನ, ಮೈಸೂರು, ೬–೭ ಮೇ ೧೯೮೭, ಜೋಯಿಸರು ಸ್ವಾತಂತ್ರ್ಯ ಹೋರಾಟಗಾರರು, ಪತ್ರಕರ್ತರು ಹಾಗೂ ಕಟ್ಟಾ ತಿಲಕವಾದಿಗಳು. ಈಗಿನ ಆಂಧ್ರ ಪ್ರದೇಶದ ಮದನಪಲ್ಲಿಯ ಬೆಸೆಂಟರ ಥಿಯಾಸಾಫಿಕಲ್ ಕಾಲೇಜಿನಲ್ಲಿ ಅವರು ವ್ಯಾಸಂಗ ಮಾಡಿದುದು ಕುತೂಹಲಕರವಾದ ಅಂಶವಾಗಿದೆ.

೯ ಉದಾಹರಣೆಗೆ ಕುವೆಂಪು ಅವರ ಜೈ ಭಾರತ ಜನನಿಯ ತನುಜಾತೆ, ಜಯಹೇ ಕರ್ನಾಟಕಮಾತೆ, ಎಂಬ ಗೀತೆಯನ್ನು ನೋಡಿ.

೧೦ ಉದಾಹರಣೆಗೆ ಗಮನಿಸಿ: ಕುವೆಂಪುರವರ ಬೆರಳ್‌ಗೆ ಕೊರಳ್ ಮತ್ತು ಶೂದ್ರ ತಪಸ್ವಿಯಲ್ಲಿ ಏಕಲವ್ಯ ಮತ್ತು ಶಂಭೂಕರು ಮೇಲ್ಜಾತಿ ಬ್ರಾಹ್ಮಣರ ದಬ್ಬಾಳಿಕೆಗೆ ಸಿಲುಕಿದ ಶೂದ್ರ ನಾಯಕರಾಗಿ ತೊಳಲಾಡುವ ಚಿತ್ರ ಜೀವಂತವಾಗಿ ಮೂಡಿಬಂದಿದೆ. ಇದೇ ಲೇಖಕರ ಮಲೆಗಳಲ್ಲಿ ಮದುಮಗಳು ಹಾಗೂ ಕಾನೂರು ಹೆಗ್ಗಡತಿ ಕಾದಂಬರಿಗಳಲ್ಲೂ ಅಂಥ ವಿವರಣೆಗಳು ಹೇರಳವಾಗಿವೆ.

೧೧ ವಿವರಗಳಿಗಾಗಿ ನೋಡಿ: ಕುವೆಂಪು, ಬೇಂದ್ರೆ, ಕಾರಂತ, ಗೋವಿಂದ ಪೈ, ಜಿ.ಪಿ. ರಾಜರತ್ನಂ, ವಿ. ಸೀತಾರಾಮಯ್ಯ ಮತ್ತು ಮಾಸ್ತಿ ಅವರ ಕೃತಿಗಳನ್ನು.

೧೨ ಹಿಂದುಳಿದ ವರ್ಗದವರು ಮೇಲ್ಜಾತಿಯವರಿಂದ ಸಾಮಾಜಿಕವಾಗಿ, ಆರ್ಥಿಕವಾಗಿ ಶೋಷಣೆಗೆ ಒಳಗಾದ ಪರಿಯನ್ನು ಕುವೆಂಪು ಅವರ ಕೃತಿಗಳು ಮನೋಜ್ಞವಾಗಿ ಮೂಡಿಸಿವೆ. ಹೆಚ್ಚಿನ ವಿವರಗಳಿಗಾಗಿ ನೋಡಿ: ಚಂದ್ರಶೇಖರ್, ಎಸ್.: ಸಾಹಿತ್ಯ ಮತ್ತು ಸಮಾಜ– ಕುವೆಂಪುರವರ ಕಾದಂಬರಿಗಳಲ್ಲಿ ಚಿತ್ರಿತವಾಗಿರುವಂತೆ ಸಮಾಜ. ಧಾರವಾಡದ ಕರ್ನಾಟಕ ಇತಿಹಾಸ ಸಮಾವೇಶ ೨–೪ ಫೆಬ್ರವರಿ ೧೯೮೫ರಲ್ಲಿ ಮಂಡಿಸಿದ ಅಪ್ರಕಟಿತ ಪ್ರಬಂಧ.

೧೩ ಪಾಂಡವ ಸೈನ್ಯವನ್ನು ಹುರಿದುಂಬಿಸಲು ಕೃಷ್ಣ ಕುರುಕ್ಷೇತ್ರ ಯುದ್ಧದಲ್ಲಿ ಬಳಸಿದ ಪಾಂಚಜನ್ಯವನ್ನು ಕುವೆಂಪು ಬಳಸಿದರು. ಬೇಂದ್ರೆಯವರು ತಾಯಿಯ ಸಂಕೇತವನ್ನು ಉಪಯೋಗಿಸಿ ಅವಳ ಸೋಮಾರಿಗಳಾದ ಮಕ್ಕಳನ್ನು ಮಕ್ಕಳಿವರೇನಮ್ಮ ಎಂದು ಕೆಣಕಿದರು (ಮಕ್ಕಳಿವರೇನಮ್ಮ ಮೂವತ್ತು ಮೂರು ಕೋಟಿ!), ರಾಜರತ್ನಂರವರು ಪರಶುರಾಮನ ಗಂಡುಗೊಡಲಿಯನ್ನು ಬಳಸಿದರು.

೧೪ ಕುವೆಂಪುರವರ ಅನಿಕೇತನ ಮತ್ತು ವಿಶ್ವಮಾನವ ಸಂದೇಶ ಸಾಹಿತಿಯೊಬ್ಬನ ಜಾಗತಿಕ ವ್ಯವಸ್ಥೆಯ ಸ್ಪಷ್ಟ ಪರಿಕಲ್ಪನೆಯಾಗಿದೆ. ವಿಶ್ವಮಾನವ ಸಂದೇಶ, ೧೯೮೫ ಆವೃತ್ತಿ, ಬೆಂಗಳೂರು

## ಅಧ್ಯಾಯ : ಆರು

# ಬ್ರಾಹ್ಮಣೇತರರು, ರಾಷ್ಟ್ರವಾದ ಮತ್ತು ಕಾಂಗ್ರೆಸ್

ಆರಂಭಿಕ ಕಾಂಗ್ರೆಸ್ಸಿಗರ ದೃಷ್ಟಿಯಲ್ಲಿ ರಾಷ್ಟ್ರವಾದವೆಂದರೆ ಏನು ಎಂದು ನಾವು ಸ್ವಲ್ಪ ಈಗಾಗಲೇ ತಿಳಿದುಕೊಂಡಿದ್ದೇವೆ. ಅವರ ಪರಿಕಲ್ಪನೆಯ ರಾಷ್ಟ್ರವಾದ ಮಧ್ಯಮ ಮತ್ತು ಕೆಳಜಾತಿಯವರ ಗಮನ ಸೆಳೆಯದೇ ಸೋತ ಸಂಗತಿಯನ್ನು ತಿಳಿದಿದ್ದೇವೆ. ಕಳೆದ ಶತಮಾನದ ಕಡೆಯ ದಶಕದಲ್ಲಿ ಅವರು ಎಚ್ಚರಗೊಂಡರಲ್ಲದೆ ಶೋಷಿತ ಬ್ರಾಹ್ಮಣೇತರರು ಸ್ವಾಮಿ ವಿವೇಕಾನಂದರ "ಶೂದ್ರ ಶಕ್ತಿ" ಯ ಹರವು, ವಿಸ್ತಾರವನ್ನು ಮನವರಿಕೆ ಮಾಡಿಕೊಟ್ಟ ಬಳಿಕ ಪರಿಸ್ಥಿತಿ ಬದಲಾಯಿತೆನ್ನಬೇಕು. ೧೮೯೦ರ ದಶಕದಲ್ಲಿ ವಿವೇಕಾನಂದರು ದಕ್ಷಿಣ ಭಾರತದಲ್ಲೆಲ್ಲ ದೀರ್ಘಕಾಲವೇ ಸಂಚಾರ ಮಾಡಿದರು. ಅನೇಕ ಜನ ಶ್ರೀಮಂತರು ಹಾಗೂ ಧಾರ್ಮಿಕ ವ್ಯಕ್ತಿಗಳು ಅವರ ಸಂಪರ್ಕಕ್ಕೆ ಬಂದರು. ಕುತೂಹಲದ ಅಂಶವೆಂದರೆ ಕೇವಲ ಶ್ರೀಮಂತರಾದ ಬ್ರಾಹ್ಮಣೇತರರಷ್ಟೇ ಅಲ್ಲದೇ ಸಂಸ್ಥಾನಗಳ ದೊರೆಗಳೂ ಸಹ ಸ್ವಾಮೀಜಿಯವರ ಸಂಪರ್ಕಕ್ಕೆ ಬಂದರು, ಅವರ ಉಪನ್ಯಾಸಗಳಿಂದ ಗಾಢವಾಗಿ ಪ್ರಭಾವಿತರಾದರು. ತಮ್ಮ ಚಿಂತನೆಗಳನ್ನು ಪ್ರಕಟಪಡಿಸುವಂತೆ ಸ್ವಾಮೀಜಿಯವರು ಎರಡು ನಿಯತಕಾಲಿಕೆಗಳನ್ನು ಪ್ರಾರಂಭಿಸಲು ಸೂಚಿಸಿದರು.[೧] ದಕ್ಷಿಣ ಭಾರತದ ಅನೇಕ ಮಂದಿ ಬ್ರಾಹ್ಮಣೇತರರು ಸ್ವಾಮಿ ವಿವೇಕಾನಂದರ ವಿಶಾಲ ತಳಹದಿಯ ಚಿಂತನೆಗಳಿಗೆ ಮಾರುಹೋದರು. ಅವರ ಮಾರ್ಗವೇ ಪ್ರಾಯೋಗಿಕ ಮಾರ್ಗವಾಗಿತ್ತು. ದಕ್ಷಿಣ ಭಾರತದ ಉಗ್ರ ಸುಧಾರಣಾವಾದಿಗಳು ಹೊಂದಿದ್ದ ಅಭಿಪ್ರಾಯಕ್ಕಿಂತ ಭಿನ್ನವಾದ ಚಿಂತನೆಯನ್ನು ಅವರು ಕುಡಿಯುವುದು ಹಾಗೂ ತಿನ್ನುವುದರ ಬಗ್ಗೆ ಹೊಂದಿದ್ದರು. ಪ್ರಾಣಿಮಾಂಸ ತಿಂದರೆ ಕೆಡುಕಲ್ಲವೆಂದು ಕೂಡ ಅವರು ತಿಳಿಸಿದರು. ಮುಂದುವರಿದು, 'ಪ್ರಾಣಿ ಮಾಂಸ ತಿನ್ನುವ ರಾಷ್ಟ್ರದ ಮಂದಿ ಹೆಚ್ಚು ಧೈರ್ಯಶಾಲಿಗಳೂ, ಪರಾಕ್ರಮಿಗಳೂ, ಚಿಂತನಾಪರರೂ ಆಗಿರುತ್ತಾರೆ' ಎಂದರು.[೨] ಸ್ತ್ರೀಯರು ಮತ್ತು ಪುರುಷರು ಸಮಾನರೆಂದು ಉಪದೇಶಿಸಿದರು. ತಮ್ಮ ಶಿಷ್ಯರೊಡಗೂಡಿ ರಾಮಕೃಷ್ಣ ಆಶ್ರಮವನ್ನು ತೆರೆದರಲ್ಲದೆ ಅದರ ಶಾಖೆಗಳು ದಕ್ಷಿಣ ಭಾರತದ ಅನೇಕ ನಗರಗಳಲ್ಲಿ ಅಸ್ತಿತ್ವಕ್ಕೆ ಬಂದವು. ಜಾತಿ ವ್ಯವಸ್ಥೆಯ ವಿರುದ್ಧ ದನಿಯೆತ್ತಿದ ಸ್ವಾಮೀಜಿ ಜ್ಯೋತಿರಾವ್ ಫುಲೇ ಅವರಷ್ಟೇ ಖಾರವಾಗಿ ಮೇಲುಜಾತಿಯವರ ಶೋಷಣೆಯ ಕ್ರಮವನ್ನು ಖಂಡಿಸಿದರು. ಅಸ್ಪೃಶ್ಯತೆಯ ಅವಹೇಳನಕರವಾದ ಅನುಸರಣೆಗೆ ಧಿಕ್ಕಾರ ಕೂಗಿ ಬ್ರಾಹ್ಮಣ ಹಾಗೂ ಬನಿಯಾ ಜನಾಂಗದವರು ಕೆಳಜಾತಿಯವರನ್ನು ಶೋಷಣೆ ಮಾಡುವ ರೀತಿಯನ್ನು ಕಟುನುಡಿಗಳಿಂದ ಧಿಕ್ಕರಿಸಿದರು.[೩]

ಪುರೋಹಿತಶಾಹಿ ಮತ್ತು ವ್ಯಾಪಾರಿವರ್ಗದವರನ್ನು ತರಾಟೆಗೆ ತೆಗೆದುಕೊಂಡವರಲ್ಲಿ ವಿವೇಕಾನಂದರು ಮೊದಲಿಗರೆಂದು ತೋರುತ್ತದೆ. (ಫುಲೇ ಅವರು ಈ ವರ್ಗದವರನ್ನು ಕ್ರಮವಾಗಿ 'ಭಟ್ ಜೀ' ಮತ್ತು 'ಶೇಠ್ ಜೀ' ಗಳೆಂದು ವ್ಯಂಗ್ಯವಾಡಿದ್ದರು). ಅವರ ದೃಷ್ಟಿಯಲ್ಲಿ ಶೂದ್ರರನ್ನು ಈ ವರ್ಗದಷ್ಟು ಹೀನಾಯವಾಗಿ ಶೋಷಿಸಿದ ಬೇರೊಂದು ವರ್ಗವಿಲ್ಲ. ಹಾಗಾಗಿ ಭಾರತದ ಅವನತಿಗೆ ಇವರೇ ಕಾರಣವೆಂದು ಬರೆದಿದ್ದಾರೆ.

ಭಾರತ ಪುನಶ್ಚೇತನಗೊಳ್ಳಬೇಕಾದರೆ 'ಶೂದ್ರ ಶಕ್ತಿ' ಮತ್ತೆ ಚೈತನ್ಯ ಹೊಂದಬೇಕಾದುದು ಅನಿವಾರ್ಯವೆಂದು ಸ್ವಾಮಿ ಸ್ಪಷ್ಟವಾಗಿ ಅಭಿಪ್ರಾಯಪಟ್ಟರು. ದಕ್ಷಿಣ ಭಾರತದ ಬ್ರಾಹ್ಮಣ ದಬ್ಬಾಳಿಕೆಯನ್ನು ವಿವೇಕಾನಂದರು ಖಂಡಿಸಿದ ತರುವಾಯ ಅದುವರೆಗೆ ಹಿಂಜರಿಯುತ್ತಿದ್ದ ಜನಸ್ತೋಮಕ್ಕೆ ಧೈರ್ಯ ಬಂದಿರಬೇಕು. ದಕ್ಷಿಣ ಭಾರತದಲ್ಲಿ ಸ್ವಾಮಿ ವಿವೇಕಾನಂದರು ಹೊಸ ಅರಿವಿನ ಹರಿಕಾರರಾದರೆನ್ನುವ ಅಂಶವನ್ನು ಆ ಕಾಲದಲ್ಲಿ ತಲೆಯೆತ್ತಿದ ಅಸಂಖ್ಯಾತ ವಿವೇಕಾನಂದ ಸಮಾಜಗಳನ್ನು ಗಣನೆಗೆ ತೆಗೆದುಕೊಂಡರೆ ತಿಳಿಯಬಹುದು. ಬ್ರಾಹ್ಮಣೇತರರಲ್ಲಿ ಸುಶಿಕ್ಷಿತರಾದವರು ಹಾಗೂ ಪ್ರಭಾವಿಗಳು ಈ ಚಳವಳಿಯಲ್ಲಿ ಭಾಗವಹಿಸಿದ್ದರು.[೪] ಸ್ವಾಮಿ ವಿವೇಕಾನಂದರು ಕರ್ನಾಟಕದಲ್ಲಿ ವ್ಯಾಪಕವಾಗಿ ಪ್ರವಾಸ ಮಾಡಿದರು. ಬೆಳಗಾವಿಯಿಂದ ಹೊರಟು ಅನೇಕ ಮುಖ್ಯ ಊರುಗಳಲ್ಲಿ ಬೀಡು ಬಿಟ್ಟು, ಉಳ್ಳವರು ಇಲ್ಲದವರಿಗೆ ಬೌದ್ಧಿಕವಾಗಿ ಹಾಗೂ ಭೌತಿಕವಾಗಿ ಸಹಾಯ ಮಾಡಬೇಕೆಂದು ಆಗ್ರಹಪಡಿಸಿದರು. ಸ್ವಾಮಿ ವಿವೇಕಾನಂದರು ಎಷ್ಟು ಜನಪ್ರಿಯರಾಗಿದ್ದರೆಂದರೆ ಅವರು ಉಪನ್ಯಾಸ ನೀಡುವ ಸ್ಥಳಗಳಲ್ಲಿ ಕಿಕ್ಕಿರಿದ ಜನಸ್ತೋಮವನ್ನು ಹಿಡಿಯಲಾರದೆಂದು ಕಂಡುಬಂದಾಗ ವಿಶಾಲವಾದ ಸ್ಥಳಗಳಿಗೆ ಸ್ಥಳಾಂತರಿಸಬೇಕಾದ ಅನಿವಾರ್ಯತೆಯುಂಟಾಗುತ್ತಿತ್ತು.[೫]

ಬ್ರಾಹ್ಮಣರು ಹಾಗೂ ಬನಿಯಾ ಜನಾಂಗದವರು ಹಿಂದುಳಿದವರನ್ನು ಶೋಷಣೆಗೆ ಗುರಿಪಡಿಸುತ್ತಿರುವ ಸಂಗತಿ ಗಮನಕ್ಕೆ ತಂದಾಗ ಈ ಮೇಲ್ವರ್ಗದವರ ಬಾಯಿಂದ ಮಾತು ಹೊರಡದೆ ನಿರುತ್ತರರಾದರು. ಯಾವುದೇ ರಾಷ್ಟ್ರವಾದಿ ಸಂಘಟನೆ ವಿವೇಕಾನಂದರ ಪ್ರಶ್ನೆಗೆ ಪ್ರತಿಕ್ರಿಯೆ ವ್ಯಕ್ತಪಡಿಸದ ಸಂಗತಿ ಅಚ್ಚರಿಯುಂಟು ಮಾಡುವಂಥಾದ್ದಾಗಿದೆ.[೬]

ಶೂದ್ರರು ಮತ್ತು ಅದರಲ್ಲೂ ವಿಶೇಷವಾಗಿ ಅಸ್ಪೃಶ್ಯರಲ್ಲಿ ಅರಿವು ಮೂಡಿಸುವಲ್ಲಿ ಸ್ವಾಮಿ ವಿವೇಕಾನಂದರು ಅನುಸರಿಸಿದ ಮಾರ್ಗ ತಿಳಿವಳಿಕೆ ನೀಡುವಂಥದ್ದಾಗಿತ್ತು. ಅಸಮಾನವಾದ ಶೃಂಖಲೆಗಳಿಂದ ಬಂಧಿಸಲ್ಪಟ್ಟ ಜನತೆಯನ್ನು ಬಿಡುಗಡೆಗೊಳಿಸುವಂಥ ರೀತಿಯಲ್ಲಿ ಎಚ್ಚರಗೊಳ್ಳಿ ಎಂದು ಸಮೀಪ ಬಂದವರಿಗೆ ಮೊದಲು ಉಪದೇಶ ಮಾಡುತ್ತಿದ್ದರು. ಅಸ್ಪೃಶ್ಯರ ಸ್ಥಿತಿಗತಿಗಳನ್ನು ಸುಧಾರಿಸಲು ಕಾರ್ಯಕ್ರಮ ಹಾಕಿಕೊಳ್ಳುವಂತೆ ಸಂಸ್ಥಾನದ ಅಳರಸರ ಮನವೊಲಿಸಿದ ವಿವೇಕಾನಂದರ ಕೊಡುಗೆ ಅಪಾರವಾಗಿದೆ. ಶೂದ್ರರನ್ನು, ಅದರಲ್ಲೂ ವಿಶೇಷವಾಗಿ ಅತಿ 'ಶೂದ್ರ' ರನ್ನು ತೆಕ್ಕೆಗೆ ತೆಗೆದುಕೊಂಡು ಅವರಿಗೆ ಶಿಕ್ಷಣ ನೀಡಿ ಮೇಲುಜಾತಿಯವರು ಅವರ ಶೋಷಣೆ ಮಾಡದಂತೆ ತಪ್ಪಿಸಬೇಕೆಂದು ಆಗ್ರಹಪಡಿಸಿದರು. ಸ್ವಾಮಿ ವಿವೇಕಾನಂದರ ಶಿಕಾಗೋ ಪ್ರವಾಸಕ್ಕೆ ಧನಸಹಾಯ ಮಾಡಿದ ದಕ್ಷಿಣ ಭಾರತದ ದೊರೆಗಳು ಅವರ ತ್ಯಾಗ ಮನೋಭಾವ, ವಿಶಾಲ ಹೃದಯದ ದರ್ಶನದಿಂದ ಅವರ ಬಗ್ಗೆ ತುಂಬಾ ಗೌರವ ಹೊಂದಿದ್ದರು. ಈ ಸಾಮಿಪ್ಯವನ್ನು ಉಪಯೋಗಿಸಿಕೊಂಡು ವಿವೇಕಾನಂದರು ಪತ್ರಮುಖೇನ, ಅನೇಕ ವೇಳೆ ವ್ಯಕ್ತಿಶಃ ಪ್ರಭಾವೀ ಜನರನ್ನು ಭೇಟಿ ಮಾಡಿ ಅಸ್ಪೃಶ್ಯರ ಸ್ಥಿತಿಗತಿಗಳನ್ನು ಉತ್ತಮಪಡಿಸುವಂತೆ ಕೇಳಿಕೊಳ್ಳುತ್ತಿದ್ದರು.[೭] ಸ್ವಾಮಿಯವರ ಆಗ್ರಹದ ಪರಿಣಾಮವಾಗಿ ದೇಶೀಯ ರಾಜರು ಶೂದ್ರರು ಮತ್ತು ಅಸ್ಪೃಶ್ಯರಿಗೆ ಶೈಕ್ಷಣಿಕ ಸೌಲಭ್ಯ ಮತ್ತು ರಿಯಾಯಿತಿಗಳನ್ನು ನೀಡಲು ಉತ್ತೇಜಿತರಾದರು.[೮]

ದಕ್ಷಿಣ ಭಾರತದಲ್ಲಿ ಸ್ವಾಮಿ ವಿವೇಕಾನಂದರು ಬೇರೆ ಏನೇ ಪ್ರಭಾವ ಬೀರಿರಲಿ, ಆದರೆ ಬ್ರಾಹ್ಮಣೇತರರು ಪ್ರಗತಿಪಥದಲ್ಲಿ ಮುಂದುವರಿಯುವಂತೆ ಅವರನ್ನು ಸಚೇತನಗೊಳಿಸಿದುದು ಮಾತ್ರ ಉಲ್ಲೇಖಾರ್ಹವಾದ ಅವರ ಅತಿ ಮುಖ್ಯವಾದ ಕೊಡುಗೆಯಾಗಿದೆ. ಸ್ವಾಮಿಯವರ ಉಪದೇಶದಲ್ಲಿ ರಾಷ್ಟ್ರಪ್ರೇಮ ಅಂತಸ್ಥವಾಗಿತ್ತಲ್ಲದೆ ಅಸಮಾನತೆಯಿಲ್ಲದ ವ್ಯವಸ್ಥೆಯನ್ನು ಅದು ನಿರೀಕ್ಷಿಸಿದ್ದರಿಂದ ಜನರು ಅವರ ಸಲಹೆಗಳನ್ನು ಸಂಪೂರ್ಣವಾಗಿ ಸ್ವೀಕರಿಸಿದರು. ಜಾತಿವ್ಯವಸ್ಥೆ ಸಂಪೂರ್ಣವಾಗಿ ಇಲ್ಲವಾಗಲಿ ಎಂದು ವಿವೇಕಾನಂದರು ಉಪದೇಶಿಸಲಿಲ್ಲವಾದರೂ,

ಜಾತಿ ಜಾತಿಗಳ ನಡುವೆ ಸಮಾನತೆ ಇರಬೇಕೆಂದು ಒತ್ತಾಯಿಸಿದರು. ಹಾಗೆಯೇ ಸ್ತ್ರೀಯರ 'ಸಂಪೂರ್ಣ ಸ್ವಾತಂತ್ರ್ಯ' ಬೇಡಿಕೆಯೂ ಕೂಡ ಅವರ ಕಾರ್ಯಕ್ರಮದಲ್ಲಿರಲಿಲ್ಲ. ಸ್ತ್ರೀಯರಿಗೆ ಶಿಕ್ಷಣ ನೀಡಬೇಕಾದ ಅಗತ್ಯವನ್ನಂತೂ ಅವರು ದಣಿವರಿಯದೆ ಒತ್ತಾಯಿಸುತ್ತಿದ್ದರು. ಸ್ವಾಮಿ ಏಕಕಾಲದಲ್ಲಿ ಹಿಂದೂ ಪುನರುಜ್ಜೀವನವಾದಿ, ಅತ್ಯಂತ ಶ್ರೇಷ್ಠ ಮಟ್ಟದ ಸುಧಾರಕರು, ಶೂದ್ರ–ಅಸ್ಪೃಶ್ಯ ಜನಾಂಗದ ಪರವಾಗಿ ದುಡಿದ ನಾಯಕರು. ಎಲ್ಲಕ್ಕಿಂತ ಮಿಗಿಲಾಗಿ ಅವರು ಸೋಲರಿಯದ ರಾಷ್ಟ್ರವಾದಿ. ಈ ರಾಷ್ಟ್ರದ ಪುನರ್ನಿರ್ಮಾಣ ಖಂಡಿತವಾಗಿ 'ಕೋಟಿ ಕೋಟಿ ಜನಸಾಮಾನ್ಯರ' ಅಂದರೆ ದುಡಿಯುವ ವರ್ಗದವರ ಪುನಶ್ಚೇತನದಲ್ಲಿ ಅಡಗಿದೆ ಎಂದು ಅವರು ನಿಸ್ಸಂದಿಗ್ಧವಾಗಿ ಘೋಷಿಸಿದ ಬಳಿಕ ಅವರ ಪರಿಕಲ್ಪನೆಯ ರಾಷ್ಟ್ರ ಏಂಥದು ಎಂದು ಮನದಟ್ಟಾಗುತ್ತದೆ. ಹೆಚ್ಚೂ ಕಡಿಮೆ ನಿಂತ ನೀರಾಗಿದ್ದ ದಕ್ಷಿಣ ಭಾರತದ ಸಮಾಜದಲ್ಲಿ ಪ್ರಜಾಸತ್ತಾತ್ಮಕ ರಾಷ್ಟ್ರವಾದದ ತಂಗಾಳಿ ಬೀಸುವಂತೆ ಮಾಡಿದ ಹರಿಕಾರರು, ವಿವೇಕಾನಂದರು ಎಂದು ತಿಳಿಯಬಹುದು. ಅವರ ಶಿಷ್ಯರಲ್ಲಿ ಎಲ್ಲ ವರ್ಗದಿಂದ ಬಂದ ಮಂದಿಯಿದ್ದರು. ರಾಜಕುಮಾರರು, ಬಡವರು, ವ್ಯಾಪಾರಿಗಳು, ಜಮೀನುದಾರರು, ಕಾರ್ಮಿಕರು ಇತ್ಯಾದಿ. ಆದರೆ ತಮ್ಮ ಪ್ರಯತ್ನಗಳು ಫಲಪ್ರದವಾಗಿವೆಯೇ ಎಂಬುದನ್ನು ತಿಳಿಯುವಷ್ಟು ದೀರ್ಘಕಾಲ ಸ್ವಾಮಿ ಬದುಕಲಿಲ್ಲ. ಅವರು ಹುಟ್ಟುಹಾಕಿದ ಚಳವಳಿಯು ಅನಂತರ ಮಹಾತ್ಮ ಗಾಂಧಿಯವರು ಪ್ರಾರಂಭಿಸಿದ ರಾಷ್ಟ್ರೀಯ ಮುಖ್ಯ ಪ್ರವಾಹದಲ್ಲಿ ಲೀನವಾಯಿತು.

ಸ್ವಾಮಿ ವಿವೇಕಾನಂದರ ಉಪದೇಶದ ಫಲವಾಗಿ ಅನೇಕ ಬ್ರಾಹ್ಮಣೇತರ ಶ್ರೀಮಂತರು ಮತ್ತು ದಾನಿಗಳು ಶಾಲೆಗಳು ಹಾಗೂ ವಿದ್ಯಾರ್ಥಿ ನಿಲಯಗಳನ್ನು ಕಟ್ಟಿದರು, ಶಿಷ್ಯವೇತನಗಳನ್ನು ಪ್ರಾರಂಭಿಸಿದರು, ತಮ್ಮ ಜನಾಂಗದವರ ಪುರೋಭಿವೃದ್ಧಿಗಾಗಿ ಶ್ರಮಿಸಿದರು. ಆ ಕಾಲದಲ್ಲೇ ವೀರಶೈವ ಮಹಾಸಭಾ (೧೯೦೪), ಮೈಸೂರು ಲಿಂಗಾಯಿತ ಶೈಕ್ಷಣಿಕ ದತ್ತಿ ಸಂಘ (೧೯೦೫), ಒಕ್ಕಲಿಗರ ಸಂಘ (೧೯೦೬), ಕೇಂದ್ರೀಯ ಮಹಮದೀಯ ಸಂಘ (೧೯೦೯) ಸ್ಥಾಪಿತವಾದವು. ಅದಕ್ಕಿಂತ ಒಂದು ದಶಕಕ್ಕೆ ಮೊದಲು ಧಾರವಾಡದ ಲಿಂಗಾಯಿತ ಶೈಕ್ಷಣಿಕ ಸಂಘ (೧೮೮೩) ಸ್ಥಾಪನೆಗೊಂಡಿದ್ದರೆ, ಬಾಗಲಕೋಟೆಯ ಬಸವೇಶ್ವರ ವಿದ್ಯಾವರ್ಧಕ ಸಂಘವು ೧೯೦೬ರಲ್ಲಿ ಅಸ್ತಿತ್ವಕ್ಕೆ ಬಂದಿತು.

ಈ ಕೋಮಿನ ನಾಯಕರುಗಳಿಗೆ ಹೆಚ್ಚುತ್ತಿದ್ದ ಬ್ರಾಹ್ಮಣರ ಪ್ರಾಬಲ್ಯದಿಂದ ದಿಗಿಲಾಗಿದ್ದುದು ನಿಜ.[೯] ಬ್ರಾಹ್ಮಣರು ರಾಜಕೀಯವಾಗಿ ಹೆಚ್ಚು ಸದೃಢವಾಗುತ್ತಾ ಮೇಲೆ ಬಂದ ಕಾರಣ ಜಾತೀಯ ರಾಜಕಾರಣಕ್ಕೆ ಹೆಚ್ಚಿನ ಪ್ರಾಮುಖ್ಯತೆ ಪ್ರಾಪ್ತವಾಯಿತು. ೧೯ನೇ ಶತಮಾನದ ಕೊನೆಯ ಭಾಗದಲ್ಲಿ ಸರ್ಕಾರದ ಅಧಿಕಾರದಿಂದ ಆಕರ್ಷಿತರಾದ ಕಾರಣ ಬ್ರಾಹ್ಮಣೇತರ ಸುಶಿಕ್ಷಿತರು ಹಾಗೂ ಗ್ರಾಮಾಂತರ ಪ್ರದೇಶದ ಮಂದಿ ನಗರ ಕೇಂದ್ರಗಳತ್ತ ಹರಿಯಲು ಪ್ರಾರಂಭಿಸಿದರು. ಈ ವಲಯಗಳಿಗೆ ಅವರು ಪದಾರ್ಪಣ ಮಾಡಲು ಪ್ರಾರಂಭಿಸಿದಾಗ ಸಹಜವಾಗಿಯೇ ಅಧಿಕಾರದ ರುಚಿ ಕಂಡ ಬ್ರಾಹ್ಮಣರು ಅವರ ಚಲನೆಯನ್ನು ಪ್ರತಿರೋಧಿಸಲು ಮುಂದಾದರು. ಹೊಸ ಸವಾಲನ್ನು ಎದುರಿಸಲು ಬ್ರಾಹ್ಮಣರು ಒಗ್ಗಟ್ಟು ಸಾಧಿಸಲು ಕಾರ್ಯಕ್ರಮ ಹಾಕಿಕೊಂಡರು. ಅಲ್ಲಿ ಇಲ್ಲಿ ಅಪರೂಪಕ್ಕೆ ಕೇಳಿ ಬರುತ್ತಿದ್ದ ಅಬ್ರಾಹ್ಮಣರ ಅಹವಾಲುಗಳು ಪತ್ರಿಕೆಗಳ ಮೂಲಕ ಈಗ ಹೆಚ್ಚು ಹೆಚ್ಚು ಕೇಳಿಬರಲು ಶುರುವಾಯಿತು.[೧೦]

ಜಾತಿ ಮೂಲವಾದ ಈ ಬೆಳವಣಿಗೆಯ ಪರಿಣಾಮವಾಗಿ ವಸಾಹತು–ವಿರೋಧಿ ಚಳವಳಿಯು ನೇರವಾಗಿ ವರ್ಧಿಸಲು ಸಹಜವಾಗಿಯೇ ಅಡ್ಡಿಯಾಯಿತು. ಇದರಿಂದ ಕಾಂಗ್ರೆಸ್ಸಿಗರು ಮತ್ತು ಇತರೆ ಮಂದಗಾಮಿ ರಾಷ್ಟ್ರವಾದಿಗಳು ಬೇರೆ ಬೇರೆ ಪ್ರತ್ಯೇಕವಾದ ಸಾಮಾಜಿಕ ಗುಂಪುಗಳು ಉದ್ಭವವಾಗಿ ಅನಾರೋಗ್ಯಕರವಾದ ಸ್ಪರ್ಧೆ, ಸಂಘರ್ಷವೇರ್ಪಡುವುದೆಂದು ಶಂಕಿಸಿದರು. ಆದರೆ ಬ್ರಾಹ್ಮಣೇತರ ನಾಯಕರು

ಈ ದಿಗಿಲಿಗೆ ಸಮರ್ಪಕವಾದ ಉತ್ತರ ನೀಡಿದರು. ಧಾರವಾಡದಲ್ಲಿ ೧೯೦೪ರಲ್ಲಿ ಸಮಾವೇಶಗೊಂಡಿದ್ದ ವೀರಶೈವ ಮಹಾಸಭೆಯಲ್ಲಿ ಸಿರಸಿಂಗಿ ಲಿಂಗರಾಜರು ಹೀಗೆ ಮಾತನಾಡಿದರು:

"ಕೆಲವು ಕಾಂಗ್ರೆಸ್ ರಾಷ್ಟ್ರಪ್ರೇಮಿಗಳು ಈ ಬಗೆಯ ಜಾತಿಮೂಲದ ಸಮಾವೇಶಗಳಿಂದಾಗಿ ರಾಷ್ಟ್ರೀಯ ಐಕ್ಯತೆ ಸಾಧನೆಯ ಹಾದಿಯಲ್ಲಿ ತೊಡಕಾಗುವುದಾಗಿ ತಿಳಿಸಿದ್ದಾರೆ. ಈ ವಾದದಲ್ಲಿ ಏನೇನೂ ಹುರುಳಿಲ್ಲ. ಪ್ರತಿಯೊಂದು ಕುಟುಂಬ ಮತ್ತು ಪ್ರತಿಯೊಂದು ಜನಾಂಗ ಉತ್ತಮವಾಗಲು ಪ್ರಯತ್ನಿಸಿದ್ದೇ ಆದರೆ ರಾಷ್ಟ್ರದ ಪ್ರಗತಿ ಕಟ್ಟಿಟ್ಟ ಬುತ್ತಿ .......... ಏಕೆಂದರೆ, ಒಂದು ರಾಷ್ಟ್ರವೆಂದರೆ ಈ ಎಲ್ಲ ಜನಸಮುದಾಯದ ಮೊತ್ತವಲ್ಲವೇ? .......... ಪ್ರತಿಯೊಂದು ಜಾತಿವರ್ಗ ತನ್ನ ಸ್ಥಿತಿಗತಿಯನ್ನು ಉತ್ತಮಪಡಿಸಿಕೊಳ್ಳಲು ಪ್ರಯತ್ನಿಸಿದಾಗ, ರಾಷ್ಟ್ರದ ಐಕ್ಯತೆಯನ್ನು ಸಾಧಿಸುವುದು ಸುಲಭವೇ ಸರಿ. ಬ್ರಾಹ್ಮಣರು, ಜೈನರು, ಮುಸಲ್ಮಾನರು ಮತ್ತು ಇತರೆ ಎಲ್ಲಾ ಸಮುದಾಯದವರು ತಮ್ಮ ಮಹಾಸಭೆಗಳನ್ನು ಸಂಘಟಿಸಿಕೊಳ್ಳಲಿ, 'ರಾಷ್ಟ್ರೀಯ ಹಿತಕ್ಕೆ' ಯಾವ ರೀತಿಯ ಧಕ್ಕೆಯೂ ಉಂಟಾಗುವುದಿಲ್ಲ. ಬ್ರಾಹ್ಮಣ ಸಮುದಾಯದ ಬಗ್ಗೆ ವ್ಯಂಗ್ಯ ನುಡಿಯಲೋ ಎಂಬಂತೆ ಅವರು ಮುಂದುವರಿದು ಹೇಳಿದರು, ಎಲ್ಲಾ ಕೋಮಿನ ಜನರಲ್ಲಿ ಇರುವ ಸಮಸ್ಯೆಗಳ ಪರಿಹಾರಕ್ಕಾಗಿ, ಒಗ್ಗಟ್ಟಿನ ಪ್ರಯತ್ನಕ್ಕೆ ಅವರು ಬೆಂಬಲ ನೀಡಲಿ. ಈ ವಿಷಯದಲ್ಲಿ ಯಾವುದೇ ಸ್ವಾರ್ಥ ಸಾಧನೆ ಹಾಗೂ ಅನೀತಿಗೆ ಇಲ್ಲಿ ಸ್ಥಾನವಿಲ್ಲ. ಅತ್ಯಂತ ಮುಂದುವರಿದ ಜನಸಮುದಾಯದವರು ಹಿಂದುಳಿದ ಕೋಮಿನ ಜನರ ಬಗ್ಗೆ ಸಹಾನುಭೂತಿ ಮತ್ತು ಸಹಕಾರ ತೋರಬೇಕು. ದೇಶದ ಐಕ್ಯತೆಗೆ ಭಂಗ ಬಾರದ ರೀತಿಯಲ್ಲಿ ಎಲ್ಲರೂ ರಕ್ಷಣೆಗೆ ನಿಲ್ಲಬೇಕು. ಇದು ಅತ್ಯಂತ ಮುಖ್ಯವಾದ ಸಂಗತಿ. ಈ ಮಹಾಸಭೆಯು ಸ್ಥಾಪನೆಗೊಳ್ಳುವ ಹಿನ್ನೆಲೆಯಲ್ಲಿ ಪ್ರೇರಣೆ ನೀಡಿರುವ ಸಂಗತಿಗಳಿವೆ. ಹಾಗಾಗಿ ನಮಗೆ ಯಾವುದೇ ಜನಸಮುದಾಯದ ವಿರುದ್ಧ ಜಗಳ ಹೂಡಬೇಕೆಂಬ ಮನಸ್ಸಾಗಲಿ ಅವರನ್ನು ಅವಹೇಳನ ಮಾಡಬೇಕೆನ್ನುವ ಇಚ್ಛೆಯಾಗಲಿ ಇಲ್ಲ. ನನ್ನ ಸಹಧರ್ಮೀಯರು ಈ ವಿಷಯವನ್ನು ಅನವರತವೂ ನೆನಪಿನಲ್ಲಿಟ್ಟುಕೊಳ್ಳಲಿ".[೧೧]

ಸರಕಾರಿ ಸೇವೆಯಲ್ಲಿ ಒಂದೇ ಜಾತಿಗೆ ಸೇರಿದ ಮಂದಿ ಬಹಳವಾಗಿ ಕಾಣಬಾರದೆಂಬುದು ವಸಾಹತು ಆಡಳಿತದ ನೀತಿಯಾಗಿತ್ತು.[೧೨] ಆದರೆ ಬ್ರಾಹ್ಮಣರಲ್ಲದೆ ಇತರ ಜಾತಿಗಳಲ್ಲಿ ಅಗತ್ಯವಾದ ಸೇವೆಗೆ ಅರ್ಹರಾದವರು ದುರ್ಲಭವಾದ ಕಾರಣ ಬ್ರಾಹ್ಮಣ ವರ್ಗದವರೇ ಹೆಚ್ಚು ಸೇರಿಕೊಂಡದ್ದು ಅನಿವಾರ್ಯವಾಗಿದೆ.[೧೩] ಜಾತಿ ರಾಜಕಾರಣವು ತಲೆಯೆತ್ತಿದ ಹಿನ್ನೆಲೆಯಲ್ಲಿ ಸರಕಾರ ಬಹುಸಂಖ್ಯಾತ ಕೋಮಿನ ಜನರಿಗೆ ಪ್ರಾಶಸ್ತ್ಯ ನೀಡಿದುದು ಸಹಜವೇ ಆಗಿದೆ. ಜಾತಿ ರಾಜಕಾರಣವು ಸದೃಢಗೊಳ್ಳಲು ಈ ರೀತಿಯಾಗಿ ಅನೇಕ ಅಂಶಗಳು ಪಾತ್ರವಹಿಸಿರುವುದನ್ನು ಗಮನಿಸಬಹುದು. ತಮ್ಮ ಅಸ್ತಿತ್ವವನ್ನು ಭದ್ರಪಡಿಸಿಕೊಳ್ಳುವ ದೃಷ್ಟಿಯಿಂದಲೂ ವಸಾಹತುಶಾಹಿಗಳು ಸರಕಾರಕ್ಕೆ ನಿಷ್ಠೆ ತೋರುವ ಗುಂಪನ್ನು ಬೆಳೆಸಿಕೊಂಡು ರಕ್ಷಿಸಿದ್ದು ಮುಖ್ಯವಾದ ಬೆಳವಣಿಗೆಯಾಗಿದೆ. ಯಾವುದೇ ಒಂದು ಜನಾಂಗದವರಿಗೆ ಉದ್ಯೋಗವನ್ನು ನೀಡದೆ ಲಭ್ಯವಾದ ಸ್ಥಾನಗಳನ್ನು ಎಲ್ಲ ಜನಾಂಗದವರಿಗೂ ಹಂಚುವಂತೆ ವಸಾಹತು ಸರ್ಕಾರ ದೇಶೀಯ ಸಂಸ್ಥಾನಗಳಿಗೆ ಸೂಚನೆ ನೀಡಿತ್ತು. ಬೊಂಬಾಯಿ ಮತ್ತು ಮದರಾಸು ಸರ್ಕಾರಗಳು ಇದಕ್ಕೆ ಒಪ್ಪಿ ನಡೆದವು.[೧೪] ನಾಮಕರಣದ ಮೂಲಕ ತಮ್ಮ ಕೃಪಾಕಟಾಕ್ಷವನ್ನು ಬೀರುವ ತಿರುಚುವ ಹುನ್ನಾರನ್ನು ಬಳಸಿಕೊಂಡು ಸರ್ಕಾರಗಳು ಸ್ಥಳೀಯ ಮಂಡಳಿಗಳು, ಶೈಕ್ಷಣಿಕ ಸಮಿತಿಗಳು, ದೇವಸ್ಥಾನಗಳ ಸಮಿತಿಗಳು ಇತ್ಯಾದಿಗಳಿಗೆ ನಗರ ಪ್ರದೇಶಗಳಲ್ಲಿ ಕೆಲವು ಜಾತಿಗಳಿಗೆ ಉನ್ನತ ಸ್ಥಾನ ಕೊಟ್ಟಿತು. ಎಲ್ಲಾ ಜಾತಿಯವರೂ ಇದರಲ್ಲಿ ಇಚ್ಛಿವುಳ್ಳವರಾಗಿದ್ದರು ಎಂದು ಹೇಳಲು ಬರುವುದಿಲ್ಲ. ಒಟ್ಟಿನಲ್ಲಿ ಕ್ಷೇತ್ರೀಯ ಅಥವಾ ಪ್ರಾಂತೀಯ ಹಂತದಲ್ಲಿ ರಾಜಕಾರಣವು ಜಾತಿಯಾಧಾರದ ಮೇಲೆ ಧ್ರುವೀಕರಣಗೊಂಡದ್ದನ್ನು ನಾವು ಕಾಣುತ್ತೇವೆ. ಜಾತ್ಯಾತೀತವಾದ ರಾಷ್ಟ್ರವಾದಿ ರಾಜಕಾರಣಕ್ಕೆ ಇದರಿಂದ ಸುತರಾಂ ಸ್ಥಾನವಿಲ್ಲದಂತಾಯಿತು ಎಂದೂ

ಪೇಳುವಂತಿಲ್ಲ. ಆದರೆ ಅದರ ಪ್ರಾಮುಖ್ಯತೆ ಆ ಸಂದರ್ಭದಲ್ಲಿ ಕಡಿಮೆಯಾಯಿತು ಎಂದಷ್ಟೇ ಇದರ ಅರ್ಥ.

೧೯೦೭ರಲ್ಲಿ ವರ್ಗ ಪ್ರಾತಿನಿಧ್ಯ ನೀಡುವುದರ ವಿರುದ್ಧ ಬ್ರಾಹ್ಮಣೇತರರು ಇತರರೊಡಗೂಡಿ ಭಾರತ ಸರ್ಕಾರದ ವಿರುದ್ಧ ದನಿಯೆತ್ತಿದ್ದವರು ಬದಲಾದ ಸನ್ನಿವೇಶದಲ್ಲಿ ಜಾತಿ ಪ್ರಾತಿನಿಧ್ಯ ನೀಡಬೇಕೆಂದು ಒತ್ತಾಯಿಸಲು ಪ್ರಾರಂಭಿಸಿದುದು ಗಣನೀಯವಾಗಿದೆ.[೧೫] ಈ ನಡುವಿನ ಕಾಲಮಾನದಲ್ಲಿ ವಸಾಹತುಶಾಹಿ ಹಾಗೂ ಕೋಮುವಾದದ ಬೆಳವಣಿಗೆಯಿಂದಾಗಿ ಈ ಬದಲಾವಣೆ ತಲೆದೋರಿತು ಎನ್ನಬೇಕು.

ಅನೇಕ ಬ್ರಾಹ್ಮಣ ರಾಷ್ಟ್ರವಾದಿಗಳು ಈ ವಿಚಾರವಾಗಿ ನೀಡಿರುವ ಕೊಡುಗೆಯನ್ನು ನಾವು ಮರೆಯಲಾಗದು. ಕರ್ಜನ್‌ನ ದಬ್ಬಾಳಿಕಾ ನೀತಿಯಿಂದಾಗಿ ಅನೇಕ ಉಗ್ರಗಾಮಿ ರಾಷ್ಟ್ರವಾದಿಗಳಲ್ಲಿ ಕ್ರಾಂತಿಕಾರಿ ಭಯೋತ್ಪಾದನೆ ತಲೆದೋರಿದರೆ, ಹೆಚ್ಚುತ್ತಿದ್ದ ಬ್ರಾಹ್ಮಣೇತರರ ಪ್ರಜಾಸತ್ತಾತ್ಮಕ ಆಕಾಂಕ್ಷೆಗಳನ್ನು ಸಹಿಸದ ಕಾಂಗ್ರೆಸ್ಸಿಗರು ಜಾತಿಮೂಲದ ಕೋಮು ಚಳವಳಿಗೆ ಕುಮ್ಮಕ್ಕು ನೀಡಿದರು. ಈ ಎರಡೂ ಬಣಗಳವರು ನೀಡಿದ ಕೊಡುಗೆ ನಕಾರಾತ್ಮಕವಾದುದೆಂದು ನಾವು ತೀರ್ಮಾನಕ್ಕೆ ಬರಬಹುದು. ಮಾರ್ಲೆ-ಮಿಂಟೋ ಸುಧಾರಣೆಯ ಮೂಲಕ ಮುಸಲ್ಮಾನರಿಗೆ ಪ್ರತ್ಯೇಕ ಮತಕ್ಷೇತ್ರ ನೀಡಿದ್ದು ಪರಿಣಾಮವಾಗಿ ಇದರಿಂದ ಉತ್ತೇಜಿತರಾದ ಬ್ರಾಹ್ಮಣೇತರರು ತಮಗೂ ಪ್ರತ್ಯೇಕ ಮತಕ್ಷೇತ್ರ ನೀಡಬೇಕೆಂದು ಒತ್ತಾಯಿಸಿದರು. ವ್ಯಂಗ್ಯವೆಂದರೆ, ರಾಷ್ಟ್ರವಾದಿಗಳೆಂದು ಕರೆಸಿಕೊಳ್ಳುವವರಾಗಲಿ, ಕೋಮುವಾದಿಗಳಾಗಲಿ ವಸಾಹತುವಿನ ಷಡ್ಯಂತ್ರವನ್ನು ಅರ್ಥ ಮಾಡಿಕೊಳ್ಳಲಿಲ್ಲ. ಈ ಎರಡೂ ಗುಂಪಿನವರು ತಮ್ಮ ವಿರೋಧಿ ಗುಂಪಿನವರಿಗೆ ಕಡಿವಾಣ ಹಾಕಬೇಕೆಂದು ಸರ್ಕಾರವನ್ನು ಕೇಳಿಕೊಂಡದ್ದು ವಿಪರ್ಯಾಸವೆನಿಸುತ್ತದೆ. ರಾಷ್ಟ್ರಮಟ್ಟದಲ್ಲಿ ಹಿಂದು-ಮುಸ್ಲಿಂ ಸಮಸ್ಯೆಯನ್ನು ಇತ್ಯರ್ಥಗೊಳಿಸಲು- ಅದು ತತ್ಕಾಲಿಕವಾಗಿರಬಹುದು, ಇಲ್ಲವೇ ದುರ್ಬಲವಾದ ಆಧಾರದ ಮೇಲೆಯೇ ಇರಬಹುದು- ಪ್ರಯತ್ನಗಳು ನಡೆಯುತ್ತಿರುವಾಗಲೇ, ಅಂದರೆ ವಸಾಹತುಶಾಹಿ ವಿರೋಧಿ ಚಳವಳಿ ಸದೃಢಗೊಳ್ಳುತ್ತಿದ್ದ ಸಂದರ್ಭದಲ್ಲೇ ದಕ್ಷಿಣ ಭಾರತೀಯರು ತಮ್ಮ ತಮ್ಮಲ್ಲೇ ಜಗಳವಾಡಿಕೊಂಡು ವಸಾಹತುಶಾಹಿಯ ಒಡೆದು ಆಳುವ ನೀತಿಗೆ ಪರೋಕ್ಷವಾಗಿ ನೆರವಾದದ್ದೊಂದು ದೊಡ್ಡ ವ್ಯಂಗ್ಯವಾಗಿ ಕಾಣುತ್ತದೆ.

ಬ್ರಾಹ್ಮಣೇತರರು ಅಂತಿಮವಾಗಿ ತಮ್ಮದೇ ಆದ ಒಂದು ಪಕ್ಷವನ್ನು ಕಟ್ಟುವ ಪ್ರಮೇಯ ಬರಲು ಕಾರಣ ಮದರಾಸು ಶಾಸನ ಸಭೆಯ ಚುನಾವಣೆಗಳಲ್ಲಿ ಬ್ರಾಹ್ಮಣೇತರ ಅಭ್ಯರ್ಥಿಗಳೆಲ್ಲ ಸೋತುಹೋದದ್ದು, ವಿಭಿನ್ನ ತಾತ್ವಿಕ ಹಿನ್ನೆಲೆಯ ಬ್ರಾಹ್ಮಣರೆಲ್ಲರೂ ಒಟ್ಟುಗೂಡಿ ಇಂಪೀರಿಯಲ್ ಲೆಜಿಸ್ಲೇಟಿವ್ ಕೌನ್ಸಿಲ್ ಚುನಾವಣೆಗಳಲ್ಲಿ ಸ್ಪರ್ಧಿಸಿದ್ದರು. ಇದರಲ್ಲಿ ಬಹುಪಾಲು ವಿಜಯ ಅವರ ಪಾಲಿಗೇ ಲಭಿಸಿತು. ಉದಾರವಾದಿಗಳಿರಲಿ, ಉಗ್ರಪಂಥದವರಿರಲಿ, ಮಂದಗಾಮಿಗಳಿರಲಿ, ಕಾಂಗ್ರೆಸ್ಸಿಗರಾಗಲಿ ಅಥವಾ ಪಕ್ಷೇತರರಾಗಿರಲಿ, ಸ್ಥಳೀಯ ಮಂಡಳಿಯನ್ನು ಪ್ರತಿನಿಧಿಸಲಿ, ವಿಶ್ವವಿದ್ಯಾನಿಲಯದವರಾಗಿರಲಿ ಅಥವಾ ಭೂ ಒಡೆಯರಾಗಿರಲಿ- ಎಲ್ಲರೂ ಒಟ್ಟಾಗಿ ಸೇರಿ ಬ್ರಾಹ್ಮಣೇತರರನ್ನು ಪರಾಭವಗೊಳಿಸಿದರು. ಬ್ರಾಹ್ಮಣರ ಜಾತಿವಾದದಿಂದ ಬೇಸತ್ತ ಪತ್ರಿಕೆಯೊಂದು ಹೀಗೆ ಬರೆಯಿತು: 'ಮೈಲಾಪೂರ್, ಎಗ್‌ಮೋರ್ ಮತ್ತು ಟ್ರಿಪ್ಲಿಕೇನ್(ಬ್ರಾಹ್ಮಣರು ವಾಸಿಸುತ್ತಿದ್ದ ಮೊಹಲ್ಲಾಗಳ ಹೆಸರಿನಿಂದ ಅವರನ್ನು ಗುರುತಿಸುವಂಥ ಪರಿಪಾಠ ಇದು)ಗಳು ತಮ್ಮ ಹೃದಯವನ್ನು ಶೋಧಿಸಿಕೊಂಡು ಹೇಳಲಿ, ಬ್ರಾಹ್ಮಣೇತರರಲ್ಲಿ ಭಯ ಹುಟ್ಟಿಸುವಂಥ ಕೃತ್ಯವನ್ನು ಅವರು ಎಸಗಿಲ್ಲವೇ' ಎಂದು.[೧೬]

ಜಾತಿ ರಾಜಕಾರಣದ ಹುಟ್ಟು ಮತ್ತು ಬೆಳವಣಿಗೆಗೆ ಅನೇಕ ಅಂಶಗಳು ಕಾರಣವಾಗಿವೆಯಾದರೂ 'ರಾಷ್ಟ್ರವಾದಿ' ನಾಯಕತ್ವವು ಬ್ರಾಹ್ಮಣೇತರ ಮನಸ್ಸಿನಲ್ಲಿ ಮೂಡಿದ ದಿಗಿಲನ್ನು ದೂರ ಮಾಡುವಂಥ

ಯಾವೊಂದು ಪ್ರಯತ್ನವನ್ನು ಮಾಡಲಿಲ್ಲವೆಂಬುದು ಸರ್ವವಿಧಿತ. ಬ್ರಾಹ್ಮಣೇತರರು ಪ್ರಜಾಸತ್ತಾತ್ಮಕ ಮಾರ್ಗದಲ್ಲಿ ತಮ್ಮ ಸ್ಥಿತಿಗತಿಗಳನ್ನು ಉತ್ತಮಪಡಿಸಿಕೊಳ್ಳುವ ಪ್ರಯತ್ನಕ್ಕೆ ರಾಷ್ಟ್ರೀಯ ಐಕ್ಯತೆಯ ಹೆಸರಿನಲ್ಲಿ ಅಡ್ಡಿ ಮಾಡಲು ಬ್ರಾಹ್ಮಣರು ಪ್ರಯತ್ನಿಸಿದುದು ಸ್ಪಷ್ಟವಾಗಿ ಕಾಣುತ್ತದೆ. ಪ್ರಜಾಪ್ರಭುತ್ವದ ಆಧುನಿಕ ಪರಿಕಲ್ಪನೆಯನ್ನು ಮುಂದಿರಿಸಿಕೊಂಡು ಅದರ ಸಾಕ್ಷಾತ್ಕಾರಕ್ಕಾಗಿ ತಾವು ಸತತ ಪ್ರಯತ್ನ ಮಾಡುತ್ತಿರುವುದಾಗಿ ಬ್ರಾಹ್ಮಣರು ಎಷ್ಟೇ ಘೋಷಿಸಿಕೊಂಡರೂ ಅವರ ಕೃತ್ಯಗಳು ಈ ಆಶಯಕ್ಕೆ ವ್ಯತಿರಿಕ್ತವಾಗಿರುವುದು ಕಂಡುಬರುತ್ತದೆ. ಅವರ ನಡತೆಯಲ್ಲಿನ ವಿರೋಧಾಭಾಸದ ಕಾರಣ ಅವರೊಡನೆ ಹೊಂದಾಣಿಕೆ ಮಾಡಿಕೊಳ್ಳಲು ಅನೇಕರಿಗೆ ಸಾಧ್ಯವಾಗಲಿಲ್ಲ. ಬ್ರಾಹ್ಮಣರು ಹಾಗೂ ಬ್ರಾಹ್ಮಣೇತರರು ಎಂಬ ವರ್ಗ ವಿಭಜನೆ ಕೂಡ ವಾಸ್ತವವೂ, ವಸ್ತುನಿಷ್ಠವೂ ಆದುದೆಂದು ಹೇಳಬರುವುದಿಲ್ಲ. ಈ ಸಂಘರ್ಷದ ಪರಿಣಾಮಗಳು ಮಾತ್ರ ತುಂಬಾ ಗಣನೀಯವಾಗಿದ್ದುವು. ರಾಷ್ಟ್ರವಾದದ ಮುಖ್ಯ ಪ್ರವಾಹದಲ್ಲಿ ತಮ್ಮನ್ನು ತಾವು ಗುರುತಿಸಿಕೊಂಡಿದ್ದ ಅನೇಕ ಗ್ರಾಮಾಂತರ ಪ್ರದೇಶದ ಬ್ರಾಹ್ಮಣೇತರರು ತಮ್ಮ ನಿಷ್ಠೆಯನ್ನು ಬದಲಾಯಿಸಿ ಈಗ ತಮ್ಮ ಜಾತಿಯ ಜನರೊಡನೆ ಸೇರಿಕೊಂಡರು. ಬ್ರಾಹ್ಮಣೇತರರ ಗದ್ದಲ ಪರಾಕಾಷ್ಠೆ ಮುಟ್ಟಿದಾಗ ಸಹಜವಾಗಿಯೇ ಅನೇಕರು ಅತ್ತ ಸೆಳೆಯಲ್ಪಟ್ಟರು; ಇದಕ್ಕೆ ಕಾರಣ ಆ ಕಡೆ ಹೊರಳುವುದರಿಂದ ಲಾಭವಿತ್ತು. ಹಾಗಾಗಿ, ಅಬ್ರಾಹ್ಮಣರ ಗುಂಪು ಹೆಚ್ಚು ಹೆಚ್ಚು ಬೆಳೆಯುತ್ತಾ ಹೋಯಿತು; ಇವರಲ್ಲಿ ಸರ್ಕಾರಕ್ಕೆ ನಿಷ್ಠರಾಗಿದ್ದವರು ಮತ್ತು ಕಾಂಗ್ರೆಸ್ಸನ್ನು ಟೀಕಿಸುತ್ತಿದ್ದವರು ಸೇರಿದ್ದರು.

೧೯೦೦–೧೯೧೫ರ ಅವಧಿ ಜಗತ್ತಿನಲ್ಲೇ ಗಮನಿಸಬೇಕಾದ ಒಂದು ಸಂಕ್ರಮಣ ಕಾಲ. ಭಾರತೀಯ ರಾಷ್ಟ್ರವಾದಿ ಚರಿತ್ರೆಯಲ್ಲಂತೂ ಆಂತರಿಕವಾಗಿ ಸಾಮಾಜಿಕ ಬಲಗಳು ತುಮುಲಗೊಂಡಿದ್ದ ಕಾಲ. ತನ್ನದೇ ಆದ ವಿಲಕ್ಷಣತೆಯಲ್ಲಿ ದಕ್ಷಿಣ ಭಾರತ ಹೋರಾಡುತ್ತಿತ್ತಲ್ಲದೆ ಹೆಚ್ಚು ಹೆಚ್ಚು ಆಂತರಿಕ ಸಂಘರ್ಷಗಳು ಮೇಲೆ ಕಾಣಿಸಿಕೊಳ್ಳತೊಡಗಿದವು. ರಾಷ್ಟ್ರೀಯ ಸಂಘಟನೆಯಾಗಿ ಕಾಂಗ್ರೆಸ್ ಪಕ್ಷ ಈ ಬಲಗಳಿಗೆ ಸ್ಫೂರ್ತಿ ನೀಡಲಾರದೆ ಸೋತಿತ್ತು. ಅದರ ಬಗ್ಗೆ ಮಾತನಾಡಲು ಕೂಡ ಕಾಂಗ್ರೆಸ್ ಅನುಯಾಯಿಗಳು ಹಿಂಜರಿಯುತ್ತಿದ್ದರು. ಮುಖ್ಯವಾಗಿ ಲೋಕಸೇವಾ ಆಯೋಗ ಮತ್ತು ನಾಗರೀಕ ಸೇವೆಗಳ ಬಗ್ಗೆ ಅವರು ಹೆಚ್ಚು ಗಮನ ಹರಿಸಿದ್ದರಲ್ಲದೆ ತಿಲಕರನ್ನು ಸೆರೆಮನೆಯಲ್ಲಿಟ್ಟ ತರುವಾಯ ಬ್ರಾಹ್ಮಣೇತರರು ಒಡ್ಡಿದ ಪಂಥಾಹ್ವಾನವನ್ನು ಅವರು ಸ್ವೀಕರಿಸಬೇಕಾದ ಪ್ರಮೇಯವಿತ್ತು.

ವಾಸ್ತವವಾಗಿ ವಸಾಹತು-ವಿರೋಧಿ ಹೋರಾಟದಲ್ಲಿ ಜನಸ್ತೋಮವನ್ನು ಹುರಿದುಂಬಿಸಿ ಮುನ್ನಡೆಸುವ ಸಾಮರ್ಥ್ಯ ಕಾಂಗ್ರೆಸ್ ಪಕ್ಷ ಹಾಗೂ ರಾಷ್ಟ್ರವಾದಿ ಚಳವಳಿಗೆ ಇದೆಯೇ ಎಂದು ಅನೇಕ ರಾಷ್ಟ್ರವಾದಿಗಳೇ ಪ್ರಶ್ನೆ ಹಾಕಿಕೊಳ್ಳುವಂತಾಯಿತು. ಈ ದೌರ್ಬಲ್ಯವನ್ನು ಕುರಿತು ಪತ್ರಿಕೆಗಳು ಸ್ಪಷ್ಟವಾಗಿ ಬರೆದವು "ಹೆಚ್ಚೆಂದರೆ ನಾವು ಪತ್ರಿಕೆಗಳಿಗೆ ಲೇಖನಗಳನ್ನು ಬರೆಯಬಹುದು ಮತ್ತು ಸಾರ್ವಜನಿಕ ಸಭೆಗಳನ್ನು ನಡೆಸಬಹುದು ...... ನಮಗೆ ಕ್ರೋಧವಂತೂ ಇದೆ. ಆದರೆ ನಮ್ಮ ಕೋಪ ಮಿದುಳಿನಿಂದ ತುಟಿಯವರೆಗೆ ಬರುವ ತನಕ ಗುಳ್ಳೆಯಾಗಿ ಒಡೆದುಹೋಗುತ್ತದೆ. ನಾವು ಅಸಹಾಯಕರು.....[೧೭]" "ಬದಲಾದ ರಾಜಕೀಯ ಪರಿಸ್ಥಿತಿಗಳಿಗೆ ಅನುಗುಣವಾಗಿ ಸಂಘಟನೆಯು (ಕಾಂಗ್ರೆಸ್ ಪಕ್ಷ) ರಾಷ್ಟ್ರವಾದಿ ಚಟುವಟಿಕೆಯ ಹೊಸ ಕಾರ್ಯಕ್ರಮವನ್ನು ರೂಪಿಸಬೇಕೆಂದು[೧೮] ದಕ್ಷಿಣ ಭಾರತದ ಎಲ್ಲೆಡೆ ಅಭಿಪ್ರಾಯ ಮೂಡಿತ್ತು. ಆ ಕಾಲದ ತನ್ನ ರೀತಿರಿವಾಜಿನಲ್ಲಿ ಕಾಂಗ್ರೆಸ್ ಪಕ್ಷ ನಿಷ್ಪ್ರಯೋಜಕವಾಗಿದೆ ಎಂದು ಕೂಡ ಹಲವರು ತಿಳಿದಿದ್ದರು.[೧೯] ಕಾಂಗ್ರೆಸ್ ಪೂರ್ತಿಯಾಗಿ ಅಳಿದ ಬಲವಾಗಿ ತೋರದಿದ್ದರೂ ವಾಸ್ತವವಾಗಿ 'ಹೇಳಿಕೊಳ್ಳುವಂಥಾದ್ದು ಏನೂ ಮಾಡಿಲ್ಲವೆಂದು'[೨೦] ಮಾತನಾಡುತ್ತಿದ್ದರು. ಈ ಸಂಗತಿಗಳು ಎಷ್ಟೇ ದುರದೃಷ್ಟಕರವಾದರೂ ದಕ್ಷಿಣ ಭಾರತದಲ್ಲಿ ಆಗ ಪ್ರಚಲಿತವಿದ್ದ ಸತ್ಯವನ್ನು ಪ್ರಕಟಪಡಿಸುತ್ತವೆ.

ಮೊದಲನೆಯ ಮಹಾಯುದ್ಧದ ಪ್ರಾರಂಭ, ತಿಲಕರ ಬಿಡುಗಡೆ, ರಾಷ್ಟ್ರರಾಜಕಾರಣದಲ್ಲಿ ಅನಿ ಬೆಸೆಂಟರು ಕಾಣಿಸಿಕೊಂಡದ್ದು, ಬ್ರಿಟಿಷ್ ವಸಾಹತುಶಾಹಿಯ ಬಗ್ಗೆ ತಮ್ಮ ಅಭಿಪ್ರಾಯವನ್ನು ಟರ್ಕಿ ಮತ್ತು ಕ್ಯಾಲಿಫೇಟ್ ಸಂದರ್ಭದಲ್ಲಿ ಭಾರತೀಯ ಮುಸ್ಲಿಮರು ಬದಲಾಯಿಸಿದ್ದು, ಇಲ್ಲೆಲ್ಲ ೧೯೧೪ರ ನಂತರ ರಾಜಕೀಯ ಸನ್ನಿವೇಶವನ್ನು ಬದಲಾಯಿಸಿದುವು. ಕಾಂಗ್ರೆಸ್ ಮತ್ತು ಮುಸ್ಲಿಂಲೀಗ್ ಲಕ್ನೋ ಒಪ್ಪಂದಕ್ಕೆ ಸಹಿ ಹಾಕಿದವು. ಕಾಂಗ್ರೆಸ್‌ನ ಉಗ್ರವಾದಿ-ಮಂದಗಾಮಿ ಬಣಗಳು ವಿಲೀನಗೊಂಡ ಬಳಿಕ ಬೆಸೆಂಟ್ ಮತ್ತು ತಿಲಕರು ಹೋಂ ರೂಲ್ ಲೀಗ್‌ಗಳನ್ನು ಪ್ರಾರಂಭಿಸಿದರು. ಯುದ್ಧದಲ್ಲಿ ತಮ್ಮ ವಸಾಹತುಗಳಿಂದ ಪರಮಾವಧಿ ಸಹಕಾರವನ್ನು ನಿರೀಕ್ಷಿಸಿದ್ದ ಬ್ರಿಟಿಷ್ ಸರ್ಕಾರ ಭಾರತೀಯ ರಾಷ್ಟ್ರವಾದದ ಬಗೆಗೆ ತನ್ನ ಧೋರಣೆಯಲ್ಲಿ ಸ್ವಲ್ಪ ಮೃದುತ್ವ ಪ್ರಕಟಿಸಿತು:

ಬದಲಾದ ಪರಿಸ್ಥಿತಿಯಲ್ಲಿ ದಕ್ಷಿಣದ ರಾಷ್ಟ್ರವಾದಿಗಳು ಹೆಚ್ಚು ಧೈರ್ಯಶಾಲಿಗಳಾಗಿ ಮೇಲೆ ಕಾಣಿಸಿಕೊಂಡರಲ್ಲದೆ, 'ಪ್ರಾತಿನಿಧ್ಯವಿಲ್ಲದೆ ತೆರಿಗೆಯಿಲ್ಲ' ಎಂದು ಘೋಷಣೆ ಹೊರಡಿಸಿದರು.[೨೧] ಲೇಖನವೊಂದರಲ್ಲಿ ಬೆಸೆಂಟರು 'ಅವರ ಅಭಿಪ್ರಾಯವನ್ನು ಪಕ್ಕಕ್ಕಿಡುವಷ್ಟು ರೈತರು ಅಲಕ್ಷಿಸಬಹುದಾದ ವರ್ಗವಾಗಿ ಇಂದು ಉಳಿದಿಲ್ಲ' [೨೨] ಎಂದು ಹೇಳಿದರು.

ಉತ್ತರ ಮತ್ತು ದಕ್ಷಿಣ ಕರ್ನಾಟಕದಲ್ಲಿ ಹೋಂ ರೂಲ್ ಚಳವಳಿಯ ನೇತಾರರಾಗಿದ್ದ ಬೆಸೆಂಟರಾಗಲೀ ಅಥವಾ ತಿಲಕರಾಗಲಿ ಕೆಳವರ್ಗಗಳನ್ನು ಬಡಿದೆಬ್ಬಿಸುವಂಥ ಪ್ರಯತ್ನ ಮಾಡಲಿಲ್ಲ. ಬೆಸೆಂಟರ ದೃಷ್ಟಿಯಲ್ಲಿ ಇದು ಸರಳವಾದ ಸಮಸ್ಯೆಯಾಗಿತ್ತಾದರೂ ಅವರ ಟೀಕಾಕಾರರು/ವಸಾಹತುಶಾಹಿಗಳು ಭಾರತೀಯರ ನಡುವಿನ ಒಳ ಪ್ರಭೇದಗಳಿಂದಾಗಿ ಹೋಂ ರೂಲ್‌ಗೆ ಅವರು ಅರ್ಹರಲ್ಲ ಎಂದು ಹೇಳಿದರು; ಇದರಿಂದ ಕುಪಿತರಾದ ಬೆಸೆಂಟರು ನೀವಾದರೂ (ಯೂರೋಪಿಯನ್ನರು) 'ಕೊಳಚೆ ನಿವಾಸಿಗಳ' ಜೊತೆ ಸಹಭೋಜನ ಮಾಡುತ್ತೀರಾ, ಮದುವೆ ಸಂಬಂಧ ಮಾಡುತ್ತೀರಾ ಎಂದು ಪ್ರಶ್ನಿಸಿದರು.[೨೩] ದಕ್ಷಿಣ ಭಾರತದಲ್ಲಿ ಪ್ರಬಲರಾಗಿದ್ದವರು ಹೋಂ ರೂಲ್ ಲೀಗ್, ಕಾಂಗ್ರೆಸ್ ಮತ್ತು ಬ್ರಾಹ್ಮಣೇತರರ ಪಕ್ಷ- ಇವು ಮೂರರಲ್ಲಿ ಯಾವುದಾದರೊಂದು ಪಂಗಡದ ಜೊತೆ ತಮ್ಮನ್ನು ತಾವು ಗುರುತಿಸಿಕೊಂಡರು. ಅನೇಕ ವೇಳೆ ಸೈದ್ಧಾಂತಿಕವಾಗಿ ಅವರು ಆಲೋಚಿಸುತ್ತಿರಲಿಲ್ಲ. ಪರಮಾವಧಿ ಲಾಭವನ್ನು ಗ್ಯಾರಂಟಿ ಮಾಡಿದ ಪಕ್ಷದ ಕಡೆ ಅವರು ವಾಲುತ್ತಿದ್ದರು. ಯಾವುದೇ ಪಕ್ಷದ ಶಾಶ್ವತ ಸದಸ್ಯತ್ವ ಎಂಬುದು ಇರಲಿಲ್ಲ.[೨೪] ಕ್ಷಿಪ್ರವಾಗಿ ನಿಷ್ಠೆಯನ್ನು ಬದಲಾಯಿಸುವಂಥ ಪರಿಪಾಠ ತಲೆದೋರಿ ಜನರ ಆಶೋತ್ತರಗಳಿಗೆ ಕಲ್ಲು ಬೀಳುವಂತಾಯಿತು. ಮೊದಲು ತಿಲಕ್ ವಾದಿಗಳಾಗಿದ್ದವರು ಬೆಸೆಂಟರ ರೀತಿಯಿಂದ ಬೇಸತ್ತು ಅವರನ್ನು ತ್ಯಜಿಸಿದರು; ಮೊದಲು ಮಂದಗಾಮಿಗಳಾಗಿದ್ದವರು ಖಾಲಿಯಾದ ಜಾಗವನ್ನು ತುಂಬಿ ಬೆಸೆಂಟರ ಅನುಯಾಯಿಗಳಾದರು.

ಬ್ರಾಹ್ಮಣೇತರರ ಪಕ್ಷ- ಸಾರ್ವಜನಿಕವಾಗಿ ಅವರ ಚಹರೆ ಏನೇ ಇರಲಿ-ವಿಭಿನ್ನ ರೀತಿಯ ರಾಜಕಾರಣಗಳು ಸೇರಿ ಕಟ್ಟಿದ ಒಂದು ಶಿಥಿಲವಾದ ಪಕ್ಷವಾಗಿತ್ತು. ಭೂಮಾಲೀಕರು ಮತ್ತು ದೊಡ್ಡ ವ್ಯಾಪಾರಿಗಳು ಸೇರಿ ಕಟ್ಟಿದ್ದ ಸಂಘಟನೆಯಾಗಿದ್ದ ಕಾರಣ ಅವರೆಲ್ಲಾ ಯಾವಾಗಲೂ ಸರ್ಕಾರದೊಡನೆ ಇರಲು ತವಕಿಸುತ್ತಿದ್ದರು. ಕಾಂಗ್ರೆಸ್ ಮತ್ತು ಹೋಂ ರೂಲ್‌ನ ನಾಯಕರ ಚಹರೆಯಾದರೂ ಇದಕ್ಕಿಂತ ಭಿನ್ನವಾಗಿರಲಿಲ್ಲ. ಇವರಲ್ಲಿ ಮುಖ್ಯವಾದ ನಾಯಕರೆಂದರೆ ಗಂಗಾಧರ್‌ರಾವ್ ದೇಶ್‌ಪಾಂಡೆ, ಸರದಾರ್ ಕೆ.ಎ. ವೆಂಕಟರಾಮಯ್ಯ, ಕೌಜಲಗಿ ಶ್ರೀನಿವಾಸರಾವ್ - ಇವರೆಲ್ಲ ದೊಡ್ಡ ಜಮೀನುದಾರರು.

ಆದರೆ ವಸಾಹತು-ವಿರೋಧಿ ಮನಸ್ಥಿತಿ ಯುವಕರು, ಕಾರ್ಮಿಕರು, ರೈತಾಪಿ ಜನರು ಹಾಗೂ ವಿದ್ಯಾರ್ಥಿಗಳಲ್ಲಿ ಒಡೆದು ಕಾಣತೊಡಗಿತು.[೨೫] ಈ ಎಲ್ಲ ಬಲಗಳನ್ನು ಸಮರ್ಪಕವಾಗಿ ಉಪಯೋಗಿಸಿಕೊಂಡು

ರಚನಾತ್ಮಕವಾಗಿ ರಾಷ್ಟ್ರೀಯ ಚಳವಳಿಯಲ್ಲಿ ತೊಡಗಿಸಿಕೊಳ್ಳುವಂಥ ಯಾವ ಪ್ರಯತ್ನವೂ ನಡೆಯಲಿಲ್ಲ. ಬೆಲೆಗಳು ಏರಿದ ಕಾರಣ ಮೊದಲನೇ ಮಹಾಯುದ್ಧದ ಪರಿಣಾಮ ಜನಸಾಮಾನ್ಯರ ಮೇಲೆ ಆಗಲು ಪ್ರಾರಂಭವಾಯಿತು. ೧೯೧೮ರಲ್ಲಿ ಅನೇಕ ಕಾರ್ಮಿಕ ಚಳವಳಿಗಳು ಕಾಣಿಸಿಕೊಂಡವು; ತಲೆದೋರಿದ ಕ್ಷಾಮದಿಂದಾಗಿ ಆಹಾರ ಕ್ಷೋಭೆಯುಂಟಾಯಿತು, ಎಲ್ಲ ವರ್ಣದ ರಾಜಕಾರಣಿಗಳು ಅಸಹಾಯಕತೆಯಿಂದ ಪರಿಸ್ಥಿತಿಯನ್ನು ಗಮನಿಸುತ್ತಾ ಕುಳಿತರು.

ಅನಿ ಬೆಸೆಂಟರು ೧೯೧೭ರ ಕಾಂಗ್ರೆಸ್ ಅಧ್ಯಕ್ಷ ಪದವಿಯನ್ನು ಗೆದ್ದರು. ಆದರೆ ಯುದ್ಧ ಮುಗಿದ ಸನ್ನಿವೇಶದಲ್ಲಿ ಪರಿಸ್ಥಿತಿ ಬದಲಾದ ಕಾರಣ ರಾಷ್ಟ್ರೀಯ ರಾಜಕಾರಣದ ಕೇಂದ್ರದಲ್ಲಿ ಅವರು ಉಳಿಯುವಂತಾಗಲಿಲ್ಲ. ಆ ಸಂದರ್ಭದಲ್ಲಿ ಉದ್ಭವವಾದ ವಿಷಯಗಳನ್ನು ಇತ್ಯರ್ಥ ಮಾಡಲು ಬೆಸೆಂಟರಿಗಾಗಲೀ ಅಥವಾ ತಿಲಕರ ಅನುಯಾಯಿಗಳಿಗಾಗಲಿ ಸಾಧ್ಯವಾಗುವಂತಿರಲಿಲ್ಲ. ರಾಷ್ಟ್ರವಾದವೆಂದರೇನು ಎಂದು ಅವರು ಹೊಂದಿದ್ದ ಪರಿಕಲ್ಪನೆಯೇ ದೋಷಪೂರಿತವಾಗಿತ್ತು; ಕಾರಣ ಅವರ ಪ್ರಕಾರ ರಾಷ್ಟ್ರವಾದವೆಂದರೆ ಬ್ರಿಟಿಷ್-ವಿರೋಧವೆಂದಾಗಿತ್ತು. ಜೊತೆಗೆ ಭಾರತ ಆ ವೇಳೆಗಾಗಲೇ ಒಂದು ರಾಷ್ಟ್ರವಾಗಿ ಪರಿಣಮಿಸಿ ಇನ್ನು ಉಳಿದಿರುವುದು ಕೇವಲ ಬ್ರಿಟಿಷರನ್ನು ಬಿಟ್ಟು ಹೊರಡಿ ಎಂದು ಕೇಳುವುದು ಎಂದು ತಿಳಿದಿದ್ದರು. ಕರ್ನಾಟಕದ ಕಾಂಗ್ರೆಸ್ಸಿಗರು ನಂಬಿದ್ದ ರಾಷ್ಟ್ರವಾದಕ್ಕೆ ಭಾರತವನ್ನು ಒಂದು ವಿವಿಧ-ಸಾಮಾಜಿಕ, ಬಹು-ಸಾಂಸ್ಕೃತಿಕ ಸಮಾಜವನ್ನಾಗಿ ನೋಡುವ ವೈಶಾಲ್ಯತೆ ಇರಲಿಲ್ಲ. ಹಾಗಾಗಿ ವಿಭಿನ್ನವಾದ ರಾಷ್ಟ್ರಗಳ, ವಿಭಿನ್ನವಾದ ಕ್ಷೇತ್ರಗಳನ್ನು ಒಗ್ಗೂಡಿಸಿ, ಜನರ ನಾಡಿಮಿಡಿತವನ್ನು ಅರಿತು ಒಂದು ರಾಷ್ಟ್ರವಾಗಿ ಈ ದೇಶ ಅರಳುವ ಪ್ರಕ್ರಿಯೆಯನ್ನು ವೇಗಗೊಳಿಸುವ ಪ್ರೌಢಿಮೆ ಅವರಿಗೆ ಇರಲಿಲ್ಲ.

ಇದನ್ನು ಅರ್ಥಮಾಡಿಕೊಳ್ಳುವವರು ಇರಲಿಲ್ಲವೆಂದಲ್ಲ, ಕಡೆಯ ಪಕ್ಷ ಅವರಲ್ಲಿ ಒಬ್ಬ ವ್ಯಕ್ತಿ ತನ್ನೊಳಗಿನ ಅನೇಕ ವೈರುಧ್ಯಗಳ ನಡುವೆಯೂ ಇಲ್ಲಿನ ಬೆಳವಣಿಗೆಯನ್ನು ಅರಿಯಬಲ್ಲವರಾಗಿದ್ದರು. ಬಿಪಿನ್‌ಪಾಲರ ದಕ್ಷಿಣ ಭಾರತದ ಭೇಟಿಯನ್ನು ಪ್ರಸ್ತಾಪಿಸಿ ಅವರು ಬರೆದರು: "ಅವರ ರೀತಿಯ ಅನೇಕ ರಾಷ್ಟ್ರಪ್ರೇಮಿಗಳು, ನಮ್ಮ ದೊಡ್ಡ ಋಷಿ ನವರೋಜಿಯವರಂಥವರ ಶಿಷ್ಯರು ದೇಶದ ನಾನಾ ಭಾಗಗಳಲ್ಲಿ ದುಡಿಯುತ್ತಿದ್ದಾರೆ, ಭೂಮಿಯನ್ನು ಮಟ್ಟಸ ಮಾಡಿ, ಗೊಬ್ಬರ ಹಾಕಿ, ಭವಿಷ್ಯದ ಸಮೃದ್ಧಿಗಾಗಿ ಬೀಜವನ್ನು ಬಿತ್ತುತ್ತಿದ್ದಾರೆ; ಹಾಗಾಗಿ ನಿಕಟ ಭವಿಷ್ಯದಲ್ಲೇ ಈ ಸುಗ್ಗಿಯ ಕಟಾವಿಗಾಗಿ ಒಬ್ಬ ದೊಡ್ಡ ವ್ಯಕ್ತಿ ಖಂಡಿತಾ ಇಲ್ಲಿ ಜನ್ಮತಳೆಯುತ್ತಾನೆ. ನಿಸ್ಸಂದೇಹವಾಗಿ ನಮ್ಮ ಪುರಾತನ ಋಷಿಗಳು ಅದೃಶ್ಯರಾಗಿ ತಮ್ಮ ಪುಣ್ಯಭೂಮಿ ಭಾರತವನ್ನು ರಕ್ಷಿಸುತ್ತಿದ್ದಾರೆ; ಹಾಗಾಗಿ, ನವರೋಜಿ, ಗೋಖಲೆ, ತಿಲಕರು ಹಾಗೂ ಇತರ ರಾಷ್ಟ್ರಪ್ರೇಮಿಗಳನ್ನು ಅಂಥ ಋಷಿಗಳ ಸೇವಕರೆಂದು ತಿಳಿದು ಆ ಋಷಿಗಳ ಕನಸನ್ನು ನನಸು ಮಾಡಲು ಅವರು ಅಹರ್ನಿಶಿ ದುಡಿಯುತ್ತಿರುವುದಾಗಿ ನಂಬಬೇಕು. ಈ ಗುರಿ ಸಾಧನೆಯಾಗಬೇಕಾದರೆ ಸಾರ್ವಜನಿಕರ ಸದ್ಭಾವನೆ ಮತ್ತು ಸಹಕಾರ ಅತ್ಯಗತ್ಯವೆಂದು ಬೇರೆ ಹೇಳಬೇಕಾಗಿಲ್ಲ". [೩೬] ಈ ಭವಿಷ್ಯವಾಣಿಯನ್ನು ನಿಜ ಮಾಡಲೋ ಎಂಬಂತೆ ಮಹಾತ್ಮ ಗಾಂಧಿಯವರು ಉದಯಿಸಿ ಸಮಾಜದ ಎಲ್ಲ ವರ್ಗದ ಜನರನ್ನು ಒಟ್ಟುಗೂಡಿಸಿ, ರಾಷ್ಟ್ರೀಯ ಮುಖ್ಯ ಪ್ರವಾಹಕ್ಕೆ ಅವರನ್ನು ತಂದು ವಸಾಹತು-ವಿರೋಧಿ ಹೋರಾಟಕ್ಕೆ ಅಣಿಗೊಳಿಸಿದರು; ಜೊತೆಗೆ, ರೈತರು, ಕಾರ್ಮಿಕರು, ಹಿಂದುಳಿದವರು ಹಾಗೂ ಮುಸ್ಲಿಮ್ಮರ ಸಮಸ್ಯೆಗಳನ್ನು ಬಗೆಹರಿಸಲು ಮುಂದಾದರು.

ದೇಶೀಯ ಸಂಸ್ಥಾನಗಳ ಪ್ರಜೆಗಳು ಹಾಗೂ ಅವರ ಸಮಸ್ಯೆಗಳು ಕಾಂಗ್ರೆಸ್ ಪ್ರಜ್ಞೆಯಿಂದ ಹೊರಗೆ ಉಳಿದಿದ್ದವು. ಭಯೋತ್ಪಾದಕ ಶಕ್ತಿಗಳು ವಸಾಹತು ಸರ್ಕಾರವನ್ನು ಎದುರಿಸುವ ಧೈರ್ಯ ಮಾಡಿದಾಗ ಸಂಸ್ಥಾನಗಳ ವಿಷಯದಲ್ಲಿ ಮಧ್ಯೆ ಪ್ರವೇಶಿಸುವ ಪರಿಪಾಠವನ್ನು ನಿಲ್ಲಿಸಿತು. ಸಂಸ್ಥಾನಗಳ ಏಕಾಧಿಪತ್ಯ

ಸರ್ಕಾರಗಳು ಸಾಪೇಕ್ಷವಾದ ಸ್ವಾಯುತ್ತತೆಯನ್ನು ನೀಡಿದ ಕಾರಣ ಬ್ರಿಟಿಷ್ ಸರ್ಕಾರಕ್ಕೆ ತಮ್ಮ ನಿಷ್ಠೆಯನ್ನು ಪ್ರದರ್ಶಿಸುವ ಪ್ರಕ್ರಿಯೆಯಲ್ಲಿ ಮಂದಗಾಮಿ ರಾಷ್ಟ್ರವಾದಿಗಳ ವಿರುದ್ಧವೂ ಉಗ್ರವಾದ ಕ್ರಮ ಕೈಗೊಳ್ಳಲು ಮುಂದಾದವು. ಬ್ರಿಟಿಷ್ ಆಳರಸರೇ ಈ ಮಂದಗಾಮಿಗಳನ್ನು ಸೆಳೆದುಕೊಳ್ಳಿ ಎಂದು ಸೂಚಿಸಿದ್ದನ್ನು ಇವು ಮರೆತಂತೆ ಕಂಡಿತು. ಮೈಸೂರು ಸಂಸ್ಥಾನವು ೧೯೦೮ರಷ್ಟು ಹಿಂದೆಯೇ ಪತ್ರಿಕೆಗಳನ್ನು ಹತ್ತಿಕ್ಕಿತು.[೨೭] ರಾಜರ ಆಪ್ತ ಸ್ನೇಹಿತರೆಂದೇ ಖ್ಯಾತರಾಗಿದ್ದ- ರಾನಡೆಯವರು ಪ್ರತಿಭಟಿಸಿ ಮೈಸೂರು ದಿವಾನರೊಡನೆ ಪತ್ರವ್ಯವಹಾರ ಮಾಡುವುದನ್ನು ಬಿಟ್ಟರು.[೨೮] ಈ ರಾಜ್ಯಗಳಲ್ಲಿ ಆರಂಭಿಕ ಸನ್ನಿವೇಶದಲ್ಲಿ ಸುಶಿಕ್ಷಿತ ವರ್ಗ ಸರ್ಕಾರದ ವಿರುದ್ಧ ಸೊಲ್ಲೆತ್ತಲಿಲ್ಲವಾದರೂ, ಹಾಗೆ ಸೊಲ್ಲೆತ್ತಿದ ಸಂದರ್ಭದಲ್ಲಿ ಯಾವ ಎಗ್ಗಿಲ್ಲದೆ ಅವರನ್ನು ಬಗ್ಗುಬಡಿಯಲಾಯಿತು. ಸರ್ಕಾರದ ಟೀಕಾಕಾರರಾಗಿದ್ದಾರೆ ಎಂಬ ಗುಮಾನಿಯಿಂದ ಮೈಸೂರು ಸರ್ಕಾರವು ಲೆಜಿಸ್ಲೇಟಿವ್ ಕೌನ್ಸಿಲರ್‌ಗಳ ಚುನಾವಣೆಯನ್ನು ಅನೂರ್ಜಿತಗೊಳಿಸಿತು.[೨೯] ಭಾರತ ಸರ್ಕಾರವು ವಿಧಿಸಿದ ವೃತ್ತಪತ್ರಿಕಾ ಕಾಯಿದೆಯನ್ನು ಅನುಸರಿಸಿ ಮೈಸೂರು ಸರ್ಕಾರವು ಇನ್ನೂ ಕಠಿಣವಾದ ಪತ್ರಿಕಾ ನಿಬಂಧನೆಗಳನ್ನು ಹೊರಡಿಸಿದುದನ್ನು ಗಮನಿಸಿ ವಸಾಹತು ಸರ್ಕಾರವೇ ದಿಗ್ಭ್ರಮೆಗೊಂಡಿತು.[೩೦]

ಬ್ರಿಟಿಷ್ ಭಾರತ ರಾಷ್ಟ್ರವಾದಿಗಳು ಮತ್ತು ಅವರ ಪತ್ರಿಕೆಗಳು ತೋರಿದ ನಕಾರಾತ್ಮಕ ಪ್ರತಿಕ್ರಿಯೆಯಿಂದ ಬೇಸತ್ತ ಮೈಸೂರಿನ ಪತ್ರಕರ್ತರು- ಇವರು ಅತ್ಯಂತ ಮಂದಗಾಮಿ ಧೋರಣೆಯವರೆಂಬುದು ಕುತೂಹಲದ ಸಂಗತಿ- ಕಟುವಾದ ನುಡಿಗಳಲ್ಲಿ ಅವರ ವರ್ತನೆಯನ್ನು ಖಂಡಿಸಿದ್ದಾರೆ:

"ರಾಷ್ಟ್ರವಾದಿ ಪತ್ರಿಕಾರಂಗದ ಭವಿಷ್ಯವಾಚಕರು ಸಮಸ್ಯೆಯನ್ನು ನೇರವಾಗಿ ನೋಡಲು ಅಸಮರ್ಥರಾಗಿದ್ದಾರೆ, ಅವರಲ್ಲೊಬ್ಬರು ಸಾರ್ವಜನಿಕವಾಗಿ ಹೀಗೆ ಹೇಳುವ ಧೈರ್ಯ ಪ್ರದರ್ಶಿಸಿದುದು ಚೋದ್ಯವಾಗಿದೆ" (ಅನಿ ಬೆಸೆಂಟರ 'ನ್ಯೂ ಇಂಡಿಯಾ' ವನ್ನು ಉಲ್ಲೇಖಿಸಿ) : 'ದೇಶೀಯ ಸಂಸ್ಥಾನಗಳಿಗೆ ಸಂಬಂಧಿಸಿದ ವಿಷಯಗಳನ್ನು ಅಚ್ಚು ಮಾಡಿ ನಮ್ಮ ಹೋಂ ರೂಲ್ ಕೆಲಸವನ್ನು ಸಂಕೀರ್ಣ ಗೊಳಿಸಿಕೊಳ್ಳುವುದು ನಮಗೆ ಇಷ್ಟವಿಲ್ಲ' . ಆದರೆ ಇದೇ ಪತ್ರಿಕೆ ದೇಶೀಯ ಸಂಸ್ಥಾನಗಳ ಸಾಧನೆಗಳನ್ನು ಪಟ್ಟಿಮಾಡುವ ಅವಕಾಶವನ್ನು ಎಂದೂ ಕಳೆದುಕೊಳ್ಳಲಿಲ್ಲ. ಕಾರಣ, ಈ ಸಂಸ್ಥಾನಗಳ ಸಾಧನೆಯು ಅವರ ಪ್ರಕಾರ ಹೋಂ ರೂಲ್‌ನ ಉತ್ತಮ ಮಾದರಿಯ ನೇರ ಫಲವಾಗಿತ್ತು.[೩೧] (ವಸಾಹತು ಸರ್ಕಾರದ ಮಾದರಿಯಲ್ಲೇ) ದೇಶೀಯ ಸಂಸ್ಥಾನಗಳು ಜಾತಿ ಸಂಘಗಳನ್ನು ಪ್ರೋತ್ಸಾಹಿಸಲು ಮುಂದಾಗಿದ್ದವು, ಹಾಗಾಗಿ, ೧೯೧೭ರಲ್ಲಿ ಬ್ರಾಹ್ಮಣೇತರರು ಸೇರಿಕೊಂಡು ಪ್ರಜಾಮಿತ್ರಮಂಡಲಿ ಎಂಬ ಸಂಘವನ್ನು ಸ್ಥಾಪಿಸಿದರು.[೩೨] ರಾಷ್ಟ್ರವಾದಿಗಳು ತಮ್ಮ ಕ್ಷೇತ್ರದ ಹೊರಗಿನ ಮಂದಿಯ ಬಗೆಗೆ ತಾಳಿದ್ದ ನಿರ್ಲಕ್ಷಭಾವದ ಪರಿಣಾಮವಾಗಿ ಈ ಬೆಳವಣಿಗೆಯಾಯಿತು.

ಮೈಸೂರು ಪ್ರಾಂತ್ಯದ ಜನರಲ್ಲಿ ತಬ್ಬಲಿಯ ಭಾವನೆ ಮೂಡಿದ ಕಾರಣ ಅವರು 'ದ್ವಂದ್ವ ಗುಲಾಮ' ಸ್ಥಿತಿಗೆ ನೂಕಲ್ಪಟ್ಟರು. ಸಂಘಟಿತ ಪ್ರತಿಭಟನೆ ಸಾಧ್ಯವಾಗದ ಹಿನ್ನೆಲೆಯಲ್ಲಿ ವಸಾಹತುಶಾಹಿ ಹಾಗೂ ರಾಜರ ಏಕಾಧಿಪತ್ಯದ ಇಕ್ಕಳದಲ್ಲಿ ಸಿಕ್ಕ ಪ್ರಜೆಗಳು ನಲುಗಿದರು. ಆದರೆ ಪ್ರಾಂತೀಯವಾದ ಸಾಂಸ್ಕೃತಿಕ ಮತ್ತು ಜಾತಿ ಸಂಘಗಳ ಮೂಲಕ ಅವರು ಕೊಂಡಿ ಬೆಸೆದುಕೊಂಡಿದ್ದುದು ವಾಸ್ತವ ಸಂಗತಿ. ಕಾಂಗ್ರೆಸ್ಸಿನ ರಾಷ್ಟ್ರವಾದಿ ಕಾರ್ಯಕ್ರಮಗಳನ್ನು ಸಹಾನುಭೂತಿಯಿಂದ ಕಂಡವರು ಸಂಸ್ಥಾನಗಳಲ್ಲಿ ಬಹಳ ಮಂದಿ ಇದ್ದರು. ಹಾಗೆಯೇ ಜಾತೀಯ ಸಂಘಗಳನ್ನು ಉತ್ಸಾಹದಲ್ಲೇ ಪ್ರಾರಂಭಿಸುವಂಥ ಜನರೂ ಕೂಡ ಬಹಳ ಇದ್ದರು. ಜಾತೀಯ ಸಂಘಗಳನ್ನು ಸ್ಥಾಪಿಸಲು ಅನುಮತಿ ಇದ್ದಾಗ್ಯೂ ಸಹ ರಾಷ್ಟ್ರವಾದಿಗಳು ಸಕ್ರಿಯವಾಗಿ ಭಾಗವಹಿಸುವಂತಿರಲಿಲ್ಲ. ಇದರ ಜೊತೆಗೆ ಅಖಂಡ ಕರ್ನಾಟಕದ ನಿರ್ಮಾಣದ ಕಡೆ ಪ್ರಯತ್ನಗಳು ನಡೆದವು- ಸಾಹಿತ್ಯಕ ಹಾಗೂ ಸಾಂಸ್ಕೃತಿಕ ಅಕಾಡೆಮಿಗಳು ಸ್ಥಾಪನೆಯಾದ ಹಿನ್ನೆಲೆಯಲ್ಲಿ ಹೇಳುವುದಾದರೆ

ಪ್ರಜ್ಞೆಯ ವಿಕಾಸದ ಸೂಚನೆಗಳನ್ನು ಕಾಣಬಹುದಾಗಿದೆ.[೩೩] ಪ್ರಾಂತೀಯವಾದ ವ್ಯತ್ಯಾಸಗಳಿಂದೊಡಗೂಡಿ, ರಾಜ್ಯಗಳು ನಿಜವಾಗಿ ರಾಷ್ಟ್ರವಾದಿ ಚಟುವಟಿಕೆಗಳಲ್ಲಿ ತೊಡಗುವ ಹಂತದಲ್ಲಿದ್ದವೆಂದು ಹೇಳಬಹುದು.

ಕರ್ನಾಟಕದಲ್ಲಿ ಹೋಂ ರೂಲ್ ಚಳವಳಿಯ ಇತಿಮಿತಿಗಳೇನೇ ಇರಲಿ, ಸರ್ಕಾರಕ್ಕೆ ದಿಗಿಲುಂಟು ಮಾಡಿದ ಮೊದಲನೇ ಚಳವಳಿ ಅದು ಎಂಬುದನ್ನು ಅಲ್ಲಗಳೆಯುವಂತಿಲ್ಲ. ಬೆಸೆಂಟರಂಥ ಓರ್ವ ಮಹಿಳೆಯನ್ನು ಸರ್ಕಾರ ನಡೆಸಿಕೊಂಡ ಉಗ್ರತೆಯಿಂದ ಕ್ರುದ್ಧರಾಗಿ ಕರ್ನಾಟಕದ ಜನತೆ ಈ ಚಳವಳಿಯೊಡನೆ ಸಹಾನುಭೂತಿ ಹೊಂದುವಂತೆ ಪ್ರೇರಣೆಯಾಯಿತು. ಬೆಸೆಂಟರ ಪತ್ರಿಕೆಯನ್ನು ಮುಟ್ಟುಗೋಲು ಹಾಕಲಾಯಿತು. ಹೆಚ್ಚಿಸಿದ ಠೇವಣಿಯನ್ನು ಅವರು ಇಡುವಂತೆ ಸರ್ಕಾರ ಆಜ್ಞೆ ಹೊರಡಿಸಿತು; ಕಡೆಗೆ ಈ ಠೇವಣಿಯನ್ನು ಹಿಂತಿರುಗಿಸಲಿಲ್ಲ. ಜನಾಂಗೀಯ ತಾರತಮ್ಯವನ್ನು ಧಿಕ್ಕರಿಸಿ ಅವರು ಬರೆದ ಲೇಖನಗಳಿಂದಾಗಿ ಅವರನ್ನು ಸೆರೆವಾಸಕ್ಕೆ ತಳ್ಳಲಾಯಿತು; ಇದರಿಂದ ವಸಾಹತು-ವಿರೋಧಿ ಭಾವನೆ ಜನಮನದಲ್ಲಿ ಎದ್ದು ಕಾಣಲು ಅವಕಾಶವಾಯಿತು. ನಗರ ಪ್ರದೇಶದ ಜನರಲ್ಲಿ ವಿದ್ಯಾರ್ಥಿ ಸಮುದಾಯ ಗಣನೀಯ ಪ್ರಮಾಣದಲ್ಲಿ ಇತ್ತಲ್ಲದೆ– ಬ್ರಿಟಿಷರು ಈ ವರ್ಗವನ್ನು 'ಅತ್ಯಂತ ಸೂಕ್ಷ್ಮ ವರ್ಗ' ವೆಂದು ಕರೆಯುತ್ತಿದ್ದರು–ಸರ್ಕಾರದ ರೀತಿನೀತಿಗಳು ಇವರ ಮೇಲೆ ಪರಿಣಾಮ ಬೀರದಿರಲಿಲ್ಲ. ಬೇರೆ ಬೇರೆ ಕೇಂದ್ರಗಳಲ್ಲಿ ಅನೇಕ ಮುಷ್ಕರಗಳಾದವು.[೩೪] ತಮ್ಮ ಹಿರಿಯರು ಮಾಡುತ್ತಿದ್ದ ಪ್ರಚಾರವನ್ನು ಬ್ರಾಹ್ಮಣೇತರ ಯುವಕರು ಮತ್ತು ವಿದ್ಯಾರ್ಥಿಗಳು ಅಷ್ಟಾಗಿ ಲೆಕ್ಕಕ್ಕೆ ತೆಗೆದುಕೊಳ್ಳಲಿಲ್ಲ. ತಿಲಕರು ಹಾಗೂ ಬೆಸೆಂಟರು ಪ್ರಾರಂಭಿಸಿದ್ದ ಹೋಂ ರೂಲ್ ಚಳವಳಿಯ ಬಗ್ಗೆ ಅವರಿಗೆ ಹೆಚ್ಚು ಸಹಾನುಭೂತಿಯಿದ್ದಿತು. ಮದರಾಸು ಸರ್ಕಾರ ಈ ವಿಷಯವಾಗಿ ವರದಿ ಬರೆಯುತ್ತಾ ಹೀಗೆ ಹೇಳಿತ್ತು, 'ಬ್ರಾಹ್ಮಣೇತರ ವಿದ್ಯಾರ್ಥಿಗಳು, ಹೆಚ್ಚಿನಂಶ, ಈ ಚಳವಳಿಯ ಬಗ್ಗೆ (ಬ್ರಾಹ್ಮಣೇತರ ಚಳವಳಿ) ಸಹಾನುಭೂತಿ ಹೊಂದಿಲ್ಲ, ಅವರು ಬೆಸೆಂಟರ ನಾಯಕತ್ವವನ್ನು ಸ್ವೀಕರಿಸುವ ಸೂಚನೆಗಳಿವೆ' .[೩೫]

ಆದರೆ ಬೆಸೆಂಟರನ್ನು ಸೆರೆವಾಸಕ್ಕೆ ಕಳುಹಿಸಿದ ತರುವಾಯ–ಪ್ರಾಯಶಃ ವಿದ್ಯಾರ್ಥಿಗಳ ಚೈತನ್ಯವನ್ನು ಸರಿಯಾದ ರೀತಿಯಲ್ಲಿ ಬಳಸಿಕೊಳ್ಳದ ಪರಿಣಾಮವಾಗಿ ಇರಬಹುದು– ಅವರಲ್ಲಿ ಉತ್ಸಾಹ ಕುಗ್ಗಿಹೋಯಿತು. ಆನಿ ಬೆಸೆಂಟ ಜೈಲುಶಿಕ್ಷೆಯನ್ನು ಪ್ರತಿಭಟಿಸಲು ಉದ್ದೇಶಿಸಿದ್ದ ಸಭೆಯಲ್ಲಿ 'ಕಟುವಾದ ಮಾತುಗಳನ್ನು ಉಪಯೋಗಿಸಬಾರದೆಂದು' ಕಲೆಕ್ಟರ್ ನಾಯಕರುಗಳಿಗೆ ಎಚ್ಚರಿಕೆ ನೀಡಿದ್ದರು. ಇದರ ಪರಿಣಾಮವೆಂದರೆ– ಮುಂದೆ ೧೯೨೬ರಲ್ಲಿ ಕಾಂಗ್ರೆಸ್ ಅಧ್ಯಕ್ಷರಾದ ಎಸ್. ಸುಬ್ರಹ್ಮಣ್ಯ ಅಯ್ಯರ್ ಅವರೂ ಸೇರಿ– ಈ ಸಭೆಯಲ್ಲಿ ಭಾಗವಹಿಸುವುದಿಲ್ಲವೆಂದು ಅವರು ಕಲೆಕ್ಟರ್‌ರವರಿಗೆ ತಿಳಿಸಿದರು. ತಮ್ಮ ಹಿಂಬಾಲಕರ ಮೆಚ್ಚಿಗೆಯನ್ನು ಕಳೆದುಕೊಳ್ಳಲು ತಾವು ಇಷ್ಟಪಡದ ಕಾರಣ ತಾವು ಮೃದುನುಡಿಯನ್ನು ಉಪಯೋಗಿಸಲು ಸಾಧ್ಯವಾಗದೆಂದೂ, ಆದರೆ ಕಠಿಣವಾದ ಮಾತುಗಳನ್ನು ಉಪಯೋಗಿಸಲೂ ತಮಗೆ ಮನಸ್ಸಿಲ್ಲವೆಂದೂ ತಿಳಿಸಿದ ಅವರು ಈ ಸಂದಿಗ್ಧವನ್ನು ಪರಿಹರಿಸಲು ಅನ್ಯ ಮಾರ್ಗವನ್ನು ಸೂಚಿಸಬೇಕೆಂದು ಕಲೆಕ್ಟರ್‌ರವರನ್ನೇ ಕೇಳಿಕೊಂಡ ವಿಪರ್ಯಾಸ ಪರಿಸ್ಥಿತಿ ಒದಗಿತು.[೩೬]

ಹಾಗಾಗಿ ರಾಷ್ಟ್ರವಾದಿ ನಾಯಕತ್ವವು ಉದ್ಭವವಾಗಿದ್ದ ಜನರ ಅರಿವನ್ನು ಉಪಯೋಗಿಸಿಕೊಳ್ಳಲಾಗದಂಥಾ ಧೈರ್ಯಗೆಟ್ಟ ಸ್ಥಿತಿಯನ್ನು ಪ್ರದರ್ಶಿಸಿತು. ಆದರೆ ಪ್ರಾಂತೀಯ ಹಂತದಲ್ಲಿ ಕಾರ್ಯಾಂಗದಲ್ಲಿ ಅಧಿಕಾರದಲ್ಲಿ ಭಾಗ ದೊರೆಯುವುದೆಂಬ ಭರವಸೆಯನ್ನು ಮಾಂಟೆಗೊ ತೀರ್ಮಾನ ನೀಡಿದ್ದುದೊಂದು ಪ್ರಮುಖವಾದ ಅಂಶವೆಂದು ತಿಳಿಯಬಹುದು. ಅನೇಕ ರಾಷ್ಟ್ರವಾದಿಗಳು ಹೋರಾಟ ನಡೆಸಿದ್ದುದು ಇದಕ್ಕಾಗಿಯೇ. ಅವರ ಬೇಡಿಕೆಗಳು ಈಡೇರಿದ ತರುವಾಯ ಅವರು ಚಳವಳಿಯನ್ನು ಮುಂದುವರಿಸಬೇಕಾದ ಪ್ರಮೇಯವಿರಲಿಲ್ಲ.

ಹೋಂ ರೂಲ್ ಚಳವಳಿ ಸ್ವಲ್ಪ ಗದ್ದಲ ಮಾಡಿತಷ್ಟೇ ಆಗಿ ಶೀಘ್ರವಾಗಿ ಆ ಗದ್ದಲ ಅಡಗಿತು. ಎಲ್ಲ ವರ್ಗಗಳಿಗೂ ಹರಡುವಂಥ ವ್ಯಾಪಕತೆ ಅದಕ್ಕೆ ಇರಲಿಲ್ಲ. ನಗರ ಪ್ರದೇಶಕ್ಕೆ ಸೀಮಿತವಾದ ಚಳವಳಿಯಾಗಿ ಇದು ಗೋಚರವಾದದ್ದರಿಂದ ಹೆಚ್ಚೂಕಡಿಮೆ ಅಲ್ಲಿನ ಯುವಕರು ಮತ್ತು ವಿದ್ಯಾರ್ಥಿಗಳ ಮೇಲೆ ಪರಿಣಾಮ ಬೀರಿತು. ನಾಯಕತ್ವವು ಶ್ರೀಮಂತರು ಮತ್ತು ಜಮೀನುದಾರರ ಪರವಾಗಿತ್ತು. ಮದರಾಸು ಸಮಾವೇಶದಲ್ಲಿ ಹೋಂ ರೂಲ್ ಲೀಗ್ ನಾಯಕರು ಬಹಿರಂಗವಾಗಿಯೇ ಘೋಷಿಸಿದ್ದರು: 'ಜಮೀನುದಾರರು ಹೋಂ ರೂಲ್ ಆಡಳಿತದಡಿಯಲ್ಲಿ ಕಷ್ಟಕ್ಕೀಡಾಗುವರೆಂಬ ಕಲ್ಪನೆ ತಪ್ಪು ಅಭಿಪ್ರಾಯದಿಂದ ಕೂಡಿದುದಾಗಿದೆ. ಭಾರತೀಯ ಪ್ರಜಾಪ್ರಭುತ್ವವಾದಿಗಳ ಆಡಳಿತದಲ್ಲಿ ಜಮೀನುದಾರರ ಸ್ಥಿತಿಗತಿಗಳು ಇನ್ನೂ ಉತ್ತಮವಾಗುವ ಸಾಧ್ಯತೆಯೇ ಹೆಚ್ಚು'.[೩೭]

ಹೋಂ ರೂಲ್‌ವಾದಿಗಳು ಬ್ರಾಹ್ಮಣೇತರ ಪಕ್ಷಗಳಿಗೆ ಬೆಂಬಲ ನೀಡುತ್ತಿದ್ದ ಜಮೀನುದಾರರನ್ನು ತಮ್ಮೆಡೆಗೆ ಸೆಳೆದುಕೊಳ್ಳಲು ಈ ತಂತ್ರವನ್ನು ಅನುಸರಿಸಿದಂತೆ ಕಾಣುತ್ತದೆ. ಸೈದ್ಧಾಂತಿಕವಾಗಿ ಹೋಂ ರೂಲ್‌ವಾದಿಗಳಿಗೂ ಬ್ರಾಹ್ಮಣೇತರ ಪಕ್ಷಗಳಿಗೂ ಮೂಲಭೂತ ವ್ಯತ್ಯಾಸ ಇಲ್ಲದಿದ್ದರೂ ಅವರ ಭಾಷಣಗಳು ಮತ್ತು ಪತ್ರಿಕೆಗಳ ರೀತಿರಿವಾಜಿನಲ್ಲಿ ವ್ಯತ್ಯಾಸವಿತ್ತು. ಅವರ ಬೇಡಿಕೆಗಳು ಒಂದೇ ಆಗಿದ್ದವು. ಹಾಗೆಯೇ ವಸಾಹತುಶಾಹಿಯ ಬಗೆಗಿನ ಅವರ ಧೋರಣೆ ಕೂಡ ಒಂದೇ ಆಗಿತ್ತು. ಬೆಸೆಂಟ್ ಒಮ್ಮೆ ಘೋಷಿಸಿದ್ದರು: 'ಕರ್ಮ ನಮ್ಮನ್ನು ಗ್ರೇಟ್ ಬ್ರಿಟನ್ನಿನೊಡನೆ ಬೆಸೆದಿದೆ'.[೩೮] ಬ್ರಾಹ್ಮಣೇತರರು ಘೋಷಿಸಿದ್ದರು: 'ನಮಗೆ ಬೇಕು ಸ್ವ-ಆಡಳಿತ ಹಾಗೂ ಹೋಂ ರೂಲು. ನಮ್ಮ ಶತ್ರುಗಳು ನಮ್ಮನ್ನು ತಪ್ಪಾಗಿ ಪ್ರತಿನಿಧಿಸುತ್ತಿದ್ದಾರೆ'.[೩೯] ವ್ಯಕ್ತಿಗತವಾದ ಇಷ್ಟಾನಿಷ್ಟಗಳ ಪರಿಣಾಮವಾಗಿ ದಕ್ಷಿಣ ಭಾರತದಲ್ಲಿ ನಿಲುವು ತಾಳುವಂತಾಯಿತೇ ಹೊರತು ತತ್ವಗಳ ಆಧಾರದ ಮೇಲೆ ಅಲ್ಲ. ಬ್ರಾಹ್ಮಣರ ಜೊತೆ ಇದ್ದದ್ದರಿಂದ ಬೆಸೆಂಟರನ್ನು 'ಬ್ರಾಹ್ಮಿನ್'[೪೦] ಎಂದು ಕರೆಯಲಾಯಿತು. ಅವರೆ ಬೆಸೆಂಟರೇ ಬ್ರಾಹ್ಮಣೇತರರ ಚಳವಳಿಯನ್ನು 'ಪರಕೀಯ-ಭಾರತೀಯವಲ್ಲ' ಎಂದು ಕರೆದುಬಿಟ್ಟರು.[೪೧] ಪರಸ್ಪರರನ್ನು ನಿಂದಿಸಲು ಆ ಮಾರ್ಗ ಅವರು ಹಿಡಿದಿದ್ದರಿಂದ ತಾವು ಮಾತನಾಡುತ್ತಿರುವುದು ಹಾಗೂ ಬರೆಯುತ್ತಿರುವುದು ನಿಜವಲ್ಲವೆಂದು ಅವರಿಗೆ ತಿಳಿದಿತ್ತು. ಭಾರತೀಯ ಸಮಾಜವನ್ನು ಸಮಗ್ರವಾಗಿ ತಿಳಿದು ರಾಷ್ಟ್ರೀಯವಾದ ಮತ್ತು ವಸಾಹತುಶಾಹಿಯ ಮರ್ಮವನ್ನು ಅರಿತಿದ್ದ ಗಾಂಧೀಜಿಯವರ ದೃಷ್ಟಿಗೆ ಗೋಚರವಾದಾಗ ಹೋಂ ರೂಲು ನಾಯಕತ್ವ ಎಚ್ಚರಿಕೆ ವಹಿಸಲು ಪ್ರಾರಂಭಿಸಿತು. ತಿಲಕ್ ಮತ್ತು ಬೆಸೆಂಟರ ಜೊತೆ ಇದ್ದ ಜನರೇ, ತಮ್ಮ ದೌರ್ಬಲ್ಯದ ಕಾರಣ, ಬೆಸೆಂಟರು ಪರಾಭವಗೊಂಡ ಸನ್ನಿವೇಶದಲ್ಲಿ ಬೆಸೆಂಟರ ಬ್ರಾಹ್ಮಣೇತರ ಟೀಕಾಕಾರರಿಗಿಂತ ಹೆಚ್ಚಾಗಿ ಅವರನ್ನು ನಿಂದಿಸಲು ಮುಂದಾದರು.[೪೨]

ಹಾಗಾಗಿ ಒಂದು ಅಂಶವು ನಮಗೆ ಸ್ಪಷ್ಟವಾಗುತ್ತದೆ; ಅದೆಂದರೆ, ದಕ್ಷಿಣ ಭಾರತದ ರಾಷ್ಟ್ರೀಯವಾದಿಗಳು ಅಚಲವಾದ ನಂಬಿಕೆಯುಳ್ಳವರಾಗಿರಲಿಲ್ಲ. ರಾಷ್ಟ್ರೀಯ ಗುರಿಗಳನ್ನು ತಮ್ಮ ಅನುಕೂಲಕ್ಕಾಗಿ ಬಳಸಿಕೊಂಡು ತಮ್ಮ ವರ್ಗದ ಆಕಾಂಕ್ಷೆಯನ್ನು ಪ್ರಕಟಿಸುತ್ತಿದ್ದರೆಂದು ತೋರುತ್ತದೆ. ವಸಾಹತು ಸರ್ಕಾರದೊಡನೆ ಅವರು ರಾಜಿಮಾಡಿಕೊಳ್ಳಲು ಪ್ರಯತ್ನಿಸಿದುದನ್ನು ಗಮನಿಸಿದರೆ, ವಿದ್ಯಾರ್ಥಿಗಳು, ರೈತಾಪಿಗಳು ಮತ್ತು ಕಾರ್ಮಿಕ ವರ್ಗದಲ್ಲಿ ಉದ್ಭವವಾಗುತ್ತಿದ್ದ ರಾಷ್ಟ್ರೀಯ ಪ್ರಜ್ಞೆಯನ್ನು ಅರಿಯದೆ ಅಸಮರ್ಥರಾದರು ಎನ್ನಬೇಕಾಗುತ್ತದೆ. ಬ್ರಾಹ್ಮಣೇತರ ನಾಯಕರು ಬಹಿರಂಗವಾಗಿ ವಸಾಹತುಶಾಹಿಯ ಪಕ್ಷ ವಹಿಸಿದ್ದರೆ, ರಾಷ್ಟ್ರವಾದಿಗಳು ಅಪ್ರಕಟಿತವಾಗಿ ಅತ್ತ ವಾಲಿದ್ದರು. ಆರಂಭಿಕ ಕಾಂಗ್ರೆಸ್ ನಾಯಕರು ಬ್ರಿಟಿಷ್ ಸರ್ಕಾರದೊಡನೆ ವರ್ತಿಸಿದ ರೀತಿಯಲ್ಲೇ ಬ್ರಾಹ್ಮಣೇತರರು ಅದೇ ತಂತ್ರಗಳನ್ನು ಬಳಸಿದ್ದರು. ಬ್ರಾಹ್ಮಣೇತರರು, ಬ್ರಾಹ್ಮಣರ ಸ್ಥಾನದಲ್ಲಿದ್ದರೆ, ಖಂಡಿತವಾಗಿಯೂ ಅವೆರಡು ಪಂಥಗಳಲ್ಲಿ ವೈರುಧ್ಯಗಳಿರುತ್ತಿರಲಿಲ್ಲ. ಇವರ ನಿಲುವುಗಳು ಸಮರ್ಪಕವೆಂದು ನಾವು ವಾದಿಸುತ್ತಿಲ್ಲ. ಈ ಎರಡೂ ಗುಂಪಿನ ಜನರಿಗೆ ದೌರ್ಬಲ್ಯಗಳು ಮತ್ತು ಅಂತರ್ ವಿರೋಧಗಳು

ಇದ್ದ ಪರಿಣಾಮವಾಗಿ ವಸಾಹತುಶಾಹಿಗಳ ತಂತ್ರವನ್ನು ಮೀರಲಾರದಂಥ ಸ್ಥಿತಿ ಇವರದಾಯಿತು. ಮಾಂಟೆಗೊ ಘೋಷಣೆ ಪ್ರಕಟವಾದ ಸಮಯದಲ್ಲಿ ವಸಾಹತುಶಾಹಿಗಳು ಹೋಂ ರೂಲರುಗಳ ಶಕ್ತಿಯನ್ನು ಬಹುಮಟ್ಟಿಗೆ ಕಡಿಮೆ ಮಾಡಿದ್ದರು. ಹಾಗಾಗಿ ಹೋಂ ರೂಲರುಗಳು ಬ್ರಾಹ್ಮಣೇತರರ ಜೊತೆ ಮಾತುಕತೆ ನಡೆಸಿ ಎಷ್ಟು ಸ್ಥಾನಗಳನ್ನು ಮೀಸಲಿಡಬೇಕು ಎಂಬುದನ್ನು ತಿಳಿದುಕೊಳ್ಳಲು ತತ್‌ಕ್ಷಣ ಪ್ರತಿಕ್ರಿಯೆ ವ್ಯಕ್ತಪಡಿಸಿದರು. ಅವರಲ್ಲಿ ಬಲಾಢ್ಯರು-ಜಮೀನುದಾರರು ಮತ್ತು ಶ್ರೀಮಂತರು-ನ್ಯಾಯಾಪೇಕ್ಷಿತರು ಮತ್ತು ಬ್ರಾಹ್ಮಣೇತರ ಪರಿಷತ್ತಿನವರು ಸಮೀಪವಾದ ಕೂಡಲೇ ಕಾಂಗ್ರೆಸ್ ಮತ್ತು ಹೋಂ ರೂಲ್ ಲೀಗುಗಳನ್ನು ತ್ಯಜಿಸಿ ರಾಷ್ಟ್ರವಾದಿ ಚಳವಳಿಯು ಒಂದು ಮುಳುಗುತ್ತಿರುವ ಹಡಗು ಎನ್ನುವ ರೀತಿಯಲ್ಲಿ ಪಲಾಯನ ಮಾಡಿ 'ರಾಷ್ಟ್ರವಾದಿ-ವಿರೋಧಿ' ಬಣವನ್ನು ಸೇರಿದರು.[೪೩] ಸಂದರ್ಭ ಬಹಳ ಗೊಂದಲಮಯವಾಗಿತ್ತಲ್ಲದೆ, ಇದರ ನಡುವೆಯೇ ರಾಷ್ಟ್ರವಾದಿ ಚಳವಳಿಯನ್ನು ಸುರಕ್ಷಿತವಾಗಿ ಮುನ್ನಡೆಸಿಕೊಂಡು ಹೋಗಬೇಕಾದ ಹೊಣೆಯಿತ್ತು.

**-ಪ್ರೊ. ಎಸ್. ಚಂದ್ರಶೇಖರ್**

## ಟಿಪ್ಪಣಿಗಳು

೧ ಎರಡು ಪತ್ರಿಕೆಗಳೆಂದರೆ, 'ಬ್ರಹ್ಮವಾದಿನ್' ಮತ್ತು 'ಪ್ರಬುದ್ಧ ಭಾರತ' – ಎರಡೂ ಮದರಾಸಿನಿಂದ ಪ್ರಕಟಗೊಳ್ಳುತ್ತಿದ್ದವು.

೨ ಬ್ರಹ್ಮವಾದಿನ್– ಇಂಡಿಯನ್ ಸೋಷಿಯಲ್ ರಿಫಾರ್ಮರ್‌ದಲ್ಲಿ ಉಲ್ಲೇಖಿಸಿದೆ. ೩೦ ಜೂನ್ ೧೯೦೧.

೩ ಪ್ರಬುದ್ಧ ಭಾರತ– ಇಂಡಿಯನ್ ಸೋಷಿಯಲ್ ರಿಫಾರ್ಮರ್‌ದಲ್ಲಿ ಉಲ್ಲೇಖಿಸಿದೆ. ೨೭ ಅಕ್ಟೋಬರ್ ೧೯೦೧.

೪ ಬ್ರಹ್ಮವಾದಿನ್, ಫೆಬ್ರವರಿ, ಆಗಸ್ಟ್ ೧೯೦೦

೫ ಮದ್ರಾಸ್ ಮೇಲ್, ೩ನೇ ಫೆಬ್ರವರಿ ೧೮೯೭

೬ ವಿವರಗಳಿಗಾಗಿ ನೋಡಿ: ಆರ್.ಎನ್.ಎನ್.ಪಿ. ಮದರಾಸು ಮತ್ತು ಬಾಂಬೆ ಪ್ರೆಸಿಡೆನ್ಸಿಗಳು ೧೮೯೮–೧೯೦೦ ಎನ್.ಎ.ಐ.

೭ ವಿವೇಕಾನಂದರು ಮೈಸೂರಿನ ಮಹಾರಾಜರಾದ ಚಾಮರಾಜ ಒಡೆಯರ್ ರವರಿಗೆ ಬರೆದ ಶಿಕಾಗೂ ಪತ್ರ, ೨೩ನೆ ಜೂನ್ ೧೮೯೪. ಹೆಚ್ಚಿನ ವಿವರಗಳಿಗಾಗಿ ನೋಡಿ: ಲೈಫ್ ಆಫ್ ಸ್ವಾಮಿ ವಿವೇಕಾನಂದ ಬೈ ಹಿಸ್ ಈಸ್ಟರ್ನ್ ಅಂಡ್ ವೆಸ್ಟರ್ನ್ ಡಿಸೈಫಲ್ಸ್, ಕಲ್ಕತ್ತ, ೧೯೬೦, ಪು. ೨೪೨–೨೪೩

೮ ಚಂದ್ರಶೇಖರ್, ಎಸ್.: ಸಾಮಾಜಿಕ ಹಿನ್ನೆಲೆಯಲ್ಲಿ ಮೈಸೂರು ರಾಜಕೀಯ, ಬೆಂಗಳೂರು, ೧೯೮೩, ಪು. ೨೭–೨೮

೯ ಸುದರ್ಶನ, ಕನ್ನಡ ನಿಯತಕಾಲಿಕೆ, ಆಗಸ್ಟ್ ೧೮೯೪

೧೦ ವಿವರಗಳಿಗಾಗಿ ನೋಡಿ: ಎಸ್.ಕೆ.ಎನ್.: ನಾನ್ ಬ್ರಾಹ್ಮಿನ್ ಲೆಟರ್ಸ್, ಮದರಾಸು, ೧೯೧೫

೧೧ ಹಾಲಪ್ಪ, ಜಿ.ಎಸ್.: ಅವರ ಭಾಷಣದಿಂದ ಉಲ್ಲೇಖಿಸಿದ ಭಾಗಗಳು: ಹಿಸ್ಟರಿ ಆಫ್ ಫ್ರೀಡಮ್ ಮೂವ್‌ಮೆಂಟ್ ಇನ್ ಕರ್ನಾಟಕ, ಸಂಪುಟ ೨, ೧೯೬೪, ಪು. ೨೯–೩೦

೧೨ ಪ್ರೊಸೀಡಿಂಗ್ಸ್ ಆಫ್ ಬೋರ್ಡ್ ಆಫ್ ರೆವಿನ್ಯೂ, ಮದರಾಸು ಸರ್ಕಾರ, ೧೮೫೧, ಸ್ಥಾಯಿ ಆದೇಶ ೧೨೮(೨) ಟಿ.ಎನ್.ಎ.

೧೩ ಸ.ಆ.ಸಂ. ೩೮೬–೩೮೭ (ಶಿಕ್ಷಣ) ದಿನಾಂಕ ೨೭ ಜುಲೈ ೧೮೯೭. ಟಿ.ಎನ್.ಎ.

೧೪ ಸ.ಆ.ಸಂ. ೧೫೬೧ (ಸಾರ್ವಜನಿಕ) ದಿನಾಂಕ ೧೯ ಡಿಸೆಂಬರ್ ೧೯೧೨. ಟಿ.ಎನ್.ಎ.

೧೫ ವೆಸ್ಟ್‌ಕೋಸ್ಟ್ ಸ್ಪೆಕ್ಟೇಟರ್, ೭ ಸೆಪ್ಟಂಬರ್, ಸ್ವದೇಶ ಮಿತ್ರನ್, ೬ ಸೆಪ್ಟಂಬರ್ ೧೯೦೭ ಮತ್ತು ದ ಹಿಂದು, ೯ ಡಿಸೆಂಬರ್ ೧೯೦೭

೧೬ ವೆಸ್ಟ್‌ಕೋಸ್ಟ್ ಸ್ಪೆಕ್ಟೇಟರ್, ೨೮ ಡಿಸೆಂಬರ್ ೧೯೧೧

೧೭ ಇಂಡಿಯನ್ ಪೇಟ್ರಿಯಾಟ್, ಮದರಾಸು ೧೬ ಮೇ ೧೯೧೩

೧೮ ಕೊಚಿನ್ ಆರ್ಗಸ್, ಕೊಚಿನ್‌ನ ಸಾಪ್ತಾಹಿಕ, ೩ ಜನವರಿ ೧೯೧೪

೧೯ ವೆಸ್ಟರ್ನ್ ಸ್ಟಾರ್, ೬ ಜನವರಿ ೧೯೧೪

೨೦ ವೆಸ್ಟ್‌ಕೋಸ್ಟ್ ಸ್ಪೆಕ್ಟೇಟರ್, ೩ ಜನವರಿ ೧೯೧೪, ವೆಡ್ನೆಸ್ಡೇ ರಿವ್ಯೂ, ೧ ಜನವರಿ ೧೯೧೩

೨೧ ಸ್ವದೇಶ ಮಿತ್ರನ್ ದೈನಿಕ, ಮದರಾಸು, ೩ ನವೆಂಬರ್ ೧೯೧೫

೨೨ ನ್ಯೂ ಇಂಡಿಯಾ– ೨ ಡಿಸೆಂಬರ್ ೧೯೧೫, ಲೇಖನದ ಶೀರ್ಷಿಕೆಯೇ "ವೈ ರೈಟ್ಸ್ ವಾಂಟ್ ಹೋಂ ರೂಲ್?" ಎಂದಿತ್ತು.

೨೩ ನ್ಯೂ ಇಂಡಿಯಾ– ೮ ಜನವರಿ ೧೯೧೭

೨೪ ವಿವರಗಳಿಗಾಗಿ ನೋಡಿ: ವಾಶ್‌ಬ್ರುಕ್, ಡಿ.: ಎಮರ್ಜೆನ್ಸ್ ಆಫ್ ಪ್ರೊವೆನ್ಷಿಯಲ್ ಪೊಲಿಟಿಕ್ಸ್: ಮದ್ರಾಸ್ ಪ್ರೆಸಿಡೆನ್ಸಿ, ನವದೆಹಲಿ, ೧೯೭೭

೨೫ ದ ಹಿಂದು, ೫ ಜೂನ್ ೧೯೧೩. ನ್ಯೂ ಇಂಡಿಯಾ ೧೬ ಏಪ್ರಿಲ್ ೧೯೧೭

೨೬ ಹಿರಿಯ ಪತ್ರಕರ್ತರಾದ ಜಿ. ಸುಬ್ರಹ್ಮಣ್ಯ ಅಯ್ಯರ್ ಹಾಗಂದವರು. ಸ್ವದೇಶ ಮಿತ್ರನ್, ೧೦ ಮಾರ್ಚ್ ೧೯೦೮

೨೭ ಚಂದ್ರಶೇಖರ್, ಎಸ್. ೧೯೮೫

೨೮ ಇದರ ಸ್ಪಷ್ಟ ವಿವರಗಳಿಗಾಗಿ ನೋಡಿ: ಸುಬ್ಬರಾವ್, ಕೆ.: ರಿವೈವ್ಡ್ ಮೆಮೊರೀಸ್, ಮದರಾಸು, ೧೯೩೩

೨೯ ಗುಂಡಪ್ಪ, ಡಿ.ವಿ.: ಮೈಸೂರು ದಿವಾನರು, ಮೈಸೂರು, ೧೯೭೨

೩೦ ಚಂದ್ರಶೇಖರ್, ಎಸ್.: ೧೯೮೫, ವಿಶೇಷವಾಗಿ ಪ್ರೆಸ್ ಅಂಡ್ ಆಟೋಕ್ರಸಿ ಎಂಬ ಅಧ್ಯಾಯ, ಹಾಗೂ 'ನಡೆಗನ್ನಡಿ' – ೧೫ ಆಗಸ್ಟ್, ಕೇಸರಿ, ೧೨ ಆಗಸ್ಟ್, ಸ್ವದೇಶಿ ಮಿತ್ರನ್, ೧೧ ಆಗಸ್ಟ್ ೧೯೦೮

೩೧ ಪತ್ರಕರ್ತರು ಡಿ.ವಿ. ಗುಂಡಪ್ಪನವರು. ಕರ್ನಾಟಕ ಪಾಕ್ಷಿಕ, ೬ ಜನವರಿ ೧೯೧೭. ಗುಂಡಪ್ಪನವರು ಬಹಳ ಪ್ರಮುಖವಾದ ರಾಜಕೀಯ ವಿಶ್ಲೇಷಕರು ಹಾಗೂ ತಮ್ಮ ಕಾಲದ ಪ್ರಸಿದ್ಧ ಸಾಹಿತಿಗಳು.

೩೨ ವಿವರಗಳಿಗಾಗಿ ನೋಡಿ: ಚಂದ್ರಶೇಖರ್, ಎಸ್.: ೧೯೮೩, ಪು. ೩೬–೫೧

೩೩ ಚಂದ್ರಶೇಖರ್, ಎಸ್.: ಓಲ್ಡ್ ಮೈಸೂರ್ ಇನ್ ಕರ್ನಾಟಕ – ದಿ ರಿಲಕ್ಟೆಂಟ್ ಯೂನಿಫಿಕೇಷನ್, ಡೆಕ್ಕನ್ ಹೆರಾಲ್ಡ್, ೪ ನವೆಂಬರ್ ೧೯೮೨, ಬೆಂಗಳೂರು.

೩೪ ಎಫ್.ಆರ್. ೨೮೮೩–ಯು–೧. ೬ ಆಗಸ್ಟ್ ೧೯೧೬, ಮದರಾಸು.

೩೫ ಎಫ್.ಆರ್. ೧೦೫–ಎಮ್–೧. ೧೫ ಜನವರಿ ೧೯೧೭, ಮದರಾಸು.

೩೬ ಎಫ್.ಆರ್. ೨೧೪೩, ಎಮ್–೧–೧೮ ಜೂನ್, ೧೯೧೭

೩೭ ನ್ಯೂ ಇಂಡಿಯಾ, ೧೧ ಮೇ, ೧೯೧೭

೩೯ ನಾನ್ ಬ್ರಾಹ್ಮಿನ್, ಮದರಾಸಿನ ಜಸ್ಟೀಸ್ ಪಕ್ಷದ ಮುಖವಾಣಿ– ೧೫ ಏಪ್ರಿಲ್, ೧೯೧೭

೪೦ ಅದೇ, ೨೧ ಜನವರಿ, ೧೯೧೭

೪೧ ನ್ಯೂ ಇಂಡಿಯಾ, ೧೮ ಏಪ್ರಿಲ್, ೧೯೧೭

೪೨ ವಿವರಗಳಿಗಾಗಿ ನೋಡಿ: ಜಿ.ಒ. ಸಂಖ್ಯೆ. ೪೩೪. ಪಬ್ಲಿಕ್ ಕಾನ್ಫಿಡೆನ್ಷಿಯಲ್, ೩ ಜುಲೈ ೧೯೨೦, ಟಿ.ಎನ್.ಎ.

೪೩ ಬೇಕರ್, ಸಿ.ಜೆ.: ಪೊಲಿಟಿಕ್ಸ್ ಆಫ್ ಸೌತ್ ಇಂಡಿಯಾ, ನವದೆಹಲಿ, ೧೯೭೯, ಪು. ೩೯–೫೪

## ಅಧ್ಯಾಯ : ಏಳು

# ಗಾಂಧೀಜಿ ಆಗಮನ

೧೯೧೫ರಲ್ಲಿ ಗಾಂಧೀಜಿ ಭಾರತಕ್ಕೆ ವಾಪಸ್ಸಾದರು. ಚದುರಿಹೋದ ರಾಷ್ಟ್ರವಾದಿ ಚೈತನ್ಯ ವಸಾಹತು-ವಿರೋಧಿ ಹೋರಾಟವಾಗಿ ರೂಪುಗೊಂಡ ರೀತಿಯನ್ನು ನಾವು ಈ ಅಧ್ಯಾಯದಲ್ಲಿ ತಿಳಿಯಬಹುದು. ಬೊಂಬಾಯಿಯಲ್ಲಿ ಗಾಂಧೀಜಿ ಬಂದು ಇಳಿದಾಗ ಅವರಿನ್ನೂ ಮಹಾತ್ಮ ಎಂಬ ಬಿರುದನ್ನು ಗಳಿಸಿರಲಿಲ್ಲ. ದಕ್ಷಿಣ ಆಫ್ರಿಕಾದಲ್ಲಿ ಆ ವೇಳೆಗಾಗಲೇ ಅವರು ಅಸಮಾನತೆ ಹಾಗೂ ಸಾಮ್ರಾಜ್ಯಶಾಹಿಯ ವಿರುದ್ಧ ಅನೇಕ ಚಳವಳಿಗಳನ್ನು ನಡೆಸಿದ್ದ ಹಿನ್ನೆಲೆಯಿತ್ತು. ವಸಾಹತು-ವಿರೋಧಿಶಕ್ತಿಗಳಿಗೆ ತಾವು ಭಾರತದಲ್ಲಿ ಯಾವ ರೀತಿಯಲ್ಲಾದರೂ ಸಹಾಯ ಮಾಡಬೇಕೆಂಬುದು ಅವರೊಳಗಿನ ಚಳವಳಿಗಾರನ ತುಡಿತವಾಗಿತ್ತು. ದಕ್ಷಿಣ ಆಫ್ರಿಕಾದ ಭಾರತೀಯರ ಸಮಸ್ಯೆಗಳನ್ನು ಕೈಗೆತ್ತಿಕೊಂಡ ಸಂದರ್ಭದಲ್ಲಿ ದಕ್ಷಿಣದ ಜನರ ಸಂಪರ್ಕ ಅವರಿಗೆ ಲಭ್ಯವಾಗಿತ್ತು. ಅದಕ್ಕೆ ಮೊದಲು ಅವರಿಗೆ ನೀಡಿದ್ದ ಭೇಟಿಯ ಸಂದರ್ಭದಲ್ಲಿಯೂ ಸಹ ಅನೇಕ ದಾಕ್ಷಿಣಾತ್ಯರ ಭೇಟಿಯಾಗಿತ್ತು. ೧೮೯೭ರಲ್ಲಿ ದಕ್ಷಿಣ ಆಫ್ರಿಕಾದಲ್ಲಿ ಜನಾಂಗೀಯ ಬಿಳಿಯರಿಂದ ಗಾಂಧೀಜಿ ಅವಮಾನಿತರಾದ ಸುದ್ದಿಯನ್ನು ಕರ್ನಾಟಕದ ಪತ್ರಿಕೆಗಳು ಆಗಲೇ ಜನರ ಗಮನಕ್ಕೆ ತಂದಿದ್ದವು.[೧]

ದಕ್ಷಿಣ ಭಾರತವೆಂದರೆ ಗಾಂಧೀಜಿಗೆ ಹುಟ್ಟೂರಿದ್ದಂತೆ.[೨] ಜೊತೆಗೆ ತಮಿಳು, ತೆಲುಗು ಭಾಷಿಕರ ಮೇಲೆ ತಮಗೆ ಒಂದು ರೀತಿಯಲ್ಲಿ ವಿಶೇಷ ಅಧಿಕಾರವಿದೆ ಎಂದು ಹೇಳುತ್ತಿದ್ದರು.[೩] ೧೯೧೧ರಲ್ಲಿ ಕಾಂಗ್ರೆಸ್ ಅಧ್ಯಕ್ಷ ಪದವಿಗಾಗಿ ಅವರ ಹೆಸರು ಕೇಳಿಬಂದಾಗ ದಕ್ಷಿಣದಲ್ಲಿ ಅವರ ಬಗ್ಗೆ ಜನರು ಗಮನ ಹರಿಸಿದರು.[೪] ತಮ್ಮ 'ವಿಚಿತ್ರ ರೀತಿ' ಯ ಕಾರಣದಿಂದಾಗಿ ಬಹುಜನರಿಗೆ ತಾನು ಬೇಕಾದವನಾದೆ ಎಂದು ಗಾಂಧೀಜಿ ಹೇಳುತ್ತಿದ್ದರು. ೧೯೧೫-೧೯೧೯ರವರೆಗೆ ಅವರು ದೇಶದುದ್ದಗಲಕ್ಕೂ ಸಂಚರಿಸಿ ಜನರ ದೃಷ್ಟಿ ಧೋರಣೆಗಳ ಬಗ್ಗೆ ಸಂಪೂರ್ಣವಾಗಿ ತಿಳಿದುಕೊಂಡರು, ರಾಷ್ಟ್ರವಾದಿ ಚಳವಳಿಯಲ್ಲಿ ಏನು ತೊಡಕಿದೆ ಎಂಬುದರ ಬಗ್ಗೆ ಕೂಡ ತಿಳಿದರು. ಚಂಪಾರಣ್ಯದ ಇಂಡಿಗೋ ಬೆಳೆಗಾರರ ಜೊತೆ ಹೋರಾಟ ನಡೆಸಿ, ಖೇಡಾದ ರೈತರ ಸಮಸ್ಯೆ ಹಾಗೂ ಅಹಮದಾಬಾದಿನ ಜವಳಿ ಗಿರಣಿ ಕಾರ್ಮಿಕರ ಸಂಕಷ್ಟಗಳನ್ನರಿತು ಹೋರಾಟ ಪ್ರಾರಂಭಿಸಿದರು. ಸಬರಮತಿ ಆಶ್ರಮದಲ್ಲಿ ಎಲ್ಲ ಜಾತಿ ಜನರೂ ಒಂದು ಕಡೆ ಸೇರುವಂತೆ ಪ್ರಯೋಗ ನಡೆಸಿ ಭಾರತೀಯರು ಕೆಲಸ ಮಾಡುವ ವಿಧಾನವನ್ನು ಅರ್ಥಮಾಡಿಕೊಂಡರು. ತಮ್ಮ ಸ್ನೇಹಮಯ ಹಾಗೂ ಆಪ್ತ ನಡವಳಿಕೆಗಳಿಂದಾಗಿ ಕದನ ನಿರತ ಪಕ್ಷಗಳನ್ನು ಸಮೀಪ ಕರೆದು ರಾಜಿ ಮಾಡುವ ಮನೋವೃತ್ತಿ ಇದ್ದದ್ದು ಅವರೊಬ್ಬರಿಗೇ; ಒಂದು ಆಧುನಿಕ ರಾಷ್ಟ್ರವಾಗಿ ರೂಪುಗೊಳ್ಳುತ್ತಿದ್ದ ಭಾರತದ ಸಂದರ್ಭಕ್ಕೆ ಅತ್ಯಗತ್ಯವಾಗಿ ಬೇಕಾಗಿದ್ದ ವ್ಯಕ್ತಿತ್ವವನ್ನು ಗಾಂಧೀಜಿ ಹೊಂದಿದ್ದರು. ತಮ್ಮ ಈ ಉತ್ಕೃಷ್ಟ ಗುಣಗಳಿಂದಾಗಿಯೇ ಅವರು ಜನಸಾಮಾನ್ಯರ ದೃಷ್ಟಿಯಲ್ಲಿ ಮಹಾತ್ಮರೆನಿಸಿಕೊಂಡರು. ನಿಖರವಾದ ಸಮಸ್ಯೆಗಳನ್ನು ಕೈಗೆತ್ತಿಕೊಂಡರು, ಕ್ರಿಯಾ ಯೋಜನೆಯನ್ನು ತಯಾರಿಸಿದರು, ತುಂಬಾ ಮೆಚ್ಚುವ ರೀತಿಯಲ್ಲಿ

ಲಭ್ಯವಾದ ಸಂಪನ್ಮೂಲವನ್ನು ಬಳಸಿದರು; ಅವರು ನಡೆಯುವ ಮಾರ್ಗದಲ್ಲಿ ಎಂದೂ ಎಡವಲಿಲ್ಲ. ಆದಾಗ್ಯೂ ವಸಾಹತು ಭಾರತ ಬಹಳ ವಿಶಾಲವಾದುದಾಗಿತ್ತು, ಅದರ ಸಾಮಾಜಿಕ ಅಂಗಗಳು ಭಿನ್ನವಾಗಿದ್ದವು, ಸಮಾಜ ಹಾಗೂ ಮುಂದೆ ಕಣ್ತೆರೆಯಲಿರುವ ರಾಷ್ಟ್ರದ ಬಗ್ಗೆ ನಾಯಕತ್ವಕ್ಕೆ ಭಿನ್ನವಾದ ಅಭಿಪ್ರಾಯಗಳಿದ್ದವು; ಸರ್ಕಾರ ಸಾಮ್ರಾಜ್ಯಶಾಹಿ ಗುಣಗಳಿಂದ ಕೂಡಿ ಪರಕೀಯವಾಗಿತ್ತು. ಹಾಗಾಗಿ, ಈ ಎಲ್ಲ ವೈವಿಧ್ಯತೆಯನ್ನು ಅರ್ಥ ಮಾಡಿಕೊಳ್ಳುವುದು ಕೊಂಚ ಕಷ್ಟದ ಕೆಲಸವೇ ಆಗಿತ್ತು.

ಇಷ್ಟಾಗಿಯೂ ೧೯೧೯ರ ವೇಳೆಗೆ ಈ ಎಲ್ಲದರ ಬಗ್ಗೆ ನಿಖರವಾದ ಮಾಹಿತಿ ಪಡೆದುಕೊಳ್ಳಲು ಅವರಿಗೆ ಸಾಧ್ಯವಾಯಿತು. ನಿಸ್ವಾರ್ಥ ಸೇವೆಯಲ್ಲಿ ಆ ವೇಳೆಗಾಗಲೇ ಅವರು ಮುಂದಾಗಿದ್ದ ಕಾರಣ ಆಧ್ಯಾತ್ಮ ಶಕ್ತಿಯನ್ನು ಹೊಂದಿದ್ದ ದೇವದೂತನೆಂಬುದಾಗಿ ಜನರು ಬಣ್ಣಿಸತೊಡಗಿದ್ದರು. ೧೯೦೮ರ ವೇಳೆಗೆ ಜಿ. ಸುಬ್ರಹ್ಮಣ್ಯರವರು ನಮ್ಮ ನಡುವೆ ಬಿಟ್ಟ 'ಋಷಿ' ಯ ಅವತಾರವಾಗುತ್ತದೆಯೆಂದು ಭವಿಷ್ಯ ನುಡಿದಿದ್ದುದು ನಿಜವಾಯಿತು. ಅಯ್ಯರ್‌ರವರ 'ದೇವರ ಸೇವಕರಲ್ಲಿ' ಬಹುತೇಕ ಮಂದಿ ಅಸುನೀಗಿದ್ದರು, ಇನ್ನು ಕೆಲವರು ಆಲಸ್ಯದಿಂದ ಕೂಡಿದ್ದರು, ಮತ್ತೂ ಕೆಲವರು ತಮ್ಮ ಕ್ರಿಯೆಗಳಿಂದಾಗಿ ಅಪ್ರಸ್ತುತರೆನಿಸಿಕೊಂಡಿದ್ದರು. ತಿಲಕ್ ಮತ್ತು ಅವರ ಪಕ್ಷ ಇದ್ದಿತಾದರೂ ಅದು ಮೊದಲಿನಂತಿರಲಿಲ್ಲ. ತನ್ನ ಹೋರಾಟದ ಪ್ರಖರತೆಯನ್ನು ಅದು ಕಳೆದುಕೊಂಡಂತಿತ್ತು, ಇಲ್ಲವೇ ಅದರ ಹೋರಾಟ ಬದಲಾದ ಸನ್ನಿವೇಶಕ್ಕೆ ಅಗತ್ಯವಿದ್ದಂತೆ ಕಂಡುಬರಲಿಲ್ಲ. ದಕ್ಷಿಣದಲ್ಲಿ ಹೋಂ ರೂಲ್ ಚಳವಳಿ ಶಕ್ತಿಯುಡುಗಿದ ಬಲವಾಗಿ ಮಾರ್ಪಾಟಾಗಿತ್ತು.

ಮಹಾಯುದ್ಧದಲ್ಲಿ ಪೂರ್ಣ ಸಹಕಾರ ನೀಡಿ ಭಾಗಿಯಾಗಿದ್ದ ಭಾರತದ ಉಪಕಾರಕ್ಕೆ ಪ್ರತಿಯಾಗಿ ವಸಾಹತು ಸರ್ಕಾರ ಕ್ರೂರವಾದ "ರೌಲತ್ ಮಸೂದೆ" ಗಳನ್ನು ಜಾರಿಗೊಳಿಸಿತ್ತು. ಈ ಕ್ರಮದ ವಿರುದ್ಧ ಭಾರತೀಯರನ್ನು ಎಚ್ಚರಿಸಿ ಕಾರ್ಯೋನ್ಮುಖರನ್ನಾಗಿಸಲು ಏನಾದರೂ ಮಾಡಬೇಕೆಂದು ಗಾಂಧೀಜಿ ಚಿಂತಿಸುತ್ತಲೇ ಇಲ್ಲಿನ ಬೆಳವಣಿಗೆಗಳನ್ನು ತುಂಬಾ ಸಮೀಪದಿಂದ ಗಮನಿಸಿದರು.[೫] ಬ್ರಿಟಿಷರು ನ್ಯಾಯನಿಷ್ಠುರರೆಂಬ ಕಲ್ಪನೆಯನ್ನು ಗಾಂಧೀಜಿ ಶಂಕಿಸುವಂತಾಯಿತು. ರೌಲತ್ ಮಸೂದೆಗಳ ವಿರುದ್ಧ ಸತ್ಯಾಗ್ರಹ ನಡೆಸುವುದೆಂದು ಗಾಂಧೀಜಿಯವರು ಅವರ ಸಹಚರರೊಡಗೂಡಿ ಕಾರ್ಯಾರಂಭ ಮಾಡಿದಾಗ, ತಾವು ಕೈಗೆತ್ತಿಕೊಂಡ ಕೆಲಸ ಎಷ್ಟು ಅಗಾಧವಾದುದೆಂದು ಅವರಿಗೆ ಮನವರಿಕೆಯಾಯಿತು; ಆ ಸಂದರ್ಭದಲ್ಲೇ ಅವರಿಗೆ ಮದರಾಸಿನಿಂದ ಆಮಂತ್ರಣ ಬಂದಿದ್ದು.[೬] ಮದರಾಸಿನಲ್ಲೇ ಗಾಂಧೀಜಿಯವರು 'ಹರತಾಳ' ವೆಂಬ ಅಸ್ತ್ರವನ್ನು ಕಂಡು ಹಿಡಿದದ್ದು; ಅವರು ಕಂಡುಹಿಡಿದ ಈ ಅಮೂಲ್ಯವಾದ ಅಸ್ತ್ರವು ಅವರ ಅಹಿಂಸಾ ಶಸ್ತ್ರಾಗಾರದಲ್ಲಿ ಒಂದು ಉತ್ತಮ ಸೇರ್ಪಡೆಯಾದದ್ದು ಎಲ್ಲರಿಗೂ ತಿಳಿದಿದೆ. ೬ನೇ ಏಪ್ರಿಲ್ ೧೯೧೯ರಂದು ಹರತಾಳವನ್ನು ಆಚರಿಸಿದಾಗ ಹತ್ತಿಕ್ಕಲ್ಪಟ್ಟ ಜನತೆಯ ಸರ್ಕಾರ-ವಿರೋಧಿ ಭಾವನೆಗಳು ಸ್ಫೋಟಗೊಂಡವು. ಎಲ್ಲ ಹಿನ್ನೆಲೆಯ ನಾಯಕತ್ವಕ್ಕೂ ಇದು ಅನಿರೀಕ್ಷಿತವಾದ ಬೆಳವಣಿಗೆಯಾಗಿ ಕಂಡಿತು. ವಸಾಹತು-ವಿರೋಧಿ ಭಾವನೆಯು ಎಷ್ಟು ಗಾಢವಾಗಿತ್ತೆಂದರೆ, ಬ್ರಾಹ್ಮಣರು, ಬ್ರಾಹ್ಮಣೇತರರು, ಬಂಡವಾಳಶಾಹಿಗಳು ಹಾಗೂ ಕಾರ್ಮಿಕರು, ಜಮೀನ್ದಾರರು ಮತ್ತು ಒಕ್ಕಲುತನದವರು-ಎಲ್ಲ ವರ್ಗದ ಜನರೂ ಈ ಹರತಾಳದಲ್ಲಿ ಭಾಗವಹಿಸಿದ್ದರು. ಗಾಂಧೀಜಿಯವರು ದೆಹಲಿ ಹಾಗೂ ಪಂಜಾಬುಗಳಿಗೆ ಪ್ರವೇಶಿಸಬಾರದೆಂದು ಹೊರಡಿಸಿದ ನಿಷೇಧಾಜ್ಞೆಯಿಂದ ಹಾಗೂ ತರುವಾಯದಲ್ಲಿ ಅವರನ್ನು ದಸ್ತಗಿರಿ ಮಾಡಿದ ಪರಿಣಾಮವಾಗಿ ಜನರು ಮಹಾತ್ಮರ ಪರವಾಗಿ ದಂಗೆಯೇಳುವ ಸ್ಥಿತಿಯಲ್ಲಿದ್ದರು. ಗಾಂಧೀಜಿಯವರಿಗೆ ಹಾಗೂ ಭಾರತೀಯ ರಾಷ್ಟ್ರವಾದ ಚಳವಳಿಗೆ ಅದೊಂದು 'ಸ್ಮರಣಾರ್ಹ ಸಪ್ತಾಹ' ವೆನ್ನಬೇಕು. ಗಾಂಧೀಜಿ ಅಖಿಲ ಭಾರತದ ನಾಯಕರಾಗಿ ಮೇಲೆದ್ದು ಬಂದಿದ್ದರು. ಇಲ್ಲಿಯ ತನಕ ಕೇವಲ ರಾಷ್ಟ್ರೀಯ ಮಟ್ಟದ ನಾಯಕರಿದ್ದರು, ಆದರೆ ಯಾರಿಗೂ ಇಡೀ ರಾಷ್ಟ್ರವನ್ನು ತಮ್ಮ ವೈಯುಕ್ತಿಕ ನೆಲೆಯಿಂದ ಪ್ರತಿನಿಧಿಸುವಂಥ ಚೇತನವಿರಲಿಲ್ಲ;

ಈಗ ಆ ಜಾಗವನ್ನು ಗಾಂಧೀಜಿ ತುಂಬಿದ್ದರು. ಹಿಂದೂ-ಮುಸ್ಲಿಂ ಸಮಸ್ಯೆಯನ್ನು ಕೇವಲ ಮಾತಿನಲ್ಲಿ ಚರ್ಚಿಸದೆ ಖಿಲಾಫತ್ ಚಳವಳಿಯ ಮೂಲಕ ಎತ್ತಿಹಿಡಿದರು; ಸ್ವದೇಶಿ ಚಳವಳಿಯನ್ನಾರಂಭಿಸಿ ಬಂಡವಾಳಶಾಹಿ ಹಾಗೂ ಕಾರ್ಮಿಕ ಎರಡೂ ವರ್ಗಗಳ ಮನಸೆಳೆದರು. ಉಪ್ಪಿನ ಸತ್ಯಾಗ್ರಹ ನಡೆಸಿದರು, ರೈತಾಪಿಗಳು ಹಾಗೂ ಕೃಷಿ ಕಾರ್ಮಿಕರ ಕ್ಷೇಮಾಭಿವೃದ್ಧಿಗಾಗಿ ಚಂಪಾರಣ್ಯ ಸತ್ಯಾಗ್ರಹ ನಡೆಸಿದರು, ಖೇಡಾ ಮತ್ತು ಅಹಮದಾಬಾದ್ ಚಳವಳಿಯ ನೇತಾರರಾದರು. 'ಹಿಂದೂ ಸನಾತನ ಧರ್ಮ'ದ ಹೆಗ್ಗಳಿಕೆಯನ್ನು ಸಾರುವುದರ ಮೂಲಕ ಜಾತಿ ಪಂಥಗಳೆಂಬ ಅಡ್ಡಗೋಡೆಗಳನ್ನು ಧಿಕ್ಕರಿಸಿದರು, ಸತ್ಯ ಮತ್ತು ಅಹಿಂಸೆಯ ಪ್ರತಿಪಾದಕರಾಗಿ ಅತ್ಯಂತ ಕಷ್ಟತಮವಾದ ಪರೀಕ್ಷೆಯಲ್ಲಿ ತೇರ್ಗಡೆಹೊಂದಿ ವಸಾಹತು ಸರ್ಕಾರ ಸಹಿತ ಎಲ್ಲ ವಲಯಗಳಿಂದಲೂ ಅವರೊಬ್ಬ ಹಿಂದೂ ರಾಷ್ಟ್ರದ ಪ್ರತಿನಿಧಿಯಷ್ಟೇ ಅಲ್ಲದೆ ಅಖಂಡ ಭಾರತೀಯ ಸಮಾಜದ ಪ್ರತಿನಿಧಿಯಾಗಿ ಸ್ವೀಕೃತರಾದರು. 'ಸತ್ಯದೊಡನೆ ಪ್ರಯೋಗಗಳ' ಮೂಲಕ ಗಾಂಧೀಜಿ ರಾಷ್ಟ್ರೀಯ ರಂಗದ ಮೇಲೆ ಕಾಣಿಸಿಕೊಂಡ ಪರಿಣಾಮವಾಗಿ ಅವರ ನಾಯಕತ್ವ ಪ್ರಶ್ನಾತೀತವಾಗಿ ಉಳಿಯಿತು.

ಆದರೆ ದಕ್ಷಿಣ ಭಾರತದ ತಿಲಕ್‌ವಾದಿಗಳು ಗಾಂಧೀಜಿ ನಾಯಕತ್ವ ಹಾಗೂ ಅವರ ಕಾರ್ಯಕ್ರಮಗಳ ಬಗ್ಗೆ ಸಂಶಯ ಹೊಂದಿದ್ದರು. 'ದಕ್ಷಿಣ ಸೇನಾಪತಿ' ಎಂದು ತರುವಾಯದಲ್ಲಿ ಪ್ರಸಿದ್ಧರಾದ ಗಾಂಧೀಜಿ ಅನುಯಾಯಿ ಸಿ. ರಾಜಗೋಪಾಲಾಚಾರಿಯವರು ೧೯೧೯-೧೯೨೦ನೇ ಇಸವಿಯಲ್ಲಿ ತೋರಿದ ಪ್ರತಿಕ್ರಿಯೆಯಿಂದ ಈ ದ್ವಂದ್ವ ಸ್ಪಷ್ಟವಾಗುತ್ತದೆ. ಈ ಸಂಗತಿಯನ್ನು ರಾಜಮೋಹನ ಗಾಂಧಿಯವರು- ಇವರು ರಾಜಾಜಿ ಹಾಗೂ ಮಹಾತ್ಮಗಾಂಧಿಯವರ ಮೊಮ್ಮಗ- ರಾಜಾಜಿಯವರ ಮೇಲೆ ಬರೆದಿರುವ ಜೀವನ ಚರಿತ್ರೆಯಲ್ಲಿ ಕಾಣಬಹುದು. ಗಾಂಧೀ ರಾಜಕಾರಣದಿಂದ ರಾಜಾಜಿ ಆಗ ಹೆಚ್ಚು ಆಕರ್ಷಿತರಾಗಿರಲಿಲ್ಲ, ಹೃದಯಾಂತರಾಳದಲ್ಲಿ, ಆ ಕಾಲದ ಎಲ್ಲ ದಾಕ್ಷಿಣಾತ್ಯ ರಾಷ್ಟ್ರವಾದಿಗಳೂ ಇದ್ದಂತೆ, ರಾಜಾಜಿ ಕೂಡ ತಿಲಕರ ಹಿಂಬಾಲಕರಾಗಿದ್ದರು. ಗಾಂಧೀಜಿಯವರ ಅಹಿಂಸಾ ತತ್ವ ಹಾಗೂ ಅಸಹಕಾರ ಚಳವಳಿ ಎಲ್ಲ ರೀತಿಯಿಂದಲೂ ಸಮರ್ಪಕವಲ್ಲವೆಂದು ಅವರು ಭಾವಿಸಿದ್ದರು. ಅವರು ಇಪ್ಪತ್ತರ ಹರೆಯದಲ್ಲಿದ್ದ ಸಂದರ್ಭದಲ್ಲಿ 'ಸಶಸ್ತ್ರ ಕ್ರಾಂತಿಯ ಕನಸು' ಕಂಡಿದ್ದರು. ಉಗ್ರಗಾಮಿಯಾಗಿದ್ದ ಅವರು ತಮ್ಮೊಡನೆ ಅನೇಕ ಅಭ್ಯರ್ಥಿಗಳನ್ನು ಕರೆದುಕೊಂಡು- ಅವರ ಪ್ರಯಾಣದ ಖರ್ಚನ್ನು ತಾವೇ ಭರಿಸಿ- ಸೂರತ್ ಕಾಂಗ್ರೆಸ್ ಸಮಾವೇಶಕ್ಕೆ ಹೋದರೆಂದು ತಿಳಿದುಬರುತ್ತದೆ. ಆ ಸಮಾವೇಶದಲ್ಲಿ ತಿಲಕ್ ಮತ್ತು ಇನ್ನೊಂದು ಕಾಂಗ್ರೆಸ್ ಪಕ್ಷ ಕೈಕೈ ಮಿಲಾಯಿಸಿದ ಪ್ರಸಂಗ ಕೂಡ ನಡೆಯಿತು.[೬] ಅಸಹಕಾರ ಚಳವಳಿಯ ಪ್ರಾರಂಭವನ್ನು ವಿರೋಧಿಸಿ ತಿಲಕರ ರಾಷ್ಟ್ರವಾದಿ ಪಕ್ಷದ ಚುನಾವಣಾ ಪ್ರಣಾಳಿಕೆಗೆ ಸಹಿ ಹಾಕಿದವರಲ್ಲಿ ರಾಜಾಜಿ ಒಬ್ಬರು; ೧೯೧೯ರ ಸಂವಿಧಾನಿಕ ಸುಧಾರಣಾ ಹಿನ್ನೆಲೆಯಲ್ಲಿ ಚುನಾವಣೆಗೆ ಸ್ಪರ್ಧಿಸುವುದೆಂದು ತೀರ್ಮಾನವಾಗಿತ್ತು.[೭] ಆದರೆ ಏಪ್ರಿಲ್ ೧೯೨೦ರ ವೇಳೆಗೆ ಅನೇಕರು ಯಾರಿಗೆ ಬೆಂಬಲಿಸುವುದೆಂದು ಗಲಿಬಿಲಿಗೊಂಡಿದ್ದ ಸಂದರ್ಭದಲ್ಲಿ ರಾಜಾಜಿ ಸುಮಾರು ೨೦೦ ಮಂದಿ ಅಭ್ಯರ್ಥಿಗಳೊಡಗೂಡಿ ಗಾಂಧೀಜಿಯವರ ಅಸಹಕಾರ ಚಳವಳಿಯ ಠರಾವನ್ನು ಬೆಂಬಲಿಸಲು ಕಲ್ಕತ್ತಾ ಕಾಂಗ್ರೆಸ್ಸಿಗೆ ಹೋದರು. ರಾಷ್ಟ್ರವಾದದ ಬಗೆಗೆ ಅಭ್ಯಸಿಸುವ ವಿದ್ವಾಂಸನಿಗೆ ಕುತೂಹಲವನ್ನುಂಟುಮಾಡುವ ಸಂಗತಿಯೆಂದರೆ ಈ ದಕ್ಷಿಣ ಭಾರತದ ರಾಷ್ಟ್ರವಾದಿಗಳು ತಮ್ಮ ಎದಿರಾಳಿಗಳನ್ನು ಪರಾಭವಗೊಳಿಸಲು ಹೂಡಿದ ಹುನ್ನಾರ ಹಾಗೂ ತಂತ್ರಗಳ ಸೂಕ್ಷ್ಮತೆ. ಇದರ ಬಗ್ಗೆ ಎಚ್ಚರಿಕೆ ವಹಿಸದ ಸಂದರ್ಭದಲ್ಲಿ ಈ ತಂತ್ರಗಳ ಚಕ್ರವ್ಯೂಹದಲ್ಲಿ ಸಿಕ್ಕಿಹಾಕಿಕೊಂಡು ರಾಷ್ಟ್ರವಾದವೇ ಕಣ್ಣಿಂದ ತಪ್ಪಿಸಿಕೊಳ್ಳುವ ಅಪಾಯವಿದೆ. ಆದಾಗ್ಯೂ ರಾಷ್ಟ್ರವಾದಿಗಳ ಮನಸ್ಸನ್ನು ಅರ್ಥಮಾಡಿಕೊಳ್ಳುವಲ್ಲಿ ಇದೂ ಕೂಡ ಸಹಕಾರಿಯಾಗುತ್ತದೆ. ರಂಗಸ್ವಾಮಿ ಅಯ್ಯಂಗಾರ್ ಹಾಗೂ ಸತ್ಯಮೂರ್ತಿಯವರು ಅಸಹಕಾರ ಚಳವಳಿ ವಿರೋಧಿಗಳಾಗಿ ಕೆಲಸ ಮಾಡಿದ್ದರಲ್ಲದೆ ಅದನ್ನು ವಿರೋಧಿಸಲು ಕಲ್ಕತ್ತ ಸಮಾವೇಶಕ್ಕೆ ಮದರಾಸಿನ ಗಿರಣಿ ಕಾರ್ಮಿಕರನ್ನು ಕಳುಹಿಸುವ ವ್ಯವಸ್ಥೆ ಮಾಡಿದರು. ೧೯೨೦ರ ನಾಗಪುರ ಸಮಾವೇಶದ

ಅಧ್ಯಕ್ಷರಾಗಿದ್ದ ವಿಜಯರಾಘವಾಚಾರಿಯವರು 'ಈ ತತ್ತ್ವವನ್ನು ನಾವು ಸಂಪೂರ್ಣವಾಗಿ ಅನುಮೋದಿಸುತ್ತಿಲ್ಲವಾದರೂ ಜನಾಭಿಪ್ರಾಯದ ದೃಷ್ಟಿಯಲ್ಲಿ ಸಮಿತಿ ನೀಡಬೇಕಾದ ಅನಿವಾರ್ಯತೆಯನ್ನು ಅರಿತಿದ್ದೇವೆ' ಎಂದು ಬರೆದುದು ಕುತೂಹಲಕರವಾದ ಸಂಗತಿಯಾಗಿದೆ.[೯] ದಕ್ಷಿಣ ಭಾರತದ ರಾಷ್ಟ್ರವಾದಿಗಳು ಈ ರೀತಿಯಾಗಿ ಬದಲಾದದ್ದು ಅವರ ಮನಸ್ಸು ಕೆಲಸ ಮಾಡುತ್ತಿದ್ದ ರೀತಿಗೆ ದಿಕ್ಸೂಚಿಯಾಗಿದೆ.

ಕರ್ನಾಟಕವು ಕೆಲವು ಪ್ರಾಂತೀಯ ಸಮಾವೇಶಗಳನ್ನು ನಡೆಸಿತಲ್ಲದೆ, ೧೯೧೬ರ ಬೆಳಗಾವಿ ಸಮಾವೇಶದಲ್ಲಿ ಗಾಂಧೀಜಿ ಹಾಗೂ ತಿಲಕ್ ಇಬ್ಬರೂ ಭಾಗವಹಿಸಿದ್ದರು. ೧೯೧೮ರಲ್ಲಿ ವಿಠಲಬಾಯಿ ಪಟೇಲರ ಅಧ್ಯಕ್ಷತೆಯಲ್ಲಿ ಬಿಜಾಪುರದಲ್ಲಿ ಒಂದು ಸಮಾವೇಶ ನಡೆಯಿತು. ಗಾಂಧೀಜಿ ಮತ್ತು ಸರೋಜಿನಿ ನಾಯ್ಡು ಅವರು ಚರ್ಚೆಯಲ್ಲಿ ಭಾಗವಹಿಸಿದರು. ಸ್ವದೇಶಿ, ಶಸ್ತ್ರಾಸ್ತ್ರ ಕಾಯಿದೆ, ಪತ್ರಿಕಾ ಕಾಯಿದೆ ಕುರಿತು ಗೊತ್ತುವಳಿ ಸೂಚಿಸಲಾಯಿತು.

ಭಾರತದಲ್ಲಿ ಒಟ್ಟಾರೆ ಅಸಮಾಧಾನವಿದ್ದಿತು. ರೌಲತ್ ಕಾಯಿದೆಗಳು, ಜಲಿಯನ್‌ವಾಲಾ ಬಾಗ್‌ನ ಹತ್ಯೆ, ಪಂಜಾಬು ಪ್ರಾಂತ್ಯದಲ್ಲಿನ ಸೈನಿಕ ಕಾನೂನು– ಎಲ್ಲ ಜನರಲ್ಲಿ ನಿರಾಶೆ ಮೂಡಿಸಿದ್ದವು. ೧೯೧೯ರ ಸುಧಾರಣೆಗಳು ಸೇರ್ಪಡೆ ಮಾಡಿದ ದ್ವಾಧಿಪತ್ಯ (Dyarchy) ಅತೃಪ್ತಿಕರವಾಗಿತ್ತು. ಯುದ್ಧ ಸನ್ನಿವೇಶದಲ್ಲಿ ಆರಂಭದಲ್ಲಿ ಬ್ರಿಟಿಷ್ ಸರ್ಕಾರವು ಮಾಡಿದ್ದ ತೀರ್ಮಾನಕ್ಕೆ ವಿರುದ್ಧವಾಗಿ ಸೇವ್ರೆಸ್(Sevres) ಒಪ್ಪಂದವಾಗಿದ್ದ ಕಾರಣ ಭಾರತೀಯ ಮುಸ್ಲಿಮ್ಮರು ತುಂಬಾ ತಳಮಳಗೊಂಡಿದ್ದರು. ಟರ್ಕಿಯ ಖಲೀಫಾ ತಮ್ಮ ಆಧ್ಯಾತ್ಮಿಕ ಪರಮಾಧಿಕ್ಯದ ಸಂಕೇತವೆಂದು ತಿಳಿದಿದ್ದ ಮುಸ್ಲಿಮರು ಖಲೀಫಾಕ್ಕೆ ಮುಸ್ಲಿಂ ಪವಿತ್ರ ಸ್ಥಾನಗಳ ಮೇಲೆ ಯಾವುದೇ ನಿಯಂತ್ರಣವಿಲ್ಲವೆಂಬ ಘೋಷಣೆ ಹೊರಟಾಗ ಸಹಜವಾಗೇ ಪ್ರತಿಕ್ರಿಯೆ ವ್ಯಕ್ತಪಡಿಸಿದರು. ಜಲಿಯನ್‌ವಾಲಾ ಬಾಗ್ ಘಟನೆಯ ವಿಚಾರಣೆಯನ್ನು ಕೈಗೆತ್ತಿಕೊಂಡ ಹಂಟರ್ ಆಯೋಗ ಆ ನರಮೇಧದ ನೇತಾರನಾದ ಸೇನಾಧಿಪತಿ ಡಯರ್‌ನಿಗೆ ಕ್ಷಮಾಧಾನ ಮಾಡಿದಾಗ ಜನರಿಗೆ ಗಾಯದ ಮೇಲೆ ಬರೆ ಎಳೆದಂತಾಯಿತು. ಯುದ್ಧ ಪ್ರಾರಂಭವಾದಾಗಿನಿಂದ ತುದಿಗಾಲಲ್ಲಿ ನಿಂತಿದ್ದ ಖಿಲಾಫತ್‌ಕಾರರು ಈಗ ತಮ್ಮ ದುಃಖದ ಪಾತ್ರೆ ತುಂಬಿ ಹೋಯಿತೆಂದು ತೀರ್ಮಾನಿಸಿದರು. ೧೯೧೯ರ ಖಿಲಾಫತ್ ಸಮಾವೇಶಕ್ಕೆ ವಿಶೇಷವಾಗಿ ಆಹ್ವಾನಿತರಾಗಿದ್ದ ಗಾಂಧೀಜಿ ಮುಸ್ಲಿಮರಿಗೆ ವಂಚನೆ ಮಾಡಿದ ಬ್ರಿಟಿಷರು ನಿಜವಾಗಿ ಅನೀತಿ ಮಾರ್ಗವನ್ನು ಹಿಡಿದಿದ್ದರೆಂದು ಭಾಷಿಸಿದರು. ಖಿಲಾಫತ್ ಚಳವಳಿಗಾರರು ಅಹಿಂಸಾತ್ಮಕ ಅಸಹಕಾರ ಚಳವಳಿಯನ್ನು ಕೈಗೆತ್ತಿಕೊಂಡು ಬ್ರಿಟಿಷ್ ಸರ್ಕಾರದ ಅನ್ಯಾಯದ ವಿರುದ್ಧ ಪ್ರತಿಭಟಿಸಬೇಕೆಂದು ಕರೆಕೊಟ್ಟರು. ಖಿಲಾಫತ್ ಸಮಾವೇಶದ ಅಲಹಾಬಾದ್ ಸಭೆಯು ಅಸಹಕಾರ ಚಳವಳಿಯನ್ನು ಸ್ವೀಕರಿಸುವುದಾಗಿ ಘೋಷಿಸಿತಲ್ಲದೆ ಗಾಂಧೀಜಿ ಮುಂದಾಳತ್ವ ವಹಿಸಬೇಕೆಂದು ಕೇಳಿಕೊಂಡಿತು.

ಈ ಬೆಳವಣಿಗೆಗಳಿಂದ ಕಾಂಗ್ರೆಸ್ ಕೂಡ ರೋಸಿಹೋಗಿತ್ತು. ಎ.ಐ.ಸಿ.ಸಿ. ಕೂಡ ಕಾಂಗ್ರೆಸ್ಸಿನ ವಿಶೇಷ ಸಭೆ ಕರೆದು ಮುಂದಿನ ಕಾರ್ಯಕ್ರಮ ರೂಪಿಸುವ ಬಗ್ಗೆ ಚರ್ಚೆ ನಡೆಸಿತು. ಅತೃಪ್ತಿಯಿಂದ ಕುದಿಯುತ್ತಿದ್ದ ಜನತೆಗೆ ಒಂದು ದಿಕ್ಕು ಬೇಕಾಗಿತ್ತು. ಆರ್ಥಿಕವಾಗಿ ಜನರು ತುಂಬಾ ಸಂಕಷ್ಟಕ್ಕೀಡಾಗಿದ್ದರು. ಆಗ ತಾನೇ ತಲೆದೋರಿದ್ದ ಕ್ಷಾಮ ಮತ್ತು ಇತರ ನೈಸರ್ಗಿಕ ವಿಕೋಪಗಳಿಂದ ಕರ್ನಾಟಕದ ಜನರು ಅಗ್ನಿಪರ್ವತದ ಮೇಲೆ ಕುಳಿತವರಂತಾಗಿದ್ದರು. ಕೃಷಿ ಕಾರ್ಮಿಕರು ಹಾಗೂ ಕೆಳಮಧ್ಯಮ ವರ್ಗದ ಮಂದಿ ಅಗತ್ಯವಸ್ತುಗಳ ಹೆಚ್ಚುತ್ತಿದ್ದ ಬೆಲೆಗಳಿಂದಾಗಿ ಬಳಲಿ ಬೆಂಡಾಗಿದ್ದರು. ಮೈಸೂರಿನಲ್ಲಿ ಧಾನ್ಯಕ್ಕಾಗಿ ದಂಗೆಗಳಾದವು.[೧೦] ಪಶ್ಚಿಮ ಜಿಲ್ಲೆಗಳಲ್ಲಿ ಅರಣ್ಯ ಕಾನೂನನ್ನು ಬಹಳ ಕಟ್ಟುನಿಟ್ಟಾಗಿ ಹೇರಿದ್ದರಿಂದ ಹಾಗೂ ಕ್ಷಾಮ ತಲೆದೋರಿದ ಸಂವತ್ಸರಗಳಲ್ಲಿಯೂ ಸಹ ಭೂಕಂದಾಯದಲ್ಲಿ ಯಾವುದೇ ರೀತಿಯ ಮನ್ನಾ

ಸಾಧ್ಯವಿಲ್ಲವೆಂದು ಸರ್ಕಾರ ಘೋಷಿಸಿದ ಕಾರಣ ಅತೃಪ್ತಿಯ ಹೊಗೆ ಎಲ್ಲಕಡೆ ತಾಂಡವವಾಡಿತು. ಅಧಿಕಾರಿಗಳ ಕ್ರೂರವಾದ ನಡವಳಿಕೆಯ ಪರಿಣಾಮವಾಗಿ ಜನರು ತಮ್ಮ ಭೂಮಿಕೇಣಿಯನ್ನು ಮಾಡಲಾರದಂಥ ಪರಿಸ್ಥಿತಿಯಲ್ಲಿ ತಮ್ಮ ಭೂಮಿಯನ್ನೇ ತೊರೆದು ವಲಸೆ ಹೊರಟುಹೋದರು. ಇದರ ಪರಿಣಾಮವಾಗಿ ಕೃಷಿಗೆ ಒಳಗಾದ ಭೂಮಿಯ ವಿಸ್ತಾರವೂ ಕಡಿಮೆಯಾಯಿತು ಹಾಗೂ ಅದನ್ನೇ ಅವಲಂಬಿಸಿಕೊಂಡಿದ್ದ ಜನರ ಸಂಖ್ಯೆಯೂ ವಲಸೆಯಿಂದ ಕಡಿಮೆಯಾಯಿತು. ಬೊಂಬಾಯಿ ಪ್ರಾಂತ್ಯದಲ್ಲಿದ್ದ ಉತ್ತರ ಕರ್ನಾಟಕ– 'ತೆರಿಗೆ ನೀಡದವ್ರ ಆಂದೋಳನ' (No Tax Campaign) ನಡೆಸಿದ ಖ್ಯಾತಿ ಈ ಪ್ರಾಂತ್ಯಕ್ಕೆ ಸಲ್ಲಬೇಕು –ಹೆಚ್ಚು ಆಘಾತ ಕ್ಕೊಳಗಾಯಿತು. ೧೮೯೦ರಲ್ಲಿ ೨,೪೦,೩೦೯ ಎಕರೆ ಕೃಷಿ ಭೂಮಿ ಇದ್ದದ್ದು, ೧೯೨೦ರ ಹೊತ್ತಿಗೆ ೧೦,೭೦೨ ಎಕರೆಗಳಿಗೆ ಇಳಿಯಿತು. ಅದೇ ಜಿಲ್ಲೆಯ ಸಿರ್ಸಿ ತಾಲ್ಲೂಕಿನಲ್ಲಿ ೧೯೦೧ರಲ್ಲಿ ೫೪,೦೦೦ ಇದ್ದ ಜನಸಂಖ್ಯೆ ೧೯೧೨ರ ವೇಳೆಗೆ ೩೭,೦೦೦ಕ್ಕೆ ಇಳಿಯಿತು. ೧೯೧೪–೧೫ರಲ್ಲಿ ಆದ ಪುನರ್‌ಪರಿಶೀಲನೆಯಲ್ಲಿ ಭೂಕಂದಾಯ ಕೂಡ ಹೆಚ್ಚಿಸಲ್ಪಟ್ಟಿತು. ಕೃಷಿಕರ ಮತ್ತು ಕೆಳಮಧ್ಯಮ ವರ್ಗದವರ ಅತೃಪ್ತಿ ಬೆಳೆಯಲು ಕಾರಣವೇನೆಂದು ಈ ಹಿನ್ನೆಲೆಯಿಂದ ತಿಳಿಯಬಹುದು.

ತಿಲಕರು ಮರಣ ಹೊಂದಿದ ದಿನ ಅಂದರೆ, ಆಗಸ್ಟ್ ೧, ೧೯೨೦ರಂದು ಅಸಹಕಾರ ಚಳವಳಿ ವಿದ್ಯುಕ್ತವಾಗಿ ಪ್ರಾರಂಭವಾಯಿತು. ಸೆಪ್ಟಂಬರ್‌ನಲ್ಲಿ ನಡೆದ ಕಲ್ಕತ್ತಾ ಸಮಾವೇಶವು ಅಸಹಕಾರ ಗೊತ್ತುವಳಿಯನ್ನು ಮಂಡಿಸಿತು. ಮೊದಲು ಈ ಚಳವಳಿಯನ್ನು ವಿರೋಧಿಸಿದವರ ಬಣದ ಮುಂದಾಳಾಗಿದ್ದ ಸಿ.ಆರ್. ದಾಸ್ ಅವರೇ ೧೯೨೦ರ ಡಿಸೆಂಬರ್‌ನಲ್ಲಿ ನಾಗಪುರ ಕಾಂಗ್ರೆಸ್ ಸಮಾವೇಶದಲ್ಲಿ ಅಸಹಕಾರ ಚಳವಳಿಯ ಗೊತ್ತುವಳಿಯನ್ನು ಮಂಡಿಸಿದುದು ಕುತೂಹಲಕರವಾಗಿದೆ.

ಕರ್ನಾಟಕಕ್ಕೆ ಸಂಬಂಧಿಸಿದಂತೆ ಎರಡು ಅಂಶಗಳಿಗಾಗಿ ನಾಗಪುರ ಕಾಂಗ್ರೆಸ್ ಸಮಾವೇಶ ಪ್ರಾಮುಖ್ಯತೆ ಪಡೆದುಕೊಳ್ಳುತ್ತದೆ: ಮೊದಲನೆಯದು, ಪ್ರತಿಯೊಂದು ಭಾಷಾ ಪ್ರಾಂತ್ಯಕ್ಕೂ ಒಂದು ಪ್ರಾಂತೀಯ ಸಮಿತಿ ಇರಬೇಕೆಂದು ಸಮಾವೇಶ ಒಪ್ಪಿಗೆ ನೀಡಿದುದು; ಹಾಗಾಗಿ ಯಾವುದೇ ಪ್ರೆಸಿಡೆನ್ಸಿಯಲ್ಲಿದ್ದರೂ ಕನ್ನಡ ಮಾತನಾಡುವವರೆಲ್ಲ ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯಡಿ ಬರುತ್ತಾರೆ ಎಂದಾಯಿತು. ಎರಡನೆಯದು, ಭಾಷಾವಾರು ಪ್ರಾಂತ್ಯದ ನಿರ್ಮಾಣದ ಬೇಡಿಕೆಯನ್ನು ಸಮಾವೇಶ ಅನುಮೋದಿಸಿತು. ಹಾಗಾಗಿ ಪ್ರತ್ಯೇಕವಾಗಿ ಸಾಗಿದ್ದ ಸಾಂಸ್ಕೃತಿಕ ಹಾಗೂ ರಾಷ್ಟ್ರೀಯ ರಾಜಕೀಯ ಚಳವಳಿಗಳು ಈಗ ಒಟ್ಟಾಗಿ ನಡೆಯುವಂತೆ ಸಹಾಯಕವಾಯಿತು. ಈ ಎರಡೂ ಬೇಡಿಕೆಗಳನ್ನು ಈಡೇರಿಸಿಕೊಳ್ಳುವ ದಿಶೆಯಲ್ಲಿ ಕರ್ನಾಟಕದ ನಾಯಕರು ೮೦೦ ಮಂದಿ ಅಭ್ಯರ್ಥಿಗಳನ್ನು ಸಮಾವೇಶಕ್ಕೆ ಕಳುಹಿಸಿದ್ದರೆಂದು ತಿಳಿದುಬರುತ್ತದೆ.[೧೧]

ಕರ್ನಾಟಕದ ದೇಶೀಯ ಪ್ರಾಂತ್ಯದಲ್ಲಿದ್ದ ರಾಷ್ಟ್ರವಾದಿ ಮನೋಭಾವದ ಮಂದಿ ಕೆ.ಪಿ.ಸಿ.ಸಿ.ಯ ಅಂಗ ಸಂಸ್ಥೆಯೆನ್ನುವಂತೆ ಜಿಲ್ಲಾ ಸಮಿತಿಯ ಮಾನ್ಯತೆಯನ್ನು ತಮಗಾಗಿ ದಕ್ಕಿಸಿಕೊಂಡರು. ಮೈಸೂರಿನಲ್ಲಿ, ಮೈಸೂರಿನ ಮುಖ್ಯ ನ್ಯಾಯಾಲಯದಲ್ಲಿ ನ್ಯಾಯಮೂರ್ತಿಗಳಾಗಿ ನಿವೃತ್ತರಾಗಿದ್ದ ಎಸ್.ಎಸ್. ಸೆಟ್ಲೂರ್‌ರವರ ಅಧ್ಯಕ್ಷತೆಯಲ್ಲಿ ಮೈಸೂರು ಜಿಲ್ಲಾ ಕಾಂಗ್ರೆಸ್ ಸಮಿತಿ ಅಸ್ತಿತ್ವಕ್ಕೆ ಬಂದಿತು. ಆಗ ಎಸ್.ಎನ್.ಎಮ್. ರಜ್ವಿಯವರು ಆ ಸಮಿತಿಯ ಕಾರ್ಯದರ್ಶಿಯಾಗಿದ್ದರು. ದೇಶೀಯ ಸಂಸ್ಥಾನಗಳ ಜನರು ರಾಜಕೀಯ–ಆಂದೋಳನಗಳನ್ನು ನಡೆಸುವುದಕ್ಕೆ ಅನುಮತಿ ಇರಲಿಲ್ಲವಾಗಿ ಅವರ ಕಾರ್ಯಚಟುವಟಿಕೆಯನ್ನು ಸ್ವದೇಶಿ ಚಳುವಳಿಗೆ ಮಾತ್ರ ಸೀಮಿತಗೊಳಿಸಿಕೊಳ್ಳಬೇಕಾಗಿತ್ತು. ಮದರಾಸು ಮತ್ತು ಬೊಂಬಾಯಿ ಪ್ರಾಂತ್ಯದ ನಾಯಕರು ಕಾಂಗ್ರೆಸ್ ಆದರ್ಶಗಳನ್ನು ಪ್ರಚಾರ ಮಾಡಲು ಮೈಸೂರು ಪ್ರಾಂತ್ಯದಲ್ಲಿ ಸಂಚರಿಸಿದರು.[೧೨]

ಗಾಂಧೀಜಿಯವರ ಸಾಧುತನದಿಂದ ಸ್ಫೂರ್ತಿಗೊಂಡು ಕರ್ನಾಟಕದ ಪತ್ರಿಕಾರಂಗ ರಾಷ್ಟ್ರವಾದ ಆಂದೋಲನಕ್ಕೆ ಪ್ರೋತ್ಸಾಹ ನೀಡಿತು. ಪ್ರಪ್ರಥಮ ಬಾರಿಗೆ ಕಾಂಗ್ರೆಸ್‌ನ ಸಂದೇಶವನ್ನು ಬಿತ್ತರಿಸಲು ಬದ್ಧರಾಗಿ ಪೂರ್ಣಾವಧಿಯ ರಾಜಕೀಯ ಕಾರ್ಯಕರ್ತರು ಮುಂದೆ ಬಂದರು. ಸತ್ಯಾಗ್ರಹ ತಂತ್ರದಲ್ಲಿ ತರಬೇತು ಪಡೆಯಲು ಕಾಕಾ ಕಾರ್ಖಾನೀಸ್, ಟಿ.ಎಸ್. ನಾಯಕ್, ಗಂಗಾಧರರಾವ್ ದೇಶಪಾಂಡೆ, ಹರ್ಡೀಕರ್ ಮಂಜಪ್ಪ ಮೊದಲಾದ ನಾಯಕರು ಸಬರಮತಿಗೆ ತೀರ್ಥಯಾತ್ರೆ ಹೊರಟರು. ಕರ್ನಾಟಕದಲ್ಲಿ ಸ್ವಾತಂತ್ರ ಹೋರಾಟ ಕಾಲದಲ್ಲಿ ಉದ್ದಕ್ಕೂ ದುಡಿದಂಥ ಯುವಕರ ಒಂದು ತಂಡವೇ ಅಸಹಕಾರ ಚಳವಳಿಯಲ್ಲಿ ರೂಪುಗೊಂಡರು. ಸಾವಿರಾರು ವಿದ್ಯಾರ್ಥಿಗಳು ಸರ್ಕಾರಿ ಶಾಲೆಗಳನ್ನು ತೊರೆದು ಆಗ ತಾನೇ ಪ್ರಾರಂಭಿಸಲಾಗಿದ್ದ ರಾಷ್ಟ್ರೀಯ ಶಾಲೆಗಳನ್ನು ಸೇರಿದರು. ಕರ್ನಾಟಕದಲ್ಲಿ ಸುಮಾರು ೪೮ ರಾಷ್ಟ್ರೀಯ ಶಾಲೆಗಳು ತೆರೆಯಲ್ಪಟ್ಟವು. ಸುಮಾರು ನೂರು ಮಂದಿ ವಕೀಲರು ತಮ್ಮ ವೃತ್ತಿಯನ್ನು ತೊರೆದು ಅಸಹಕಾರ ಚಳವಳಿಯಲ್ಲಿ ಸಕ್ರಿಯವಾಗಿ ತೊಡಗಿದರು. ಸೆರೆಯಂಗಡಿ ಹಾಗೂ ಮದ್ಯದಂಗಡಿಗಳ ಮುಂದೆ ಮಹಿಳೆಯರು ಹಾಗೂ ಮಕ್ಕಳು ಪಿಕೆಟಿಂಗ್ ಕುಳಿತರು. ಹೊಸದಾಗಿ ಸ್ಥಾಪಿತವಾಗಿದ್ದ ಕೆ.ಪಿ.ಸಿ.ಸಿ. ಈ ಚಳವಳಿಯಲ್ಲಿ ತೊಡಗಿ ಇತರರಿಗೆ ಮಾದರಿಯಾಯಿತು. ಸರ್ಕಾರದ ವಿರುದ್ಧ ದನಿಯೆತ್ತುವುದರಲ್ಲಿ ಸಾಮಾನ್ಯವಾಗಿ ಮುಂದಾಗದ ಕರ್ನಾಟಕ, ಅಸಹಕಾರ ಚಳವಳಿಯ ಸಂದರ್ಭದಲ್ಲಿ ಪರಿಸ್ಥಿತಿಯ ಒತ್ತಡಕ್ಕೆ ಸಕಾರಾತ್ಮಕವಾಗಿ ಪ್ರತಿಕ್ರಿಯಿಸಲು ಉತ್ತೇಜನ ಪಡೆಯಿತು; ರಾಷ್ಟ್ರೀಯ ಐಕ್ಯತೆಯ ಹೋರಾಟವನ್ನು ಕೈಗೆತ್ತಿಕೊಂಡಿತು. ಸರ್ಕಾರದ ಆಜ್ಞೆಯನ್ನು ಉಲ್ಲಂಘಿಸಿದ ನಾಯಕರನ್ನು ಉಗ್ರಶಿಕ್ಷೆಗೆ ಗುರಿಪಡಿಸಲಾಯಿತು. ಹಾಗೂ ಬೇರೆ ಬೇರೆ ಅವಧಿಯ ಸೆರೆಮನೆ ವಾಸವನ್ನು ವಿಧಿಸಲಾಯಿತು. ಆ ಕಾಲದಲ್ಲಿ ನಡೆದ ಘಟನೆಗಳಲ್ಲಿ ಗಮನ ಸೆಳೆದದ್ದೆಂದರೆ ಧಾರವಾಡದಲ್ಲಿ ಶಾಂತಿಯುತವಾಗಿ ಸಾರಾಯಿ ಅಂಗಡಿಯ ಮುಂದೆ ಪಿಕೆಟಿಂಗ್ ಕುಳಿತಿದ್ದ ಮಂದಿಯ ಮೇಲೆ ಗುಂಡು ಹಾರಿಸಿ ೩ ಜನರನ್ನು ಕೊಂದ ಘಟನೆ. ಸರ್ಕಾರವು ೨೭ ಜನರ ಮೇಲೆ ಮೊಕದ್ದಮೆಯನ್ನು ಹೂಡಿದಾಗ, ಅವರು ತಮ್ಮನ್ನು ಸಮರ್ಥಿಸಿಕೊಳ್ಳಲು ನಿರಾಕರಿಸಿದಾಗ ೨೩ ಜನರಿಗೆ ಜೈಲುಶಿಕ್ಷೆ ವಿಧಿಸಲಾಯಿತು.[೧೩]

ಭಾರತದ ಸ್ವಾತಂತ್ರ್ಯ ಹೋರಾಟಕ್ಕೆ ಆ ಘಟ್ಟದಲ್ಲಿ ಕರ್ನಾಟಕಕ್ಕೆ ಆದ ಗಣನೀಯ ಕೊಡುಗೆಗಳಲ್ಲಿ ಒಂದೆಂದರೆ ಭಾರತ ಸೇವಾದಳದ ಸ್ಥಾಪನೆ. ಅಮೆರಿಕಾದಲ್ಲಿ ವ್ಯಾಸಂಗ ಮಾಡಿ ವಾಪಸ್ಸಾಗಿದ್ದ ವೈದ್ಯರಾದ ಎನ್.ಎಸ್. ಹರ್ಡೀಕರ್‌ರವರು ಈ ದಳವನ್ನು ಸ್ಥಾಪಿಸಿ ರಾಷ್ಟ್ರೀಯ ಸ್ವಯಂಸೇವಕ ದಳದ ಪ್ರಾಮುಖ್ಯತೆಯನ್ನು ಎಲ್ಲರಿಗೂ ಮನವರಿಕೆ ಮಾಡಿಕೊಟ್ಟರು. ತಿಲಕರ ಕಟ್ಟಾ ಅಭಿಮಾನಿಯಾಗಿದ್ದ ಹರ್ಡೀಕರ್‌ರವರು ಉನ್ನತ ವ್ಯಾಸಂಗಕ್ಕಾಗಿ ಅಮೆರಿಕಾದಲ್ಲಿ ಉಳಿಯುವ ಕಾಲದಲ್ಲಿ ಲಾಲಾ ಲಜಪತ್‌ರಾಯ್ ಅವರ ಪ್ರಭಾವಕ್ಕೊಳಗಾದರು; ರಾಯ್ ಅವರು ಆಗ ಅಮೆರಿಕಾದಲ್ಲಿ ಅಜ್ಞಾತವಾಸದಲ್ಲಿದ್ದರು. ಮರಳಿ ತಮ್ಮ ಸ್ವಂತ ರಾಜ್ಯಕ್ಕೆ ಅವರು ಬಂದ ಬಳಿಕ ಕಾಂಗ್ರೆಸ್ಸಿನ ಆಶ್ರಯದಲ್ಲಿ ರಾಷ್ಟ್ರೀಯ ಸೇವೆಗಾಗಿ ಯುವಕರನ್ನು ಸಂಘಟಿಸಲು ಪ್ರಾರಂಭಿಸಿದರು. ಆ ಕಾಲದಲ್ಲಿ ರಾಷ್ಟ್ರೀಯ ರಂಗದಲ್ಲಿ ಉದಯಿಸುತ್ತಿದ್ದ ತಾರೆಯಾಗಿದ್ದ ಜವಹರ್‌ಲಾಲ್ ನೆಹರೂರವರು ಈ ವಿಷಯವಾಗಿ ತಿಳಿದು ತಮ್ಮ ಸಂತಸ ವ್ಯಕ್ತಪಡಿಸಿದರು. ತಮ್ಮ ಆತ್ಮಚರಿತ್ರೆಯಲ್ಲಿ ಭಾರತ ಸೇವಾದಳವನ್ನು ಕುರಿತು ನೆಹರೂರವರು ಹೀಗೆ ಬರೆದಿದ್ದಾರೆ: '...... ರಾಷ್ಟ್ರೀಯ ಚಳವಳಿಯ ಸ್ವಯಂಸೇವಾ ವಿಭಾಗವಾದ ಸೇವಾದಳವು ತಾನು ಪ್ರತ್ಯೇಕವಾದರೂ ಕೂಡ ಉದ್ದಕ್ಕೂ ಕಾಂಗ್ರೆಸ್ ಪಕ್ಷದ ಅಂಗಸಂಸ್ಥೆಯಾಗಿ ಕಾರ್ಯ ನಿರ್ವಹಿಸಿಕೊಂಡು ಬಂದಿದೆ...... ಹರ್ಡೀಕರ್ ಮತ್ತು ನಾನು ಇದರ ಉಸ್ತುವಾರಿಯನ್ನು ನೋಡಿಕೊಂಡೆವು. ದಳದ ಮುಖ್ಯಕಚೇರಿ ಕರ್ನಾಟಕದ ಹುಬ್ಬಳ್ಳಿಯಲ್ಲೇ ಮುಂದುವರೆದಿದೆ, ಹಾಗೆಯೇ ದಳದ ಕಾರ್ಯಕ್ರಮಗಳಿಗೆ ಸಂಬಂಧಿಸಿದಂತೆ ನಾನು ಅನೇಕ ಸಲ ಆ ಊರಿಗೆ ಭೇಟಿ ನೀಡುವಂತೆ ಹರ್ಡೀಕರರು ಅವಕಾಶ ಕಲ್ಪಿಸಿದ್ದಾರೆ. ಅದಾದ ನಂತರ ಕರ್ನಾಟಕದ ಬೇರೆ ಬೇರೆ ಸ್ಥಳಗಳಿಗೆ ನನ್ನನ್ನು ಹರ್ಡೀಕರರು ಪ್ರವಾಸ ಕರೆದುಕೊಂಡು ಹೋದರು; ಎಲ್ಲೆಡೆಯಲ್ಲಿಯೂ ಜನರ ಉತ್ಸಾಹ ಮಾತಿಗೆ ನಿಲುಕದಷ್ಟು ಅದ್ಭುತವೆನಿಸಿತು.[೧೪]

ಸ್ವಾತಂತ್ರ್ಯ ಹೋರಾಟದಲ್ಲಿ ಈ ಸಂಘಟನೆ ಉತ್ತಮವಾದ ಕೊಡುಗೆ ನೀಡಿದೆ. ಹರ್ಡೀಕರ್‌ರವರಿಂದ ಸ್ಥಾಪನೆಗೊಂಡು ಪರಿಪುಷ್ಟವಾಗಿ ಬೆಳೆದಂಥ ಈ ಸ್ವಯಂ ಸೇವಾ ಸಂಸ್ಥೆ ಸ್ಥಾಪಕರಿಂದ ರಾಷ್ಟ್ರಕ್ಕೆ ಸಮರ್ಪಣೆಯಾಯಾತು.

ಚೌರಿ ಚೌರಾ ಘಟನೆಯ ಹಿನ್ನೆಲೆಯಲ್ಲಿ ೧೯೨೨ರಲ್ಲಿ ಅಸಹಕಾರ ಚಳವಳಿಯನ್ನು ನಿಲ್ಲಿಸಲಾಯಿತು. ಒಂದು ವರ್ಷದಲ್ಲಿ ಸ್ವರಾಜ್ಯವನ್ನು ಸ್ಥಾಪಿಸಬಹುದೆಂದು ಗಾಂಧೀಜಿಯವರು ನುಡಿದಿದ್ದರಾದರೂ, ಅದು ಸಾಧ್ಯವಾಗಲಿಲ್ಲ. ಆದರೆ ಈ ಚಳವಳಿಯ ಸಕಾರಾತ್ಮಕ ಅಂಶಗಳು ಹಲಪಿದ್ದಿತು. ತಮ್ಮ ತಮ್ಮೊಳಗೆ ಅನೇಕ ಗುಣಗಳಿದ್ದಾಗಿಯೂ ರಾಷ್ಟ್ರೀಯ ಸಮಸ್ಯೆಗಾಗಿ ಐಕ್ಯತೆಯಿಂದ ಭಾರತೀಯರು ಹೋರಾಟ ಬಲ್ಲರೆಂಬ ಸತ್ಯವನ್ನು ಇದು ಎಲ್ಲೆಡೆ ಸಾರಿತು. ಇದಕ್ಕೆ ಅದ್ಭುತವಾದ ಪ್ರತಿಕ್ರಿಯ ಸಿಕ್ಕಿತು ಎಂದು ಹೇಳಲಿಕ್ಕಾಗದೇ ಇದ್ದರೂ ಕರ್ನಾಟಕದಲ್ಲಿ ಬಹುತೇಕ ಜನರು ಸಕ್ರಿಯವಾಗಿ ಭಾಗವಹಿಸಿದರು. ಭಾಗವಹಿಸಲು ಆಗದೇ ಇದ್ದವರಿಗೂ ಸಹ ರಾಷ್ಟ್ರೀಯವಾದ ಗುರಿಯಿದೆ, ದೊಡ್ಡ ಗುರಿ ಅದು, ಎಂದು ಮನದಟ್ಟು ಮಾಡುವಲ್ಲಿ ಈ ಚಳವಳಿ ಯಶಸ್ವಿಯಾಯಿತು. ಎಲ್ಲಕ್ಕಿಂತ ವಿಶೇಷವಾಗಿ ಅನಕ್ಷರಸ್ಥರು ಈ ಚಳವಳಿಯಲ್ಲಿ ಭಾಗವಹಿಸಿದ ಬೆಳವಣಿಗೆಯಿಂದ ಆಧುನಿಕ ರಾಷ್ಟ್ರೀಯ ರಾಜಕಾರಣ ಕೇವಲ ಇಂಗ್ಲೀಷ್ ಶಿಕ್ಷಣ ಪಡೆದವರ ಏಕಸ್ವಾಮ್ಯ ಎಂಬ ಪೊಳ್ಳನ್ನು ಒಡೆಯಿತು. ಹೊಸ ಅಸ್ತ್ರವಾದ ಸತ್ಯಾಗ್ರಹವನ್ನು ಧಾರಣೆ ಮಾಡುವ ಕ್ರಮವನ್ನು ಸಮಾಜದ ಬೇರೆ ಬೇರೆ ವರ್ಗದವರಿಗೆ ತಿಳಿಸಿಕೊಡಲು ಈ ಚಳವಳಿ ಸಹಾಯಕವಾಯಿತು. ಹಿಂದೂ-ಮುಸ್ಲಿಂ ಬಾಂಧವರು ತಮ್ಮ ನಡುವಿನ ಅಡ್ಡಗೋಡೆಯು ಸ್ವಾರ್ಥಸಾಧಕರ ಸಂಕುಚಿತತೆಯಿಂದ ನಿರ್ಮಾಣವಾದುದೇ ಹೊರತು ಈ ಕಂದಕಕ್ಕೆ ಯಾವುದೇ ಪಿಥವಾದ ತಾತ್ವಿಕ ತಳಹದಿ ಇಲ್ಲವೆಂದು ತಿಳಿಸಿದರು.

## ಬೆಳಗಾವಿ ಅಧಿವೇಶನ ಮತ್ತು ಅದರ ಪ್ರಭಾವ

ಕರ್ನಾಟಕದ ಜನರು ಸ್ವಾತಂತ್ರ್ಯ ಹೋರಾಟಕ್ಕೆ ಧುಮುಕುವಂತೆ ಪ್ರೇರೇಪಿಸಿದ ಒಂದು ಮಹತ್ವದ ಘಟನೆಯೆಂದರೆ ೧೯೨೪ರಲ್ಲಿ ನಡೆದ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸಿನ ಬೆಳಗಾವಿ ಸಮಾವೇಶ. ಮಹಾತ್ಮ ಅಧ್ಯಕ್ಷತೆ ವಹಿಸಿದ್ದ ಏಕೈಕ ಅಧಿವೇಶನ ಇದು. ಸಾಮಾನ್ಯವಾಗಿ ದಾಕ್ಷಿಣಾತ್ಯರ ಮೇಲೆ, ವಿಶೇಷವಾಗಿ ಕರ್ನಾಟಕದ ಮೇಲೆ ಈ ಅಧಿವೇಶನದ ಪ್ರಭಾವ ಅಗಣ್ಯವಾಗಿಲ್ಲದಿದ್ದರೂ, ಭಾರತ ಸ್ವಾತಂತ್ರ್ಯ ಹೋರಾಟದ ಇತಿಹಾಸಕಾರರು ಈ ಅಂಶವನ್ನು ಕಡೆಗಣಿಸಿದ್ದಾರೆ. ಬೇರೆ ಬೇರೆ ಗುಂಪುಗಳಾಗಿ ಒಡೆದು ಹೋಗಿದ್ದ ರಾಷ್ಟ್ರವಾದಿಗಳು, ಬ್ರಾಹ್ಮಣರು, ಬ್ರಾಹ್ಮಣೇತರರು, ದೇಶೀಯ ಸಂಸ್ಥಾನಗಳು ಹಾಗೂ ಬ್ರಿಟಿಷ್ ಪ್ರೆಸಿಡೆನ್ಸಿಗಳು– ಈ ಎಲ್ಲಾ ಕಾರಣಗಳಿಂದ ದಕ್ಷಿಣದವರು ಒಂದು ದೊಡ್ಡ ಪಾಠವನ್ನು ಕಲಿಯುವ ಅವಕಾಶ ಒದಗಿತ್ತು. ವಾಸ್ತವವಾಗಿ ಮಹಾತ್ಮ ಗಾಂಧಿಯವರ ನೇತೃತ್ವದಲ್ಲಿ ಜರುಗಿದ ಅಧಿವೇಶನದ ಮೂಲಕ ದಕ್ಷಿಣ ಭಾರತದ ಜನರು ಹಾಗೂ ರಾಷ್ಟ್ರವಾದಿ ಚಳವಳಿಕಾರರು ತಮ್ಮ ಮೇಲೆ ಅಡುಕಿದ್ದ ಭಾರವನ್ನು ನಿವಾರಿಸಿಕೊಳ್ಳಲು ಉಪಾಯ ಲಭಿಸಿತ್ತು. ಈ ಭಾರದ ಜೊತೆಗೆ ಬದಲಾವಣಾ-ಪರರು ಹಾಗೂ ಬದಲಾವಣೆ-ವಿರೋಧಿಗಳೆಂದು ಎರಡು ಬಣಗಳಾಗಿ ಹೋಗಿ ಅವರ ನಡುವಿನ ಸಂಘರ್ಷ ಬೇರೆ ತಲೆದೋರಿತ್ತು; ರಾಜಾಜಿ ಈ ಪ್ರಾಂತ್ಯದಲ್ಲಿ ಬದಲಾವಣೆ-ವಿರೋಧಿ ಬಣದ ನೇತೃತ್ವ ವಹಿಸಿ ಅದು ಬೇರೆ ಇನ್ನಷ್ಟು ಗಲಿಬಿಲಿಗೆ ಕಾರಣವಾಯಿತು. ಅಸಹಕಾರ ಚಳವಳಿಯನ್ನು ಸ್ಥಗಿತಗೊಳಿಸುವ ತೀರ್ಮಾನವನ್ನು ಗಾಂಧೀಜಿ ಕೈಗೊಂಡಾಗ ಬಹುತೇಕ ಜನರಿಗೆ ನಿರಾಶೆಯಾಯಿತಾದರೂ ವಿಶಾಲವಾದ ಜನಸ್ತೋಮ ಅವರನ್ನು ತುಂಬಾ ಗೌರವದಿಂದಲೇ ಕಂಡಿದ್ದವು. ಅಸಹಕಾರ ಚಳವಳಿ ನಿಲುಗಡೆಯಾದರೂ ಗಾಂಧೀಜಿ ರಚನಾತ್ಮಕ ಕಾರ್ಯಕ್ರಮವನ್ನು ಪ್ರಾರಂಭಿಸಿದರಾದ್ದರಿಂದ ಭಾರತೀಯ ಸಮಾಜದ ವಿಭಿನ್ನ ವಿರೋಧಾತ್ಮಕ ಗುಂಪುಗಳನ್ನು ಈ ನವೀನ ಕಾರ್ಯಕ್ರಮದಡಿಯಲ್ಲಿ ಒಗ್ಗೂಡಿಸಲು ಸಾಧ್ಯವಾಯಿತು.

ಮಹಾರಾಷ್ಟ್ರದಲ್ಲಿದ್ದ ಜಿಲ್ಲೆಗಳಿಂದ ಬೊಂಬಾಯಿ ಕರ್ನಾಟಕ, ಮದರಾಸು ಪ್ರೆಸಿಡೆನ್ಸಿಯ ಘಟಕಗಳಿಂದ ಮೈಸೂರು ಸಂಸ್ಥಾನ- ಹೀಗೆ ಬೇರೆ ಬೇರೆ ಆಡಳಿತಾತ್ಮಕ ಘಟಕಗಳಲ್ಲಿ ಭಿನ್ನ ರೀತಿಯ ಪ್ರಭಾವ ಕಾಣಿಸಿಕೊಂಡಿತ್ತಾದರೂ ಗಾಂಧೀಜಿಯವರ ಕಾರ್ಯಕ್ರಮಗಳಿಂದ ಎಲ್ಲರಿಗೂ ಸಾಮಾನ್ಯ ನಾಯಕನೊಬ್ಬ ದೊರೆತಂತಾಯಿತು. ಬೇರೆ ಬೇರೆ ಭಾಗಗಳ ಜನರು ಭಾಗವಹಿಸಿದಂಥ ಮೊಟ್ಟಮೊದಲನೇ ಕರ್ನಾಟಕ ರಾಜಕೀಯ ಸಮಾವೇಶ ೧೯೨೦ರಲ್ಲಿ ಧಾರವಾಡದಲ್ಲಿ ಜರುಗಿತು. ಸಾಂಸ್ಕೃತಿಕ ಹಾಗೂ ಸಾಹಿತ್ಯಕ ಸಂಘಟನೆಗಳು- ಬೆಂಗಳೂರಿನ ಕರ್ನಾಟಕ ಸಾಹಿತ್ಯ ಪರಿಷತ್ತು(೧೯೧೫), ಮೈಸೂರು ವಿಶ್ವವಿದ್ಯಾಲಯ (೧೯೧೬) ಸ್ಥಾಪನೆಯಾದವು. ಉದ್ಭವವಾಗುತ್ತಿದ್ದ ಹೊಸ ಪ್ರಜ್ಞೆಯ ಸಂಕೇತವಾಗಿ ಅದೇ ವರ್ಷ ಧಾರವಾಡದಲ್ಲಿ ಕರ್ನಾಟಕ ಸಭಾ ಸ್ಥಾಪನೆಯಾಯಿತು. ಕೆ.ಪಿ.ಸಿ.ಸಿ.ಯ ರಚನೆಯಿಂದಾಗಿ ಜನರಲ್ಲಿ ತಾವು ಒಂದು ಪ್ರದೇಶಕ್ಕೆ ಸೇರಿದವರೆಂಬ ಭಾವನೆ ಮೂಡಲು ಸಾಧ್ಯವಾಯಿತು.

ರಾಷ್ಟ್ರೀಯ ಮಟ್ಟದಲ್ಲಿ ಕಾಂಗ್ರೆಸ್ ನಾಯಕರಲ್ಲಿ ಗಾಂಧೀಜಿಯವರ ಜನಪ್ರಿಯತೆ ಕುಂದತೊಡಗಿತ್ತು. ವಿಶೇಷವಾಗಿ ಸ್ವರಾಜಿಸ್ಟರು ಗಾಂಧೀಜಿಯವರ ಕಾರ್ಯಕ್ರಮವನ್ನು ವಿರೋಧಿಸುತ್ತಿದ್ದ ಕಾರಣ ಬಹಿರಂಗವಾಗಿಯೇ ಅವರಿಗೆ ಸವಾಲೊಡ್ಡಿದರು. ಅಸಹಕಾರ ಚಳವಳಿ-ಖಿಲಾಫತ್ ಘಟ್ಟದಲ್ಲಿ ಗಾಂಧೀಜಿಯವರನ್ನು ಬಹುವಾಗಿ ಅವಲಂಬಿಸಿದ್ದ ಮುಸ್ಲಿಂ ಜನಸ್ತೋಮವೂ ಸಹ ಅವರಿಂದ ದೂರವಾಗಿತ್ತು. ದೇಶದಲ್ಲಿ ಕೋಮು ಗಲಭೆ ಹೆಚ್ಚಾಗಿತ್ತು. ಬೇರೆ ಬೇರೆ ಸಾಮಾಜಿಕ ಬಲಗಳು ಬೇರೆ ಬೇರೆ ದಿಕ್ಕುಗಳಿಗೆ ಎಳೆಯುತ್ತಿದ್ದವು. ವಸಾಹತು-ವಿರೋಧಿ ಹೋರಾಟಕ್ಕೆ ಈ ಎಲ್ಲದರಿಂದ ಕುತ್ತು ಬೀಳುವುದರಲ್ಲಿತ್ತು.

೧೯೨೪ರಲ್ಲಿ ಸೆರೆವಾಸದಿಂದ ಬಿಡುಗಡೆಯಾದ ಸಂದರ್ಭದಲ್ಲಿ ಗಾಂಧೀಜಿ ಹೊರಗೆ ತಾವು ಕಂಡ ಪರಿಸ್ಥಿತಿಯಿಂದ ತುಂಬಾ ಖೇದಗೊಂಡರು. ಖಾದಿ ಹಾಗೂ ಅಸ್ಪೃಶ್ಯತಾ-ವಿರೋಧಿಯಂಥ ರಚನಾತ್ಮಕ ಕಾರ್ಯಕ್ರಮಗಳು ಕಣ್ಣಿಗೆ ಕಾಣುತ್ತಿದ್ದುವಾದರೂ ಮೊದಲಿನಷ್ಟು ಉತ್ಸಾಹ ಕಾಣಲಿಲ್ಲ. ಭಾರತೀಯ ಸಮಾಜದ ನಾಡಿ ಬಡಿತವನ್ನು ಇತರರಿಗಿಂತ ಚೆನ್ನಾಗಿ ಅರಿತಿದ್ದ ಗಾಂಧೀಜಿಯವರು ಯಾವುದೇ ಹೋರಾಟವನ್ನು ಪ್ರಾರಂಭಿಸುವುದಕ್ಕಿಂತ ಜನರ ಒಗ್ಗಟ್ಟಿಗಾಗಿ ಶ್ರಮಿಸುವುದು ಅತ್ಯಗತ್ಯವೆಂದು ಮನಗಂಡರು. ಏತಕ್ಕೆಂದರೆ ಹೋರಾಟದಲ್ಲಿ ಯಶಸ್ಸು ಕಾಣಬೇಕಾದರೆ ಮೊದಲು ಐಕ್ಯತೆ ಸಾಧಿಸಬೇಕೆಂದು ಅವರು ಚೆನ್ನಾಗಿ ಅರಿತಿದ್ದರು. ಈ ಐಕ್ಯತಾ ಸಾಧನೆಯ ಹಾದಿಯಲ್ಲಿ ಏನೇ ವಿಘ್ನಗಳು ಇದ್ದರೂ ಅವುಗಳನ್ನು ನಿವಾರಿಸುವ ಅಗತ್ಯವಿತ್ತು. ಆದಾಗ್ಯೂ ಗಾಂಧೀಜಿಗೆ ಕೊಂಚ ಹಿಂಜರಿಕೆಯಿತ್ತು. ನಿಧಾನವಾಗಿ ಯೋಚಿಸಿ ತಾವು ಇಡುತ್ತಿರುವ ಹೆಜ್ಜೆ ಸಾಧುವೇ ಎಂದು ತಿಳಿಯಲು ಅವರು ಇಚ್ಛಿಸಿದರು. ಅವರ ಮನಸ್ಸು ಪ್ರಕ್ಷುಬ್ಧವಾಗಿತ್ತು ಕೂಡ. ಅಂಥ ಸಂದರ್ಭಗಳಲ್ಲಿ ಅವರು ಸಾಮಾನ್ಯವಾಗಿ ಉಪವಾಸ ಸತ್ಯಾಗ್ರಹವನ್ನು ಕೈಗೊಳ್ಳುತ್ತಿದ್ದರು. ಹಿಂದೂ-ಮುಸ್ಲಿಮರ ಐಕ್ಯತೆಗಾಗಿ ಅವರು ೨೧ ದಿನಗಳ ಉಪವಾಸ ಕೈಗೊಂಡರು.

ಸಮಾಜವನ್ನು ತಬ್ಬಿದ್ದ ಜಾಡ್ಯವನ್ನು ಧಿಕ್ಕರಿಸಲು ಗಾಂಧೀಜಿಯವರು ಕೈಗೊಂಡ ಉಪವಾಸ ಔಷಧೋಪಾದಿಯಲ್ಲಿ ಕೆಲಸ ಮಾಡಿತು. ಬೆಳಗಾವಿ ಕಾಂಗ್ರೆಸ್ಸಿನ ಅಧಿವೇಶನದ ಅಧ್ಯಕ್ಷತೆಯನ್ನು ಒಪ್ಪಿಕೊಳ್ಳುವಂತೆ ಅವರ ಮನವೊಲಿಸಲಾಯಿತು. ರಾಜ್ಯದ ಜನರಿಗೆಲ್ಲಾ ಗಾಂಧೀಜಿಯವರ ಒಪ್ಪಿಗೆ ಹರ್ಷ ತಂದಿತ್ತು. ಆ ಅಧಿವೇಶನದ ಪ್ರಾಮುಖ್ಯತೆ ಎಲ್ಲರ ಗಮನಕ್ಕೆ ಬಂದಿತ್ತು. ರಾಜ್ಯದ ಬೇರೆ ಬೇರೆ ಜಿಲ್ಲಾ ಕೇಂದ್ರಗಳಲ್ಲಿ, ಜಿಲ್ಲಾ ಹಾಗೂ ರಾಜ್ಯ ಕಾಂಗ್ರೆಸ್ ಅಧಿವೇಶನ ನಡೆಯಿತು. ಕರ್ನಾಟಕ ಖಿಲಾಫತ್ ಪರಿಷತ್ತು, ಮಹಿಳೆಯರ ಸಮಾವೇಶ ಹಾಗೂ ಸಾಹಿತ್ಯ ಪರಿಷತ್ತಿನ ಸಮ್ಮೇಳನಗಳು ನಡೆದವು. ರಾಜಗೋಪಾಲಾಚಾರಿಯವರು ಧಾರವಾಡದಲ್ಲಿ ನಡೆದ ಕರ್ನಾಟಕ ಪ್ರಾಂತೀಯ ಅಧಿವೇಶನದ ಅಧ್ಯಕ್ಷತೆಯನ್ನು ವಹಿಸಿದರು. ಹರ್ಡೀಕರ್

ಮಂಜಪ್ಪ ಹಾಗೂ ಕಾರ್ನಾಡ್ ಸದಾಶಿವರಾವ್ ಅವರು ಕ್ರಮವಾಗಿ ಧಾರವಾಡ ಮತ್ತು ಬಿಜಾಪುರ ಜಿಲ್ಲಾ ಸಮಾವೇಶದ ಅಧ್ಯಕ್ಷತೆ ವಹಿಸಿದ್ದರು. ಜಿಲ್ಲೆ ಮತ್ತು ಪ್ರಾಂತ್ಯಗಳ ನಡುವಿನ ಸಂಬಂಧವಷ್ಟೇ ಅಲ್ಲದೆ, ಪ್ರಾಂತ್ಯ ಮತ್ತು ರಾಷ್ಟ್ರ, ರಾಷ್ಟ್ರ ಹಾಗೂ ಪ್ರಪಂಚದ ನಡುವೆ ಇರುವ ಪ್ರಮುಖ ಸಂಬಂಧದ ಬಗ್ಗೆ ಮಂಜಪ್ಪನವರು ತಮ್ಮ ಭಾಷಣದಲ್ಲಿ ಪ್ರಸ್ತಾಪ ಮಾಡಿದರು.

ಈ ಅಧಿವೇಶನಕ್ಕಾಗಿ ವ್ಯಾಪಕವಾದ ಏರ್ಪಾಟು ಮಾಡಿದ್ದರು. ಎಲ್ಲೆಲ್ಲೂ ಎಣೆಯಿಲ್ಲದ ಸಂಭ್ರಮವಿದ್ದಿತು. ಆ ಸಂದರ್ಭದಲ್ಲಿ ಮಾಡಿದ್ದ ಏರ್ಪಾಟನ್ನು ಕುರಿತು ಪತ್ರಿಕೆಯೊಂದು ಹೀಗೆ ಹೇಳಿತು:

'ಕಾಂಗ್ರೆಸ್ ಅಧಿವೇಶನದ ಏರ್ಪಾಟುಗಳು ಹೆಚ್ಚೂ ಕಡಿಮೆ ಮುಗಿದಿವೆ. ವೀಕ್ಷಕರು ಮತ್ತು ಪ್ರತಿನಿಧಿಗಳಿಗೆ ಖಾದಿ ಮತ್ತು ಬಿದಿರು ಛಾವಣಿಯಿಂದ ಕುಟೀರಗಳನ್ನು ನಿರ್ಮಿಸಲಾಗಿದೆ. ..... ನೀರಿನ ವ್ಯವಸ್ಥೆಯೂ ಹೆಚ್ಚೂ ಕಡಿಮೆ ಮುಗಿದಿದೆ. ಈ ವ್ಯವಸ್ಥೆಗೆ ಪಂಪ ಸರೋವರವೆಂದು ನಾಮಕರಣ ಮಾಡಲಾಗಿದೆ, ಶೇಖರಿಸಿರುವ ನೀರು ಇದರಿಂದ ಕಡಿಮೆಯಾಗದು ಎಂದು ತಿಳಿಯಬಹುದಾಗಿದೆ.....'

'ಅಡುಗೆಗಾಗಿ ನಿರ್ಮಿಸಲಾಗಿರುವ ಉಗ್ರಾಣ ವಾಸ್ತವವಾಗಿ ಅನ್ನಪೂರ್ಣ ಗೃಹವೇ ಆಗಿದೆ...... ಸುಮಾರು ೫೧ ಮೂಟೆ ಮೆಣಸಿನ ಪುಡಿಯನ್ನು ಶೇಖರಿಸಲಾಗಿದೆ. ಕೇವಲ ಈ ಒಂದು ಮಾಹಿತಿಯಿಂದ ಸಮಾವೇಶಕ್ಕೆ ಮಾಡಿರುವ ಸಲಕರಣೆಯ ಒಟ್ಟು ಅಂದಾಜು ಆಗಬಹುದೆಂದು ತೋರುತ್ತದೆ. ಒಂದರ ಮೇಲೊಂದರಂತೆ ಪದಾರ್ಥಗಳನ್ನು ಜೋಡಿಸಿದರೆ ಒಂದು ದೊಡ್ಡ ಬೆಟ್ಟವೇ ಆಗಬಹುದು......'

'ಬೊಂಬಾಯಿಯಿಂದ ಸುಮಾರು ಸಾವಿರ ಲಾಟೀನುಗಳೂ ಸುಮಾರು ೨೫೦ ಪೆಟ್ರೋಮ್ಯಾಕ್ಸ್ ದೀಪಗಳೂ ಬಂದಿವೆ' .

'ಸಮಾವೇಶದ ಪ್ರವೇಶ ದ್ವಾರವನ್ನು ಗೋಪುರಾಕಾರದಲ್ಲಿ ನಿರ್ಮಿಸಲಾಗಿದೆ. ಗೋಪುರಕ್ಕೆ ಏಳು ಮಹಡಿಗಳಿವೆ, ಯಾರಾದರೂ ಐದು ಮಹಡಿಗಳನ್ನು ಏರಿ ನೋಡಿದರೆ ಇಡೀ ಶಿಬಿರವನ್ನು ದೃಷ್ಟಿಗೆ ದಕ್ಕಿಸಿಕೊಳ್ಳಬಹುದಾಗಿದೆ' .

'ದತ್ತಿಗಳನ್ನು ನೀಡಿರುವ ಜಿಲ್ಲೆಗಳಲ್ಲಿ ಬಳ್ಳಾರಿ ಮತ್ತು ಕಾರವಾರದ ಹೆಸರುಗಳು ಮೊದಲು ದಾಖಲಾಗುತ್ತದೆ ....... ಇದುವರೆಗೆ ತೊಂಬತ್ತು ಸಾವಿರ ರೂಪಾಯಿಗಳನ್ನು ಖರ್ಚು ಮಾಡಲಾಗಿದೆ. ಸಾಲ ರೂಪದಲ್ಲಿ ಸುಮಾರು ಎಪ್ಪತ್ತೇಳು ಸಾವಿರ ರೂಪಾಯಿಗಳ ಆಹಾರ ಧಾನ್ಯಗಳನ್ನು ಖರೀದಿಸಲಾಗಿದೆ' .[೨೫]

ಬೆಳಗಾವಿ ಅಧಿವೇಶನದ ವೈಶಿಷ್ಟ್ಯವೆಂದರೆ ವಿಭಿನ್ನ ರಾಜಕೀಯ ಹಿನ್ನೆಲೆಯ ಸಂಘಟನೆಗಳನ್ನು ಪ್ರತ್ಯೇಕವಾಗಿ ಮತ್ತು ಜಂಟಿಯಾಗಿ ಚರ್ಚೆ ನಡೆಸಲು ಆಹ್ವಾನಿಸಲಾಗಿತ್ತು. ಖಿಲಾಫತ್ ಸಂಘಟನೆ, ಮುಸ್ಲಿಂಲೀಗ್‌ನವರಿಂದ ಉದಾರವಾದಿಗಳವರೆಗೆ, ಬ್ರಾಹ್ಮಣೇತರ ಪಕ್ಷದಿಂದ ಹಿಡಿದು ನಿಮ್ನವರ್ಗಗಳವರೆಗೆ–ಎಲ್ಲರನ್ನೂ ಸಮಾವೇಶದಲ್ಲಿ ಭಾಗವಹಿಸಲು ಕರೆಯಲಾಗಿತ್ತು. ಮೇಲುನೋಟಕ್ಕೆ ಪರಸ್ಪರ ವ್ಯತಿರಿಕ್ತವಾದ ಹಿನ್ನೆಲೆಯುಳ್ಳ ಪಕ್ಷಗಳನ್ನು ಒಂದೆಡೆ ಚರ್ಚೆಗೆ ಸೇರಿಸಿದ್ದ ಒಂದು ಅಪೂರ್ವವಾದ ಅಧಿವೇಶನ ಅದಾಗಿತ್ತು. ಪರಸ್ಪರ ವಿರೋಧವಾದ ಅಭಿಪ್ರಾಯಗಳುಳ್ಳ ಪಕ್ಷಗಳು ಸೇರಿದ್ದರಿಂದ ಮಾತ್ರ ಅದು ಒಂದು ರಾಷ್ಟ್ರೀಯ ಸಮಾವೇಶವೆಂದು ವರ್ಣಿಸಲಾಗದು; ಆದರೆ ಈ ದೇಶದ ಸಮಸ್ಯೆಗಳನ್ನು ಆಮೂಲಾಗ್ರವಾಗಿ ಅರಿತು ಅವುಗಳಿಗೆ ನಿಜವಾಗಿ ಪರಿಹಾರ ಕಂಡುಹಿಡಿಯಬೇಕೆಂದು ತುಡಿಯುತ್ತಿದ್ದ ಒಬ್ಬ ವ್ಯಕ್ತಿ ಅಧ್ಯಕ್ಷತೆ ವಹಿಸಿದ್ದುದು ಆ ಅಧಿವೇಶನಕ್ಕೆ ರಾಷ್ಟ್ರೀಯತೆಯ ವೈಶಾಲ್ಯತೆಯನ್ನು ತಂದುಕೊಟ್ಟಿತು. ಕರ್ನಾಟಕದ ಎಲ್ಲ ಭಾಗಗಳಿಂದಲೂ ಹೆಚ್ಚಿನ ಸಂಖ್ಯೆಯ ಪ್ರತಿನಿಧಿಗಳು ಭಾಗವಹಿಸಿದ್ದರಲ್ಲದೆ ತಮ್ಮ ನೆಚ್ಚಿನ ಮಹಾತ್ಮರೊಡನೆ ಮುಖತಃ ಮಾತನಾಡುವ ಸಂದರ್ಭ ಒದಗಿ ಇಡೀ ಸನ್ನಿವೇಶಕ್ಕೆ ವಿದ್ಯುತ್ ಸ್ಪರ್ಶವಾದಷ್ಟು ಸಂಭ್ರಮವಿತ್ತು.

ಮಹಾತ್ಮ ಗಾಂಧಿಯವರು ಅಲಿ ಸಹೋದರರು ಮತ್ತಿತರರೊಡನೆ ಬೆಳಗಾವಿಗೆ ಬಂದು ಇಳಿದಾಗ ಬೃಹತ್ ಮೆರವಣಿಗೆಯಲ್ಲಿ ಅವರನ್ನು ಕರೆದುಕೊಂಡು ಹೋಗಲಾಯಿತು, 'ಮಹಾತ್ಮರನ್ನು ಸ್ವಾಗತಿಸುವಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರು ಹಾಜರಿದ್ದರು' .

ಸ್ಥಳೀಯ ಮಂಡಳಿಗಳು ಮತ್ತು ಮುನಿಸಿಪಾಲಿಟಿಗಳು ಹೆಚ್ಚಿನ ಅಂಶ ಬ್ರಾಹ್ಮಣೇತರರ ನಿಯಂತ್ರಣ ದಲ್ಲಿದ್ದು ಪ್ರಾಂತೀಯ ಹಂತದಲ್ಲಿ ಕಾಂಗ್ರೆಸ್ಸಿಗರ ವಿರೋಧಿಗಳಾಗಿದ್ದರೂ ಬಿನ್ನವತಳೆ ಅರ್ಪಿಸಿ ಮಹಾತ್ಮರಿಗೆ ಸನ್ಮಾನಿಸಿದರು. ಜಿಲ್ಲಾ ಸ್ಥಳೀಯ ಮಂಡಳಿ ಹಾಗೂ ಬೆಳಗಾವಿ ಮುನಿಸಿಪಾಲಿಟಿಯಲ್ಲಿ ಕ್ರಮವಾಗಿ ಶ್ರೀ ಚಿಕ್ಕೋಡಿ ಮತ್ತು ಶ್ರೀ ಚೌಗುಲೆ ಅಧ್ಯಕ್ಷರಾಗಿದ್ದರು. ಸನ್ಮಾನಕ್ಕೆ ಒಪ್ಪಿದ್ದು ಮಹಾತ್ಮರ ತಂತ್ರವಾಗಿತ್ತಲ್ಲದೆ, ತಮ್ಮ ಆಪ್ತ ಧಾಟಿಯಿಂದ ಪರಸ್ಪರ ವಿರುದ್ಧವಾದ ಅಭಿಪ್ರಾಯಗಳನ್ನು ಹೊಂದಿದ ಪಕ್ಷಗಳೂ ಸಹ ಸಂಯುಕ್ತವಾಗಿ ಕಾರ್ಯ ನಡೆಸಬೇಕೆಂದು ಅವರ ಇಚ್ಛೆಯಾಗಿತ್ತು. ಮಹಾತ್ಮ ಗಾಂಧಿಯವರ ವಿಧಾನವನ್ನು ಸಂಪೂರ್ಣವಾಗಿ ಒಪ್ಪಿಕೊಂಡ ಪಕ್ಷಗಳು ಅವರಿಗೆ ಯಶಸ್ಸು ದೊರಕಲೆಂದು ಹಾರೈಸಿದವು.

ಜನರ ಅಭಿಪ್ರಾಯಗಳಿಗೆ ಉತ್ತರ ನೀಡುತ್ತಾ ಗಾಂಧೀಜಿ ತಮ್ಮ ಎಂದಿನ ಶೈಲಿಯಲ್ಲಿ ಐಕ್ಯತೆಯ ಬಗ್ಗೆ ಒತ್ತು ಕೊಟ್ಟು ಹೇಳಿದರು; 'ನೀವುಗಳು ಹಿಂದು-ಮುಸ್ಲಿಂ, ಬ್ರಾಹ್ಮಣ-ಬ್ರಾಹ್ಮಣೇತರ ಎಂಬ ದ್ವಂದ್ವ ಮಾರ್ಗದಿಂದ ಬಿಡುಗಡೆ ಹೊಂದಿರುವುದು ನನಗೆ ಸಂತಸ ಉಂಟುಮಾಡಿದೆ..... ಹಾಗೆಯೇ ಅಸ್ಪೃಶ್ಯತೆಯನ್ನು ಸಂಪೂರ್ಣವಾಗಿ ತೊಡೆದು ಹಾಕುವ ದಿಸೆಯಲ್ಲಿ ನೀವು ಸರ್ವ ಪ್ರಯತ್ನ ಮಾಡುವಿರಿ ಎಂದು ನನಗೆ ನಂಬಿಕೆ ಇದೆ' .

ಬೆಳಗಾವಿ ಅಧಿವೇಶನದ ಬಗ್ಗೆ ಚರ್ಚಿಸುತ್ತಾ ಜಿ.ಎಸ್. ಹಾಲಪ್ಪನವರು ಸರಿಯಾಗಿಯೇ ಹೇಳುತ್ತಾರೆ: "ಬೆಳಗಾವಿ ಅಧಿವೇಶನವನ್ನು ಐಕ್ಯತಾ ಅಧಿವೇಶನವೆಂದು ಕರೆಯಬಹುದು. ಏಕೆಂದರೆ, ಪ್ರತಿಯೊಬ್ಬರ ಗಮನವೂ ಐಕ್ಯತಾ ಸಾಧನೆಯ ಕಡೆಗೆ ಹರಿದಿತ್ತು- ಕೇವಲ ಕಾಂಗ್ರೆಸ್ ಕಾರ್ಯಕರ್ತರ ಐಕ್ಯತೆಯಲ್ಲ ಬದಲಾಗಿ, ಇಡೀ ರಾಷ್ಟ್ರದ ಐಕ್ಯತೆ ಲಕ್ಷ್ಯದಲ್ಲಿತ್ತು. ಎಲ್ಲ ಪಕ್ಷಗಳೂ ತಮ್ಮ ತಮ್ಮ ಅಧಿವೇಶನವನ್ನು ನಡೆಸಲು ಆಹ್ವಾನಿಸಲು ಕಾರಣ ಐಕ್ಯತೆಯ ಸಾಧನೆಯೇ ಆಗಿದೆ. ಸೈಫುದ್ದೀನ್ ಕಿಚ್ಲೂ ಅವರ ಅಧ್ಯಕ್ಷತೆಯಲ್ಲಿ ೨೪ನೇ ಡಿಸೆಂಬರ್ ೧೯೨೪ರಂದು ಅಖಿಲ ಭಾರತ ಖಿಲಾಫತ್ ಸಮಾವೇಶ ಜರುಗಿತು. ತಮ್ಮ ಭಾಷಣದಲ್ಲಿ ಅವರು ಕಾಂಗ್ರೆಸ್ಸಿನ ಕೆಲಸದಲ್ಲಿ ಹೆಚ್ಚಿನ ಆಸಕ್ತಿ ತೋರಿ ರಾಷ್ಟ್ರೀಯ ಮನೋಭಾವನೆಯನ್ನು ಬೆಳೆಸಿಕೊಳ್ಳುವಂತೆ ಮುಸ್ಲಿಮರನ್ನು ಎಚ್ಚರಿಸಿದರು. ಪಂಡಿತ ಮದನ ಮೋಹನ ಮಾಳವೀಯ ಅವರ ಅಧ್ಯಕ್ಷತೆಯಲ್ಲಿ ೨೭ನೇ ಡಿಸೆಂಬರ್ ೧೯೨೪ರಂದು ಅಖಿಲ ಭಾರತ ಹಿಂದೂ ಮಹಾಸಭಾ ಸಮಾವೇಶಗೊಂಡಿತು....... ಪ್ರತಿಯೊಂದು ಕೋಮಿನವರು ಮೊಟ್ಟ ಮೊದಲು ರಾಷ್ಟ್ರವಾದಿಗಳಾಗಬೇಕೆಂದು ಅವರು ಬಹಳ ಉತ್ಕಟವಾಗಿ ವಿನಂತಿಸಿಕೊಂಡರು. ಮಾರನೆ ದಿನ ಎ. ರಾಮಸ್ವಾಮಿ ಮೊದಲಿಯಾರ್ ಅವರ ಅಧ್ಯಕ್ಷತೆಯಲ್ಲಿ ಅಖಿಲ ಭಾರತ ಬ್ರಾಹ್ಮಣೇತರರ ಸಮಾವೇಶ ನಡೆಯಿತು. 'ಬೊಂಬಾಯಿ ಮತ್ತು ಮದರಾಸು ಪ್ರಾಂತ್ಯಗಳನ್ನು ಬಾಧಿಸುತ್ತಿದ್ದ ಸಮಸ್ಯೆ ಇದು; ಕರ್ನಾಟಕ ಇವೆರಡರ ಮಧ್ಯೆ ಸಿಕ್ಕಿ ಹಾಕಿಕೊಂಡಿದೆ. ರಾಜಕೀಯ ಪ್ರಜ್ಞೆಯುಳ್ಳ ಬ್ರಾಹ್ಮಣೇತರರು ಬ್ರಾಹ್ಮಣರು ಪ್ರಬಲವಾಗಿರುವ ಕಾಂಗ್ರೆಸ್ ಸೇರಲು ಹಿಂಜರಿಯುತ್ತಿರುವುದರಿಂದ ಕಾಂಗ್ರೆಸ್ ಪಕ್ಷ ದುರ್ಬಲವಾಗಿದೆ' . ವಸಾಹತುಶಾಹಿಯ ತಂತ್ರವನ್ನು ಅರ್ಥಮಾಡಿಕೊಳ್ಳಬೇಕೆಂದು ರಾಮಸ್ವಾಮಿ ಮೊದಲಿಯಾರ್ ಉತ್ಕಟವಾಗಿ ವಾದಿಸಿದರು. ಶಂಕರನ್ ನಾಯರ್ ಅವರ ಅಧ್ಯಕ್ಷತೆಯಲ್ಲಿ ದಿನಾಂಕ ೨೭ನೇ ಡಿಸೆಂಬರ್ ೧೯೨೪ರಂದು ಅಖಿಲ ಭಾರತ ಸಮಾಜ ಸಮಾವೇಶ(Indian Social Conference) ಜರುಗಿತು. ೧೮೯೭ರಲ್ಲಿ ಅಮ್ರೋಟಿ ಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದ ಶಂಕರನ್ ನಾಯರ್ ಸಮಾಜ ಸುಧಾರಣೆಯ ವಿಷಯದಲ್ಲಿ ವಿರೋಧ

ವ್ಯಕ್ತಪಡಿಸಿದ್ದ ದಕ್ಷಿಣ ಭಾರತೀಯ ಕಾಂಗ್ರೆಸ್ಸಿಗರ ಧೋರಣೆಯಿಂದಾಗಿ ೧೯೧೧ರಿಂದ ಅವರೊಡನೆ ಮನಸ್ತಾಪಗೊಂಡು ದೂರವಾಗಿದ್ದರು. ಬ್ರಾಹ್ಮಣೇತರರಲ್ಲಿ ತುಂಬಾ ಗೌರವದ ಸ್ಥಾನ ಹೊಂದಿದ್ದ ಶಂಕರನ್ ನಾಯರ್ ಮತ್ತೆ ಮರಳಿ ಬಂದದ್ದು ಒಂದು ಮುಖ್ಯವಾದ ಬೆಳವಣಿಗೆ. ಬೆಳಗಾವಿಯಲ್ಲಿ ಶಂಕರನ್ ನಾಯರ್ ಮಹಿಳೆಯರ ಸ್ಥಾನಮಾನ, ಅಸ್ಪೃಶ್ಯತೆ ಹಾಗೂ ಜಾತೀಯತೆಯ ಕೆಡುಕುಗಳ ಬಗ್ಗೆ ಸರಿಯಾಗಿಯೇ ಪ್ರಸ್ತಾಪಿಸಿ ಸಮಾನತೆಗಾಗಿ ಮನವಿ ಮಾಡಿಕೊಂಡರು. ಸಂಸ್ಥಾನಗಳ ಪ್ರಜೆಗಳ ಬಗೆಗಿನ ಸಮಾವೇಶದಲ್ಲಿ ಎನ್.ಸಿ. ಕೇಳ್ಕರ್ ಅಧ್ಯಕ್ಷರಾಗಿದ್ದರು. ದಕ್ಷಿಣದ ಅರ್ಧಭಾಗ ಹಾಗೂ ಕರ್ನಾಟಕ ಪೂರ್ತಿ ದೇಶೀಯ ಸಂಸ್ಥಾನವಾಗಿದ್ದ ಕಾರಣ ಸಂಸ್ಥಾನಗಳ ಪ್ರಜೆಗಳ ವಿಷಯ ಸಹಜವಾಗಿಯೇ ಪ್ರಾಮುಖ್ಯತೆ ಪಡೆದಿದ್ದವು. ಕೇಳ್ಕರ್ ಸರಿಯಾಗಿಯೇ ಗುರುತಿಸಿದಂತೆ ರಾಜ್ಯಗಳ ಪ್ರಜೆಗಳು ಮೂರು ವಿಧವಾದ ಸಂಕಷ್ಟಕ್ಕೆ ಗುರಿಯಾಗಿದ್ದರು. ಭಾರತೀಯ ದೊರೆಗಳಿಗೆ ನೀಡಿರುವ ಆಡಳಿತಾತ್ಮಕ ಸ್ವಾತಂತ್ರ್ಯದಿಂದಾಗಿ ಸಂಸ್ಥಾನಗಳ ಪ್ರಜಾಪಾಲನೆಯ ವಿಷಯವಾಗಿ ತಾವು ಹಸ್ತಕ್ಷೇಪ ಮಾಡಲಾಗದೆಂದು ಬ್ರಿಟಿಷ್ ಸರ್ಕಾರ ಸೋಗುಹಾಕಿತು. ಭಾರತೀಯ ರಾಜ್ಯಗಳ ಪ್ರಜೆಗಳು ಅಲಕ್ಷ್ಯ ತೋರಲು ಕಾರಣವೆಂದರೆ, ತಮ್ಮಲ್ಲೇ ಸಮರ್ಥರೂ ನಿಸ್ವಾರ್ಥಿಗಳೂ ಆದ ನಾಯಕರ ಕೊರತೆ, ಜೊತೆಗೆ ಎಣೆಯಿಲ್ಲದ ಕ್ರೌರ್ಯಕ್ಕೆ ತಾವು ಈಡಾಗುವ ದಿಗಿಲು....... ಇದಕ್ಕಿಂತಲೂ ಹೀನಾಯವಾದ ಅಲಕ್ಷ್ಯವು ರಾಷ್ಟ್ರೀಯ ಕಾಂಗ್ರೆಸ್ಸಿನಿಂದ ನಡೆಯಿತು...... 'ನಿರ್ಲಕ್ಷಿತರಾಗಿದ್ದ ಬ್ರಿಟಿಷ್ ಭಾರತದ ಪ್ರಜೆಗಳಲ್ಲಿ ಚೈತನ್ಯ ತುಂಬಿದಂಥ ಕಾಂಗ್ರೆಸ್ ಪಕ್ಷ ಭಾರತೀಯ ಸಂಸ್ಥಾನಗ ಪ್ರಜೆಗಳಿಗೋಸ್ಕರವಾಗಿ ತಾನು ಆರಂಭಿಸಿದ ಘನವಾದ ಕಾರ್ಯವನ್ನು ನಿಲ್ಲಿಸದ ರೀತಿಯಲ್ಲಿ ಮುಂದುವರಿಸಿಕೊಂಡು ಹೋಗಬೇಕಾಗಿರುವುದು ಕರ್ತವ್ಯವೆಂದು' ಅವರು ಘಂಟಾಘೋಷವಾಗಿ ಹೇಳಿದರು ".[೧೬]

ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಅಹಿಂಸಾತ್ಮಕ ಅಸಹಕಾರ ಚಳವಳಿಯ ಬಗ್ಗೆ ತಮಗಿರುವ ನಂಬಿಕೆಯನ್ನು ಪುನರುಚ್ಚರಿಸುತ್ತಾ ಗಾಂಧೀಜಿ ಬಹುತೇಕ ಕಾಂಗ್ರೆಸ್ಸಿಗರಿಗೇ ತಮ್ಮ ಕಾರ್ಯಕ್ರಮದಲ್ಲಿ ನಂಬಿಕೆಯಿಲ್ಲದಿರುವಾಗ ಕಾಂಗ್ರೆಸ್ಸನ್ನು ತಮ್ಮದೇ ಆದ ಕಾರಣಗಳಿಗಾಗಿ ಟೀಕೆ ಮಾಡುತ್ತಿರುವ ಪಕ್ಷಗಳ ಬಗ್ಗೆ ಏನು ಹೇಳುವುದು ಎಂದು ಗಾಂಧೀಜಿ ಪ್ರಶ್ನಿಸಿದರು. ರಾಜಕೀಯವಾದ ಗುಂಪುಗಳು ಹಾಗೂ ಸಮುದಾಯಗಳ ಬಗ್ಗೆ ಪ್ರಸ್ತಾಪಿಸುತ್ತಾ ಗಾಂಧೀಜಿ ಹೇಳಿದರು, "ಹಿಂದು-ಮುಸ್ಲಿಂ ಐಕ್ಯತೆಗೆ ಸಂಬಂಧಪಡುವಂಥದು, ಬೇರೆ ಬೇರೆ ರಾಜಕೀಯ ಗುಂಪುಗಳಿಗೂ ಅನ್ವಯವಾಗುತ್ತದೆ-ನಾವು ಪರಸ್ಪರರನ್ನು ಸಹಿಸಿಕೊಳ್ಳಬೇಕು, ಅಷ್ಟೇ ಅಲ್ಲ ಕಾಲದಲ್ಲಿ ನಂಬಿಕೆಯಿಟ್ಟು, ಒಬ್ಬರು ಇನ್ನೊಬ್ಬರ ನಂಬಿಕೆಗಳಿಗೆ ಮತಾಂತರ ಹೊಂದುವ ತನಕ ಕಾಯಬೇಕು. ....... ಅಸ್ಪೃಶ್ಯತೆಯನ್ನು ತೊಡೆದು ಹಾಕುವ ದೀಕ್ಷೆಯನ್ನು ಸವರ್ಣೀಯರು ಹಿಂದೂ ಧರ್ಮಕ್ಕಾಗಿ ಮತ್ತು ತಮಗಾಗಿ ತೊಡಬೇಕಾಗಿರುವುದು ಅನಿವಾರ್ಯವಾಗಿದೆ".[೧೭]

ಜನರು ಸಹಿಷ್ಣುತೆ, ಸಮಾನತೆ, ಐಕ್ಯತೆಯನ್ನು ಪ್ರದರ್ಶಿಸಿದಾಗ ಮಾತ್ರ ಸ್ವರಾಜ್ಯ ಸಾಧ್ಯವಾಗುತ್ತದೆ. ತಮ್ಮ ಪರಿಕಲ್ಪನೆಯ ಸ್ವಾತಂತ್ರ್ಯದ ಬಗ್ಗೆ ಬೆಳಗಾವಿ ಸಮಾವೇಶದಲ್ಲಿ ಕೂಡ ಗಾಂಧೀಜಿ ವಿವರಿಸಿದರು. ಅವರು ಹೇಳಿದರು, 'ಸಾಮ್ರಾಜ್ಯದೊಳಗಡೆಯೇ ನಾನು ಸ್ವರಾಜ್ಯಕ್ಕಾಗಿ ಹೋರಾಡುವೆ ...... ಆದರೆ ಬ್ರಿಟನ್ನಿನ ತಪ್ಪಿನಿಂದಾಗಿ ಎಲ್ಲ ಸಂಬಂಧಗಳನ್ನು ಕಡಿದುಕೊಳ್ಳುವುದು ಅನಿವಾರ್ಯವಾದರೆ ಅದಕ್ಕೂ ಸಿದ್ಧ ......' ಗಾಂಧೀಜಿಯವರ ಪರಿಕಲ್ಪನೆಯ ರಾಷ್ಟ್ರೀಯ ಶಿಕ್ಷಣ ಎಲ್ಲ ಎಲ್ಲೆಗಳನ್ನು ದಾಟಿ ನಿಲ್ಲುವಂಥಾಗಿದೆ. ಹಾಗಾಗಿ, ಮಾನವೀಯತೆಯೇ ಅದರ ತಳಹದಿ ಮತ್ತು ರಾಷ್ಟ್ರೀಯ ಶಾಲೆಗಳು ಹಿಂದು-ಮುಸ್ಲಿಂ ಐಕ್ಯತೆಯನ್ನು ಪ್ರೋತ್ಸಾಹಿಸಬೇಕು. ಅಸ್ಪೃಶ್ಯತೆಯು ಹಿಂದೂ ಧರ್ಮಕ್ಕೆ ಅಂಟಿದ ಕಳಂಕವೆಂದು ತಿಳಿಯಬೇಕು. ಈ ನಿಯಮಗಳನ್ನು ಅನುಷ್ಠಾನಕ್ಕೆ ತರದ ಶಾಲೆ ಅಥವಾ ಕಾಲೇಜನ್ನು ಮುಚ್ಚುವುದರಲ್ಲಿ ಒಂದು ನಿಮಿಷವೂ ತಡಮಾಡಬಾರದು. ಈ ನಿಯಮಗಳನ್ನು ಸ್ವೀಕರಿಸಿದ ಶಾಲೆ ಅಥವಾ ಕಾಲೇಜು ಹಿಂದೂವೇತರ

ಮಕ್ಕಳನ್ನು ಸೇರಿಸಿಕೊಳ್ಳುವುದರಲ್ಲಿ ಹಿಂಜರಿಯಬಾರದು, ಅಸ್ಪೃಶ್ಯರ ಮಕ್ಕಳಿಗೆ ಬಾಗಿಲು ತೆರೆದಿರಬೇಕು ಹಾಗೂ ತರಬೇತಿಯಲ್ಲಿ ಅತ್ಯಂತ ಪ್ರಮುಖವಾಗಿರುವಂಥ ಅಂಗವಾದ ದಾರ ತೆಗೆಯುವುದು ಮತ್ತು ನೂಲುವುದರಲ್ಲಿ ಯಾವುದೇ ರಿಯಾಯ್ತಿ ಇರುವುದಿಲ್ಲ.[೧೮] ಅಸ್ಪೃಶ್ಯತೆಯನ್ನು ನಿವಾರಿಸುವಲ್ಲಿ ಮತ್ತು ಹಿಂದು-ಮುಸ್ಲಿಂ ಐಕ್ಯತೆಯನ್ನು ಸಾಧಿಸುವಲ್ಲಿ ಗಾಂಧೀಜಿಯವರು ಈ ರೀತಿ ನಂಬಿಕೆಯುಳ್ಳವರಾಗಿದ್ದರು. ಸನ್ನಿವೇಶವನ್ನು ಸರಿಯಾದ ರೀತಿಯಲ್ಲಿ ಅವರು ಅರ್ಥಮಾಡಿಕೊಂಡಿದ್ದರು.

ಕರ್ನಾಟಕದ ನಾನಾ ಭಾಗಗಳಿಂದ ಬಂದ ಜನರು ಅಧಿವೇಶನದಲ್ಲಿ ಭಾಗವಹಿಸಿದರು. ಕಿಕ್ಕಿರಿದ ಜನರ ಉತ್ಸಾಹವನ್ನು ಕಂಡು ಗಾಂಧೀಜಿಯವರು ಹೀಗೆ ಹೇಳಿದರು: "ಬೇರೊಬ್ಬ ಅಧ್ಯಕ್ಷರಿಗೆ ಇಷ್ಟೊಂದು ಪ್ರೀತಿ ವಿಶ್ವಾಸ ದೊರಕಿರುವುದೆಂದು ತಿಳಿಯಲಾರೆ, ಪ್ರತಿನಿಧಿಗಳು ತೋರಿರುವ ಅಕ್ಕರೆ ಅಪ್ರತಿಮವಾದುದು. ಇದಕ್ಕಿಂತ ಮಿಗಿಲಾದದ್ದನ್ನು ಪಡೆಯಲು ಯಾರೂ ಆಸೆ ಪಟ್ಟಿರಲಾರರು, ಪಡೆದಿರಲಾರರು. ನಾನು ಕೇಳಬಹುದಾದ್ದನ್ನೆಲ್ಲ ತಾವು ನನಗೆ ನೀಡಿರುವಿರಿ". ತಮ್ಮ ರಚನಾತ್ಮಕ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತರಬೇಕೆಂದು ಗಾಂಧೀಜಿ ಕೇಳಿದರು. "ನೀವು ನನಗೆ ತೋರಿರುವ ಉದಾತ್ತವಾದ ಪ್ರೀತಿಯನ್ನು, ಔದಾರ್ಯವನ್ನು ನಾನು ಮತ್ತು ನೀವು ಅತ್ಯಂತ ಪ್ರೀತಿಪಾತ್ರವೆಂದು ತಿಳಿದಿರುವ ಪದಾರ್ಥವಾಗಿ ಪರಿವರ್ತಿಸಲು ಕೇಳಿಕೊಳ್ಳುವೆ; ಯಾವ ಪದಾರ್ಥ ನನ್ನನ್ನು ನಿಮ್ಮನ್ನು ಶಾಶ್ವತವಾದ ಬಂಧನದಲ್ಲಿ ಹಿಡಿದಿಟ್ಟಿರುವುದೋ ಅದು ಬೇರೇನೂ ಅಲ್ಲ, ಸ್ವರಾಜ್ಯ...... ಪ್ರತಿಯೊಬ್ಬರಿಗೂ ಪರಿಸ್ಥಿತಿಯ ಅರಿವಿದೆ....... ನಿಮ್ಮ ನಿಮ್ಮ ಜಿಲ್ಲೆಗಳಲ್ಲಿ ಪ್ರವಾಸಮಾಡಿ ಖಾದಿಯ ಸಂದೇಶವನ್ನು ಸಾರಿ, ಹಿಂದು-ಮುಸ್ಲಿಂ ಸಂದೇಶವನ್ನು ಹಾಗೂ ಅಸ್ಪೃಶ್ಯತೆಯ ಸಂದೇಶವನ್ನು ಸಾರಿ...... ನಿಮ್ಮ ಹೃದಯಗಳಲ್ಲಿರಬಹುದಾದ ಅಸೂಯೆ, ಕೋಪ ಮತ್ತು ಏನೇ ಕಟ್ಟಿದಿದ್ದರೂ ಅದನ್ನು ನೆಲದಾಳಕ್ಕೆ ಹೂತುಬಿಡಿ, ದಹನ ಮಾಡಿಬಿಡಿ.....".[೧೯]

ಬೆಳಗಾವಿ ಉತ್ಸವವನ್ನು ಸಾಕ್ಷಾತ್ತಾಗಿ ಕಂಡ ರಾಜ್ಯದ ನಾನಾ ಭಾಗದ ಜನರು ಗಾಂಧೀಜಿಯವರ ಸಂದೇಶವನ್ನು ಹೊತ್ತುಹೋದರು. ಜನರು ತಾವು ಸಂಸ್ಥಾನಗಳಲ್ಲಿರಲಿ ಅಥವಾ ಬ್ರಿಟಿಷ್ ಭಾಗಗಳಲ್ಲಿರಲಿ ರಚನಾತ್ಮಕ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತರಬಹುದಾದ್ದರಿಂದ ಅವುಗಳ ಪ್ರಭಾವ ಹೆಚ್ಚಾಗಿ ತೋರಿತು. ಬೆಳಗಾವಿ ಅಧಿವೇಶನದ ಕೈಗಾರಿಕಾ ವಸ್ತುಪ್ರದರ್ಶನದಲ್ಲಿ ಭಾಗವಹಿಸುವುದಕ್ಕಾಗಿ ಮೈಸೂರು ಸರ್ಕಾರವು ಒಂದು ಅಧಿಕೃತವಾದ ತಂಡವನ್ನು ಕಳುಹಿಸಿತು. ೧೯೨೬ರಲ್ಲಿ ಮಿರ್ಜಾ ಇಸ್ಮಾಯಿಲ್ಲರು ಮೈಸೂರಿನ ದಿವಾನರಾಗಿ ಅಧಿಕಾರ ವಹಿಸಿಕೊಂಡಾಗ ಮಹಾತ್ಮ ಗಾಂಧಿಯವರ ರಚನಾತ್ಮಕ ಕಾರ್ಯಕ್ರಮವನ್ನು ತಮ್ಮ ಕಾರ್ಯಕ್ರಮವೆಂದೇ ಮೈಸೂರು ಸರ್ಕಾರ ಅಳವಡಿಸಿಕೊಂಡಿತು. ಪರಿಣಾಮಕಾರಿಯಾಗಿ ಅವರು ಕಾರ್ಯಕ್ರಮವನ್ನು ಅಳವಡಿಸಿದ್ದಷ್ಟೇ ಅಲ್ಲದೆ ಸ್ವದೇಶಿ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುವಲ್ಲಿ ತಾವು 'ಉತ್ತಮ ಕಾಂಗ್ರೆಸ್ಸಿಗ' ರೆಂದು ಘೋಷಿಸಿದಾಗ ಅವರ ಅತ್ಯುತ್ಸಾಹವನ್ನು ಕಂಡು ವೈಸ್‌ರಾಯ್ ಅವರನ್ನು ತರಾಟೆಗೆ ತೆಗೆದುಕೊಂಡರು.[೨೦] ಅಸ್ಪೃಶ್ಯರ ಉದ್ಧಾರವನ್ನು ಗಮನದಲ್ಲಿರಿಸಿಕೊಂಡ ಸಂಘಟನೆಗಳು ಅನೇಕಾನೇಕ ಹುಟ್ಟಿಕೊಂಡವು. ಖಾದಿ ಕಾರ್ಯಕ್ರಮವೂ ಸಹ ವ್ಯಾಪಕವಾಯಿತು. ಎಲ್ಲಕ್ಕಿಂತ ಮಿಗಿಲಾಗಿ ಮೈಸೂರು ಸರ್ಕಾರವು ಬದನವಾಳಿನಲ್ಲಿ ತಾನೇ ಸ್ವತಃ ಒಂದು ಖಾದಿ ಕೇಂದ್ರವನ್ನು ತೆರೆಯಿತು ಹಾಗೂ ತನ್ನ ಶೈಕ್ಷಣಿಕ ಸಂಸ್ಥೆಗಳಲ್ಲಿ ಹಿಂದಿಯನ್ನು ಒಂದು ಐಚ್ಛಿಕ ವಿಷಯವಾಗಿ ಬೋಧಿಸಲು ಪ್ರಾರಂಭಿಸಿತು. ಮೈಸೂರು ಸರ್ಕಾರದ ಕೆಲಸದಿಂದ ಸಂತೃಪ್ತರಾದ ಗಾಂಧೀಜಿಯವರು ಮೈಸೂರು ರಾಜ್ಯವನ್ನು 'ರಾಮರಾಜ್ಯ' ವೆಂದೂ, ಇಲ್ಲಿನ ದೊರೆಗಳನ್ನು 'ರಾಜರ್ಷಿ' ಎಂದೂ ಕರೆದರು.

ಕರ್ನಾಟಕ ಪ್ರಾಂತ್ಯದಲ್ಲಿ ಸ್ವಾತಂತ್ರ್ಯ ಹೋರಾಟದ ಲಾಂಛನವನ್ನು ಮುಂದೆ ಒಯ್ಯುವಂಥ ಒಂದು ಹೊಸ ತಲೆಮಾರಿನ ತಂಡವೇ ತಲೆಯೆತ್ತಿತ್ತು. ತಗಡೂರು ರಾಮಚಂದ್ರರಾವ್, ಮಂಜಪ್ಪ ಹರ್ಡೀಕರ್,

ಹಳ್ಳಿಕೇರಿ ಗುದ್ಲೆಪ್ಪ, ಕೆ.ಟಿ. ಭಾಷ್ಯಂ, ಎಂ.ವಿ. ವೆಂಕಟಪ್ಪ, ಕೆ.ಎಫ್. ಪಾಟೀಲ್, ವೀರಣ್ಣಗೌಡ ಪಾಟೀಲ್, ಕೆಂಗಲ್ ಹನುಮಂತಯ್ಯ, ಟಿ. ಸುಬ್ರಹ್ಮಣ್ಯಂ, ಟಿ.ಟಿ. ಶರ್ಮ, ಎನ್.ಎಸ್. ಹರ್ಡೀಕರ್, ಆರ್.ಆರ್. ದಿವಾಕರ್, ಡಿ.ಪಿ. ಕರ್ಮರ್‌ಕರ್, ಅಣ್ಣಾರಾವ್ ಗಣಮುಖಿ, ಎಂ.ಎನ್. ಜೋಯಿಸ್, ಅಗರಂ ರಂಗಯ್ಯ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ವಿ.ಎಸ್. ನಾರಾಯಣರಾವ್ ಅವರಲ್ಲಿ ಪ್ರಮುಖರು. ಬೆಳಗಾವಿ ಅಧಿವೇಶನದ ಬಳಿಕ ಅಖಿಲ ಭಾರತ ನಾಯಕರು ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ಸಂಚರಿಸಿದ ಪರಿಣಾಮವಾಗಿ ರಾಷ್ಟ್ರವಾದಿ ಕೆಲಸಗಳಿಗಾಗಿ ಜನರ ಉತ್ಸಾಹ ಹೆಚ್ಚಾಯಿತು.

ಆದರೆ ಮೈಸೂರಿನಲ್ಲಿ ಕಾಂಗ್ರೆಸ್ಸಿನ ಅಸ್ತಿತ್ವ ಭದ್ರವಾಗಿರಲಿಲ್ಲ. ತಾವು ಚಳವಳಿ ಮಾರ್ಗ ಹಿಡಿಯುವಷ್ಟು ಸ್ವತಂತ್ರರಲ್ಲ ಎಂದು ಅವರು ಪರಿತಪಿಸಿದ್ದರು. ರಚನಾತ್ಮಕ ಕಾರ್ಯಕ್ರಮದಲ್ಲಿ ಅವರಿಗೆ ಆಸಕ್ತಿಯಿದ್ದು ಆ ಕೆಲಸವನ್ನು ಸರ್ಕಾರವೇ ಕಾರ್ಯರೂಪಕ್ಕೆ ತರಲು ಮುಂದಾದದ್ದು ಅವರಿಗೆ ಇನ್ನಷ್ಟು ನಿರಾಶೆಯುಂಟು ಮಾಡಿತು. ಮೈಸೂರಿನ ಕಾಂಗ್ರೆಸ್ ಕಾರ್ಯಕರ್ತರಲ್ಲಿ ಬಹಳ ಮಂದಿಗೆ ರಚನಾತ್ಮಕ ಕಾರ್ಯಕ್ರಮದ ಬಗ್ಗೆ ಉತ್ಸಾಹವಿರಲಿಲ್ಲವೆಂಬುದು ಬೇರೆ ಮಾತು. ೧೯೩೦ರ ನಂತರ ಬ್ರಾಹ್ಮಣೇತರರ ಪಕ್ಷ ಕಾಂಗ್ರೆಸ್ ಪಕ್ಷದೊಡನೆ ವಿಲೀನವಾದಾಗ ಬಹಳಷ್ಟು ಜನರು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದರೆಂಬುದು ನಿಜವಾದರೂ ಆರಂಭದಲ್ಲಿ ಈ ಕಾರ್ಯವನ್ನು ಕೈಗೆತ್ತಿಕೊಂಡ ಗಮನಾರ್ಹ ವ್ಯಕ್ತಿಗಳಲ್ಲಿ ತಗಡೂರು ರಾಮಚಂದ್ರರಾವ್ ಅವರನ್ನು ಹೆಸರಿಸಬೇಕಾಗುತ್ತದೆ.

೧೯೨೭ರಲ್ಲಿ ಸುಮಾರು ೪ ತಿಂಗಳುಗಳ ಕಾಲ ಗಾಂಧೀಜಿಯವರು ತಮ್ಮ ಆರೋಗ್ಯ ಸುಧಾರಿಸಿಕೊಳ್ಳುವ ಸಲುವಾಗಿ ಕರ್ನಾಟಕದಲ್ಲಿದ್ದು ವ್ಯಾಪಕ ಪ್ರವಾಸ ಮಾಡಿದುದು ಈ ರಾಜ್ಯದ ಸುಯೋಗ. ಕೊಂಚ ಅನಾರೋಗ್ಯದಿಂದ ಬಳಲಿದ್ದ ಗಾಂಧೀಜಿಯವರು ಸರ್ಕಾರದ ಅತಿಥಿಯಾಗಿ ಇಲ್ಲಿ ತಂಗಬೇಕೆಂದು ಆಗಿನ ದಿವಾನರಾಗಿದ್ದ ಮಿರ್ಜಾ ಇಸ್ಮಾಯಿಲ್ಲರು ಆಮಂತ್ರಣ ನೀಡಿದಾಗ ಗಾಂಧೀಜಿ ತಕ್ಷಣ ಒಪ್ಪಿಕೊಂಡು ನಂದಿ ಬೆಟ್ಟದಲ್ಲಿ ವಾಸ್ತವ್ಯ ಮಾಡಿದರು. ರಚನಾತ್ಮಕ ಕೆಲಸಗಳ ವಿಷಯದಲ್ಲಿ ಹೆಚ್ಚಿನ ತಿಳಿವಳಿಕೆ, ಮಾರ್ಗದರ್ಶನ ಪಡೆಯಲು ಇದೊಂದು ಸುವರ್ಣಾವಕಾಶವಾಗಿ ಕನ್ನಡ ಜನತೆಗೆ ಲಭಿಸಿತಲ್ಲದೆ, ಗಾಂಧೀಜಿಯವರನ್ನು ಭೇಟಿಮಾಡಲು ಬಂದ ಅನೇಕ ರಾಷ್ಟ್ರೀಯ ನಾಯಕರ ಸಂಪರ್ಕವೂ ಸಾಧ್ಯವಾಯಿತು. ವ್ಯಾಪಕವಾಗಿಯೇ ಗಾಂಧೀಜಿಯವರು ಕರ್ನಾಟಕದಲ್ಲಿ ಪ್ರವಾಸ ಮಾಡಿದರಲ್ಲದೆ ಅವರ ಸಮ್ಮುಖದಲ್ಲಿ ರಚನಾತ್ಮಕ ಕಾರ್ಯಕ್ರಮಕ್ಕೆ ಹೊಸ ಚಾಲನೆ ದೊರೆಯುವಂತಾಯಿತು.

ಈ ನಡುವೆ ಕೌನ್ಸಿಲ್ ಕೆಲಸವನ್ನು ಕೈಗೆತ್ತಿಕೊಂಡ ಸ್ವರಾಜಿಸ್ಟರು 'ಒಳಗಿನಿಂದಲೇ ಸಂವಿಧಾನವನ್ನು ಬುಡಮೇಲು ಮಾಡುವ ಗುರಿ ಹೊಂದಿದ್ದರಲ್ಲದೆ ತಮ್ಮ ಹುನ್ನಾರಿನಿಂದಾಗಿಯೇ ಸರ್ಕಾರದ ಒಡೆದು ಆಳುವ ಕುತಂತ್ರಕ್ಕೆ ಬಲಿಪಶುಗಳಾಗಿದ್ದರು. ಜವಾಬ್ದಾರಿಯುತ ಸಹಕಾರದ ಹೆಸರಿನಲ್ಲಿ ಅನೇಕರು ಸರ್ಕಾರ ರಚಿಸಿದ ಅನೇಕ ಸಮಿತಿಗಳಲ್ಲಿ ಸದಸ್ಯರಾಗಿ ಸೇರಿಕೊಂಡು ಸರ್ಕಾರದೊಡನೆ ಗುರುತಿಸಿಕೊಂಡರು. ಅಧಿಕಾರ, ಸರ್ಕಾರಿ ಸವಲತ್ತುಗಳ ಆಕರ್ಷಣೆ, ಆಮಿಷವನ್ನು ಮೀರಲಾರದವರಾಗಿದ್ದರು. ಎನ್.ಸಿ. ಕೇಳ್ಕರ್, ಲಾಲಾ ಲಜಪತ್ ರಾಯ್ ಮತ್ತು ಮಾಳವೀಯರಂಥ ನಾಯಕರೂ ಕೂಡ ಪ್ರತಿಸ್ಪಂದನೆ ಹಾಗೂ ಕೋಮುವಾದಿ ಆಧಾರದ ಮೇಲೆ ಬೇರೆ ಬೇರೆಯಾಗಿದ್ದರು. ಬೊಂಬಾಯಿ ಮತ್ತು ಮದರಾಸು ಪ್ರಾಂತ್ಯದಲ್ಲಿಯೂ ಕೂಡ ಇದೇ ಪುನರಾವರ್ತನೆಯಾಯಿತು. ೧೯೨೭ರಲ್ಲಿ ಬದಲಾವಣೆ-ವಿರೋಧಿ(No Changers) ಬಣದ ಪ್ರಮುಖ ನಾಯಕರಾಗಿದ್ದ ರಾಜಾಜಿಯವರೂ ಸಹ ಮದರಾಸಿನಲ್ಲಿ ಸಚಿವ ಸಂಪುಟ ರಚಿಸಲು ಸಹಾಯಕವಾಗಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ಹಾಗೆಯೇ ಮೊದಲು ತಿಲಕರ ಅನುಯಾಯಿಯಾಗಿದ್ದ

ನಾಯ್ಡು ಅಂತಹ ನಾಯಕರು ಬೇಸತ್ತಿದ್ದರು. ಸರೋಜಿನಿ ನಾಯ್ಡು ನೆಹರೂರವರಿಗೆ ಬರೆದರು 'ವೃದ್ಧರಾದ ರಾಜಗೋಪಾಲಾಚಾರಿಯವರು ನಿಕೃಷ್ಟವಾದ ರೀತಿಯಲ್ಲಿ ಹಾದಿ ತಪ್ಪುತ್ತಿದ್ದಾರೆ' .[೨೧]

೧೯೨೬ರಲ್ಲಿ ಗಾಂಧೀಜಿ ಬಹಿರಂಗವಾಗಿಯೇ ಹೇಳಿಕೆ ನೀಡಿ ಅಸಹಕಾರ ಚಳವಳಿಯಲ್ಲಿ ತಮಗಿರುವ ನಂಬಿಕೆಯನ್ನು ಪುನರುಚ್ಚರಿಸಿದರು ಹಾಗೂ ಶಾಸನ ಸಭೆಯ ಸದಸ್ಯರು ಕೂಡಲೇ ಪದಪಿತ್ಯಾಗ ಮಾಡಬೇಕೆಂದು ಕರೆಯಿತ್ತರು. ಪರಿಸ್ಥಿತಿ ಹದಗೆಟ್ಟು ಸ್ವರಾಜಿಸ್ಟರು ರೈತ-ವಿರೋಧಿ ನಿಲುವನ್ನು ತಾಳಿ, ಬೊಂಬಾಯಿ ಮತ್ತು ಮದರಾಸು ಪ್ರಾಂತ್ಯಗಳಲ್ಲಿ ವಸಾಹತುಶಾಹಿಯ ಆಧಾರ ಸ್ಥಂಭದಂತಿದ್ದ ಕೋಮುವಾದಿಗಳ ಜೊತೆ ಅಪವಿತ್ರ ಮೈತ್ರಿಯನ್ನು ಮಾಡಿಕೊಳ್ಳುವಂಥ ಸ್ಥಿತಿ ಮುಟ್ಟಿತ್ತು. ಗಾಂಧೀಜಿ ಶ್ರೀನಿವಾಸ ಅಯ್ಯಂಗಾರ್‌ರವರಿಗೆ ಬರೆದರು: "ಕೌನ್ಸಿಲ್ಲರು ಸಾರ್ವಜನಿಕ ಜೀವನಕ್ಕೆ ಪ್ರವೇಶ ಮಾಡುವುದನ್ನು ನಾನು ಹೆಚ್ಚು ಹೆಚ್ಚು ಅಧ್ಯಯನ ಮಾಡಿದಂತೆಲ್ಲಾ, ಹಿಂದು-ಮುಸ್ಲಿಂ ಐಕ್ಯತೆಯ ದೃಷ್ಟಿಯಲ್ಲಿ ಇದರ ಪರಿಣಾಮ ಸಕಾರಾತ್ಮಕವಾಗಿಲ್ಲವೆಂದು ನನಗೆ ಸ್ಪಷ್ಟವಾಗುತ್ತಿದೆ, ಆದ್ದರಿಂದ ಕೌನ್ಸಿಲ್‌ನ ಪ್ರವೇಶ ಅನುಚಿತವಾದುದೆಂದೇ ನನ್ನ ನಿಖರವಾದ ತಿಳಿವಳಿಕೆ" .[೨೨] ತಮ್ಮ ದೋಷದಿಂದಾಗಿ ಸ್ವರಾಜಿಸ್ಟರು ಬೇರೆಯವರ ಆಕ್ರಮಣಕ್ಕೆ ಸುಲಭವಾಗಿ ಈಡಾಗುವ ಸ್ಥಿತಿ ತಲುಪಿದ್ದ ಕಾರಣ ಹಿಂದೂ ಹಾಗೂ ಮುಸ್ಲಿಂ ಕೋಮುವಾದಿಗಳಿಬ್ಬರೂ ಅವರನ್ನು ಛೀಮಾರಿ ಮಾಡುತ್ತಿದ್ದರು. ಇದರ ಪರಿಣಾಮವಾಗಿ ೧೯೨೬ರ ಪ್ರಾಂತೀಯ ಚುನಾವಣೆಗಳಲ್ಲಿ ಸ್ವರಾಜಿಸ್ಟರು ಸೋಲು ಅನುಭವಿಸಬೇಕಾಯಿತು.

ಕ್ರಮೇಣ ಭಾರತೀಯ ರಾಷ್ಟ್ರೀಯ ಚಳವಳಿ ಹಾಗೂ ಯುವಕರನ್ನು ಸಮಾಜವಾದಿ ಹಾಗೂ ಕಮ್ಯುನಿಸ್ಟ್ ವಿಚಾರಗಳು ಪ್ರಭಾವಿಸತೊಡಗಿದವು. ಮೀರತ್ ಪಿತೂರಿಯಂಥ ಸುಳ್ಳು ಮೊಕದ್ದಮೆಗಳನ್ನು ಚಳವಳಿಗಾರರ ವಿರುದ್ಧ ಹೇರಿದ್ದರಾದರೂ ಕಾರ್ಮಿಕರು, ರೈತರು ಹಾಗೂ ಯುವಕರನ್ನು ಎಚ್ಚರಿಸುವ ಕೆಲಸದಲ್ಲಿ ಸಮಾಜ ವಾದಿಗಳು ಬಹುತೇಕ ಯಶಸ್ವಿಯಾದರೆಂದು ತಿಳಿಯಬಹುದು; ವಸಾಹತು-ವಿರೋಧಿ ಪ್ರಚಾರದಲ್ಲಿ ಈ ವರ್ಗದ ಜನರು ಅದುವರೆಗೆ ಹೆಚ್ಚು ಸಕ್ರಿಯವಾಗಿ ಭಾಗವಹಿಸಿರಲಿಲ್ಲ. ಸಮಾಜವಾದಿ-ಸಮತಾವಾದಿ ಪ್ರಭಾವವು ಹೆಚ್ಚಾಗತೊಡಗಿದ್ದರಿಂದ ದಿಗಿಲುಗೊಂಡ ಸರ್ಕಾರ ಇನ್ನೂ ಉಗ್ರವಾದ ಕಾನೂನುಗಳ ಬೆಂಬಲ ಪಡೆಯುವ ದಿಶೆಯಲ್ಲಿ ೧೯೨೮ರಲ್ಲಿ ಸಾರ್ವಜನಿಕ ಹಿತ ರಕ್ಷಣಾ ಮಸೂದೆಯನ್ನು ಜಾರಿಗೊಳಿಸಿತು. ಜನರ ನಾಗರೀಕ ಹಕ್ಕುಗಳನ್ನು ಹತ್ತಿಕ್ಕಲು ಹವಣಿಕೆ ಹೂಡಿರುವ ಮಸೂದೆ ಇದು ಎಂದು ತಿಳಿದ ಕೂಡಲೇ ಕೌನ್ಸಿಲ್ಲುಗಳ ಭಾರತೀಯ ಸದಸ್ಯರು ತಮ್ಮ ತಮ್ಮಲ್ಲಿನ ಭಿನ್ನಾಭಿಪ್ರಾಯಗಳನ್ನು ಮರೆತು ಈ ಮಸೂದೆಯನ್ನು ಅನೂರ್ಜಿತಗೊಳಿಸಲು ಒಗ್ಗಟ್ಟಾದರು. ಸರ್ಕಾರವು ಎಲ್ಲಾ ಸಮಾಜವಾದಿ-ಸಮತಾವಾದಿ ಚಳವಳಿಗಾರರ ಮೇಲೆ ದಾಳಿ ಮಾಡಿ ಅವರನ್ನು ವಿಚಾರಣೆಗೆ ಗುರಿಪಡಿಸಿತು. ಈ ವಿಚಾರಣೆಗಳನ್ನು ಗಾಂಧೀಜಿ ಕಟುವಾಗಿ ಟೀಕಿಸಿದರಲ್ಲದೆ, 'ಈ ಮೊಕದ್ದಮೆಗಳ ಉದ್ದೇಶ ಕಮ್ಯೂನಿಸಮ್ಮನ್ನು ನಿರ್ನಾಮ ಮಾಡುವುದಲ್ಲ ಬದಲಾಗಿ ಜನರಲ್ಲಿ ಭಯೋತ್ಪಾದನೆ ಉಂಟು ಮಾಡುವುದು' [೨೩] ಎಂದರು. ಜವಹರ್‌ಲಾಲ್ ಮತ್ತು ಸುಭಾಷ್ ಬೋಸರು ಪ್ರಭಾವಶಾಲಿಯಾಗುತ್ತಿದ್ದ ವಾಮಪಂಥದ ನಾಯಕರಾಗಿದ್ದರಲ್ಲದೆ, ವಸಾಹತುಶಾಹಿ-ವಿರೋಧಿ ಅಲೆಯ ಎರಡನೇ ಘಟ್ಟದ ನಾಯಕರಲ್ಲಿ ಮುಂಚೂಣಿಯಲ್ಲಿದ್ದರು.

ಪಶ್ಚಿಮ ಭಾಗ ಮತ್ತು ದಕ್ಷಿಣದಲ್ಲಿ ಪ್ರಭಾವ ಬೀರಿದ್ದಂತೆಯೆ ರಾಷ್ಟ್ರವಾದಿ ಹಾಗೂ ವಸಾಹತು ವಿರೋಧಿ ಚಳುವಳಿಯು ಉಗ್ರವಾಗುತ್ತಾ ಹೋದ ಸನ್ನಿವೇಶದಲ್ಲಿ ಕರ್ನಾಟಕದಲ್ಲಿಯೂ ಸಹ ಬ್ರಾಹ್ಮಣೇತರರ ಪಕ್ಷಗಳ ಮೇಲೆ ಪ್ರಭಾವವುಂಟಾಯಿತು. ಸೈಮನ್-ಕಮಿಷನ್ ವಿರೋಧಿ ಮುಷ್ಕರಗಳಲ್ಲಿ ಯುವಕರು ಮತ್ತು ವಿದ್ಯಾರ್ಥಿಗಳು ಭಾಗವಹಿಸಿದರಲ್ಲದೆ ಹೆಚ್ಚು ಹೆಚ್ಚಾಗಿ ಕಾಂಗ್ರೆಸ್ ಪಕ್ಷವನ್ನು ಸೇರಿಕೊಂಡರು; ಆ ಸಂದರ್ಭದಲ್ಲಿ ಬೊಂಬಾಯಿ ಮತ್ತು ಕರ್ನಾಟಕದ ಬ್ರಾಹ್ಮಣೇತರ ಪರಿಷತ್ತು, ಮೈಸೂರಿನಲ್ಲಿ ಪ್ರಜಾಮಿತ್ರ

ಸಂದರ್ಭದಲ್ಲಿ ಬೊಂಬಾಯಿ ಮತ್ತು ಕರ್ನಾಟಕದ ಬ್ರಾಹ್ಮಣೇತರ ಪರಿಷತ್ತು, ಮೈಸೂರಿನಲ್ಲಿ ಪ್ರಜಾಮಿತ್ರ ಮಂಡಳಿ ತಮ್ಮ ಪಕ್ಷಗಳ ಮುಖ್ಯ ಗುರಿ ಸ್ವರಾಜ್ಯ ಮತ್ತು ಜವಾಬ್ದಾರಿಯುತ ಸರ್ಕಾರದ ಸ್ಥಾಪನೆಯೇ ಆಗಿದೆ ಎಂದು ಸ್ಪಷ್ಟವಾಗಿ ಘೋಷಿಸಿದರು.[೨೪]

೧೯೩೦ರ ಮೇ ತಿಂಗಳಿನಲ್ಲಿ ಬೆಳಗಾವಿಯಲ್ಲಿ ಜರುಗಿದ ಸಮಾವೇಶದಲ್ಲಿ ಬ್ರಾಹ್ಮಣೇತರ ಪರಿಷತ್ತು ಕಾಂಗ್ರೆಸ್ಸಿನೊಡನೆ ವಿಲೀನವಾಗುವುದೆಂದು ತೀರ್ಮಾನಿಸಿತು. ಆ ಸಮಾವೇಶದ ಅಧ್ಯಕ್ಷರಾಗಿದ್ದ ಸಿದ್ದಪ್ಪ ಹೊಸಮನಿ ಅವರು ಪ್ರತಿನಿಧಿಗಳಿಗೆ ಭರವಸೆ ನೀಡಿದರು, "ಸ್ವತಂತ್ರ ಭಾರತವು ಅಲ್ಪ ಸಂಖ್ಯಾತರ ಹಿತ ಮತ್ತು ಹಕ್ಕುಗಳನ್ನು ಬ್ರಿಟಿಷ್ ಸರ್ಕಾರ ಮಾಡುವುದಕ್ಕಿಂತ ಉತ್ತಮವಾಗಿ ರೀತಿಯಲ್ಲಿ ರಕ್ಷಿಸುತ್ತದೆ" .[೨೫]

ವಸಾಹತು-ವಿರೋಧಿ ನಿಲುವನ್ನು ತಳೆದು ಸಂಪೂರ್ಣವಾಗಿ ಮತಾಂತರ ಹೊಂದುವಂತೆ ಈ ಸಂಘಟನೆಗಳಿಗೆ ಪ್ರೇರೇಪಣೆ ನೀಡಿದ ಸನ್ನಿವೇಶ ಯಾವುದು ಎಂಬ ಪ್ರಶ್ನೆಗೆ ಉತ್ತರ ಸ್ಪಷ್ಟವಾಗಿದೆ: ರಾಷ್ಟ್ರವಾದಿ ಭಾವನೆ ಸರ್ವವ್ಯಾಪಿಯಾಗಿದ್ದುದಲ್ಲದೆ ಲಾಹೋರ್ ಸಮಾವೇಶದ ಅಧ್ಯಕ್ಷ ಸ್ಥಾನದಿಂದ ಜವಾಹರ್‌ಲಾಲ್ ನೆಹರೂರವರು "ಪೂರ್ಣ ಸ್ವರಾಜ್ಯ" ಕ್ಕಾಗಿ ಹೋರಾಡಲು ಕರೆ ನೀಡಿದ್ದುದು ಅವರ ತೀರ್ಮಾನವನ್ನು ಚುರುಕುಗೊಳಿಸಿತು ಎನ್ನಬೇಕು. ಜೊತೆಗೆ ಗ್ರಾಮಾಂತರ ಪ್ರದೇಶದಲ್ಲಿ ರಚನಾತ್ಮಕ ಕಾರ್ಯಕ್ರಮವು ಕ್ರಾಂತಿಕಾರಕವಾದ ಬದಲಾವಣೆಯನ್ನು ಉಂಟುಮಾಡಿತ್ತು. ಪ್ರತಿಯೊಬ್ಬರ ನಾಲಿಗೆ ಮೇಲೂ 'ಗಾಂಧಿ' ಮತ್ತು 'ಕಾಂಗ್ರೆಸ್' ಮಂತ್ರವಾಗಿ ಮೂಡಿದ್ದವು. ರಚನಾತ್ಮಕ ಕಾರ್ಯಕ್ರಮವು ವಿವಿಧ ಉದ್ದೇಶಗಳನ್ನು ಒಳಗೊಂಡಿತ್ತಲ್ಲದೆ ಅಸಂಖ್ಯಾತ ದೀನ ದಲಿತರಿಗೆ ದಾರಿ ದೀಪವಾಗುವ ಆಶಾಕಿರಣವಾಗಿತ್ತು ಹಾಗೂ ನಗರದೊಡನೆ ಗ್ರಾಮಗಳನ್ನು ಬೆಸೆಯುವ ಉದ್ದೇಶವನ್ನು ಹೊಂದಿತ್ತು. ಎಲ್ಲಕ್ಕಿಂತ ಮಿಗಿಲಾಗಿ ರಾಜಕೀಯ ಕರ್ತರು ತಮ್ಮ ಸಂಘಟನಾ ಕೌಶಲ್ಯವನ್ನು ಪ್ರದರ್ಶಿಸಲು ಒಂದು ಉತ್ತಮ ಅವಕಾಶ ಒದಗಿಸಿತ್ತು. ಜೊತೆಗೆ ರಚನಾತ್ಮಕ ಕಾರ್ಯಕ್ರಮವು ಜನಸಾಮಾನ್ಯರು ನೇರವಾಗಿ ರಾಜಕೀಯ ಹೋರಾಟದಲ್ಲಿ ಧುಮುಕಲಾರದ ಸಂವತ್ಸರಗಳಲ್ಲಿ ವಸಾಹತು-ವಿರೋಧಿ ಜ್ವಾಲೆಯನ್ನು ಜೀವಂತವಾಗಿ ಇಡುವ ಮಹತ್ಕಾರ್ಯವನ್ನು ಮಾಡಿತ್ತು. ಭಾರತೀಯ ಸಮಾಜದ ಬಹುಸಂಖ್ಯಾತ ಭಾಗವೆಂದು ನಾವು ತಿಳಿಯುವ ದಲಿತವರ್ಗ ಹಾಗೂ ಮಹಿಳಾ ವರ್ಗಕ್ಕೆ ಹೊಸ ಚಾಲನೆ ಬಂದಿತ್ತು. ಮೂಲತಃ ಆಗ ತಲೆಯೆತ್ತಿದ ಮಹಿಳಾ ಸಮಾಜಗಳು ಮಧ್ಯಮವರ್ಗದ ಸಂಘಟನೆಗಳಾಗಿದ್ದರೂ ಅವುಗಳ ಅಸ್ತಿತ್ವವೇ ಅರ್ಥಪೂರ್ಣವಾದ ಮುನ್ನಡೆಯಾಗಿತ್ತು. ೧೯೩೦-೩೧ರಲ್ಲಿ ಕರ್ನಾಟಕದಲ್ಲಿ ನಡೆದ ಕರನಿರಾಕರಣೆ ಹಾಗೂ ಅಸಹಕಾರ ಚಳವಳಿಯಲ್ಲಿ ಮಹಿಳೆಯರು ಸ್ಪಷ್ಟವಾದ ಭೂಮಿಕೆಯನ್ನು ನಿಭಾಯಿಸಬೇಕಾಗಿತ್ತು. ಭಗತ್‌ಸಿಂಗ್‌ರಂಥ ವೀರನಾಯಕರ ತ್ಯಾಗ, ಹೋರಾಟದ ಹಾದಿಯಲ್ಲಿದ್ದ ರಾಷ್ಟ್ರದ ಜನತೆಯ ಮೇಲೆ, ವಿಶೇಷವಾಗಿ ಕರ್ನಾಟಕದ ಜನತೆಯ ಮೇಲೆ ಗಾಢವಾದ ಪ್ರಭಾವ ಬೀರಿದುದನ್ನು ನೆನೆಯಬೇಕಾಗಿದೆ.

ಏಕಾಧಿಪತ್ಯದ ಬಿಗಿಮುಷ್ಟಿಯಲ್ಲಿ ಬಳಲಿದ್ದ ಮೈಸೂರು ಸಂಸ್ಥಾನ ಸಕಾಲದಲ್ಲಿ ಚಟುವಟಿಕೆಯನ್ನು ಆರಂಭಿಸಿ ರಾಜ್ಯ ಸರ್ಕಾರ ಹೇಳಿಕೊಳ್ಳುತ್ತಿದ್ದಕ್ಕಿಂತ ವ್ಯತಿರಿಕ್ತವಾಗಿ ಹಾಗೂ ಮೈಸೂರು ಪ್ರಾಂತ್ಯದ ಹೊರಗಿನ ಕಾಂಗ್ರೆಸ್ಸಿಗರ ನಂಬಿಕೆಗೆ ವಿರುದ್ಧವಾಗಿ ಇಲ್ಲಿನ ಆಡಳಿತ ಹೆಚ್ಚು ದಮನಕಾರಿಯೂ, ಜವಾಬ್ದಾರಿರಹಿತವೂ ಆಗಿ ಮುಂದುವರಿದಿತ್ತು; ರಾಜಕೀಯ ಪ್ರಜ್ಞೆಯುಳ್ಳ ಮಂದಿಗೆ ಈ ಅಂಶ ಮನವರಿಕೆಯಾಗಿತ್ತು. ಬ್ರಿಟಿಷ್ ಭಾರತ ರಾಜಕೀಯವಾಗಿ ಮುಂದೆ ಹೆಜ್ಜೆ ಹಾಕುವ ಸೂಚನೆಗಳಾದರೂ ಇದ್ದುವು. ಸಂಸ್ಥಾನಿ ಜನ ಪ್ರಚಲಿತ ವಿದ್ಯಮಾನಗಳಿಂದ ಕುಪಿತರಾಗಿದ್ದರಾದರೂ, ಒಂದು ಕಡೆ ಅಗತ್ಯವಾದ ರಾಜಕೀಯ, ಸಾಮಾಜಿಕ ಚೈತನ್ಯವಿಲ್ಲದೆ ಮತ್ತೊಂದು ಕಡೆ ಆಡಳಿತದ ವಿರುದ್ಧ ಚಳವಳಿ ಸಾರಲು ಕಾಂಗ್ರೆಸ್ಸಿನ ಅನುಮತಿ ಇಲ್ಲದೆ

ತುಂಬಾ ಬಳಲುವಂತಾಯಿತು. ಸರ್ಕಾರ ಕಾಲ್ತೊಡಕಾಗಿ ಪರಿಣಮಿಸಿದ ಕಾರಣ ಬೆಂಗಳೂರಿನ ೧೯೨೮ರ ಗಣಪತಿ ಉತ್ಸವದ ಗಲಭೆಯನ್ನು ನೆಪವಾಗಿಟ್ಟುಕೊಂಡು ಸರ್ಕಾರದ ವಿರುದ್ಧ ಸೇಡು ತೀರಿಸಿಕೊಂಡವು. ಆದರೆ ದುರದೃಷ್ಟವಶಾತ್ ಜನಪ್ರಿಯವಾಗದ ಸಂಗತಿಯನ್ನು ಹಿಡಿದು ಹೋರಾಟ ನಡೆಸಲು ಮುಂದಾದ್ದರಿಂದ ಸಹಜವಾಗಿಯೇ ಮುಸ್ಲಿಮರ ವಿರೋಧ ಕಟ್ಟಿಕೊಳ್ಳಬೇಕಾಗಿತ್ತು. ಆದಾಗ್ಯೂ ತಮ್ಮ ಅಸ್ತಿತ್ವವನ್ನು ಮನದಟ್ಟು ಮಾಡುವುದಕ್ಕೆ ಅವರಿಗೆ ಸಾಧ್ಯವಾಯಿತು. ಗಲಭೆಯ ಬಗ್ಗೆ ತನಿಖೆ ನಡೆಸಲು ನೇಮಕವಾದ ವಿಶ್ವೇಶ್ವರಯ್ಯ ಸಮಿತಿಯು ಗಲಭೆಯ ಜಾತೀಯ ಮೂಲವನ್ನು ಪ್ರಸ್ತಾಪಿಸುತ್ತಲೇ ಈ ಅಂಶಗಳನ್ನು ಗಮನಕ್ಕೆ ತಂದಿತ್ತು: 'ಬ್ರಿಟಿಷ್ ಪ್ರಾಂತ್ಯಗಳಲ್ಲಿರುವವರು ಡೊಮಿನಿಯನ್ ಸರ್ಕಾರಕ್ಕೆ ಒತ್ತಾಯಿಸುತ್ತಿರುವಾಗ ಮೈಸೂರು ಪ್ರಾಂತ್ಯವು ಕಡೆಯ ಪಕ್ಷ Dyarchy ರೂಪದ ಸರ್ಕಾರಕ್ಕೂ ಒತ್ತಾಯಿಸುತ್ತಿಲ್ಲ. ಹಾಗಾಗಿ ಜವಾಬ್ದಾರಿ ಸರ್ಕಾರದ ನೈಜವಾದ ಹಾಗೂ ಪೂರ್ಣವಾದ ರೂಪಕ್ಕೆ ಚಳವಳಿ ನಡೆಯುತ್ತಿರುವುದು ಸರ್ವವೇದ್ಯವಾಗಿದೆ........ ಪ್ರಾಂತೀಯ ಪ್ರತಿಷ್ಠೆಗಳಿಗಾಗಿನ ಬೇಡಿಕೆಗಳು ಮೇಲಿಂದ ಮೇಲೆ ಮಂಡನೆಯಾಗುತ್ತಿರುವುದಲ್ಲದೆ ಇವು ಇನ್ನೂ ಹೆಚ್ಚಾಗುವ ನಿರೀಕ್ಷೆಯಿದೆ.........' ಜನರ ಆಶೋತ್ತರಗಳನ್ನು ತೃಪ್ತಿಪಡಿಸುವ ದಿಶೆಯಲ್ಲಿ ಸಲಹೆ ಸೂಚನೆಗಳನ್ನು ನೀಡುತ್ತಾ ಅವರು ಹೀಗೆ ಮುಂದುವರಿದರು. 'ಜನರನ್ನು ಸಂತೃಪ್ತಿಗೊಳಿಸುವ ದಿಶೆಯಲ್ಲಿ ರಾಜ್ಯವು ಒಂದು ಮುಸೋಲಿನಿ ಮಾದರಿಯ ಸರ್ಕಾರವನ್ನು ನೀಡಬೇಕು, ಇಲ್ಲವೇ ಬ್ರಿಟಿಷ್ ಮಾದರಿಯನ್ನನುಸರಿಸಿ ಸಂವೈಧಾನಿಕ ಮಾದರಿಯನ್ನು ನೀಡಬೇಕು– ಈ ಎರಡನೆಯ ಮಾದರಿಯಲ್ಲಿ ಜನತೆಯ ಆಡಳಿತವನ್ನು ಹೆಚ್ಚೂ ಕಡಿಮೆ ಜನರೇ ನಿರ್ವಹಿಸಬೇಕಾದ ಪ್ರಮೇಯವೇರ್ಪಡುವುದು'. ಮುಂದುವರಿದು ಸಮಿತಿಯು ಪರೋಕ್ಷವಾದ ಎಚ್ಚರಿಕೆಯನ್ನು ನೀಡಿತು. "ಜನರ ನೈತಿಕವಾದ ಬೆಂಬಲವಿಲ್ಲದೆ ಅವರಿಗೆ (ಅಂದರೆ ಸರ್ಕಾರಕ್ಕೆ) ಆಡಳಿತದ ದೈನಂದಿನ ಕೆಲಸಗಳನ್ನು ನಿರ್ವಹಿಸಲೂ ಹೆಚ್ಚು ಹೆಚ್ಚು ಕಷ್ಟವಾಗುವುದು".[೨೬]

ಒಂದು ವರ್ಷದ ಒಳಗಾಗಿ ಬ್ರಿಟಿಷರು ಭಾರತಕ್ಕೆ ಡೊಮಿನಿಯನ್ ಪಟ್ಟ ನೀಡಲು ನಿರಾಕರಿಸಿದರೆ "ಪೂರ್ಣ ಸ್ವರಾಜ್ಯ" ಕ್ಕಾಗಿ ಸರ್ವವ್ಯಾಪಿ ಚಳವಳಿ ನಡೆಸುವುದು ಅನಿವಾರ್ಯವಾಗುವುದೆಂದು ಗಾಂಧೀಜಿಯವರ ನೇತೃತ್ವದಲ್ಲಿ ಲಾಹೋರ್‌ನಲ್ಲಿ ತೀರ್ಮಾನಿಸಲಾಯಿತು. ಆ ಒಂದು ವರ್ಷದ ಅವಧಿಯನ್ನು 'ತರಬೇತು ಸಂವತ್ಸರ' ವಾಗಿ ಪರಿಗಣಿಸಿ ರಾಷ್ಟ್ರವ್ಯಾಪಿ ಚಳವಳಿಗೆ ದೇಶವನ್ನು ಸಿದ್ಧಗೊಳಿಸಬೇಕೆಂದು ನಿರ್ಧಾರವಾಯಿತು. ದೇಶದ ಉದ್ದಗಲಕ್ಕೂ ಅವರು ಸಂಚಾರ ಮಾಡಿದರಲ್ಲದೆ ಕರ್ನಾಟಕಕ್ಕೂ ಬಂದರು.

೧೯೨೯ರ ಮೇ ತಿಂಗಳಿನಲ್ಲಿ ರ್‍ಯಾಮ್ಸೇ ಮ್ಯಾಕ್‌ಡೊನಾಲ್ಡ್ ಬ್ರಿಟನ್ನಿನಲ್ಲಿ ಲೇಬರ್ ಪಕ್ಷದ ನಾಯಕರಾಗಿ ಅಧಿಕಾರ ಸ್ವೀಕರಿಸಿದರು ಹಾಗೂ ಲಾರ್ಡ್ ಇರ್ವಿನ್ ವೈಸ್‌ರಾಯ್ ಆಗಿ ಭಾರತಕ್ಕೆ ಬಂದರು. ರಾಷ್ಟ್ರವಾದಿಗಳ ವಿರೋಧವನ್ನು ಎದುರಿಸಿದ್ದಂಥ ಸೈಮನ್ ಕಮಿಷನ್ ವರದಿಯನ್ನು ಚರ್ಚಿಸಲು ಒಂದು ದುಂಡುಮೇಜಿನ ಪರಿಷತ್ತು ನಡೆಸುವುದಾಗಿ ಬ್ರಿಟಿಷರು ಭರವಸೆ ನೀಡಿದರು. ಬೇರೆ ಬೇರೆ ಪಕ್ಷಗಳ ನಾಯಕರು ದೆಹಲಿಯಲ್ಲಿ ಕಲೆತು ತಮ್ಮ ತಮ್ಮಲ್ಲೇ ಚರ್ಚಿಸಿ "ದೆಹಲಿ ಪ್ರಣಾಳಿಕೆ" ಎಂಬ ಹೆಸರಿನ ಪ್ರಣಾಳಿಕೆಯನ್ನು ಬಿಡುಗಡೆ ಮಾಡಿದರು. ಡೊಮಿನಿಯನ್ ಪಟ್ಟವನ್ನು ಅನುಷ್ಠಾನಗೊಳಿಸುವ ಯೋಜನೆಯನ್ನು ಚರ್ಚಿಸುವುದಾದರೆ ಮಾತ್ರ ತಾವು ದುಂಡುಮೇಜಿನ ಪರಿಷತ್ತಿಗೆ ಹೋಗುವುದಾಗಿಯೂ ಡೊಮಿನಿಯನ್ ಸ್ಟೇಟಸ್ ನೀಡುವುದೋ ಬೇಡವೋ ಎಂಬ ಪಶ್ನೆಯನ್ನು ಚರ್ಚಿಸಲು ಅಲ್ಲ ಎಂಬುದು ಈ ಪ್ರಣಾಳಿಕೆಯ ವಿಷಯವಾಗಿತ್ತು. ಆದರೆ ಸರ್ಕಾರದಿಂದ ಯಾವ ಸಕಾರಾತ್ಮಕ ಉತ್ತರ ದೊರೆಯಲಿಲ್ಲ. ಸಂಘರ್ಷದ ಮಾರ್ಗ ತುಳಿಯದೆ ಗತ್ಯಂತರವಿಲ್ಲದಾಯಿತು.

ಲಾಹೋರ್‌ನಲ್ಲಿ ಜವಾಹರ್‌ಲಾಲ್ ನೆಹರೂರವರು ಮಾಡಿದ ಉತ್ಕಟವಾದ ಭಾಷಣ ಬಡಿದೆಬ್ಬಿಸು ವಂತಿತ್ತು. ಭಾರತೀಯ ಸಮಾಜದ ನಿಜವಾದ ಸಮಸ್ಯೆಗಳೇನು ಎಂದು ಅರ್ಥಮಾಡಿಕೊಳ್ಳುವ ಸೂಕ್ಷ್ಮತೆ

ಗಾಂಧೀಜಿಯವರನ್ನು ಬಿಟ್ಟರೆ ನೆಹರೂರವರಿಗೇ ಇದ್ದದ್ದು. ಸಮಸ್ಯೆ ತಮಗೆ ಚೆನ್ನಾಗಿ ಅರಿವಾಗಿದೆ ಮುಂದಿನ ಹೋರಾಟದ ಅಗತ್ಯಗಳೇನು ಎಂಬುದನ್ನು ಸ್ಪಷ್ಟಪಡಿಸಲೋ ಎಂಬಂತೆ ಅವರು ಹೇಳಿದರು, "ಪರಕೀಯರ ಆಳ್ವಿಕೆಯಿಂದ ಈ ದೇಶವನ್ನು ಮುಕ್ತಗೊಳಿಸಲು ನಾವು ಒಂದು ಬಹಿರಂಗ ಪಿತೂರಿಯನ್ನು ನಡೆಸುತ್ತಿದ್ದೇವೆ, ಇದರಲ್ಲಿ ಸಂಗಾತಿಗಳಾದ ನೀವು, ದೇಶದ ಪುರುಷರು ಹಾಗೂ ಸ್ತ್ರೀಯರು ಭಾಗವಹಿಸಬೇಕೆಂದು ಆಮಂತ್ರಿಸುತ್ತಿದ್ದೇವೆ......... ನಾನು ಮುಚ್ಚು ಮರೆಯಿಲ್ಲದೆ ನಿವೇದಿಸಿಕೊಳ್ಳಬೇಕು, ಏನೆಂದರೆ ನನಗೇ ರಾಜರು ಮತ್ತು ದೊರೆಗಳಲ್ಲಿ ನಂಬಿಕೆಯಿಲ್ಲ, ಅಥವಾ ಕೈಗಾರಿಕೆಯ ಆಧುನಿಕ ರಾಜರನ್ನು ಉತ್ಪತ್ತಿ ಮಾಡುವ ವ್ಯವಸ್ಥೆಯ ಬಗ್ಗೆಯೂ ನನಗೆ ನಂಬಿಕೆಯಿಲ್ಲ. ಹಿಂದಿನ ವ್ಯವಸ್ಥೆಯ ರಾಜರುಗಳಿಗಿಂತ ಜನರ ಮೇಲೆ ಕೈಗಾರಿಕಾ ದೊರೆಗಳ ನಿಯಂತ್ರಣ ಅಧಿಕವಾಗಿರುತ್ತದೆ. ಅಷ್ಟೇ ಅಲ್ಲ ಈ ಎರಡನೇ ಗುಂಪಿನ ದೊರೆಗಳು ತಮ್ಮ ರೀತಿರಿವಾಜಿನಲ್ಲಿ ಹೆಚ್ಚು ಹಿಂಸಾತ್ಮಕವಾಗಬಲ್ಲರೂ ಕೂಡ".[೨೭] ಭಾರತೀಯ ರಾಷ್ಟ್ರದ ಹೊಸ ಸಾಮಾಜಿಕ ಘಟಕಗಳಿಗೆ ನೆಹರೂರವರ ಭಾಷಣ ನವೀನವಾಗಿ, ಚೈತನ್ಯದಾಯಕವಾಗಿ ಕಂಡಿತು. ಅವರು ಕಾರ್ಮಿಕರು, ರೈತರು ಹಾಗೂ ವಾಮಪಂಥೀಯ ಸಿದ್ಧಾಂತಗಳಿಂದ ಆಕರ್ಷಿತರಾಗಿದ್ದ ಯುವಕರ ಬೆಂಬಲವನ್ನು ಪಡೆಯಲು ಪ್ರಯತ್ನಿಸುತ್ತಿದ್ದರು.

## ಸವಿನಯ ಕಾನೂನುಭಂಗ ಹಾಗೂ ಕರನಿರಾಕರಣೆ ಚಳವಳಿಗಳು

ಲಾಹೋರ್ ಅಧಿವೇಶನವು ಸವಿನಯ ಕಾನೂನುಭಂಗ ಹಾಗೂ ಕರನಿರಾಕರಣೆ ಆಂದೋಲನವನ್ನು ಕೈಗೆತ್ತಿಕೊಳ್ಳಲು ಕಾಂಗ್ರೆಸ್ ವರ್ಕಿಂಗ್ ಕಮಿಟಿಗೆ ಅಧಿಕಾರ ವಹಿಸಿತು. ತತ್ಫಲವಾಗಿ ಕಾಂಗ್ರೆಸ್ ಸಮಿತಿ ಹೋರಾಟದ ಸ್ಥಳ ಮತ್ತು ಸಮಯವನ್ನು ನಿರ್ಧರಿಸುವಂತೆ ಗಾಂಧೀಜಿಯವರಿಗೆ ಜವಾಬ್ದಾರಿ ಹೊರಿಸಿತು. ಗಾಂಧೀಜಿಯವರು ೩೧ನೇ ಜನವರಿ ೧೯೩೦ರಂದು ಲಾರ್ಡ್ ಇರ್ವಿನ್ನರ ಮುಂದೆ ಈಡೇರಿಸಬೇಕೆಂದು ೧೧ ಬೇಡಿಕೆಗಳ ಒಂದು ಪಟ್ಟಿಯನ್ನು ಇಟ್ಟರು. ಇದಕ್ಕೆ ಯಾವುದೇ ಪ್ರತಿಸ್ಪಂದನವಿಲ್ಲದ ಕಾರಣ ಹೋರಾಟ ಅನಿವಾರ್ಯವಾಯಿತು.

'ಉಪ್ಪಿನ ಸತ್ಯಾಗ್ರಹ' ಗಾಂಧೀಜಿಯವರಿಗೆ ಪ್ರಮುಖವಾಗಿ ಗೋಚರಿಸಿತು. ಆಗ ಅವರು ಈ ಸತ್ಯಾಗ್ರಹ ಏಕೆ ಅತ್ಯಗತ್ಯ ಎಂದು ವಿವರಿಸಿದರು. ನೀರಿನ್ನು ಹೊರತು ಪಡಿಸಿ ಉಪ್ಪಿನಂಥ ಒಂದು ಪದಾರ್ಥ ಬೇರೊಂದು ಸಿಕ್ಕದು, ಇದಕ್ಕೆ ತೆರಿಗೆ ಹಾಕುವುದರಿಂದ ಸರ್ಕಾರ ಬಡತನದಲ್ಲಿ ಬೇಯುತ್ತಿರುವ ಲಕ್ಷಾಂತರ ಮಂದಿಯನ್ನು ಮುಟ್ಟುತ್ತದೆ. ಹಾಗೆಯೇ, ರೋಗಿಗಳು, ಅಂಗವಿಹೀನರು ಹಾಗೂ ನಿರ್ಗತಿಕರನ್ನೂ ಕೂಡ. ಆದ್ದರಿಂದ ಉಪ್ಪಿನ ಮೇಲೆ ವಿಧಿಸುವ ತೆರಿಗೆ ಮನುಷ್ಯನಾದವನು ತನ್ನ ಬುದ್ಧಿವಂತಿಕೆಯಿಂದ ಕಂಡು ಹಿಡಿದಿರುವ ಅತ್ಯಂತ ಹೀನಾಯವಾದ ತೆರಿಗೆಯಾಗಿದೆ. ಹಾಗಾಗಿ ಗಾಂಧೀಜಿ ತಮ್ಮ ದಂಡಿಯಾತ್ರೆಯ ಬಗೆಗೆ ವೈಸ್‌ರಾಯ್‌ಗೆ ಪತ್ರ ಬರೆದು ಅದರಲ್ಲಿ ತಿಳಿಸಿದರು: "ನನ್ನ ಆಶ್ರಮದಲ್ಲಿರುವ ನನ್ನ ಸಹ ಕಾರ್ಯಕರ್ತರೊಡಗೂಡಿ ನಾನು ಉಪ್ಪಿನ ಕಾನೂನನ್ನು ಉಲ್ಲಂಘಿಸಲು ದಂಡಿಯಾತ್ರೆ ಕೈಗೊಳ್ಳಲು ನಿರ್ಧರಿಸಿದ್ದೇನೆ".[೨೮]

ಉಪ್ಪಿನ ಕಾನೂನನ್ನು ಭಂಗ ಮಾಡಲು ಗಾಂಧೀಜಿಯವರು ದಂಡಿಯಾತ್ರೆ ಕೈಗೊಳ್ಳುವ ಸಂಗತಿಯಿಂದ ಎಲ್ಲೆಡೆ ಸಂತಸದ ಹೊಳೆ ಹರಿಯಿತು. ಉಪ್ಪನ್ನು ಆಯ್ಕೆ ಮಾಡಿಕೊಂಡುದೇ ಮೂಲತಃ ರಾಷ್ಟ್ರವಾದಿ ಕ್ರಮವಾಗಿತ್ತು, ಏಕೆಂದರೆ ಉಪ್ಪನ್ನು ಉಪಯೋಗಿಸದವರು ಯಾರು? ಈ ಹೋರಾಟದ ಫಲವಾಗಿ ದೇಶದ ಎಲ್ಲವರ್ಗದ ಜನರೂ ಒಟ್ಟಾಗಿ ಸೇರುವಂತೆ ಪ್ರೇರೇಪಣೆ ನೀಡಿತಲ್ಲದೆ ಇಡೀ ಸಮಾಜ ಒಂದು ರಾಷ್ಟ್ರವಾಗಿ ರೂಪುಗೊಳ್ಳುವುದಕ್ಕೆ ಅನುಕೂಲವಾಯಿತು.

ಜನವರಿ ೨೬ರಿಂದಲೇ ಕರ್ನಾಟಕದಲ್ಲಿ ಧ್ವಜಸತ್ಯಾಗ್ರಹದ ಮೂಲಕ ಮುಂದಿನ ಹೋರಾಟಕ್ಕಾಗಿ ಪೂರ್ವ ತಾಲೀಮು ನಡೆದಿತ್ತೆಂದು ಹೇಳಬಹುದು. ೨೬ನೇ ಜನವರಿಯನ್ನು ಸ್ವಾತಂತ್ರ್ಯ ದಿನವನ್ನಾಗಿ ಆಚರಿಸುತ್ತಿದ್ದರು. ಎಲ್ಲ ಪಟ್ಟಣಗಳಲ್ಲಿ, ಕೆಲವು ಹಳ್ಳಿಗಳಲ್ಲಿ ಕೂಡ ಕಾಂಗ್ರೆಸ್ಸಿನ ತ್ರಿವರ್ಣ ಧ್ವಜವನ್ನು ಹಾರಿಸಲಾಯಿತು. ಆದರೆ ಮೈಸೂರು ಸರ್ಕಾರವು ಈ ಕಾರ್ಯಕ್ರಮ ನಡೆಯದಂತೆ ತಡೆಯಲು ಮುಂದಾಯಿತು. ಧ್ವಜ ನಿರ್ಧಾರ ಮಾಡಿದ ಕಾರ್ಯಕರ್ತರು ನಿಷೇಧಾಜ್ಞೆಯನ್ನು ಉಲ್ಲಂಘಿಸಿದಾಗ ಅವರನ್ನು ದಸ್ತಗಿರಿ ಮಾಡಿ ಸೆರೆವಾಸದಲ್ಲಿಟ್ಟರು. ೧೯೩೦, ೧೪ನೇ ಫೆಬ್ರವರಿಯಲ್ಲಿ ಸಬರಮತಿಯಲ್ಲಿ ಅಸಹಕಾರ ಚಳವಳಿಯನ್ನು ನಡೆಸಬೇಕೆಂದು ಕಾಂಗ್ರೆಸ್ ವರ್ಕಿಂಗ್ ಕಮಿಟಿ ತೀರ್ಮಾನಿಸಿತಲ್ಲದೆ ಇದರ ವಿಷಯವಾಗಿ ಚರ್ಚಿಸಲು ೨೨ನೇ ಫೆಬ್ರವರಿಯಲ್ಲಿ ಬಳ್ಳಾರಿಯಲ್ಲಿ ಪ್ರದೇಶ ಕಾಂಗ್ರೆಸ್ ಸಮಿತಿಯ ಸಭೆ ನಡೆಯಿತು. ಶೀಘ್ರಗತಿಯಲ್ಲಿ ಚಳವಳಿ ನಡೆಸಬಹುದಾದ ಸಾಧ್ಯತೆಯನ್ನು ಚರ್ಚಿಸಲು ಇನ್ನೊಂದು ಸಮಿತಿಯನ್ನು ನೇಮಿಸಲಾಯಿತು. ಎಲ್ಲಾ ಜಿಲ್ಲೆಗಳಲ್ಲಿ ಪ್ರವಾಸ ಮಾಡಿದ ನಂತರ ಉತ್ತರ ಕನ್ನಡ ಜಿಲ್ಲೆಯಿಂದ ಚಳವಳಿಯನ್ನು ಪ್ರಾರಂಭಿಸಬಹುದೆಂದು ಸಮಿತಿಯು ಶಿಫಾರಸು ಮಾಡಿತು.

ಗಾಂಧೀಜಿಯವರ ಜೊತೆ ದಂಡಿಯಾತ್ರೆಯನ್ನು ಕೈಗೊಂಡ ಸತ್ಯಾಗ್ರಹಿಗಳ ಪರಿವಾರದಲ್ಲಿ ಮೈಲಾರ ಮಹದೇವಪ್ಪನವರಿದ್ದರು. ಇವರು ಮುಂದೆ 'ಭಾರತ ಬಿಟ್ಟು ಹೊರಡಿ' ಚಳವಳಿಯಲ್ಲಿ ಹುತಾತ್ಮರಾದರು. ರಾಜ್ಯಾದ್ಯಂತ ಸತ್ಯಾಗ್ರಹ ಚಳವಳಿಯನ್ನು ಉಗ್ರಗೊಳಿಸುವ ದಿಶೆಯಲ್ಲಿ ಸಭೆಗಳು ನಡೆದುವು. ಕರನಿರಾಕರಣಾ ಆಂದೋಲನದಲ್ಲಿ ಚಟುವಟಿಕೆಯ ಕೇಂದ್ರ ಸ್ಥಾನವಾಗಿದ್ದ ಉತ್ತರ ಕನ್ನಡವು ಈಗಲೂ ಕಾರ್ಯಕರ್ತರ ಕೇಂದ್ರವಾಯಿತು. ಜಲಿಯನ್‌ವಾಲಾ ಬಾಗ್ ದುರಂತದ ದಿನದಂದು, ಅಂದರೆ ಏಪ್ರಿಲ್ ೧೩ನೇ ದಿನಾಂಕದಂದು ಉಪ್ಪಿನ ಸತ್ಯಾಗ್ರಹ ಪ್ರಾರಂಭವಾಯಿತು. ಸ್ವಯಂ ಸೇವಕರು ಹಾಗೂ ಸತ್ಯಾಗ್ರಹಿಗಳು ಕರ್ನಾಟಕದ ಎಲ್ಲ ಭಾಗಗಳಿಂದ ಬಂದಿದ್ದರಲ್ಲದೆ, ಮೈಸೂರು ಸಂಸ್ಥಾನದಿಂದಲೂ ಪ್ರತಿನಿಧಿಗಳು ಬಂದಿದ್ದರು. ಮೊದಲೇ ಗೊತ್ತಾಗಿದ್ದ ದಿನಾಂಕದಂದು ಅಂದರೆ ಏಪ್ರಿಲ್ ೬ರಂದು ಗಾಂಧೀಜಿಯವರು ತಮ್ಮ ಅನುಯಾಯಿಗಳೊಡಗೂಡಿ ಉಪ್ಪಿನ ಕಾನೂನನ್ನು ಮುರಿದರು.

ಕಾನೂನುಬಾಹಿರವಾಗಿ ಉಪ್ಪನ್ನು ತಯಾರಿಸಲು ಅಂಕೋಲಾವನ್ನು ಆಯ್ಕೆ ಮಾಡಿಕೊಂಡಿದ್ದರು. ಸತ್ಯಾಗ್ರಹಿಗಳ ಒಂದು ದೊಡ್ಡ ತಂಡ ೬ನೇ ತಾರೀಖಿನಂದು ದಿವಾಕರ್ ಮತ್ತು ಅವರ ಪತ್ನಿಯವರ ನಾಯಕತ್ವದಲ್ಲಿ ಹುಬ್ಬಳ್ಳಿಯಿಂದ ಹೊರಟಿತು. ಬುರ್ಲಿ ಬಿಂದುಮಾಧವ ಮತ್ತು ಹೊಸಮನಿ ಪರಮಣ್ಣ ಅವರು ಯಾತ್ರೆಯ ಮುಂದಾಳತ್ವವನ್ನು ವಹಿಸಿದ್ದರು. ಮುಂಚಿತವಾಗಿಯೇ ಸತ್ಯಾಗ್ರಹಿಗಳ ವಾಸ್ತವ್ಯಕ್ಕಾಗಿ ಏರ್ಪಾಟು ಮಾಡಲಾಗಿತ್ತು. ಸತ್ಯಾಗ್ರಹದ ವಿಧಾನಗಳನ್ನು ಜನರಿಗೆ ತಿಳಿಯಪಡಿಸಲು ಪ್ರತಿದಿನ ಸಂಜೆಯ ವೇಳೆ ಸಭೆಗಳನ್ನು ನಡೆಸಲಾಯಿತು. ಅನಕ್ಷರಸ್ಥರಾದ ನಾಡವ ಜನಾಂಗದ ಸ್ತ್ರೀಯರು ಮತ್ತು ಪುರುಷರು ಉಪ್ಪಿನ ಸತ್ಯಾಗ್ರಹ ಹಾಗೂ ಅಸಹಕಾರ ಚಳವಳಿಯ ಸಂದರ್ಭದಲ್ಲಿ ಕರ್ನಾಟಕದಲ್ಲಿ ಚರಿತ್ರೆ ನಿರ್ಮಿಸಿದರೆಂಬುದು ಗಮನಾರ್ಹವಾದ ವಿಚಾರ. ಅಸಹಕಾರ ಚಳವಳಿಯು ದೇಶದ ಈ ಭಾಗದಲ್ಲಿ ನಡೆದುದನ್ನು ಬಾರ್ಡೋಲಿ ಸತ್ಯಾಗ್ರಹಕ್ಕೆ ಹೋಲಿಸಬಹುದೆಂದು ತೋರುತ್ತದೆ. ಸರ್ದಾರ್ ಪಟೇಲರಂಥ ಮಹಾ ನಾಯಕರು ಬಾರ್ಡೋಲಿ ಸತ್ಯಾಗ್ರಹದ ಮುಂದಾಳತ್ವ ವಹಿಸಿದರೆ ಕರ್ನಾಟಕದಲ್ಲಿ ನಡೆದ ಹೋರಾಟದಲ್ಲಿ ಅಂಕೋಲ, ಸಿರ್ಸಿ, ಸಿದ್ದಾಪುರಗಳಲ್ಲಿ ನಡೆದ ಹೋರಾಟದಲ್ಲಿ ಪ್ರಸಿದ್ಧರಲ್ಲದ ನಾಯಕರು ಅನಕ್ಷರಸ್ಥ ನಾಡವ ಸತ್ಯಾಗ್ರಹಿಗಳನ್ನು ಮುನ್ನಡೆಸಿದ್ದರು.

ಉಪ್ಪಿನ ಸತ್ಯಾಗ್ರಹದ ಬಗ್ಗೆ ವಿವರವಾಗಿ ಬರೆಯುತ್ತಾ ಹೀಗೆ ದಾಖಲಿಸಲಾಗಿದೆ:

೧೯೩೦ರ ಏಪ್ರಿಲ್ ೧೩ನೇ ದಿನದಂದು ಅಂಕೋಲದಲ್ಲಿ ಸುಪ್ರಭಾತವಾಯಿತು. ಉಚ್ಚಕಂಠದ ಹಾಡು ಕೇಳಿಬಂದಿತು:

ಅದೋ ನೋಡು ಸಮರ ದುಂದುಭಿ ಮೊಳಗುತ್ತಿದೆ
ಮಹಾತ್ಮ ಮೊಳಗಿಸಿದ ದುಂದುಭಿ.........

ಪಟ್ಟಣದಲ್ಲೆಲ್ಲಾ ಈ ಧ್ವನಿ ಕೇಳಿಬಂತು...... ಮನೆ ಮನೆಗಳ ಮುಂದೆ ತಳಿರು ತೋರಣಗಳಿಂದ ಸಿಂಗರಿಸಿದ್ದು...... ಅದು ನಿಜಕ್ಕೂ ಹಬ್ಬದ ಸಂಭ್ರಮ........ ನಾನಾ ಭಾಗಗಳಿಂದ ಜನರು ಜಮಾಯಿಸಿದ್ದರು....... ಹೆಂಗಸರು, ಗಂಡಸರು ಮತ್ತು ಮಕ್ಕಳು. ಅವರ ಮುಖದ ಮೇಲೆ ಚರಿತ್ರಾರ್ಹವಾದ ಕ್ಷಣದ ಉದಯದ ಚಿಹ್ನೆಗಳು ಢಾಳಾಗಿ ಮೂಡಿದ್ದವು.

ಸಮುದ್ರ ತೀರಕ್ಕೆ ನಡೆದ ಯಾತ್ರೆ ದೀರ್ಘವಾಗಿಯೇ ಇತ್ತು. ಸತ್ಯಾಗ್ರಹಿಗಳು ನೀರು ಮತ್ತು ಮಣ್ಣನ್ನು ಸಂಗ್ರಹಿಸಿದ ಕೂಡಲೇ ಗುಂಪು ಅಂಕೋಲದ ಕಡೆ ಹೆಜ್ಜೆ ಹಾಕಿತು....... ತಾಲ್ಲೂಕು ಕಚೇರಿಯ ಎದುರಿಗೆ ನೀರನ್ನು ಕುದಿಸುವುದರ ಮೂಲಕ ಉಪ್ಪನ್ನು ತಯಾರಿಸಿದರು...... ಇದು ಕೇವಲ ತಾತ್ಕಾಲಿಕವಾದ ಉತ್ಸಾಹವೆಂದು ಪೋಲೀಸಿನವರ ಭಾವನೆಯಾಗಿತ್ತು...... ಹಾಗಾಗಿ ಅದನ್ನು ಹಾಗೇ ಬಿಟ್ಟು ಬಿಟ್ಟರೆ ತನ್ನಷ್ಟಕ್ಕೆ ತಾನೇ ತಣ್ಣಗಾಗುತ್ತದೆಯೆಂದು ಅವರ ಎಣಿಕೆ.

ಆದರೆ ಅದು ಕೇವಲ ಪ್ರಾರಂಭವಷ್ಟೇ ಎಂಬುದು ಯಾರಿಗೂ ತಿಳಿಯಲಿಲ್ಲ. ನಿಷಿದ್ಧವಾದ ಉಪ್ಪು ತಯಾರಿಸಲ್ಪಟ್ಟಿತು. ಸರ್ಕಾರಿ ಕಾರ್ಯಾಚರಣೆ ಜರುಗಿತು. ನಾಯಕರನ್ನು ದಸ್ತಗಿರಿ ಮಾಡಿ ಜೈಲುವಾಸಕ್ಕೆ ಕಳುಹಿಸಲಾಗಿ ಜನರು ರೊಚ್ಚಿಗೆದ್ದರು. ಸಾವಿರಾರು ಜನರು ಉಪ್ಪನ್ನು ತಯಾರಿಸಿ ಮಾರಿದರು. ಉಪ್ಪನ್ನು ತಯಾರಿಸಿದವರೆಲ್ಲರನ್ನು ದಸ್ತಗಿರಿ ಮಾಡಲಿಲ್ಲ, ನಾಯಕರನ್ನು ಮಾತ್ರ ದಸ್ತಗಿರಿ ಮಾಡಿ ಶಿಕ್ಷೆಗೆ ಗುರಿ ಮಾಡಿದರು. ಸೀತಾಬಾಯಿ ಸರೋಫ್ ಹಾಗೂ ಆನಂದೀಬಾಯಿ ಹಮ್ಮತ್ತಿಕರ್‌ರಂಥ ಮಹಿಳೆಯರೂ ಸಹ ಸಕ್ರಿಯವಾಗಿ ಭಾಗವಹಿಸಿದರು. ದಿನಕರ ದೇಸಾಯಿಯಂಥ ಪ್ರತಿಭಾವಂತ ಕವಿಗಳ ನುಡಿಗಳು ತ್ಯಾಗದ ಮಹತ್ವವನ್ನು ಎತ್ತಿ ಹಿಡಿದವು. ದಾರ್ಶನ ಎಂಬ ಊರಿನಲ್ಲಿ ಗಾಂಧೀಜಿ ಉಪ್ಪಿನ ಉಗ್ರಾಣಕ್ಕೆ ಮುತ್ತಿಗೆ ಹಾಕಲು ತೀರ್ಮಾನಿಸಿದಾಗ, ಕರ್ನಾಟಕದ ಜನರು ಸಾಣೆಕಟ್ಟೆಯ ಉಪ್ಪಿನ ಡಿಪೋವನ್ನು ಮುತ್ತಿಗೆ ಹಾಕಲು ತೀರ್ಮಾನಿಸಿ ಆ ಕಾರ್ಯವನ್ನು ಯಶಸ್ವಿಯಾಗಿ ನಡೆಸಿದರು. ಗಾಂಧೀಜಿಯವರನ್ನು ದಸ್ತಗಿರಿ ಮಾಡಿದ ಸುದ್ದಿ ಎಲ್ಲೆಡೆ ಹಬ್ಬಿ ರಾಜ್ಯದಲ್ಲಿ ಸರ್ವವ್ಯಾಪಿಯಾದ ಪ್ರತಿಭಟನೆಯ ಮತ್ತೊಂದು ಅಲೆ ಕಾಣಿಸಿಕೊಂಡಿತು.

ಸರ್ಕಾರವು ಈಗ ಎಗ್ಗಿಲ್ಲದ ಪ್ರತಿಭಟನೆಯನ್ನು ಬಗ್ಗುಬಡಿಯಲು ನಿರತವಾಯಿತು. ಸನ್ನಿವೇಶವನ್ನು ತಹಬಂದಿಗೆ ತರಲು ಹೊಸ ಸುಗ್ರೀವಾಜ್ಞೆಯನ್ನು ಸರ್ಕಾರ ಹೊರಡಿಸಿತು. ಚಳವಳಿಯಲ್ಲಿ ದೇಶೀಯ ಸಂಸ್ಥಾನದ ಜನರು ಭಾಗವಹಿಸದಂತೆ ಬ್ರಿಟಿಷ್ ದೊರೆಗಳು ನಿಷೇಧಾಜ್ಞೆಯನ್ನು ಹೊರಡಿಸಿದರು. ಹೈದರಾಬಾದಿನ ನಿಜಾಮ ಮತ್ತು ಮೈಸೂರಿನ ಮಹಾರಾಜರು ಈ ನಿಬಂಧನೆಯನ್ನು ಸ್ವೀಕರಿಸಿದರು.[೨೯] ನಿಜಾಮ್ ಹೀಗೆ ಘೋಷಿಸಿದರು: 'ನಿಜಾಮ್ ಅಥವಾ ಬ್ರಿಟಿಷರ ಸ್ನೇಹಿತರು ಅಥವಾ ಶತ್ರುಗಳು ಇಬ್ಬರಿಗೂ ಮಿತ್ರರು ಹಾಗೂ ಶತ್ರುಗಳಾಗಿರುತ್ತಾರೆ' . ಹಾಗೆ ಘೋಷಣೆಯಾದ ಬಳಿಕ ದೇಶೀಯರ ದೇಶೀಯತೆಗೆ ಯಾವ ಪುರಾವೆಯೂ ಉಳಿಯಲಿಲ್ಲವಾಗಿ ದೇಶೀಯ ಆಳರಸರು ವಸಾಹತುಶಾಹಿಯ ಆಧಾರಸ್ತಂಭವೆನ್ನುವ ನಿಜವನ್ನು ಸಾಬೀತುಗೊಳಿಸಿದರು.[೩೦]

ಉಪ್ಪಿನ ಸತ್ಯಾಗ್ರಹ ಈಗಾಗಲೇ ತಿಳಿಸಿದಂತೆ ಒಂದು ಆರಂಭ ಮಾತ್ರ. ಬಾಯ್‌ಕಾಟ್ ಚಳವಳಿಯನ್ನು ಜನರು ಹೆಚ್ಚು ತ್ವರಿತವಾಗಿ ಮುಂದುವರಿಸಿದರು. ಈ ಕಾರ್ಯಕ್ರಮದ ಬಾಯ್‌ಕಾಟ್ ಮತ್ತು ಪಿಕೆಟಿಂಗ್ ವಿಭಾಗವನ್ನು ಮಹಿಳೆಯರು ನೋಡಿಕೊಳ್ಳುತ್ತಿದ್ದರು. ಮೇ ೧೭ರಂದು ಕೆ.ಪಿ.ಸಿ.ಸಿ.ಯ ತನ್ನ ಸಭೆಯಲ್ಲಿ ಸರ್‌ದಾರ್ ಕೆ.ವಿ. ವೆಂಕಟರಾಮಯ್ಯನವರ ಉಸ್ತುವಾರಿಯಲ್ಲಿ ಈ ಕಾರ್ಯಕ್ರಮಗಳನ್ನು ನಡೆಸುವುದೆಂದು ಮಂಜೂರು ಮಾಡಿತು. ಸರ್ವವ್ಯಾಪಿ ಮುಗ್ಗಟ್ಟು (Economic Crisis) ಕೂಡ ಜನರನ್ನು ಆ ಚಳವಳಿಯಲ್ಲಿ ಭಾಗವಹಿಸುವಂತೆ ಪ್ರೇರೇಪಿಸಿರಬಹುದು.

ಧ್ವಜಾರೋಹಣವನ್ನು ಮೈಸೂರಿನಲ್ಲಿ ನಿಷೇಧಿಸಿದ್ದರು. ಜನವರಿ ೨೬ರಂದು ಇಬ್ಬರು ಕಾಂಗ್ರೆಸ್ ಕಾರ್ಯಕರ್ತರು ಧ್ವಜಾರೋಹಣ ಮಾಡಲು ಪ್ರಯತ್ನಿಸಿದಾಗ ಅವರನ್ನು ದಸ್ತಗಿರಿ ಮಾಡಿ ನ್ಯಾಯಾಲಯಕ್ಕೆ ಹಾಜರು ಪಡಿಸಲಾಯಿತು. ರಾಷ್ಟ್ರೀಯವಾದವು ನ್ಯಾಯಾಂಗವನ್ನೂ ಮುಟ್ಟಿತ್ತು ಎನ್ನುವುದಕ್ಕೆ ನಗರ ನ್ಯಾಯಾಧೀಶರು ನೀಡಿದ ತೀರ್ಪೇ ಸಾಕ್ಷಿಯಾಗಿದೆ; ಧ್ವಜಾರೋಹಣ ಮಾಡಲು ಕೇವಲ ಪ್ರಯತ್ನಿಸಿದ ಮಾತ್ರಕ್ಕೆ ಅದನ್ನು ಅಪರಾಧವೆಂದು ಬಗೆಯಲಾಗದೆಂದು ಹೇಳಿ ಆ ಇಬ್ಬರನ್ನೂ ಬಿಡುಗಡೆಗೊಳಿಸಲಾಯಿತು. ವಿಮುಕ್ತವಾಗಿ ಬರವಣಿಗೆಯ ಮೂಲಕ ವಿನಂತಿಸಿಕೊಂಡಲ್ಲಿ ಧ್ವಜವನ್ನು ವಾಪಸ್ಸು ಕೊಡಬೇಕೆಂದು ನ್ಯಾಯಾಧೀಶರು ಪೋಲೀಸಿನವರಿಗೆ ತಿಳಿಸಿದರು.[೩೧] ವಿದ್ಯಾರ್ಥಿಗಳು ಹೆಚ್ಚು ಹೆಚ್ಚಾಗಿ ಭಾಗವಹಿಸುತ್ತಿದುದನ್ನು ತಡೆಯಲು ಉಗ್ರಶಿಕ್ಷೆಯಾಗುವುದೆಂದು ಅವರನ್ನು ಹೆದರಿಸಲಾಯಿತು. ಕೊಡಗಿನಲ್ಲಿ ಅನೇಕರು ಹೋರಾಟದಲ್ಲಿ ಭಾಗವಹಿಸಿ ಜೈಲುವಾಸ ಅನುಭವಿಸಿದರು.

ಸಮಾವೇಶಗಳ ಮೂಲಕ ಯುವಕರು ಮತ್ತು ವಿದ್ಯಾರ್ಥಿಗಳನ್ನು ಸಂಘಟಿಸಲಾಯಿತು; ಅಂಥ ಒಂದು ಸಮಾವೇಶದಲ್ಲಿ ಮೈಸೂರಿನ ದಿವಾನರು ಹೇಳಿಕೆ ನೀಡಿ ವಿದ್ಯಾರ್ಥಿಗಳು ವೃತ್ತಿಪರ ಚಳವಳಿಗಾರರ ವಿರುದ್ಧ ಎಚ್ಚರಿಕೆಯಿಂದ ಇರಬೇಕೆಂದು ನುಡಿದಾಗ, ನೆರೆದಿದ್ದವರು ಅಂಥ ವೃತ್ತಿಪರ ಚಳವಳಿಗಾರರು ಯಾರು ಎಂದು ಹೇಳಿ ಎಂದು ಆಗ್ರಹಪಡಿಸಿದರು.

ಗಾಂಧೀಜಿಯವರ ದಸ್ತಗಿರಿಯ ನಂತರ ಚಳವಳಿ ಉಗ್ರರೂಪ ತಾಳಿತು. ಪಾನನಿರೋಧ ಹಾಗೂ ಅರಣ್ಯ ಸತ್ಯಾಗ್ರಹಗಳೂ 'ಸಹ ಉಗ್ರವಾದವು. ಉತ್ತರ ಕರ್ನಾಟಕಕ್ಕೆ ಸರ್‌ದಾರ್ ಪಟೇಲರು ಭೇಟಿ ನೀಡಿದುದು ಹಾಗೂ ಬಾರ್ಡೋಲಿ ಸತ್ಯಾಗ್ರಹವನ್ನು ಬಹಿರಂಗ ಸಭೆಗಳಲ್ಲಿ ಅವರು ವಿಶದವಾಗಿ ವರ್ಣಿಸಿದ ರೀತಿಯಿಂದ ಜನರು ರೊಚ್ಚಿಗೆದ್ದರು. ಸೇಂದಿ ಕಂತ್ರಾಟುದಾರರ ಕಡೆಯ ಗೂಂಡಾಗಳು ಮತ್ತು ಪೋಲೀಸಿನವರು ಪಿಕೆಟ್ ಮಾಡುವವರನ್ನು ಮತ್ತು ಅರಣ್ಯ ಸತ್ಯಾಗ್ರಹಿಗಳನ್ನು ಥಳಿಸುವ ದೃಶ್ಯ ಸರ್ವೇಸಾಮಾನ್ಯವಾಗಿತ್ತು. ಪಿಕೆಟಿಂಗುಗಳಿಗೆ ಹೆದರಿ ಹರಾಜಿಗೆ ಬಿಡ್ಡರುಗಳು ಹೋಗದ ಕಾರಣ ಸರ್ಕಾರಕ್ಕೆ ಬರಬೇಕಾದ ವರಮಾನ ಗಣನೀಯ ಪ್ರಮಾಣದಲ್ಲಿ ಇಳಿಮುಖವಾಯಿತು. ಹೆಂಗಸರು ಮತ್ತು ವಿದ್ಯಾರ್ಥಿ ಸ್ವಯಂಸೇವಕರು ಮನೆ ಮನೆಗೆ ಹೋಗಿ ವಿದೇಶಿ ವಸ್ತ್ರಗಳನ್ನು ಸಂಗ್ರಹಿಸಿ ಹೊರಗೆ ಸಾರ್ವಜನಿಕವಾಗಿ ಬೆಂಕಿ ಹಾಕಿ ಸುಟ್ಟರು.[೩೨]

ಕರ್ನಾಟಕದ ಪಶ್ಚಿಮ ಭಾಗದ ಮಲೆನಾಡು ಪ್ರದೇಶಗಳಾದ ಸಿರ್ಸಿ ಹಾಗೂ ಸಿದ್ಧಾಪುರ ತಾಲ್ಲೂಕುಗಳು ಅರಣ್ಯ ಸತ್ಯಾಗ್ರಹದ ಕೇಂದ್ರಗಳಾದವು. ಜನರ ಭಾವನೆಗಳನ್ನು ಅರಿತುಕೊಂಡ ಸರ್ಕಾರವು ಕಾನೂನು ಭಂಗ ಮಾಡುವವರ ವಿರುದ್ಧ ಉಗ್ರಕ್ರಮ ಕೈಗೊಳ್ಳುವುದಾಗಿ ಎಚ್ಚರಿಸಿತು. ಸಾವಿರಾರು ಜನ ಸತ್ಯಾಗ್ರಹಿಗಳು ಬೇರೆ ಬೇರೆ ಕೇಂದ್ರಗಳಿಂದ ಗೊತ್ತಾದ ಸ್ಥಳದ ಕಡೆ ಹೊರಟಿದ್ದರು. ರಾಷ್ಟ್ರೀಯ ಕರ್ತವ್ಯವನ್ನು ಪರಿಪಾಲಿಸಲು ಉತ್ತೇಜನ ನೀಡಿ ಮಹಿಳೆಯರು ಹೃತ್ಪೂರ್ವಕವಾಗಿ ವಿದಾಯ ಹೇಳಿ ಕಳುಹಿಸುತ್ತಿದ್ದರು. ಮರಗಳನ್ನು

ಉರುಳಿಸಿ, ಗಾಡಿಗಳಿಗೆ ತುಂಬಿದರು. ಅನೇಕರು ಬಹಿರಂಗವಾಗಿ ಮರದ ಕೊಂಬೆಗಳನ್ನು ತೆಗೆದುಕೊಂಡು ಹೋಗಿ ಸಿರ್ಸಿಯಲ್ಲಿ ಹರಾಜು ಮಾಡಿದರು. ಯಾವುದೋ ಹಬ್ಬದ ಸಡಗರವೆಂಬಂತೆ ಸಾವಿರಾರು ಜನರು ಅಲ್ಲಿ ನೆರೆಯುತ್ತಿದ್ದರು.

ನಸುಕಿನಲ್ಲೇ ಸತ್ಯಾಗ್ರಹಿಗಳನ್ನು ಚೆನ್ನಾಗಿ ಥಳಿಸಿ ದಸ್ತಗಿರಿ ಮಾಡುವುದನ್ನು ಪೋಲೀಸಿನವರು ರೂಢಿ ಮಾಡಿಕೊಂಡಿದ್ದರು. ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಹೊರಗೆ ಬಂದು ಸತ್ಯಾಗ್ರಹಿಗಳನ್ನು ಕೂಡಿಕೊಂಡರು. ಈ ಹೋರಾಟದ ಒಂದು ರೋಚಕವಾದ ಪ್ರಸಂಗವನ್ನು ಕೆಳಗೆ ದಾಖಲು ಮಾಡಲಾಗಿದೆ.

'ಅರಣ್ಯ ಕಾನೂನನ್ನು ಮುರಿಯುವುದಕ್ಕೆ ಮೊದಲೇ ಶಾಂಭಟ್ಟ ಬಿಸಿಲಕೊಪ್ಪ ಮುಕ್ಕುಂಟಿಯವರನ್ನು ದಸ್ತಗಿರಿ ಮಾಡಲಾಗಿತ್ತು. ತಕ್ಷಣವೇ ಹೋಗಿ ಅವರ ಪತ್ನಿ ತಾವೂ ಕೂಡ ಒಂದು ಮರವನ್ನು ಕಡಿದರು. ತಾವೂ ಕೂಡ ಕಾನೂನುಭಂಗ ಮಾಡಿರುವುದರಿಂದ ಈಗ ತನ್ನನ್ನೂ ದಸ್ತಗಿರಿ ಮಾಡಬೇಕೆಂದು ಅವರು ಪೋಲೀಸಿನವರನ್ನು ಕೇಳಿದರು. ಅವರನ್ನು ದಸ್ತಗಿರಿ ಮಾಡಲಾಗದೆಂದು ಪೋಲೀಸಿನವರು ತಿಳಿಸಿದಾಗ, ಆ ಮಹಿಳೆ ಪೋಲೀಸಿನವರ ದ್ವಂದ್ವ ನೀತಿಯನ್ನು ಅಣಕಿಸಿ ಅವರ ಹೇಡಿತನವನ್ನು ಮೂದಲಿಸಲು ಅವರಿಗೆ ಬಳೆಗಳನ್ನು ಕೊಟ್ಟಿದ್ದನ್ನು ಅಲ್ಲಿ ನೆರೆದಿದ್ದವರೆಲ್ಲ ನೋಡಿದರು. ಯಾವ ಪಕ್ಷಕ್ಕೂ ಸೇರದ ಗಲಿಬಿಲಿಗೊಂಡಿದ್ದ ಜನರು ಇಂಥ ನೂರಾರು ಘಟನೆಗಳಿಂದ ಸ್ಫೂರ್ತಿ ಪಡೆದರು.[೩೩]

ಕರ್ನಾಟಕದ ಹೋರಾಟದ ಈ ಘಟ್ಟದಲ್ಲಿ ನಡೆದ ಘಟನೆಗಳಲ್ಲೆಲ್ಲಾ ಸಿರ್ಸಿ ಹಾಗೂ ಸಿದ್ಧಾಪುರಗಳಲ್ಲಿ ನಡೆದ ಕರನಿರಾಕರಣೆ ಆಂದೋಲನ ಅತ್ಯಂತ ಗಮನಾರ್ಹವಾದ ಘಟನೆಯಾಗಿ ಚರಿತ್ರೆಯಲ್ಲಿ ದಾಖಲಾಗಿದೆ. ಈ ಹೋರಾಟದಿಂದ ವಿಶೇಷವಾಗಿ ರೈತಾಪಿವರ್ಗದವರ ಮೇಲೆ ಘೋರವಾದ ಪರಿಣಾಮ ಉಂಟಾಯಿತು. ಸಾವಿರಾರು ಜನರು ಇದರ ಪರಿಣಾಮವಾಗಿ ಆಸ್ತಿ ಪಾಸ್ತಿ, ಮನೆ, ದನ-ಕರುಗಳು ಹಾಗೂ ಪಾತ್ರೆ-ಪಡಗಗಳನ್ನು ಕಳೆದುಕೊಂಡು ನಷ್ಟ ಅನುಭವಿಸಿದರು. ಆದರೆ ರಾಜಕೀಯ ಪ್ರಜ್ಞೆ ಅಷ್ಟು ಮೂಡದ ರೈತಾಪಿ ಜನರನ್ನು ಹುರಿದುಂಬಿಸುವ ಕಾರ್ಯವನ್ನು ಮುಂದುವರಿಸಬೇಕಾದ ಅಗತ್ಯವಿತ್ತು.

ಜಾಗತಿಕವಾಗಿ ವ್ಯಾಪಿಸಿದ್ದ ಆರ್ಥಿಕ ಮುಗ್ಗಟ್ಟಿನ ಪರಿಣಾಮದಿಂದ ಗಂಭೀರವಾಗಿ ತೊಂದರೆ ಅನುಭವಿಸುತ್ತಿದ್ದ ರೈತರು ಈಗ ಇನ್ನೂ ಹೆಚ್ಚಿನ ಸಂಕಷ್ಟಕ್ಕೆ ಸಿಲುಕಿದರು. ಕೃಷಿ ಭೂಮಿಯ ಮೇಲೆ ಸರ್ಕಾರದವರು ಯಾವ ರೀತಿಯಲ್ಲಿ ಕಂದಾಯ ವಿಧಿಸಿದರೆಂದು ಈಗಾಗಲೇ ಗಮನಿಸಿದ್ದೇವೆ; ಈ ದುಬಾರಿ ಕಂದಾಯದ ಪರಿಣಾಮವಾಗಿ ಜನರು ಸಿರ್ಸಿ, ಸಿದ್ಧಾಪುರಗಳನ್ನು ಬಿಟ್ಟು ದೂರ ಹೋಗುವಂಥ ಪರಿಸ್ಥಿತಿ ನಿರ್ಮಾಣವಾಯಿತು. ಈ ತಾಲ್ಲೂಕುಗಳ ಬಹು ಸಂಖ್ಯಾತ ಮಂದಿ ನಾಡವ ಜನಾಂಗಕ್ಕೆ ಸೇರಿದವರಾಗಿದ್ದು ಅವರು ಬಹಳ ಕಷ್ಟ ಸಹಿಷ್ಣುಗಳಾಗಿದ್ದರಲ್ಲದೆ, ತುಂಬಾ ಶ್ರಮವಹಿಸಿ ದುಡಿಯುವವರು ಹಾಗೂ ಪ್ರಾಮಾಣಿಕತೆಗೆ ಹೆಸರಾದವರು. ಅವರಲ್ಲಿ ಬಹುತೇಕರು ಸಣ್ಣ ಒಡುವಳಿದಾರರಾಗಿದ್ದು ಜೀವನ ನಿರ್ವಹಣೆಗಾಗಿ ತುಂಬಾ ಪರಿತಪಿಸುವಂಥ ಪರಿಸ್ಥಿತಿ ಇತ್ತು. ಜಾಗತಿಕ ಮುಗ್ಗಟ್ಟಿನ ಹೊಡೆತ ಒಂದು ಕಡೆ ಮತ್ತು ಸರ್ಕಾರ ಹೆಚ್ಚಿಸಿದ ಭೂಕಂದಾಯದ ದುಬಾರಿ ಇನ್ನೊಂದು ಕಡೆ- ಹೀಗೆ ಇಬ್ಬಗೆಯ ಹೊಡೆತಕ್ಕೆ ಸಿಕ್ಕ ರೈತರು ಕಂದಾಯ ನೀಡಲಾಗದೆ ಕಂಗಾಲಾಗಿದ್ದರು. ಒಂದು ಅರ್ಥದಲ್ಲಿ 'ಕರನಿರಾಕರಣೆ' ಆಗಲೇ ಪ್ರಾರಂಭವಾಗಿದ್ದರೂ ವಿಧ್ಯುಕ್ತವಾಗಿ ಘೋಷಣೆಯಾಗಿರಲಿಲ್ಲ.

ಅಂಥ ಸಂದರ್ಭದಲ್ಲಿಯೇ 'ಕರನಿರಾಕರಣೆ'ಯ ರಾಷ್ಟ್ರೀಯ ಆಂದೋಲನ ಯೋಜಿತವಾದದ್ದು. ಡಿ.ಪಿ. ಕರ್ಮರ್ಕರ್, ದಿವಾಕರ್ ಹಾಗೂ ಪಂಜೀಕರ್ ಕೃಷ್ಣಾಬಾಯ್'ಯಂಥ ಕಾಂಗ್ರೆಸ್ ನಾಯಕರನ್ನು

ಅಂಕೋಲಕ್ಕೆ ಕಳುಹಿಸಿ ಅಲ್ಲಿ ಪರಿಸ್ಥಿತಿಯನ್ನು ಅಧ್ಯಯನ ಮಾಡಿ ರೈತರನ್ನು ಸಿದ್ಧಗೊಳಿಸಲು ತಿಳಿಸಲಾಗಿತ್ತು. ಸುರ್ವೆ ಎಂಬ ಗ್ರಾಮದಲ್ಲಿ ಪ್ರಧಾನವಾದ ರೈತರ ಸಭೆಯನ್ನು ಸೇರಿಸಿದರು. ಅವರಲ್ಲಿ ಬಸಗೋಡ್ ರಾಮನಾಯಕ್, ಜೋಶಿ ಬೊಮ್ಮಣ್ಣ ಹಾಗೂ ವಂದಿಗೆ ಹನುಮಣ್ಣ ನಾಯಕ್ ಮುಖ್ಯರಾದವರು. ಉಪ್ಪಿನ ಕಾನೂನನ್ನು ಉಲ್ಲಂಘನೆ ಮಾಡಿದ ಕಾರಣದಿಂದ ಜೈಲು ಶಿಕ್ಷೆ ಅನುಭವಿಸಿ ಬಿಡುಗಡೆಯಾಗಿ ಹೊರಗೆ ಬಂದಿದ್ದ ಜೋಗಿನಾಯಕ್ ಎಂಬುವವರು ಸಭೆಯಲ್ಲಿ ಭಾಗವಹಿಸಿದ್ದುದರಿಂದ ಅಲ್ಲಿ ನೆರೆದಿದ್ದವರಿಗೆಲ್ಲಾ ಹೊಸ ಚೈತನ್ಯ ಮೂಡಿದಂತಾಗಿತ್ತು. ಬಾರ್ಡೋಲಿ ಸತ್ಯಾಗ್ರಹದ ಸ್ಪಷ್ಟ ಚಿತ್ರವನ್ನೂ, ರೈತರ ಕಷ್ಟನ್ನು ಪ್ರಕಟಿಸುವ ಪ್ರಸಂಗವನ್ನು ಅಲ್ಲಿ ವರ್ಣಿಸಲಾಯಿತು.

ರೈತರು ಮುಖಂಡರುಗಳ ಮಾತುಗಳನ್ನು ಕೇಳಿದರು; ಅದರಲ್ಲೂ ವಿಶೇಷವಾಗಿ ಅವರ ಪೈಕಿ ಮನಮುಟ್ಟುವಂತೆ ಮಾತನಾಡಿದ ದಿವಾಕರರ ಭಾಷಣವನ್ನು ತುಂಬಾ ಗಮನವಿಟ್ಟು ಕೇಳಿಸಿಕೊಂಡರು. ಬಸಗೋಡ್ ರಾಮ್‌ನಾಯಕ್‌ರು ಮೌನ ಮುರಿದು ಮಾತನಾಡಿ ಮಾದರಿ ಹಾಕಿಕೊಟ್ಟರು. ಸಭೆಗೆ ಅವರು ತಮ್ಮ ವಿಶಿಷ್ಟವಾದ ಶೈಲಿಯಲ್ಲಿ ಹೇಳಿದರು '......ಇಹ ಲೋಕದ ಬದುಕು ನಶ್ವರವಾಗಿರಬಹುದು ಆದರೆ ತ್ಯಾಗದಿಂದ ಲಭ್ಯವಾಗುವ ಕೀರ್ತಿ ಅಮರವಾದುದು'. ಜೋಗಿ ನಾಯಕರು ಹಿಂಜರಿಕೆಯನ್ನು ಬಿಟ್ಟು ಮಹಾತ್ಮರನ್ನು ಕೂಡಿಕೊಳ್ಳಬೇಕೆಂದು ನೆರೆದಿದ್ದವರನ್ನು ಆಗ್ರಹಪಡಿಸಿದರು. ಉಳಿದವರೂ ಇವರನ್ನು ಅನುಸರಿಸಿದರು. ಮುಂದೆ ಇರುವ ತೊಂದರೆಗಳನ್ನು ಚೆನ್ನಾಗಿ ಅರಿತೂ ಕೂಡ ಮುಂದುವರಿಯಲು ಸಂಕಲ್ಪ ಮಾಡಿದ್ದ ಕಾರಣ ಈ ಸಭೆಯು ಚಾರಿತ್ರಿಕವಾದದ್ದಾಗಿತ್ತು; ರಾಷ್ಟ್ರಕ್ಕೆ ಅಚಲವಾದ ನಿಷ್ಠೆಯನ್ನು ತೋರುತ್ತಾ ಗಾಂಧೀಜಿಯವರ ಪಂಥವನ್ನು ಅನುಸರಿಸಲು ಎಲ್ಲರೂ ಪ್ರಮಾಣ ಮಾಡಿದ್ದರು.

ಪುರುಷರೊಡನೆ ಭಾಗವಹಿಸಿದ್ದಂಥಾ ಮಹಿಳೆ ಒಬ್ಬರು, ಜನತೆ ಎಂಥ ತ್ಯಾಗಕ್ಕೂ ಸಿದ್ಧರಾಗಬೇಕೆಂದು ಆಗ್ರಹಪಡಿಸಿದಾಗ ಗ್ರಾಮದ ಜನರ ಮೇಲೆ ತುಂಬಾ ಪರಿಣಾಮ ಬೀರಿತು. ಪಂಜೀಕರ್ ಕೃಷ್ಣಾಬಾಯಿಯವರ ಹಾಜರಿ ಕೂಡ ಮಂತ್ರದಂತೆ ಕೆಲಸ ಮಾಡಿತು. ಗ್ರಾಮದ ಪಟೇಲರು ರಾಜೀನಾಮೆ ಕೊಡಬೇಕೆಂದು ನಾಡವ ಜನಾಂಗದ ಮುಖಂಡರು ಕರೆಕೊಟ್ಟಾಗ ವಾಸರೆ ಸುಬ್ಬರಾಯ ನಾಯಕರು ಮೊದಲು ರಾಜೀನಾಮೆ ನೀಡಿದರು. ಉಳಿದವರು ಅವರನ್ನು ಅನುಸರಿಸಿದರು. ಕಾರ್ಯಕ್ರಮಕ್ಕೆ ಅಂತಿಮರೂಪ ಕೊಡುವ ದಿಶೆಯಲ್ಲಿ ಜನರನ್ನು ಸಿದ್ಧಗೊಳಿಸಲು ಅವರು ಎಲ್ಲ ಗ್ರಾಮಗಳಿಗೆ ಭೇಟಿ ಕೊಟ್ಟರು. ಡಿ.ಪಿ. ಕರ್‌ಮರಕರ್‌ರವರು ಈ ಆಂದೋಲನದ ಮುಖಂಡರೆಂದು ನೇಮಕವಾದರು. ರಾಜ್ಯದ ಬೇರೆ ಬೇರೆ ಭಾಗಗಳಿಂದ ಸತ್ಯಾಗ್ರಹಿಗಳು ಉತ್ತರ ಕನ್ನಡ ಜಿಲ್ಲೆಯ ಗ್ರಾಮಗಳಿಗೆ ಬರತೊಡಗಿದರು.

ಬೇರೆ ಬೇರೆ ಕೇಂದ್ರಗಳಲ್ಲಿ ಶಿಬಿರಗಳನ್ನು ಪ್ರಾರಂಭಿಸಿ ಭಾರತೀಯ ಸೇವಾದಳದ ಸ್ವಯಂಸೇವಕರು ಇವುಗಳ ಉಸ್ತುವಾರಿಗೆ ನೇಮಕವಾದರು. ರಾಷ್ಟ್ರದ ಬೇರೆ ಬೇರೆ ಭಾಗಗಳಲ್ಲಿ ಇದೇ ಬಗೆಯ ಆಂದೋಲನಗಳು ಆರಂಭವಾಗಿರುವ ಸುದ್ದಿ ಪ್ರಸಾರವಾಗಿ ಜನರಲ್ಲಿ ಹೆಚ್ಚಿನ ಉತ್ಸಾಹ ಉಂಟಾಗಿ ಹೋರಾಟವನ್ನು ಮುಂದುವರಿಸುವ ಅವರ ಸಂಕಲ್ಪ ಹೆಚ್ಚು ಸದೃಢವಾಯಿತು.

ಗಾಂಧೀಜಿಯವರ ದಸ್ತಗಿರಿಯಾಗಿದ್ದರೂ ಸರ್ಕಾರವು ಮುಂದಿನ ಕಾರ್ಯಕ್ರಮ ಕೈಗೊಳ್ಳದೆ ಮೀನಾಮೇಷ ಎಣಿಸತೊಡಗಿತು. ಆದರೆ ಪ್ರಾಂತೀಯ ಸರ್ಕಾರಗಳು ಹಾಗೂ ದೇಶೀಯ ಸಂಸ್ಥಾನಗಳಿಗೆ ಚಳವಳಿಯನ್ನು ಹತ್ತಿಕ್ಕಲು ಸಂಪೂರ್ಣವಾದ ಸ್ವಾತಂತ್ರ್ಯ ನೀಡಲಾಯಿತು. ಅಲ್ಲದೆ ಚಳವಳಿಗೆ ಸಂಬಂಧಿಸಿದ ಯಾವುದೇ ಸಂಘಟನೆಯನ್ನು ಮುರಿಯುವ ಅಧಿಕಾರ ನೀಡಲಾಯಿತು. ಸೈಮನ್ ಕಮೀಷನ್ನಿನ ವರದಿಯ ಪ್ರಕಟಣೆಯಿಂದಾಗಿ

ಹೆಚ್ಚು ಪ್ರತಿಭಟನೆಗಳು ಕಾಣಿಸಿಕೊಂಡವು. ರಾಜೀ ಸೂತ್ರವನ್ನು ನಿರೀಕ್ಷಿಸಿದ್ದ ವಸಾಹತುಶಾಹಿಗಳು ಕಡೆಯ ಪಕ್ಷ ಎರಡನೆಯ ದುಂಡುಮೇಜಿನ ಪರಿಷತ್ತಿನಲ್ಲಾದರೂ ಕಾಂಗ್ರೆಸ್ ಭಾಗವಹಿಸುವುದಾಗಿ ಭಾವಿಸಿದ್ದರು. ಜನವರಿ ೨೫ರಂದು ಗಾಂಧೀಜಿಯವರನ್ನು ಬೇಷರತ್ತಾಗಿ ಬಿಡುಗಡೆ ಮಾಡಲಾಯಿತು. ಸರ್ಕಾರ ಮತ್ತು ಕಾಂಗ್ರೆಸ್ಸಿನ ನಡುವೆ ನಿರಾಂತಕವಾಗಿ ಚರ್ಚೆ ನಡೆಯಲೆಂಬ ಉದ್ದೇಶದಿಂದ ಉಳಿದ ಮುಖಂಡರುಗಳನ್ನೂ ಬಿಡುಗಡೆ ಮಾಡಲಾಯಿತು.

ಕಾಂಗ್ರೆಸ್ಸು ಕಾರ್ಯಕಾರಿ ಸಮಿತಿಯಿಂದ ಅಧಿಕೃತವಾಗಿ ಗಾಂಧೀಜಿಯವರು ವೈಸ್‌ರಾಯಿಯನ್ನು ಭೇಟಿ ಮಾಡಿ ಎರಡು ವಾರಗಳ ಕಾಲ ಸುಧೀರ್ಘವಾದ ಚರ್ಚೆ ನಡೆಸಿದರು–ಈ ಚರ್ಚೆಯು ೫ನೇ ಮಾರ್ಚಿ ೧೯೩೧ರಂದು ರಚಿತವಾದ ಗಾಂಧೀ–ಇರ್ವಿನ್ ಒಪ್ಪಂದದಲ್ಲಿ ಪರ್ಯಾವಸನಗೊಂಡಿತು. ರಾಜಕೀಯ ಖೈದಿಗಳ ಬಿಡುಗಡೆ, ಕರಾವಳಿಯ ಉದ್ದಕ್ಕೆ ಗ್ರಾಮದ ಜನರು ಉಪಯೋಗಕ್ಕಾಗಿ ಉಪ್ಪನ್ನು ತಯಾರಿಸಿಕೊಳ್ಳುವ ಹಕ್ಕು, ವಶಪಡಿಸಿಕೊಂಡ ಪದಾರ್ಥಗಳನ್ನು ಹಿಂತಿರುಗಿಸುವುದು, ಶಾಂತಿಯುತವಾಗಿ ಪಿಕೆಟಿಂಗ್ ಮಾಡುವ ಹಕ್ಕು ಇತ್ಯಾದಿಗಳನ್ನು ಸರ್ಕಾರ ನೀಡಿತಾದರೂ ಉಳಿದ ಅನೇಕ ನಿಬಂಧನೆಗಳಿಗೆ ಸಮ್ಮತಿಸಲಿಲ್ಲ. ಅಸಹಕಾರ ಚಳವಳಿಯನ್ನು ಕೈಬಿಡುವುದಾಗಿ ಕಾಂಗ್ರೆಸ್ ಒಪ್ಪಿಕೊಂಡಿತಲ್ಲದೆ ಎರಡನೇ ದುಂಡು ಮೇಜಿನ ಪರಿಷತ್ತಿನಲ್ಲಿ ಭಾಗವಹಿಸುವುದಾಗಿ ಸೂಚ್ಯವಾಗಿ ತಿಳಿಸಿತ್ತು.

ಅಧಿಕೃತವಾಗಿ ಅಸಹಕಾರ ಚಳವಳಿಯನ್ನು ಸ್ಥಗಿತಗೊಳಿಸುವುದಾಗಿ ಕಾಂಗ್ರೆಸ್ ಒಪ್ಪಿಗೆ ನೀಡಿತ್ತಾದರೂ ಕರ್ನಾಟಕದ ಜನರು, ಅದರಲ್ಲೂ ವಿಶೇಷವಾಗಿ ಕರಾವಳಿ ಮತ್ತು ಮಲೆನಾಡಿನ ಜನರು ಇನ್ನೂ ತಮ್ಮ ಶಕ್ತಿ ಪ್ರದರ್ಶನ ಮಾಡುವುದಿತ್ತು. ಉತ್ತರ ಪ್ರದೇಶದಲ್ಲಿಯೂ ಸಹ ಕೆಲವು ಭಾಗದ ಜನರು ತಮ್ಮ ಶಕ್ತಿಯನ್ನು ಸಂಪೂರ್ಣವಾಗಿ ಪ್ರದರ್ಶಿಸಿರಲಿಲ್ಲ. ಉಳಿದ ಭಾಗಗಳಲ್ಲಿ ಜನರ ಪ್ರತಿಕ್ರಿಯೆ ಹೆಚ್ಚೂ ಕಡಿಮೆ ಇಳಿಮುಖವಾಗಿತ್ತು. ಕಾಂಗ್ರೆಸ್ ನಾಯಕರು ತಮ್ಮೊಡನೆ ಸಕ್ರಿಯವಾಗಿ ಸಹಕರಿಸುತ್ತಿರಲಿ ಬಿಡಲಿ ಉತ್ತರ ಕರ್ನಾಟಕದ ರೈತರು ಮಾತ್ರ ಕರನಿರಾಕರಣೆ ಆಂದೋಲನವನ್ನು ಮುಂದುವರಿಸಿಕೊಂಡು ಹೋಗುವುದಾಗಿ ನಿರ್ಧರಿಸಿದ್ದರು. ಗಾಂಧೀ–ಇರ್ವಿನ್ ಒಪ್ಪಂದದ ನಂತರ ರೈತರು ತೆರಿಗೆ ನೀಡಲು ಸಮ್ಮತಿಸುವರೆಂದು ಸರ್ಕಾರ ನಿರೀಕ್ಷಿಸಿತ್ತು. ಆದರೆ ತೆರಿಗೆ ಕೊಡಲು ನಿರಾಕರಿಸಿದರಷ್ಟೇ ಅಲ್ಲ ಅಧಿಕಾರಿಗಳನ್ನೂ ಸಹ ರೈತರು ಬಹಿಷ್ಕರಿಸಿದರು. ಉದ್ಭವವಾಗುವ ಪರಿಸ್ಥಿತಿಯನ್ನು ಎದುರಿಸಲು ಕೆಲವು ರೈತರು ಎಷ್ಟು ಚೆನ್ನಾಗಿ ಮುಂಜಾಗ್ರತಾ ಕ್ರಮವನ್ನು ಅನುಸರಿಸಿದ್ದರೆಂದರೆ, ಅಧಿಕಾರಿಗಳು ಅವರ ಮನೆಬಳಕೆ ವಸ್ತುಗಳನ್ನು ಮುಟ್ಟುಗೋಲು ಹಾಕಲು ಹೋದಾಗ ಅವರಿಗೆ ಸಿಕ್ಕಿದ್ದು ಕೇವಲ ಹರಕು ಚಿಂದಿ ಮತ್ತು ಮಣ್ಣಿನ ಮಡಿಕೆ–ಕುಡಿಕೆಗಳು, ಏಕೆಂದರೆ ಉಳಿದ ಬೆಲೆ ಬಾಳುವ ಪದಾರ್ಥಗಳನ್ನು ಅವರು ಆ ವೇಳೆಗಾಗಲೇ ಸುರಕ್ಷಿತವಾದ ಸ್ಥಳಗಳಿಗೆ ರವಾನಿಸಿಬಿಟ್ಟಿದ್ದರು. ಅನೇಕ ರೈತರು ಎಷ್ಟು ನಿರ್ಗತಿಕರಾಗಿದ್ದರೆಂದರೆ, ಅವರು ತೆರಿಗೆ ಕೊಡಲು ಮನಸ್ಸಿದ್ದರೂ ಅವರ ಬಳಿ ಕೊಡಲು ಏನೂ ಇರಲಿಲ್ಲ.[೩೪]

ಉತ್ತರ ಕರ್ನಾಟಕದ ಸಿರ್ಸಿ, ಸಿದ್ದಾಪುರದ ರೈತರು ಹಾಗೆಯೇ ಧಾರವಾಡ ಜಿಲ್ಲೆಯ ಹಿರೇಕೆರೂರು ರೈತರು ಹೋರಾಟವನ್ನು ಕೇವಲ ರಾಜಕೀಯ ಕಾರಣಗಳಿಗಲ್ಲದೆ ಆರ್ಥಿಕ ಕಾರಣಗಳಿಗೂ ಮುಂದುವರಿಸಿದ್ದರು. ಸಾಕಷ್ಟು ಬೆಳೆಯಾಗದೆ ನಷ್ಟ ಅನುಭವಿಸಿದ್ದರಿಂದ ಕಂದಾಯ ಮನ್ನಾ ಮಾಡಬೇಕೆಂದು ರೈತರು ಮಾಡಿಕೊಂಡ ಮನವಿಯನ್ನು ಸರ್ಕಾರ ಮಾನ್ಯ ಮಾಡಲಿಲ್ಲ. ಈ ಪ್ರಾಂತ್ಯದ ರೈತರು ಅಸಹಕಾರ ಚಳವಳಿಯ ಮುಂಚೂಣಿಯಲ್ಲಿದ್ದದ್ದರಿಂದ ಸರ್ಕಾರವು ಅವರ ಬಗ್ಗೆ ಸೇಡಿನ ಮನೋಭಾವನೆಯನ್ನೇ ತಾಳಿತ್ತು. ಈ ಬಾರಿ ಹಳ್ಳಿಕೇರಿ ಗುದ್ಲೆಪ್ಪ ಹಾಗೂ ವೀರಣ್ಣಗೌಡ ಪಾಟೀಲರು ಚಳವಳಿಯ ನೇತೃತ್ವ ವಹಿಸಿದ್ದರು.

೧೯೩೧ರ ಮಾರ್ಚ್ ಕೊನೆಯ ವೇಳೆಗೆ ಗಾಂಧೀಜಿಯವರನ್ನು ಭೇಟಿಯಾಗಿ ದಿವಾಕರ್‌ರವರು ಈ ತಾಲ್ಲೂಕುಗಳ ರೈತರಿಗೆ ಉಂಟಾಗುತ್ತಿದ್ದ ತೊಂದರೆಗಳನ್ನು ವಿಶದವಾಗಿ ತಿಳಿಸಿದ್ದರು. ಈ ನಡುವೆ ತಪ್ಪಿತಸ್ಥರ ಆಸ್ತಿಪಾಸ್ತಿಗಳನ್ನು ಮುಟ್ಟುಗೋಲು ಹಾಕಿಕೊಂಡು ಹರಾಜು ಮಾಡುವ ಕಾರ್ಯದಲ್ಲಿ ಸರ್ಕಾರ ನಿರತವಾಗಿತ್ತು. ಸ್ಥಳೀಯ ಜನರು ಹರಾಜು ಕೂಗಲು ಮುಂದೆ ಬಾರದ ಸಂದರ್ಭದಲ್ಲಿ ಸರ್ಕಾರಿ ಅಧಿಕಾರಿಗಳೇ ಪದಾರ್ಥಗಳನ್ನು ಕೊಂಡುಕೊಂಡರು.

ಸರ್ಕಾರ ಹಾಗೂ ಕಾಂಗ್ರೆಸ್ ಪಕ್ಷ ಎರಡಕ್ಕೂ ಇದು ತುಂಬಾ ಮುಜುಗರದ ಪ್ರಸಂಗವಾಯಿತು. ಕಾಂಗ್ರೆಸ್ ಪಕ್ಷವು ಅಧಿಕೃತವಾಗಿ ಅಸಹಕಾರ ಚಳವಳಿಯನ್ನು ಹಿಂದಕ್ಕೆ ತೆಗೆದುಕೊಂಡಿದ್ದ ಕಾರಣ ಮತ್ತೆ ಚಳವಳಿಯಲ್ಲಿ ಭಾಗವಹಿಸದಂಥ ಪರಿಸ್ಥಿತಿ ಇತ್ತು; ಆದರೆ ಚಳವಳಿಯಲ್ಲಿ ಭಾಗಿಯಾಗದೆ ಹಿಂದೆ ಉಳಿದರೆ ಸಮಸ್ತ ಜನರ ಕೋಪಕ್ಕೆ ಗುರಿಯಾಗುವ ಅಪಾಯವೂ ಇತ್ತು. ಸರ್ಕಾರಕ್ಕೆ ಇದು ಪ್ರತಿಷ್ಠೆಯ ಪ್ರಶ್ನೆಯಾಗಿತ್ತು. ಕಂದಾಯ ವಸೂಲು ಮಾಡದಿದ್ದರೆ ಸೋಲನ್ನು ಒಪ್ಪಿಕೊಂಡಂತಾಗಿತ್ತು; ಬಲವಂತವಾಗಿ ವಸೂಲು ಮಾಡಿದ ಪಕ್ಷದಲ್ಲಿ ಸಾಮಾಜಿಕವಾದ ಬಹಿಷ್ಕಾರವನ್ನು ಎದುರಿಸಬೇಕಾಗಿತ್ತು. ಎಲ್ಲಕ್ಕಿಂತ ಮುಖ್ಯವಾಗಿ ಹೆಂಗಸರು ಮತ್ತು ಮಕ್ಕಳು ಶಾಂತಿಯುತವಾಗಿ ತಡೆಯೊಡ್ಡುವಾಗ ಅವರನ್ನು ಶಿಕ್ಷಿಸಬೇಕಾಗಿತ್ತು.

ಬಲಾತ್ಕಾರವಾಗಿ ಕಂದಾಯ ವಸೂಲು ಮಾಡುವ ಕ್ರಮವನ್ನು ಕೊಂಚ ತಗ್ಗಿಸಬೇಕೆಂದು ಕಾಂಗ್ರೆಸ್ ನಾಯಕರು ಸರ್ಕಾರಕ್ಕೆ ಮನವಿ ಮಾಡಿಕೊಂಡರು. ಆದರೆ ಸಿರ್ಸಿ ಮತ್ತು ಸಿದ್ದಾಪುರದ ಜನರಿಗೆ ಯಾವುದೇ ರೀತಿಯ ರಿಯಾಯ್ತಿ ದೊರೆಯಲಿಲ್ಲ; ನಾನಾ ಸಂಕಷ್ಟಗಳಲ್ಲಿ ತೊಳಲಾಡುತ್ತ ತಮ್ಮ ಹೋರಾಟವನ್ನು ಅವರು ಮುಂದುವರಿಸಿದರು. ಜಿಲ್ಲಾ ಆಡಳಿತದಲ್ಲಿ ಬದಲಾವಣೆಯಾಯಿತಾದರೂ ಅಧಿಕಾರಸ್ಥರ ಕ್ರೌರ್ಯ ಹೆಚ್ಚಾಯಿತು. ಆಸ್ತಿಪಾಸ್ತಿಯನ್ನು ಮುಟ್ಟುಗೋಲು ಹಾಕಿಕೊಂಡು ಜನರನ್ನು ದಸ್ತಗಿರಿ ಮಾಡುವ ಕಾರ್ಯ ವಿವೇಚನಾರಹಿತವಾಗಿ ಸಾಗಿತು. ಇದರ ಪರಿಣಾಮವಾಗಿ, ಅನೇಕ ಕುಟುಂಬಗಳ ಮುಖಂಡರು ತಮ್ಮ ಕುಟುಂಬವು ಹಸಿವಿನಿಂದ ಸಾಯುವ ದಾರುಣ ಪರಿಸ್ಥಿತಿಯನ್ನು ಕಣ್ಣಿಂದ ನೋಡಲಾರದೆ ವಿಷ ಕುಡಿದು ಆತ್ಮಹತ್ಯೆ ಮಾಡಿಕೊಂಡರು. ಸೀಗಲಮನೆ ನಾರಾಯಣ ಭಟ್ಟ ಎಂಬುವವರು ಹಾಗೆ ದೇಹತ್ಯಾಗ ಮಾಡಿದವರಲ್ಲೊಬ್ಬರು. ೧೯೩೧ರ ಮೇ-ಜೂನ್ ತಿಂಗಳುಗಳಲ್ಲಿ ಸೇಠ್ ಜಮುನಾಲಾಲ್ ಬಜಾಜ್ ಅವರು ಈ ತಾಲ್ಲೂಕುಗಳಿಗೆ ಭೇಟಿಕೊಟ್ಟು ತಾವು ಕಂಡ ಹೃದಯ ವಿದ್ರಾವಕ ಪರಿಸ್ಥಿತಿಯ ಬಗ್ಗೆ ಗಾಂಧೀಜಿಯವರಿಗೆ ವಿವರವಾದ ವರದಿಯನ್ನು ಕೊಟ್ಟರು.[೩೫]

ಅಖಿಲ ಭಾರತ ಮಟ್ಟದಲ್ಲಿ ಮಹತ್ತರವಾದ ಬೆಳವಣಿಗೆಗಳಾಗುತ್ತಿದ್ದವು. ಮಾರ್ಚ್ ೧೯೩೧ರ ಕರಾಚಿ ಅಧಿವೇಶನವು, ಮೂಲಭೂತ ಹಕ್ಕುಗಳ ಬಗ್ಗೆ ಒಂದು ಗೊತ್ತುವಳಿಯನ್ನು ಅನುಮೋದಿಸಿತ್ತು ಹಾಗೂ ನಾಗರೀಕ ಮತ್ತು ರಾಜಕೀಯ ಹಕ್ಕುಗಳನ್ನು ನೀಡುವ ರಾಷ್ಟ್ರೀಯ ಆರ್ಥಿಕ ಕಾರ್ಯಕ್ರಮಕ್ಕೂ ಅನುಮೋದನೆ ದೊರೆತಿತ್ತು. ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯವಾದ ಶೋಷಣೆಯನ್ನು ತಾನು ವಿರೋಧಿಸುವುದಾಗಿ ಘೋಷಿಸಿತಲ್ಲದೆ, ಜಾತಿ, ಮತ ಹಾಗೂ ಧರ್ಮದ ಆಧಾರದ ಮೇಲೆ ತಾರತಮ್ಯ ತೋರದೆ ಎಲ್ಲರನ್ನೂ ಸಮಾನವಾಗಿ ಕಾಣುವ ತೀರ್ಮಾನ ಕೈಗೊಂಡಿತು. ಕೃಷಿಕರ ಋಣಭಾರವನ್ನು ತಗ್ಗಿಸುವಂತೆ ಹಾಗೂ ಕೃಷಿ ಕಾರ್ಮಿಕರ ಕನಿಷ್ಠ ವೇತನದಲ್ಲಿ ಹೆಚ್ಚಳ ಮಾಡಿ ಅವರ ಸ್ಥಿತಿಗತಿಗಳನ್ನು ಉತ್ತಮಪಡಿಸುವುದಾಗಿ ಭರವಸೆ ನೀಡಿತು. ಒಟ್ಟಿನಲ್ಲಿ ಕರಾಚಿ ಅಧಿವೇಶನದಲ್ಲಿ ಸ್ಪಷ್ಟವಾದ ಆರ್ಥಿಕ ಹಾಗೂ ರಾಜಕೀಯ ಕಾರ್ಯಕ್ರಮವನ್ನು ಹಾಕಿಕೊಳ್ಳಲಾಯಿತು.[೩೬]

ಗಾಂಧೀಜಿಯವರು ಎರಡನೇ ದುಂಡುಮೇಜಿನ ಪರಿಷತ್ತಿನಲ್ಲಿ ಭಾಗವಹಿಸಿದ್ದರಿಂದ ಹೆಚ್ಚಿನದೇನನ್ನು ನಿರೀಕ್ಷಿಸುವಂತಿರಲಿಲ್ಲ. ಏಕೆಂದರೆ ಭಾರತದ ಮೇಲಿನ ತನ್ನ ಬಿಗಿಮುಷ್ಟಿಯನ್ನು ಬ್ರಿಟನ್ ಸಡಿಲಗೊಳಿಸುವ ಸೂಚನೆಯೇನೂ ಇರಲಿಲ್ಲ. ದುಂಡು ಮೇಜಿನ ಪರಿಷತ್ತಿನಲ್ಲಿ ಭಾಗವಹಿಸುವ ಪ್ರತಿನಿಧಿಗಳು ಚುನಾಯಿತರಾಗದೆ ತನ್ನ ಇಚ್ಛೆಗನುಸಾರವಾಗಿ ನಡೆಯುವವರನ್ನು ವಸಾಹತು ಸರ್ಕಾರ ಆಯ್ದುಕೊಂಡಿತ್ತು. ಕಟ್ಟಾ ಸಾಮ್ರಾಜ್ಯಶಾಹಿಯಾಗಿದ್ದ ವಿಲ್ಲಿಂಗ್‌ಡನ್ ಅವರನ್ನು ಇರ್ವಿನ್ನರ ಸ್ಥಾನದಲ್ಲಿ ಭಾರತದ ವೈಸ್‌ರಾಯಾಗಿ ನೇಮಕ ಮಾಡಲಾಗಿತ್ತು. 'ಬರಿಗೈಲಿ ತಾವು ವಾಪಸ್ಸು' ಬರಬೇಕಾಗಬಹುದೆಂದು ಗಾಂಧೀಜಿ ಮುನ್ನೆಚ್ಚರಿಕೆಯ ಮಾತುಗಳನ್ನಾಡಿದ್ದರು.[೩೭] ೧೯೩೧ರ ಡಿಸೆಂಬರ್‌ನಲ್ಲಿ ಅವರು ಭವಿಷ್ಯ ನುಡಿದಿದ್ದಂತೆ ನಿರಾಶರಾಗಿ ಬರಿಗೈಯ್ಯಲ್ಲಿ ವಾಪಸ್ಸು ಬಂದರು.

ಎಲ್ಲರ ನಿರೀಕ್ಷೆಯನ್ನು ನಿಜಮಾಡುವವರಂತೆ ವಿಲ್ಲಿಂಗ್‌ಡನ್ ಅದುವರೆಗೆ ಕಾಂಗ್ರೆಸ್ ಮತ್ತು ತಮ್ಮ ಪೂರ್ವದ ಅಧಿಕಾರಿಯ ನಡುವೆ ನಡೆದಿದ್ದ ಎಲ್ಲ ಒಪ್ಪಂದಗಳನ್ನು ತಿರಸ್ಕರಿಸಿದರು. ರಾಷ್ಟ್ರವಾದಿಗಳ ಸವಾಲನ್ನು ಎದುರಿಸಲು ಸರ್ಕಾರ ಇನ್ನಷ್ಟು ಉಗ್ರವಾದ ಕಾನೂನುಗಳನ್ನು ಸೃಷ್ಟಿ ಮಾಡಿತು. ಕಾಂಗ್ರೆಸ್ ಕಾರ್ಯಕಾರಿ ಸಮಿತಿ ೨೯ನೇ ಡಿಸೆಂಬರ್‌ನಲ್ಲಿ ಸಭೆ ಸೇರಿ ಅಸಹಕಾರ ಚಳವಳಿಯನ್ನು ಪುನಃ ಪ್ರಾರಂಭಿಸಲು ನಿರ್ಧರಿಸಿತು. ಮುಂದೆ ಒಂದು ವಾರದ ಒಳಗೆ ಎಲ್ಲ ಕಾಂಗ್ರೆಸ್ ನಾಯಕರನ್ನು ಸೆರೆಮನೆಯಲ್ಲಿಡಲಾಯಿತು. ಆದರೆ ಎಲ್ಲ ಬಗೆಯ ಸಂದರ್ಭವನ್ನು ಎದುರಿಸಲು ಕಾಂಗ್ರೆಸ್ ಕೂಡ ಪೂರ್ವ ಸಿದ್ಧತೆ ನಡೆಸಿತ್ತು. ಹಳೆಯ ಮುಖಂಡರುಗಳ ಸ್ಥಾನವನ್ನು ಹೊಸ ನಾಯಕರು ತುಂಬಿ ಹೋರಾಟವನ್ನು ಮುಂದುವರಿಸಿದರು. ರಾಷ್ಟ್ರವಾದಿ ಪತ್ರಿಕೆಗಳ ಮೇಲೆ ನಿಷೇಧಾಜ್ಞೆ ಜಾರಿಗೊಳಿಸಿದ್ದ ಕಾರಣ ಕಾಂಗ್ರೆಸ್ ಸ್ವಯಂಸೇವಕರು ಕರಪತ್ರಗಳು, ಕಿರು ಪುಸ್ತಕಗಳು ಇತ್ಯಾದಿಗಳನ್ನು ನಿಯತವಾಗಿ ಅಚ್ಚು ಮಾಡಿ ಹೊರತರುತ್ತಿದ್ದರು.

ಚಳವಳಿಯ ಮುಂಚೂಣಿಯಲ್ಲಿದ್ದ ಸಿರ್ಸಿ, ಸಿದ್ದಾಪುರ ಹಾಗೂ ಅಂಕೋಲ ಪ್ರದೇಶಗಳಲ್ಲಿ ಹೊಸ ನಾಯಕರಾದ ಕೆ.ಎ. ವೆಂಕಟರಾಮಯ್ಯವರ ನೇತೃತ್ವದಲ್ಲಿ ಹೋರಾಟ ಮುಂದುವರಿಯಿತು. ೧೯೩೨ನೇ ಜನವರಿ ೧೨ರ ದಿನವನ್ನು ಅಖಿಲ ಕರ್ನಾಟಕ ಸತ್ಯಾಗ್ರಹ ದಿನವನ್ನಾಗಿ ಆಚರಿಸಲಾಯಿತ; ಅದೇ ಬಗೆಯ ರಾಷ್ಟ್ರೀಯ ಮಹತ್ವದ ದಿನಗಳನ್ನೂ ಸಹ ಎಲ್ಲ ಕಡೆ ಆಚರಿಸಲಾಯಿತು. ರಚನಾತ್ಮಕ ಕೆಲಸವನ್ನು ಹೆಚ್ಚು ಕ್ರಿಯಾತ್ಮಕವಾಗಿ ಮುಂದುವರಿಸಲಾಯಿತು. ಪಿಕೆಟ್ಟರುಗಳು ಮತ್ತು ಸ್ವಯಂಸೇವಕರನ್ನು ಚೆನ್ನಾಗಿ ಥಳಿಸಿ ಸೆರೆವಾಸಕ್ಕೆ ಕಳುಹಿಸಲಾಯಿತು. ಮದ್ಯದಂಗಡಿಗಳ ಮುಂದೆ ಮಾಡಿದ ಪಿಕೆಟಿಂಗ್ ಎಷ್ಟು ಯಶಸ್ವಿಯಾಯಿತೆಂದರೆ ಅಂಕೋಲಾ ತಾಲ್ಲೂಕು ಸಂಪೂರ್ಣವಾಗಿ 'ಒಣ' ಪ್ರದೇಶವಾಯಿತು. ಅಲ್ಲದೇ ಇಡೀ ಜಿಲ್ಲೆಯಲ್ಲಿ 'ಶೇಂದಿ' ಮರಗಳು ಹರಾಜಿಗೆ ಲಭ್ಯವಾದವು. ತರುಣ ಕರ್ನಾಟಕ, ಕರ್ಮವೀರ, ಜನ್ಮಭೂಮಿ, ಕರ್ನಾಟಕ ಕೇಸರಿ, ಕರ್ನಾಟಕ ವೈಭವ, ಉದಯ ಇತ್ಯಾದಿ ವೃತ್ತಪತ್ರಿಕೆಗಳು ಸರ್ಕಾರ ವಿಧಿಸಿದ ಭದ್ರತಾ ಠೇವಣಿಯನ್ನು ಪೂರೈಸಲು ನಿರಾಕರಿಸಿದ ಕಾರಣ ಮುಚ್ಚಬೇಕಾಯಿತು.

ಬೊಂಬಾಯಿ ಸರ್ಕಾರ ಎಷ್ಟು ದಿಗಿಲುಗೊಂಡಿತ್ತೆಂದರೆ, ಹುಬ್ಬಳ್ಳಿಯ ಭಗಿನಿ ಮಂಡಳ, ತಿಲಕ್ ಗ್ರಂಥಮಾಲ(ಪುಸ್ತಕ ಭಂಡಾರ), ಹುಬ್ಬಳ್ಳಿ ಆಶ್ರಮ(ಖಾದಿ ಉತ್ಪಾದನಾ ಕೇಂದ್ರ) ಇಂಥ ಸಂಸ್ಥೆಗಳನ್ನೂ ಸಹ ನಿಷೇಧಿಸಿತು. ೧೯೩೨ರ ಏಪ್ರಿಲ್ ಕೊನೆಯವರೆಗೆ ಬ್ರಿಟಿಷ್ ಕರ್ನಾಟಕದ ಭಾಗಗಳ ಬಗ್ಗೆ ಸರ್ಕಾರ ನೀಡಿದ ಅಂಕಿ ಅಂಶಗಳ ಪ್ರಕಾರ ಚಳವಳಿಯಲ್ಲಿ ಭಾಗವಹಿಸಿದ್ದಕ್ಕಾಗಿ ಸುಮಾರು ೨೩೦೫ ಮಂದಿಗೆ ಜೈಲುಶಿಕ್ಷೆ ವಿಧಿಸಲಾಗಿತ್ತು. ನೂರಾರು ಜನ ಮಹಿಳಾ ಸತ್ಯಾಗ್ರಹಿಗಳನ್ನು ಪೋಲೀಸಿನವರು ಥಳಿಸಿದ್ದರು, ವಿಶೇಷವಾಗಿ ಈ ಕೃತ್ಯ ಕರಾವಳಿ ಪ್ರದೇಶದಲ್ಲಿ ನಡೆದಿತ್ತು. ಅಮಾನುಷವಾದ ಕ್ರೌರ್ಯಕ್ಕೆ ಅವರನ್ನು

ಒಳಪಡಿಸಿದ್ದರು. ಸಿದ್ದಾಪುರ ತಾಲ್ಲೂಕಿನ ಅಕ್ಕುಂಜಿ ಹಾಗೂ ಮಾವಿನಗುಂಡಿ ಎಂಬ ಸ್ಥಳಗಳಲ್ಲಿ ಮಹಿಳಾ ಸತ್ಯಾಗ್ರಹಿಗಳನ್ನು ಪೋಲೀಸಿನವರು ಬೀದಿಯಲ್ಲಿ ದರದರ ಎಳೆದು ಲಾಠಿಯಿಂದ ಹೊಡೆದಿದ್ದರು. ಅವರ ಸೀರೆ ಎಳೆದು, ಅವಾಚ್ಯ ಶಬ್ದಗಳಲ್ಲಿ ಅವರನ್ನು ನಿಂದಿಸಲಾಗಿತ್ತು. ಕೆಲವರನ್ನು ಅಶ್ಲೀಲ ಭಾಷೆಯಿಂದ ಘಾಸಿಗೊಳಿಸಲಾಗಿತ್ತು: 'ಲಾಠಿ ಏಟು ಬೇಕೋ? ನಿನ್ನ ಗಂಡ ಬೇಕೋ? ಅಥವಾ ನಾನು ಬೇಕೋ?'.[೪೮] ಕರನಿರಾಕರಣಾ ಆಂದೋಲನ ಎಷ್ಟು ತೀವ್ರವಾಗಿತ್ತೆಂದರೆ ಅಂಕೋಲಾದಲ್ಲಿ ಸುಮಾರು ೭೦೦ ಜನ ಖಾತೆದಾರರು ಪ್ರಮಾಣ ಮಾಡಿ ಸಹಿ ಹಾಕಿ ಕಂದಾಯವನ್ನು ನಿರಾಕರಿಸಿದ್ದರು. ಸಿದ್ದಾಪುರ ಪ್ರಾಂತ್ಯ ಒಂದರಲ್ಲೇ ಮೊದಲನೇ ಕಂತಿನ ಹಣ ರೂ. ೬೦,೦೦೦/- ಸಂಗ್ರಹವಾಗಬೇಕಿದ್ದು ಕೇವಲ ರೂ. ೩೦,೦೦೦/- ಸಂಗ್ರಹವಾಯಿತೆಂದ ಮೇಲೆ ಸುಮಾರು ಅರ್ಧದಷ್ಟು ಮಂದಿ ಕರನಿರಾಕರಿಸಿದ್ದುದು ವ್ಯಕ್ತವಾಗುತ್ತದೆ. ಈ ತಾಲ್ಲೂಕುಗಳಲ್ಲಿ ಸರ್ಕಾರದ ದಬ್ಬಾಳಿಕೆ ಯಾವ ಹಂತ ಮುಟ್ಟಿತ್ತೆಂದರೆ, ಹೆರೂರಿನಂಥ ಗ್ರಾಮಗಳಲ್ಲಿ ಗಂಡಸರು ಹೇಳ ಹೆಸರಿಲ್ಲದಂತೆ ತಲೆ ತಪ್ಪಿಸಿಕೊಂಡು ಹೊರಟು ಹೋಗಿದ್ದರು; ದಸ್ತಗಿರಿ ಮತ್ತು ಜೈಲು ಶಿಕ್ಷೆಯ ಭಯ ಅವರನ್ನು ಭೂತದ ಹಾಗೆ ಕಾಡಿತ್ತು. ಗಂಡಸರು ಇಲ್ಲದ ಸಂದರ್ಭದಲ್ಲಿ ಧೃತಿಗೆಡದ ಹೆಂಗಸರು ಆಂದೋಲನವನ್ನು ಮುಂದುವರಿಸಿದ್ದರು.

ಆಗಿನ ಕಾಂಗ್ರೆಸ್ ವರದಿಯಲ್ಲಿ ಎಲ್ಲ ಸ್ಪಷ್ಟವಾಗುತ್ತದೆ:

ಕಾಂಗ್ರೆಸ್ಸನ್ನು ಧ್ವಂಸ ಮಾಡಲು ಸರ್ಕಾರ ಎಲ್ಲ ಕ್ರಮ ಕೈಗೊಂಡಿರುವುದಾದರೂ ಚಳವಳಿಯು ಕರ್ನಾಟಕದಲ್ಲಿ ಬಹಳ ಬಿರುಸಿನಿಂದ ಸಾಗಿದೆ. ಅಪರಾಧಿ ಕಲಾಪ ನಿಯಮ ಹಾಗೂ ಪೋಲೀಸ್ ಕಾಯಿದೆಯಡಿಯಲ್ಲಿ ಬರುವ ಎಲ್ಲ ಸುಗ್ರೀವಾಜ್ಞೆಯನ್ನು ಭಂಗ ಮಾಡಲಾಗಿದೆ; ಅರಣ್ಯ ಕಾನೂನು ಹಾಗೂ ಉಪ್ಪಿನ ಕಾನೂನನ್ನು ವೈಯಕ್ತಿಕವಾಗಿ ಹಾಗೂ ಗುಂಪುಗುಂಪಾಗಿ ಮುರಿಯಲಾಗಿದೆ. ಭೂಕಂದಾಯವನ್ನು ತೆರದೆ ನಿರಾಕರಿಸುವುದು ಈಗ ವ್ಯಾಪಕವಾಗುತ್ತಿದೆ. ಅಂಕೋಲಾದ ನಾಡವರು ಹಾಗೂ ಸಿರ್ಸಿ, ಸಿದ್ದಾಪುರ ಪ್ರಾಂತ್ಯದ ಹವ್ಯಕರನ್ನು ಅವರ ತ್ಯಾಗಕ್ಕಾಗಿ ವಿಶೇಷವಾಗಿ ಹೆಸರಿಸಬೇಕು. ಎಲ್ಲ ಜಾತಿಯ ಜನಗಳೂ ಸಹ ಈ ಚಳವಳಿಯಲ್ಲಿ ಭಾಗವಹಿಸಿದ್ದಾರೆ. ಕಳೆದ ಹೋರಾಟಕ್ಕೆ ಹೋಲಿಸಿದರೆ ಈ ಬಾರಿ ನಮ್ಮ ಸೋದರಿಯರು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿರುವುದು ಈ ತಾಲ್ಲೂಕಿನ ವಿಶೇಷವಾದ ಲಕ್ಷಣವಾಗಿದೆ; ಸುಮಾರು ೩೫ ಮಂದಿ ಮಹಿಳೆಯರು ಈಗ ಸೆರೆಮನೆಯಲ್ಲಿದ್ದಾರೆ.[೪೯]

ಬಹಿಷ್ಕಾರವಿರಲಿ, ಪಿಕೆಟಿಂಗ್ ಕಾರ್ಯಕ್ರಮವಿರಲಿ, ಅರಣ್ಯ ಕಾನೂನಿನ ಭಂಗವಾಗಲೀ, ಪೋಲೀಸು ಕ್ರೌರ್ಯವನ್ನು ಸಹಿಸಿಕೊಳ್ಳುವ ವಿಷಯವೇ ಇರಲಿ ಭಾರತ ಸ್ವಾತಂತ್ರ್ಯ ಚಳವಳಿಯ ಇತಿಹಾಸದಲ್ಲಿ ಕರ್ನಾಟಕದ ಮಹಿಳೆಯರು ಒಂದು ಅಧ್ಯಾಯವನ್ನೇ ಬರೆದರು. ಅಧಿಕಾರಿಗಳ ಸಾಮಾಜಿಕ ಬಹಿಷ್ಕಾರದ ವಿಷಯ ಹಾಗೂ ಹರಾಜಿನಲ್ಲಿ ಪಾತ್ರೆ-ಪಡಗಗಳನ್ನು ಕೊಂಡುಕೊಂಡಿದ್ದವರ ಮನವೊಲಿಸಿ ಅವುಗಳ ಮಾಲೀಕರಿಗೆ ಅವನ್ನು ಹಿಂತಿರುಗಿಸುವ ವಿಚಾರದಲ್ಲಿ ಮಹಿಳೆಯರು ವಹಿಸಿದ ಪಾತ್ರ ಅತ್ಯಂತ ಮಹತ್ವಪೂರ್ಣವಾದುದು. ಈ ಘಟನೆಗೆ ಸಂಬಂಧಿಸಿದಂತೆ ಬೊಂಬಾಯಿ ಸರ್ಕಾರದ ಸಿ.ಐ.ಡಿ. ವರದಿಗಳು ಹೃದಯವಿದ್ರಾವಕವೂ, ರೋಮಾಂಚನಗೊಳಿಸುವಂಥವೂ ಆಗಿವೆ.

ಸಿರ್ಸಿ, ಸಿದ್ದಾಪುರ ಹಾಗೂ ಅಂಕೋಲಗಳಲ್ಲಿ ನಡೆದ ಕರನಿರಾಕರಣೆ ಕಾರ್ಯಕ್ರಮದ ಬಗ್ಗೆ ಬಾರ್ಡೋಲಿ ಸತ್ಯಾಗ್ರಹದ ನಾಯಕರಾದ ಸರ್ದಾರ್ ಪಟೇಲರು ಹೀಗೆ ದಾಖಲಿಸಿದ್ದಾರೆ: "ಕರ್ನಾಟಕ ವೀರ ರೈತಾಪಿ ಜನರು ತಮ್ಮ ತ್ಯಾಗದ ಮೂಲಕ, ಆಸ್ತಿಪಾಸ್ತಿ ಭೂಮಿ ಕಳೆದುಕೊಂಡು, ಕಷ್ಟ ನಿಷ್ಠೂರಗಳನ್ನು ಸಹಿಸಿಕೊಂಡು ನಿಮ್ಮ ಜೊತೆ ಸ್ಪರ್ಧೆ ಹೂಡಿದ್ದಾರೆ. ಸರ್ಕಾರ ಅವರ ಪದಾರ್ಥಗಳನ್ನು ವಶಪಡಿಸಿಕೊಂಡಿದೆ, ಮುಟ್ಟುಗೋಲು

ಹಾಕಿಕೊಂಡಿದೆ, ಸೆರೆವಾಸ ಅನುಭವಿಸಿದ್ದಾರೆ, ಮಾತಿಗೆ ಸಿಲುಕದ ಕಷ್ಟವನ್ನನುಭವಿಸಿದ್ದಾರೆ. ಮಹಿಳೆಯರು ಮತ್ತು ಪುರುಷರು ತಮ್ಮ ನೋವನ್ನು ನುಂಗಿಕೊಂಡು, ದುಃಖವನ್ನು ತಾಳಿಕೊಂಡು ಈವತ್ತು ನಿರ್ಗತಿಕರಾಗಿದ್ದಾರೆ, ಸಂಪೂರ್ಣವಾಗಿ ನಿಪಾತ ಹೊಂದಿದ್ದಾರೆ. ಅವರು ಮಾಡಿರುವ ತ್ಯಾಗದ ಕಥೆಗಳನ್ನು ಕೇಳಿ ಅವರ ಬಗ್ಗೆ ನನ್ನಲ್ಲಿ ಅಭಿಮಾನ ಮೂಡಿರುವಂತೆಯೇ ಅವರ ಸಂಕಷ್ಟದ ಸಂಗತಿಗಳನ್ನು ತಿಳಿದು ನನಗೆ ದಿಗ್ಭ್ರಮೆಯಾಗಿದೆ". [೪೦]

ಜಗತ್ತಿನಲ್ಲೇ ಅತ್ಯಂತ ಪ್ರಬಲವಾಗಿದ್ದ ಬ್ರಿಟಿಷ್ ಸರ್ಕಾರದ ಕ್ರೌರ್ಯವನ್ನು ಸಹಿಸಿಕೊಂಡು ಅಸಹಕಾರ ಚಳವಳಿಯ ಘಟ್ಟದಲ್ಲಿ ಭಾರತೀಯ ಜನರು ಅನೇಕ ವಿಧಗಳಲ್ಲಿ ಸರ್ಕಾರದ ದಮನವನ್ನು ಪ್ರತಿರೋಧಿಸಲು ಸತತ ಪ್ರಯತ್ನ ನಡೆಸಿದರು. ಆದರೆ ಸುದೀರ್ಘ ಕಾಲದವರೆಗೆ ಜನಾಂದೋಳನವನ್ನು ನಡೆಸುವುದಕ್ಕೆ ಕಷ್ಟವಾಗಲು ಕಾರಣ ಬಹುತೇಕ ಮುಂಚೂಣಿ ನಾಯಕರನ್ನು ಬ್ರಿಟಿಷ್ ಸರ್ಕಾರ ಸೆರೆಮನೆಯಲ್ಲಿಟ್ಟಿತ್ತು; ಹಾಗಾಗಿ ಆಂದೋಲನದ ಗತಿ ಕುಂಠಿತವಾಗುವುದು ಅನಿವಾರ್ಯವಾಗಿತ್ತು. ಜನರಲ್ಲಿಯೂ ಕೂಡ ಬಳಲಿಕೆಯ ಚಿಹ್ನೆಗಳು ಕಾಣಿಸಿಕೊಂಡಿದ್ದವು. ಪ್ರಾಂತೀಯ ಕಾಂಗ್ರೆಸ್ ನಿರಾಕರಿಸಿತ್ತಾದರೂ ಚಳವಳಿಯಲ್ಲಿ ಸಂಪೂರ್ಣ ಚೈತನ್ಯ ಇನ್ನೂ ಉಳಿದಿತ್ತು ಎಂದು ನಂಬುವುದು ಕಷ್ಟವಾಗುತ್ತದೆ.

೧೯೩೩ರ ಮೇನಲ್ಲಿ ನಡೆದ ಕೇಂದ್ರೀಯ ಶಾಸನ ಸಭಾ ಚುನಾವಣೆಗಳ ಕಾರಣ ಅನೇಕ ಧುರೀಣರ ಗಮನವು ಬೇರೆಡೆಗೆ ಸೆಳೆಯಲ್ಪಟ್ಟದ್ದು ಮುಖ್ಯವಾದ ಬೆಳವಣಿಗೆ. 'ಬದಲಾವಣೆ–ವಿರೋಧಿ' ಗಳು ಹಾಗೂ ತಮ್ಮನ್ನು ಗಾಂಧೀವಾದಿಗಳೆಂದು ಕರೆದುಕೊಂಡವರು ಕೂಡ ಶಾಸನ ಸಭಾ ಕೆಲಸಗಳಲ್ಲಿ ಇಚ್ಛೆ ಪ್ರಕಟಿಸಿದ್ದರು. ೧೯೩೫ರಲ್ಲಿ ವಿದ್ಯುಕ್ತವಾಗಿ ಸುಧಾರಣೆಗಳು ಘೋಷಣೆಯಾದ ನಿಮಿತ್ತ ಆ ಸಂಗತಿ ನಾಯಕರುಗಳಿಗೆ ತಿಳಿದಿತ್ತಾಗಿ ಅವುಗಳ ಅನುಷ್ಠಾನದ ಬಗ್ಗೆ ಸಹಜವಾಗಿಯೇ ಅವರಿಗೆ ಆಸಕ್ತಿಯುಂಟಾಗಿತ್ತು.[೪೧] ಇದರ ಜೊತೆಗೆ ಸರ್ಕಾರದ ದಮನ ನೀತಿ ಉಗ್ರವಾದ ಕಾರಣ ಅಂಬೇಡ್ಕರ್‌ರವರ ಜೊತೆ ನಡೆದ ಮುಖಾಮುಖಿಯ ತರುವಾಯ ಗಾಂಧೀಜಿ ಹೆಚ್ಚು ಹೆಚ್ಚು 'ಹರಿಜನೋದ್ಧಾರ' ದ ಕೆಲಸಗಳಿಗೆ ಸಮಯ ಮೀಸಲಿಟ್ಟರು. ಇದರ ಪರಿಣಾಮವಾಗಿ ಚಳವಳಿಯಲ್ಲಿ ಹಿಂಜರಿಕೆಯುಂಟಾಗಿರಬಹುದಲ್ಲದೆ, ೧೯೩೮ರ ಏಪ್ರಿಲ್ ಹೊತ್ತಿಗೆ ನಿತ್ರಾಣದ ಗುರುತುಗಳು ಸ್ಪಷ್ಟವಾಗಿ ಗೋಚರವಾಗತೊಡಗಿದವು.

ಅಸಹಕಾರ ಚಳವಳಿಯು ಭಾರತದ ಜನರಿಗೆ ಸ್ವಾತಂತ್ರ್ಯವನ್ನು ತಂದುಕೊಡಲಿಲ್ಲವಾದರೂ ಸರ್ಕಾರದ ಬಲದ ಎದುರು ಜನರು ಬೆಚ್ಚಿಬೀಳದೆ ಧೈರ್ಯವಾಗಿ ಮುನ್ನಡೆಯುವಂಥ ಸ್ಥೈರ್ಯ ಕಲಿಸಿತು. ಆಗ ತಲೆದೋರಿದ ಹಿಂಜರಿಕೆಯಿಂದ ಜವಹರ್‌ಲಾಲ್ ನೆಹರೂರವರು ನಿರಾಶರಾದರು ಹಾಗೂ ಬೋಸರಂತೂ ಗಾಂಧೀಜಿಯವರು ನಿಷ್ಪ್ರಯೋಜಕರು ಎನ್ನುವ ಮಟ್ಟಕ್ಕೆ ಹೋದದ್ದೂ ನಿಜವೇ. ಹಾಗೆಯೇ ಸಾಮ್ರಾಜ್ಯಶಾಹಿಗಳೂ ಸಹ ಕಾಂಗ್ರೆಸ್ಸಿನ ದಿನಗಳು ಮುಗಿದವು ಎಂದು ತೀರ್ಮಾನಿಸಿದರು. ಆದರೆ ಮಹಾತ್ಮರಿಗೆ ನಿರಾಶೆಯಾಗಿರಲಿಲ್ಲ.

ಕುಗ್ಗಿದ ಚೈತನ್ಯ ಮತ್ತು ಉತ್ಸಾಹವನ್ನು ವೃದ್ಧಿಸುವ ದಿಶೆಯಲ್ಲಿ ಗಾಂಧೀಜಿ ಕಾರ್ಯೋನ್ಮುಖರಾದರು. 'ಹರಿಜನ' ರ ಕಾರ್ಯವನ್ನು ಕೈಗೆತ್ತಿಕೊಂಡು ಸತತವಾಗಿ ಎರಡು ವರ್ಷಗಳ ಕಾಲ ಸಂಚಾರ ಮಾಡಿ ಸುಮಾರು ೨೦,೦೦೦ ಕಿಲೋಮೀಟರುಗಳ ದೂರವನ್ನು ಅವರು ಕ್ರಮಿಸಿದರು; ಹರಿಜನ ಸೇವಕ ಸಂಘಗಳನ್ನು ಸ್ಥಾಪಿಸಿದರು, ದೇಶದಾದ್ಯಂತ ಸಂಘದ ಶಾಖೆಗಳ ಸ್ಥಾಪನೆಯಾಗುವಂತೆ ಸಹಾಯ ಮಾಡಿದರು.

**-ಪ್ರೊ. ಎಸ್. ಚಂದ್ರಶೇಖರ್**

## ಟಿಪ್ಪಣಿಗಳು

೧ ಕರ್ನಾಟಕ ಪ್ರಕಾಶಕ, ೮ ಫೆಬ್ರವರಿ ೧೮೯೭
೨ ಗಾಂಧಿ, ಎಂ.ಕೆ.: ಆನ್ ಆಟೋಬಯೋಗ್ರಫಿ
೩ ಅದೇ, ಪು. ೩೮೧–೩೮೨
೪ ಇಂಡಿಯನ್ ಸ್ಪೆಕ್ಟೇಟರ್, ೨೯ ಸೆಪ್ಟಂಬರ್, ಸ್ವದೇಶ ಮಿತ್ರಮ್, ೨೭ ಸೆಪ್ಟಂಬರ್ ೧೯೧೧
೫ ಗಾಂಧಿ, ಎಂ.ಕೆ.: ಸಂಪು ೨, ಪು. ೩೭೯
೬ ಅದೇ, ಪು. ೩೮೦–೩೮೧
೭ ವಿವರಗಳಿಗಾಗಿ ನೋಡಿ: ರಾಜ್‌ಮೋಹನ್ ಗಾಂಧಿ: ದ ರಾಜಾಜಿ ಸ್ಟೋರಿ, ಮುಂಬಾಯಿ, ೧೯೭೮, ಪು. ೧೭–೩೦
೮ ಅದೇ, ಪು. ೮೫
೯ ಅದೇ, ಪು. ೯೧
೧೦ ಚಂದ್ರಶೇಖರ್, ಎಸ್.: ೧೯೮೫
೧೧ ಕರ್ಮರ್ಕರ್, ಡಿ.ಪಿ.: ಸ್ವಾತಂತ್ರ್ಯದ ಪ್ರಮುಖ ಆಂದೋಲನಗಳು, ಮೈಸೂರು ಸರ್ಕಾರದ ಪ್ರಕಟಣೆ. ಕರ್ನಾಟಕದ ಪರಂಪರೆ, ಸಂಪುಟ–೨, ಬೆಂಗಳೂರು, ೧೯೭೦, ಪು. ೫೧೬–೫೩೦
೧೨ ವಿವರಗಳಿಗಾಗಿ ನೋಡಿ: ದೊರೆಸ್ವಾಮಿ, ಎಚ್.ಎಸ್.: ಹೋರಾಟದ ದಿಟ್ಟ ಹೆಜ್ಜೆಗಳು, ೧೯೭೨, ಪು. ೧–೪
೧೩ ನೋಡಿ ಕರ್ಮರ್ಕರ್, ಸಂ.೧೧.
೧೪ ಜವಹರ್‌ಲಾಲ್ ನೆಹರು: ಆಟೋಬಯೋಗ್ರಫಿ, ಲಂಡನ್, ೧೯೩೯
೧೫ ಸ್ವದೇಶಾಭಿಮಾನಿ, ೨೬ ಡಿಸೆಂಬರ್ ೧೯೨೦
೧೬ ಬೆಳಗಾವಿ ಅಧಿವೇಶನದ ಬಗ್ಗೆ ವಿವರವಾದ ವರದಿಗಾಗಿ ನೋಡಿ, ಹಾಲಪ್ಪ, ಜಿ.ಎಸ್.: ೧೯೬೪, ಪು. ೧೩೫–೧೩೭
೧೭ ಅದೇ, ಪು. ೧೪೦–೧೪೫
೧೮ ಅದೇ, ಪು. ೧೪೬
೧೯ ಅದೇ. ಪು. ೧೪೮
೨೦ ಚಂದ್ರಶೇಖರ್, ಎಸ್.: ೧೯೮೫
೨೧ ಸರೋಜಿನಿ ನಾಯ್ಡು ಜವಾಹರ್‌ಲಾಲ್ ನೆಹರೂರವರಿಗೆ ೧೩ ಜೂನ್ ೧೯೨೩ರಂದು ಬರೆದ ಪತ್ರ
೨೨ ಗಾಂಧಿ, ಎಂ.ಕೆ. ಕಲೆಕ್ಟೆಡ್ ವರ್ಕ್ಸ್ (ಸಿಡಬ್ಲ್ಯು) ಸಂ.೩೦, ಪು. ೩೭೧
೨೩ ಅದೇ, ಸಂ.೪೦, ಪು. ೨೦೨
೨೪ ಮೈಸೂರಿನ ಬಗ್ಗೆ ನೋಡಿ ದೊರೆಸ್ವಾಮಿ, ಎಚ್.ಎಸ್.: ೧೯೭೨. ಪು.೧೦. ಹಾಗೂ ಇ.ಎಂ.ಎಸ್. ನಂಬೂದರಿಪಾದ್‌ರ ದಿ ನ್ಯಾಷನಾಲಿಟಿ ಕೊಶ್ಚನ್ ಇನ್ ಕೇರಳ, ಬೊಂಬಾಯಿ, ೧೯೫೨, ಪು. ೧೨೮–೧೨೯
೨೫ ಹಾಲಪ್ಪ, ಜಿ.ಎಸ್.: ೧೯೭೪, ಪು.೧೯೨. ಇವರ ಗ್ರಂಥದಲ್ಲಿ ಉಲ್ಲೇಖವಾಗಿದೆ.
೨೬ ವಿವರಗಳಿಗಾಗಿ ನೋಡಿ: ಡಿಸ್ಟರ್ಬೆನ್ಸಸ್ ಇನ್ ಬೆಂಗಳೂರ್ ಸಿಟಿ, ಜುಲೈ, ೧೯೨೮. ರಿಪೋರ್ಟ್ ಆಫ್ ದಿ ಕಮಿಟಿ ಆಫ್ ಎನ್‌ಕೊಯಿರಿ ಅಂಡ್ ಎವಿಡೆನ್ಸ್ ಬಿಫೋರ್ ದಿ ಕಮಿಟಿ ಆಫ್ ಎನ್‌ಕೊಯಿರಿ. ಸಂ.I, IIa, IIb ಮತ್ತು IIc, ಬೆಂಗಳೂರು, ೧೯೨೯
೨೭ ಗೋಪಾಲ್, ಎಸ್. (ಸಂ): ಸೆಲೆಕ್ಟೆಡ್ ವರ್ಕ್ಸ್, ಜವಾಹರಲಾಲ್ ನೆಹರೂ (ಎಸ್‌ಡಬ್ಲ್ಯೂ), ನವದೆಹಲಿ, ೧೯೭೨–೧೯೮೨, ಸಂ.೪ ಪು. ೧೯೨–೧೯೮
೨೮ ಗಾಂಧಿ, ಸಿ.ಡಬ್ಲ್ಯು. ಸಂ.೪೩, ಪು. ೭
೨೯ ಹೈದರಾಬಾದು ನಿಜಾಮರ ಹೇಳಿಕೆ: ೨೬ ಮೇ ೧೯೩೦ರ ಸಂಪುಟದಲ್ಲಿ: ಹಿಸ್ಟರಿ ಆಫ್ ಫ್ರೀಡಮ್ ಮೂವ್‌ಮೆಂಟ್. ಸಂ.೬೫, ಟೈಪ್ರುಬರಹ ಪು. ೧೫೩. ಟಿ.ಎನ್.ಎ
೩೦ ಅದೇ.
೩೧ ದೊರೆಸ್ವಾಮಿ, ಎಚ್.ಎಸ್.: ೧೯೭೨. ಪು. ೫–೬

೩೨ ಅದೇ, ಪು. ೭-೮

೩೩ ಹಾಲಪ್ಪ, ಜಿ.ಎಸ್.: ೧೯೬೪, ಪು. ೧೮೨-೧೮೩

೩೪ ಆಂದೋಲನದ ಸ್ಪಷ್ಟವಾದ ವರ್ಣನೆಗಾಗಿ ನೋಡಿ: ದಿವಾಕರ್, ಆರ್.ಆರ್.: ಕರನಿರಾಕರಣೆಯ ವೀರಕಥೆ, ಹುಬ್ಬಳ್ಳಿ, ೧೯೫೫

೩೫ ಹಾಲಪ್ಪ, ಜಿ.ಎಸ್.: ಪು. ೧೯೦

೩೬ ಬಿಪಿನ್ ಚಂದ್ರ, ಮುಂತಾದವರು. ಸ್ಟ್ರಗಲ್ ಫಾರ್ ಇಂಡಿಯನ್ ಫ್ರೀಡಮ್, ನವದೆಹಲಿ, ೧೯೮೯, ಪು. ೨೮೪-೨೮೫

೩೭ ಗಾಂಧಿ, ಸಿಡಬ್ಲ್ಯು ಸಂ.೪೭, ಪು. ೩೬೯

೩೮ ೧೯೩೧-೩೨ನೇ ಇಸವಿಗಾಗಿ ಕರ್ನಾಟಕ ಪ್ರಾದೇಶಿಕ ಕಾಂಗ್ರೆಸ್ ಸಮಿತಿಯ ವರದಿ; ದಿನಾಂಕ ೨೮ನೇ ಮೇ ೧೯೩೨ರಂದು ಬಾಗಲಕೋಟೆಯಲ್ಲಿ ವಾರ್ಷಿಕ ಸಮಾವೇಶದಲ್ಲಿ ಮಂಡಿತವಾಯಿತು. ಹಾಲಪ್ಪ, ಜಿ.ಎಸ್. ಅವರ ಗ್ರಂಥದಲ್ಲಿ ೧೯೮-೨೦೩ ಪುಟಗಳಲ್ಲಿ ಮತ್ತೆ ಕಾಣಿಸಲಾಗಿದೆ.

೩೯ ಅದೇ, ಪು. ೨೦೩.

೪೦ ಅದೇ, ಪು. ೨೧೬.

೪೧ ಚಂದ್ರಶೇಖರ್, ಎಸ್.: ೧೯೮೯, ಪು. ೨೪೩-೨೫೦

ಅಧ್ಯಾಯ : ಎಂಟು

# ರಾಷ್ಟ್ರೀಯ ಚಳವಳಿಯಲ್ಲಿ ಪತ್ರಿಕೆಗಳ ಪಾತ್ರ : ಕರ್ನಾಟಕದ ಸಂದರ್ಭ

ಭಾರತಕ್ಕೆ ಸ್ವಾತಂತ್ರ್ಯ ದೊರೆಯುವ ಮೊದಲು ೧೯೫೬ರಲ್ಲಿ ಮೈಸೂರು ಪ್ರಾಂತ್ಯವೆಂದು ವಿಂಗಡಣೆಯಾದ ಭಾಗವು ಅನೇಕ ಆಡಳಿತಾತ್ಮಕ ಅಂಗಗಳನ್ನು ಹೊಂದಿತ್ತು. ಅವುಗಳಲ್ಲಿ ಮುಖ್ಯವಾದವು: ಮೈಸೂರಿನ ಸಂಸ್ಥಾನ, ಹೈದರಾಬಾದು ಸಂಸ್ಥಾನದ ಕೆಲವು ಭಾಗಗಳು, ಬೊಂಬಾಯಿ ಮತ್ತು ಮದರಾಸು ಪ್ರೆಸಿಡೆನ್ಸಿಗಳ ಕೆಲವು ಭಾಗಗಳು ಹಾಗೂ ಕೊಡಗು ಪ್ರಾಂತ್ಯ.[೧] ಈ ಕಾರಣದಿಂದ ಸ್ವಾತಂತ್ರ್ಯಪೂರ್ವದ ಕರ್ನಾಟಕವು ಐತಿಹಾಸಿಕ ಅಧ್ಯಯನಕ್ಕೆ ಅರ್ಹವಾದ ಘಟಕವಾಗುವುದಿಲ್ಲ. ಈ ಅಧ್ಯಯನದಲ್ಲಿ ಅದೇ ಕಾರಣಕ್ಕೆ ಸ್ಪಷ್ಟ ದತ್ತಕಗಳನ್ನು ಕೊಡಲಾಗಿಲ್ಲ. ಮತ್ತೆ ಅನುಕೂಲಕ್ಕೆ ತಕ್ಕಂತೆ, ಪ್ರಸ್ತುತ ಅಧ್ಯಯನವು ಕರ್ನಾಟಕ ಅನೇಕ ಆಡಳಿತಾತ್ಮಕ ಚಿಕ್ಕ ಘಟಕಗಳನ್ನು ಪ್ರತ್ಯೇಕವಾಗಿ ಪರಿಗಣಿಸುವುದು; ಹಾಗೆ ಪ್ರತ್ಯೇಕ ಅಧ್ಯಯನ ಅನಾವಶ್ಯಕ ಎಂದು ತೋರುವ ಸನ್ನಿವೇಶದಲ್ಲಿ ಕರ್ನಾಟಕವನ್ನು ಒಂದು ಪೂರ್ಣ ಘಟಕವಾಗಿ ತೆಗೆದುಕೊಳ್ಳುವುದು. ಮೈಸೂರು ರಾಜ್ಯದಲ್ಲಿ ಸೇರ್ಪಡೆಯಾದ ಹೈದರಾಬಾದು ಕರ್ನಾಟಕದ ಭಾಗಗಳಾದ ಬೀದರ್, ರಾಯಚೂರು ಹಾಗೂ ಗುಲ್ಬರ್ಗಾ ಜಿಲ್ಲೆಗಳನ್ನು ಈ ಅಧ್ಯಯನದಲ್ಲಿ ಸೇರ್ಪಡೆ ಮಾಡಿಕೊಂಡಿಲ್ಲ; ಏಕೆಂದರೆ ಈ ಭಾಗಗಳಿಂದ ಕೇವಲ ೧೯೪೦ರ ದಶಕದಲ್ಲಿ ಮಾತ್ರ ಮೊಟ್ಟ ಮೊದಲು ಪತ್ರಿಕೆಗಳು ಪ್ರಕಾಶಿತವಾದದ್ದು.

ರಾಷ್ಟ್ರೀಯ ಚಳವಳಿಯಲ್ಲಿ ಪತ್ರಿಕಾರಂಗ ವಹಿಸಿದ ಪಾತ್ರವನ್ನು ಅರ್ಥಮಾಡಿಕೊಳ್ಳಬೇಕಾದರೆ ಆ ಚಳವಳಿಯ ಸ್ವರೂಪವನ್ನು ಮೊದಲು ಸಂಕ್ಷಿಪ್ತವಾಗಿ ತಿಳಿಯುವ ಅಗತ್ಯವಿದೆ. ಎಲ್ಲ ಜಾತಿಗಳ, ಧಾರ್ಮಿಕ ಹಾಗೂ ಆರ್ಥಿಕ ಗುಂಪುಗಳು ಆಧುನಿಕ ಜಗತ್ತಿನ ಬಗ್ಗೆ ತಿಳಿಯಲು ಪಟ್ಟ ಪ್ರಯತ್ನದ ಮೂಲಕ ನಾವು ರಾಷ್ಟ್ರೀಯ ಚಳವಳಿಯನ್ನು ಅರಿಯಬೇಕು. ಆ ಪ್ರಕ್ರಿಯೆಯಲ್ಲಿ ಈಗ ಹೆಸರಿಸಿದ ಗುಂಪುಗಳು ತಮ್ಮ ವಿಶಿಷ್ಟವಾದ ಬೌದ್ಧಿಕ ಪರಂಪರೆಗಳು ಹಾಗೂ ಇತಿಮಿತಿಗೆ ಅನುಗುಣವಾಗಿ ಆಧುನಿಕ ಜಗತ್ತಿನೊಡನೆ ಪ್ರತಿಕ್ರಿಯಿಸಿದುವು. ಹಾಗೆ ಪ್ರತಿಸ್ಪಂದಿಸುತ್ತಲೇ ಆಧುನಿಕ ಪ್ರಪಂಚದಲ್ಲಿ ತಮ್ಮ ಸ್ಥಾನವನ್ನು ಕಂಡುಕೊಂಡವು. ಇದು ಸಾಧ್ಯವಾಗಬೇಕಾದರೆ ಮೊದಲು ಈ ಗುಂಪುಗಳು ವಸಾಹತು ನಿಯಂತ್ರಣದಿಂದ ತಮ್ಮನ್ನು ತಾವು ಬಿಡುಗಡೆಗೊಳಿಸಿಕೊಳ್ಳಬೇಕಾಗಿದ್ದಿತು.

ಕರ್ನಾಟಕದಲ್ಲಿ ಅನುಭವಕ್ಕೆ ಬಂದ ರೀತಿಯಲ್ಲಿ ಭಾರತದ ರಾಷ್ಟ್ರೀಯ ಚಳವಳಿಯ ಚರಿತ್ರೆ ಬಹಳ ಅತ್ಯಗತ್ಯವಾದುದೆನಿಸುತ್ತದೆ. ಇಲ್ಲಿಯ ತನಕ ಕರ್ನಾಟಕದ ಸಮಗ್ರ ಪತ್ರಿಕಾರಂಗದ ಇತಿಹಾಸವನ್ನು ಬರೆಯಲು ಪ್ರಯತ್ನಗಳು ನಡೆದೇ ಇಲ್ಲ. ಇದಕ್ಕೆ ಮುಖ್ಯ ಕಾರಣವೆಂದರೆ, ಕರ್ನಾಟಕದಿಂದ ಪ್ರಕಾಶಿತವಾದ ಪ್ರಮುಖವಾದ

ಪತ್ರಿಕೆಗಳೂ ಸಹ ಒಟ್ಟಾರೆ ರೂಪದಲ್ಲಿ ಇದುವರೆಗೆ ಲಭ್ಯವಾಗಿಲ್ಲ. ಕತ್ತರಿಸಿ ಇಟ್ಟುಕೊಂಡ ಭಾಗಗಳ ರೂಪದಲ್ಲಿ, ಬಿಡಿ ಬಿಡಿಯಾದ ಸಂಚಿಕೆಗಳ ರೂಪದಲ್ಲಿ, ಜೀವನ ಚರಿತ್ರೆ ಅಥವಾ ಆತ್ಮ ಚರಿತ್ರಾತ್ಮಕ ಕೃತಿಗಳಲ್ಲಿ, ಬೊಂಬಾಯಿ ಮತ್ತು ಮದರಾಸು ಪ್ರೆಸಿಡೆನ್ಸಿಗಳ ದೇಶೀಯ ಸುದ್ದಿಪತ್ರಿಕೆ ವರದಿಗಳ ರೂಪದಲ್ಲಿ ಅಥವಾ ಕೆಲವು ಸುದ್ದಿ ಪತ್ರಿಕೆಗಳ ಬಿಡಿಕಟ್ಟುಗಳಲ್ಲಿ ಮಾತ್ರ ಲಭ್ಯವಾಗುತ್ತವೆ.[೨] ಈ ಕಾರಣದಿಂದಾಗಿ ಪ್ರಸ್ತುತ ಬರಹವು ಕರ್ನಾಟಕದ ರಾಷ್ಟ್ರೀಯ ಚಳವಳಿಯ ಬಗ್ಗೆ ಮುಖ್ಯವಾದ ಚಲನೆಗಳನ್ನು ಮಾತ್ರ ದಾಖಲು ಮಾಡುತ್ತದೆ. ಸೈದ್ಧಾಂತಿಕವಾದ ಚೌಕಟ್ಟನ್ನು ಈ ಲೇಖನಕ್ಕೆ ನಿರ್ಮಿಸಿಕೊಂಡಿಲ್ಲ ಎಂಬುದನ್ನು ಮತ್ತೊಮ್ಮೆ ನೆನಪು ಮಾಡಿ ಮುಂದುವರಿಯಬಹುದು.

ರಾಷ್ಟ್ರೀಯ ಚಳವಳಿಯು ಆರಂಭವಾದ ಇಸವಿಯ ಬಗ್ಗೆ ತಿಳಿಯುವಾಗ ಬಗೆ ಬಗೆಯಾದ ಕಾಲಮಾನವನ್ನು ಒಪ್ಪುವುದು ವಾಡಿಕೆಯಾಗಿದೆ. ಕೆಲವರು ಚಳವಳಿಯು ೧೮೫೭ರಲ್ಲಿ ಆರಂಭವಾಯಿತೆಂದು ಬಗೆದರೆ, ಇನ್ನೂ ಕೆಲವರು ೧೮೮೫ಕ್ಕೆ ಆ ಇಸವಿಯನ್ನು ಮುಂದೂಡುತ್ತಾರೆ; ಪತ್ರಿಕೆಯ ಪಾತ್ರವನ್ನು ಗಣನೆಗೆ ತೆಗೆದುಕೊಳ್ಳುವಾಗ ೧೮೨೩ರಲ್ಲೇ ರಾಷ್ಟ್ರೀಯ ಚಳವಳಿ ಆರಂಭವಾಯಿತೆಂದು ತಿಳಿಯಬಹುದು. ಏಕೆಂದರೆ, ೧೮೨೩ರಲ್ಲಿ ರಾಜಾರಾಮ್ ಮೋಹನ್‌ರಾಯ್ ಹಾಗೂ ಕಲ್ಕತ್ತೆಯ ಇನ್ನಿತರೆ ಐದು ಮಂದಿ ಗಣ್ಯವ್ಯಕ್ತಿಗಳು ಆಗತಾನೆ ಹೊರಬಂದಿದ್ದ ಪತ್ರಿಕಾ ಕಾಯಿದೆಯ ವಿರುದ್ಧ ಕಲ್ಕತ್ತಾ ಸರ್ವೋಚ್ಚ ನ್ಯಾಯಾಲಯದಲ್ಲಿ ದೂರಿತ್ತಿದ್ದರು. ೧೮೨೩ರ ಮಾರ್ಚಿನಲ್ಲಿ ಹೊರಡಿಸಿದ ಈ ಆಜ್ಞೆಯಲ್ಲಿ ಪತ್ರಿಕೆಗಳ ಪ್ರಕಟಣೆಗಾಗಿ ಪೂರ್ವಭಾವಿಯಾಗಿ ಗೌರ್ನರ್ ಜನರಲ್-ಇನ್-ಕೌನ್ಸಿಲ್‌ರವರ ಅನುಮತಿ ಪಡೆಯಬೇಕೆಂದು ತಿಳಿಸಲಾಗಿತ್ತು. ಅದರ ಹಿಂದಿನ ವರ್ಷದ ಅಕ್ಟೋಬರ್ ಮಾಹೆಯಲ್ಲಿ ಅಧಿಕಾರದಲ್ಲಿದ್ದ ಗೌರ್ನರ್ ಜನರಲ್ ಜಾನ್ ಆ್ಯಡಮ್‌ರವರು ಬ್ರಿಟಿಷ್ ಡೊಮಿನಿಯನ್‌ಗಳ ನಡತೆ ಮತ್ತು ಚಾರಿತ್ರ್ಯಕ್ಕೆ ಪತ್ರಿಕಾ ಸ್ವಾತಂತ್ರ್ಯ ಹೊರತಾದುದೆಂದು ಕರಡು ಲೇಖನದಲ್ಲಿ ತಿಳಿಸಿದ್ದರು; ಈ ಕರಡು ಲೇಖನಕ್ಕೆ ಸ್ವಲ್ಪ ಮೊದಲು ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯ ನಿರ್ದೇಶಕರ ನ್ಯಾಯಾಲಯವು ತಮ್ಮ ಸರ್ಕಾರ ಮುಕ್ತ ಪತ್ರಿಕಾರಂಗಕ್ಕೆ ಅನುಮೋದನೆ ನೀಡದೆಂದು ತಿಳಿಸಿದ್ದರು; ಇದಕ್ಕೆ ಕಾರಣವೆಂದರೆ ಅವರ ಪ್ರಕಾರ ಇಲ್ಲಿನ ಪತ್ರಿಕೆಗಳು ಮುಕ್ತವಾಗಿಯೂ ಇಲ್ಲ, ಪ್ರಾತಿನಿಧಿಕವಾಗಿಲ್ಲ ಅಥವಾ ಜನಪ್ರಿಯವಾಗಿ ಸಹ ಇಲ್ಲ. ಈ ವಿಷಯಕ್ಕೆ ಸಂಬಂಧಿಸಿದಂತೆ ಅವರು ನೀಡಿದ ಮನವಿಯಲ್ಲಿ ರಾಮ್‌ಮೋಹನ ರಾಯ್ ಮತ್ತು ಅವರ ಸ್ನೇಹಿತರು ರಾಷ್ಟ್ರೀಯ ಶಿಕ್ಷಣಕ್ಕೆ ಅತ್ಯಗತ್ಯವಾದ ಅಂಗವಾಗಿರುವುದರಿಂದ ಪೂರ್ವಭಾವಿ ಅನುಮತಿ ಕೋರದೆ ಪತ್ರಿಕೆಯನ್ನು ಪ್ರಕಟಿಸುವ ಸ್ವಾತಂತ್ರ್ಯವನ್ನು ನೀಡಬೇಕೆಂದು ಒತ್ತಾಯಿಸಿದರು.[೩] ಹಾಗಾಗಿ ೧೮೨೩ರ ಮನವಿ ಬೇರೊಂದು ಬಗೆಯ ರಾಜಕೀಯ ಚಟುವಟಿಕೆಯ ಆರಂಭವನ್ನು ಸೂಚಿಸುವುದರಿಂದ ರಾಷ್ಟ್ರೀಯ ಚಳವಳಿಯಲ್ಲಿ ಪತ್ರಿಕೆಯ ಪಾತ್ರವೆಂಬ ವಿಷಯ ಮಾತನಾಡುವಾಗ ೧೮೨೩ನೇ ಇಸವಿಯನ್ನೇ ಆರಂಭವೆಂದು ತಿಳಿಯಬೇಕು.

ಸರ್ಕಾರದ ಸೆನ್ಸಾರ್ ನೀತಿಯಾಧಾರದ ಮೇಲೆ ವೃತ್ತಪತ್ರಿಕೆಯೆಂದರೆ ಏನೆಂದು ನಿರೂಪಿತವಾಗಿರುವಾಗ, ವೃತ್ತಪತ್ರಿಕೆಯ ಉದ್ದೇಶವು, ಇಂಗಿತವಾಗಿ ಮತ್ತು ಘೋಷಿತವಾಗಿ, ಪ್ರಭುತ್ವದ ಅಧಿಕಾರದ ನೀತಿ ಹಾಗೂ ಕ್ರಿಯೆಗಳ ವಿಮರ್ಶೆಯೇ ಆಗಿದೆ. ಬ್ರಿಟಿಷ್ ಭಾರತದಲ್ಲಿ ಹಾಗೂ ಮೈಸೂರು ಸಂಸ್ಥಾನದಲ್ಲಿ ಪತ್ರಿಕಾ ಕಾನೂನುಗಳು ನಿರೂಪಿತವಾದ ರೀತಿಯಲ್ಲಿ ಹೇಳುವುದಾದರೆ ಸಾರ್ವಜನಿಕ ಸುದ್ದಿ ಅಥವಾ ಸಾರ್ವಜನಿಕ ಸುದ್ದಿಯ ಬಗ್ಗೆ ಅಭಿಪ್ರಾಯವನ್ನು ಪ್ರಕಟಿಸುವ ನಿಯತಕಾಲಿಕೆಯೇ ವೃತ್ತಪತ್ರಿಕೆ. ಪ್ರಸ್ತುತ ಗಮನದಲ್ಲಿರುವ ರಾಜಕೀಯ ಘಟಕದಲ್ಲಿ ಪತ್ರಿಕೆ ಮತ್ತು ಪ್ರಭುತ್ವದ ನಡುವೆ ಒಂದು ಗೊತ್ತಾದ ಸಂಬಂಧವಿರುತ್ತದೆ. ಹಾಗಾಗಿ ಯಾವುದೇ ಭೂ-ರಾಜಕೀಯ ಘಟಕದಲ್ಲಿನ ವೃತ್ತಪತ್ರಿಕೆಗಳ ಪಾತ್ರವು ಅಲ್ಲಿ ಪ್ರಸ್ತುತವಿರುವ ರಾಜಕೀಯ ಪದ್ಧತಿಯ ಚೌಕಟ್ಟಿನೊಳಗೆ ಮುಂದೊಡ್ಡಿದಾಗ ಮಾತ್ರ ಅರ್ಥವಾಗುತ್ತದೆ. ಕರ್ನಾಟಕದಲ್ಲಿ

ಸ್ವಾತಂತ್ರ್ಯ ಪೂರ್ವದ ಸಂದರ್ಭದಲ್ಲಿ ಪ್ರಚಲಿತವಿದ್ದ ಎರಡು ಭಿನ್ನವಾದ ರಾಜಕೀಯ ಪದ್ಧತಿಗಳ ಪೈಕಿ ಪ್ರೆಸಿಡೆನ್ಸಿಗಳ ನೇರವಾದ ಬ್ರಿಟಿಷ್ ಆಡಳಿತವು ಹೆಚ್ಚು ಚರ್ಚಿತವಾದದ್ದಾಗಿದೆ. ದೇಶೀಯ ಸಂಸ್ಥಾನಗಳ ಬಗ್ಗೆ ಬ್ರಿಟಿಷ್ ಸಾಮ್ರಾಜ್ಯಶಾಹಿ ತಳೆದ ಧೋರಣೆ ಮೂಲಕ ಮೈಸೂರಿನ ರಾಜಕೀಯ ಪದ್ಧತಿ ರೂಪುಗೊಂಡಿತಲ್ಲದೆ ಪರಮಾಧಿಕಾರ ಪರಿಕಲ್ಪನೆಯಲ್ಲಿ ಇದು ಅತ್ಯಂತ ಪರಿಣಾಮಕಾರಿಯಾಗಿ ಪ್ರತಿಫಲಿತವಾಗಿದೆ.[೨]

ಬ್ರಿಟಿಷ್ ಭಾರತೀಯ ರಾಜಕೀಯ ಕ್ರಿಯೆಯಲ್ಲಿ ಒಂದು ಶತಮಾನಕ್ಕೂ ಹೆಚ್ಚು ಕಾಲ ಪರಮಾಧಿಕಾರ ಪರಿಕಲ್ಪನೆ ಚಲಾವಣೆಯಲ್ಲಿದ್ದು ಬಳಕೆಯಾಗಿದ್ದರೂ ಅದರ ಸ್ಪಷ್ಟ ನಿರೂಪಣೆ ಆಗಲೇ ಇಲ್ಲ; ಇದಕ್ಕೆ ಕಾರಣ ಹಾಗೆ ಅದನ್ನು ಅಸ್ಪಷ್ಟವಾಗಿ ಉಳಿಸುವುದರಿಂದ ಸಾಮ್ರಾಜ್ಯಶಾಹಿಗೆ ಅನುಕೂಲವಾಗಿತ್ತು. ದೇಶೀಯ ರಾಜರ ಮೇಲೆ ಈಸ್ಟ್ ಇಂಡಿಯಾ ಕಂಪನಿಯು ತನ್ನ ಸಾರ್ವಭೌಮತ್ವವನ್ನು ಸ್ಥಾಪಿಸಿದ ಬಳಿಕ ಪರಮಾಧಿಕಾರವೆಂಬ ಪರಿಭಾಷೆಯನ್ನು ಜಾರಿಗೆ ತಂದರು.[೩] ಕಾರಣ ಪೂರ್ವಕ ಚಿಂತನೆಯ ಫಲವಾಗಿ ಇದು ಮೂಡಿಬರದೆ ರಾಜಕೀಯ ಅಗತ್ಯ ಹಾಗೂ ಆಡಳಿತಾತ್ಮಕ ಅನಿವಾರ್ಯತೆಯ ಫಲವಾಗಿ ಜನ್ಯವಾದದ್ದಾಗಿದೆ.[೪] ಬ್ರಿಟಿಷ್ ಭಾರತೀಯ ರಾಜಕಾರಣದ ಭಾಷೆಗೆ ಪರಮಾಧಿಕಾರವೆಂಬ ಪದ ಸೇರಿಕೊಂಡ ನಂತರವೂ ಕೂಡ ಬಹಳ ಕಾಲದವರೆಗೆ ಇದರ ನಿರೂಪಣೆಯ ಪರಿಧಿಯನ್ನು ಗುರುತು ಮಾಡುವ ಚರ್ಚೆ ನಡೆಯಿತಾದರೂ ೧೯೪೭ರಲ್ಲಿ ಇದು ಕೈಬಿಟ್ಟು ಹೋಗುವತನಕ ಬಗೆಹರಿಯದ ಜಿಜ್ಞಾಸೆಯಾಗಿಯೇ ಉಳಿಯಿತು.[೫]

೧೭೯೯ರಲ್ಲಿ ಟಿಪ್ಪು ಪತನವಾದ ಬಳಿಕ ಮೈಸೂರು ರಾಜ್ಯವು ಈಸ್ಟ್ ಇಂಡಿಯಾ ಕಂಪನಿಯ ಉಪಾಂಗವಾಗಿ ಪರಿಣಮಿಸಿದ್ದು ಪರಮಾಧಿಕಾರದ ಚೌಕಟ್ಟಿನೊಳಗೆಯೇ ಎಂಬುದನ್ನು ನಾವು ನೆನಪಿಡಬೇಕು.[೬] ಸಾಮ್ರಾಜ್ಯಶಾಹಿ ರಾಜಕೀಯ ಪಾಲನೆಯಲ್ಲಿ ಮೈಸೂರು ಈ ರೀತಿಯೇ ಮುಂದುವರಿಯಿತು. ಮೈಸೂರು ಸಂಸ್ಥಾನವು ಬ್ರಿಟಿಷ್ ಪರಮಾಧಿಕಾರದ ಸೃಷ್ಟಿಯೆಂಬುದು ರಾಜಕೀಯವಾದ ಸತ್ಯಾಂಶವಾಗಿದ್ದರೂ ಕಾನೂನಿನ ರೀತ್ಯಾ ಮಿಥ್ಯವಾಗಿದೆ; ಜೊತೆಗೆ ರಾಜ್ಯವು ಸಾಮ್ರಾಜ್ಯಶಾಹಿ ಸರ್ಕಾರದ ಅಣತಿಗೆ ಅನುಗುಣವಾಗಿ ಕೆಲಸ ಮಾಡಿತು.

ಐವತ್ತು ವರ್ಷಗಳ ಬ್ರಿಟಿಷರ ನೇರ ಆಡಳಿತದ ನಂತರ ೧೮೮೧ರಲ್ಲಿ ಮೈಸೂರಿನ ಆಡಳಿತವನ್ನು ಒಡೆಯರಿಗೆ ಹಸ್ತಾಂತರ ಮಾಡಲಾಯಿತು. ಹೀಗೆ ಹಸ್ತಾಂತರವಾದ ಕೂಡಲೇ ಮೈಸೂರು ಪ್ರತಿನಿಧಿ ಸಭೆ ನಿರ್ಮಾಣವಾಯಿತು; ಇದಾದ ಬಳಿಕ ೧೯೦೭ರಲ್ಲಿ ಮೈಸೂರು ಶಾಸನ ಮಂಡಳಿ ಅಸ್ತಿತ್ವಕ್ಕೆ ಬಂದಿತು.[೭] ಮೈಸೂರು ರಾಜ್ಯದ ಆಡಳಿತ ಪದ್ಧತಿಯಲ್ಲಿ ಅಧಿಕಾರವು ಮಹಾರಾಜರು, ದಿವಾನರು ಮತ್ತು ಕಾರ್ಯಪಾಲಕ ಮಂಡಳಿ ಸಚಿವ ಸಂಪುಟದಂತೆ ಕೆಲಸಮಾಡುತ್ತಿದ್ದ ಒಂದು ವ್ಯವಸ್ಥೆ- ನಡುವೆ ಹಂಚಿಕೆಯಾಗಿತ್ತು. ಪರಮಾಧಿಕಾರ ಕೊನೆಗೊಳ್ಳುವ ತನಕ, ಪ್ರತಿನಿಧಿ ಸಭೆ ಮತ್ತು ಶಾಸನ ಮಂಡಳಿಗಳು ಮೇಲು ಪ್ರತಿನಿಧಿ ಸಭೆಗಳಾಗಿ ಮಾತ್ರ ಉಳಿದವು. ಜನರೊಡನೆಯಾಗಲಿ ಅಥವಾ ಅವರ ಪ್ರತಿನಿಧಿಗಳೊಡನೆಯಾಗಲಿ ಅಧಿಕಾರವನ್ನು ಹಂಚಿಕೊಳ್ಳಲಿಲ್ಲ.[೮]

ನೇರವಾದ ಬ್ರಿಟಿಷ್ ಆಡಳಿತಕ್ಕೆ ಸಂಬಂಧಿಸಿದ ವಲಯಗಳಲ್ಲಿನ ವೃತಪತ್ರಿಕೆಗಳು ಬ್ರಿಟಿಷ್ ಭಾರತೀಯ ಕಾನೂನು ಪದ್ಧತಿಗೆ ಒಳಪಟ್ಟರೆ, ಮೈಸೂರು ಸಂಸ್ಥಾನದಲ್ಲಿ ಮಾತ್ರ ದ್ವಂದ್ವ ಪರಿಶೀಲನೆಯಲ್ಲಿ ಕೆಲಸ ಮಾಡಬೇಕಾದ ಪರಿಸ್ಥಿತಿ ಒದಗಿತ್ತು. ರಾಜ್ಯದಲ್ಲಿ ರೂಪುಗೊಂಡಿದ್ದ ನಿಯಮಗಳು ಹಾಗೂ ಈ ರಾಜ್ಯಕ್ಕೆಂದೇ ವಿಶೇಷವಾಗಿ ಸಿದ್ಧವಾದ ಹಾಗೂ ಬ್ರಿಟಿಷ್ ಭಾರತೀಯ ನಿಯಮಗಳು- ಎರಡೂ ಸೇರಿ ಪತ್ರಿಕಾ ಸ್ವಾತಂತ್ರ್ಯವನ್ನು ಕಡಿತಗೊಳಿಸಿತ್ತು. ಬ್ರಿಟಿಷ್ ಭಾರತೀಯ ನಿಯಾಮಗಳಿಗ ಸಂಬಂಧಿಸಿದಂತೆ ಹೇಳುವುದಾದರೆ ಪರಮಾಧಿಕಾರಕ್ಕೆ ಮಾತ್ರ ಪತ್ರಿಕೆಯನ್ನು ನಿಯಂತ್ರಿಸುವ ಅಧಿಕಾರ ಇತ್ತು.

ರಾಜಾರಾಮ್ ಮೋಹನ್‌ರಾಯ್ ಮತ್ತು ಅವರ ಗೆಳೆಯರು ಕಲ್ಕತ್ತಾ ಸರ್ವೋತ್ಕೃಷ್ಟ ನ್ಯಾಯಾಲಯಕ್ಕೆ ನೆನಪು ಮಾಡಿಕೊಡುವಾಗ ಕರ್ನಾಟಕದಲ್ಲಿ ವೃತ್ತಪತ್ರಿಕೆಗಳು ಇರಲಿಲ್ಲ. ೧೮೪೩ರಲ್ಲಿ ಬಾಸಲ್ ಮಿಷನ್ನಿನವರು ಮಂಗಳೂರಿನಲ್ಲಿ ಹೊರಡಿಸಿದ 'ಮಂಗಳೂರ ಸಮಾಚಾರ' ವೇ ಕರ್ನಾಟಕದ ಮೊದಲ ಪತ್ರಿಕೆ. ಈ ಪತ್ರಿಕೆ ಹಾಗೂ ಇದರ ನಂತರ ಪ್ರಾರಂಭವಾದ ಅನೇಕ ಪತ್ರಿಕೆಗಳು ಮಿಷನರಿಗಳು ಸ್ಥಾಪಿಸಿದಂಥವು. ೧೮೬೦ರ ದಶಕದ ಕೊನೆಯ ಸರಿ ಸುಮಾರಿಗೆ ಕರ್ನಾಟಕದಲ್ಲಿ ಹೊಸ ರೀತಿಯ ಪತ್ರಿಕೋದ್ಯಮ ಚಟುವಟಿಕೆ ಕಾಣಿಸಿಕೊಂಡಿತು. ಪತ್ರಿಕೆಗಳು ಸಾರ್ವಜನಿಕ ವಿಷಯಗಳ ಬಗ್ಗೆ ಅದರಲ್ಲೂ ವಿಶೇಷವಾಗಿ ರಾಷ್ಟ್ರೀಯ ರಾಜಕೀಯ ಘಟನಾವಳಿಗಳ ಬಗ್ಗೆ ವಿಶ್ಲೇಷಣೆ ಮಾಡುವುದನ್ನು ಪ್ರಾರಂಭಿಸಿದವು.

ಕರ್ನಾಟಕದಲ್ಲಿ ಹೊಸದಾಗಿ ಪ್ರಾರಂಭವಾದ ಈ ರಾಷ್ಟ್ರವಾದಿ ಪತ್ರಿಕೋದ್ಯಮವನ್ನು ೧೮೬೫ರಲ್ಲಿ ಬೆಂಗಳೂರಿನಲ್ಲಿ ಸ್ಥಾಪಿತವಾದ ಕರ್ನಾಟಕ ಪ್ರಕಾಶಿಕದಂಥ ಪತ್ರಿಕೆಯಲ್ಲಿ ಕಾಣಬಹುದು; ಹಾಗೆಯೇ ೧೮೭೨-೭೩ರಲ್ಲಿ ಬೆಳಗಾವಿಯ 'ಹಿತಬೋಧಿನಿ' , ಧಾರವಾಡದ 'ಚಂದ್ರೋದಯ' ಮತ್ತು ಬೊಂಬಾಯಿಯ 'ಕನ್ನಡ ಸುವಾರ್ತೆ' ಈ ಚಟುವಟಿಕೆಯನ್ನು ಮುಂದುವರಿಸಿದವು. ದೇಶದ ಬೇರೆ ಭಾಗಗಳಲ್ಲಿ ಪ್ರಾರಂಭವಾಗುತ್ತಿದ್ದ ಕಾಲದಲ್ಲೇ ಕರ್ನಾಟಕದಲ್ಲಿ ರಾಷ್ಟ್ರವಾದಿ ರಾಜಕೀಯ ಪತ್ರಿಕೋದ್ಯಮ ಪ್ರಾರಂಭವಾಯಿತೆಂದು ಹೇಳಬಹುದು.

ಬದುಕಿನ ಬೇರೆ ಬೇರೆ ಅಂಗಗಳನ್ನು ಕುರಿತು ಪತ್ರಿಕೆಗಳು ವಿಚಾರ ಪ್ರಸಾರ ಮಾಡುವ ಮಾಧ್ಯಮಗಳಾದ ಪರಿಣಾಮದಿಂದ ಅವು ಬೌದ್ಧಿಕ ಚರಿತ್ರೆಯನ್ನು ತಿಳಿಸುವ ಮೂಲಗಳಾಗಿ ಗೋಚರಿಸುತ್ತವೆ. ದೇಶೀಯ ಪತ್ರಿಕೆಗಳು ಪ್ರಸಾರ ಮಾಡಿದ ವಿಚಾರಗಳಲ್ಲಿ ಮುಖ್ಯವಾದ ಎರಡು ಅಂಶಗಳನ್ನು ನೆನೆಯುವುದಾದರೆ: ಒಂದು ಪಾಶ್ಚಿಮಾತ್ಯ ಪ್ರಭಾವದಿಂದ ಉದ್ಭವವಾದದ್ದು, ಇನ್ನೊಂದು ಆಧುನಿಕ ಸಂದರ್ಭಕ್ಕೆ ಹೊಂದಿಕೊಳ್ಳುವಂಥ ರೀತಿಯಲ್ಲಿ ದೇಶೀಯ ವಿಚಾರಗಳನ್ನು ಅಳವಡಿಸಿಕೊಂಡದ್ದು.

ಪತ್ರಿಕೆಯನ್ನು ಪ್ರಕಟಿಸುವುದೆಂದರೆ ಪುಟಗಳನ್ನು ತುಂಬುವುದು ಹಾಗೂ ನಿಯತಕಾಲವನ್ನು ಪರಿಪಾಲಿಸುವುದೆಂದ ಮೇಲೆ ಸಹಜವಾಗಿಯೇ ಸಂಪಾದಕರಿಗೆ ಒತ್ತಡವುಂಟಾಯಿತು. ಪತ್ರಿಕೆಯ ಗಾತ್ರ ಏನೇ ಇರಲಿ ಬರೀ ಮಾಹಿತಿಯಿಂದಲೇ ಪುಟಗಳನ್ನು ತುಂಬುವುದಕ್ಕಾಗದ ಕಾರಣ ಸಾಹಿತ್ಯ ಕೂಡ ಪತ್ರಿಕೆಯಲ್ಲಿ ಸ್ಥಾನ ಪಡೆಯಿತು. ಈ ಬೆಳವಣಿಗೆಯನ್ನು ವಿಶೇಷವಾಗಿ ದೇಶೀಯಭಾಷೆಗಳ ಪತ್ರಿಕೆಗಳಲ್ಲಿ ಕಾಣಬಹುದಾಗಿದೆ. ಒಂದು ಮಿತಿಯಲ್ಲಿ ಕಾವ್ಯ ಉಪಯೋಗಕ್ಕೆ ಬರುವಂತಿದ್ದರೆ, ಪ್ರಬಂಧ, ಕಾದಂಬರಿ, ಸಣ್ಣಕಥೆಗಳು ಹಾಗೂ ಪುಸ್ತಕ ವಿಮರ್ಶೆಯಂಥ ಗದ್ಯಭಾಗಗಳು ಪತ್ರಿಕೆಗಳಲ್ಲಿ ಅಚ್ಚಾಗತೊಡಗಿದವು. ಕನ್ನಡ ಗದ್ಯವನ್ನು ಪ್ರಕಟಿಸಿದಂಥ ಪತ್ರಿಕೆಗಳಲ್ಲಿ ಕೆಲವನ್ನು ಹೆಸರಿಸಬಹುದಾದರೆ ಮುಖ್ಯವಾಗಿ ನೆನಪಾಗುವಂಥವು: ವಾಗ್ಭೂಷಣ, ಸುದರ್ಶನ, ಸುವಾಸಿನಿ, ಶ್ರೀಕೃಷ್ಣಸೂಕ್ತಿ, ಜಯ ಕರ್ನಾಟಕ ಹಾಗೂ ಕನ್ನಡ ನಡೆಗನ್ನಡಿ. ಇದರ ನಂತರ ಜೀವನ ಚರಿತ್ರೆ ಹಾಗೂ ಇತಿಹಾಸಕ್ಕೆ ಸಂಬಂಧಿಸಿದ ಲೇಖನಗಳು ಪತ್ರಿಕೆಗಳಲ್ಲಿ ಪ್ರಕಟವಾಗಿ ಜನರು ತಮ್ಮ ಚರಿತ್ರೆಯನ್ನು ತಿಳಿಯುವಂತಾಯಿತು. ಈ ಬರಹಗಳ ಮೌಲ್ಯ ಏನೇ ಇರಲಿ ಓದುಗರಲ್ಲಿ ಐತಿಹಾಸಿಕ ಪ್ರಜ್ಞೆ ಮೂಡಿಸುವುದರಲ್ಲಿ ಇವು ಬಹಳ ಉಪಯುಕ್ತವಾಗಿವೆ ಎಂಬುದನ್ನು ನೆನಪಿಡಬೇಕು. ಪ್ರತಿಯೊಂದು ಸುದ್ದಿ ಪತ್ರಿಕೆಯೂ ಸಹ ಭಾರತದಲ್ಲಿ ಮತ್ತು ವಿದೇಶಗಳಲ್ಲಿ ವಿಜ್ಞಾನ, ತಂತ್ರಜ್ಞಾನ ಮತ್ತು ಇದರ ಗಮನ ಸೆಳೆಯುವ ಬೆಳವಣಿಗೆಗೆ ಸಂಬಂಧಿಸಿದಂತೆ ವಿಪುಲವಾದ ಮಾಹಿತಿಯನ್ನು ಪ್ರಕಟಿಸಿತು. ಕೊನೆಯದಾಗಿ ಹರ್ಡೀಕರ್ ಮಂಜಪ್ಪನವರು ಪ್ರಾರಂಭಿಸಿದ 'ಶರಣ ಸಂದೇಶ' ಹಾಗೂ ಆಲೂರು ವೆಂಕಟರಾಯರ 'ಜಯ ಕರ್ನಾಟಕ' ಪತ್ರಿಕೆಗಳು ಆಧುನಿಕ ಕಾಲದ ಅಗತ್ಯಕ್ಕೆ ಭಾರತೀಯ ಧಾರ್ಮಿಕ ಹಾಗೂ ಸಾಂಸ್ಕೃತಿಕ ಚಿಂತನೆಗಳನ್ನು ಅಳವಡಿಸಲು ಪ್ರಯತ್ನಿಸಿದವು.[೧೧]

ರಾಜಕೀಯ ರಾಷ್ಟ್ರವಾದದ ಬೆಳವಣಿಗೆಯು ಸಾಮಾಜಿಕ ಸುಧಾರಣಾ ರೀತಿಯ ಬೆನ್ನ ಹಿಂದೆ ಬಂದದ್ದನ್ನು ಗಮನಿಸಬೇಕು. ಹಿಂದೂ ಸಮಾಜಕ್ಕೆ ಸೇರಿದ ಮೇಲ್ವರ್ಗದ ಜನರು ಸಂಘಟನೆಗಳ ಮೂಲಕ ಹಾಗೂ ವೈಯಕ್ತಿಕ ನೆಲೆಯಲ್ಲಿ ಅಂತರ್ ವೀಕ್ಷಣೆ ಮಾಡಿಕೊಂಡು ಸಾಮಾಜಿಕ ಸನ್ನಿವೇಶದಲ್ಲಿ ತಾವು ಅನುಸರಿಸುತ್ತಿದ್ದ ಆಚಾರ, ವಿಚಾರಗಳಲ್ಲಿ ಸುಧಾರಣೆ ತರಲು ಕಾರ್ಯಕ್ರಮಗಳನ್ನು ಪ್ರಾರಂಭಿಸಿದರು. ಸಮಾಜ ಸುಧಾರಣೆಯ ಈ ಧೋರಣೆಯು ಪತ್ರಿಕೆಗಳಲ್ಲಿಯೂ ಕೂಡ ಪ್ರತಿಫಲನವಾಗಿದೆ. ಈ ಸುಧಾರಣೆ ರೀತಿ ಬಂದರ್ಭದಲ್ಲಿ ಶಾಸ್ತ್ರಗ್ರಂಥಗಳಿಂದ ಪ್ರಾರಂಭವಾಯಿತೇ ಹೊರತು ಸನ್ನಿವೇಶದಿಂದಲ್ಲ ಎಂಬುದು ಕುತೂಹಲದ ಸಂಗತಿ. ಶಾಸ್ತ್ರಗಳಿಗೆ ಹೋಗಿ ಕೆಲವು ಸಣ್ಣ ಬದಲಾವಣೆಗಳನ್ನು ತರುವುದಾಗಿತ್ತಲ್ಲದೆ, ಅವುಗಳ ಸಾಂಪ್ರದಾಯಿಕ ನೆಲೆಯನ್ನು ಬುಡಸಮೇತ ಅಲುಗಾಡಿಸುವುದು ಉದ್ದೇಶವಾಗಿರಲಿಲ್ಲ. ಒಂದು ಪಥದಲ್ಲಿ ಅದು ಹಿಂದೂ ಸಾಮಾಜಿಕ ವ್ಯವಸ್ಥೆಯನ್ನು ಆಧುನಿಕಗೊಳಿಸುವ, ಈ ಕಾಲಕ್ಕೆ ಒಗ್ಗಿಸುವ ಪ್ರಯತ್ನವಾಗಿತ್ತು ಎನ್ನಬೇಕು. ಸುಧಾರಣೆ ಚಟುವಟಿಕೆಗಳು ಮತ್ತು ಬರವಣಿಗೆಗಳು ಹಿಂದೂ ಸಮಾಜದ ಮಹಿಳೆಯರನ್ನು ಗಮನದಲ್ಲಿರಿಸಿಕೊಂಡವು; ಮಹಿಳೆಯರ ಸ್ಥಾನಮಾನ ಅತ್ಯಂತ ಚಿಂತಾಜನಕ ಸ್ಥಿತಿಯಲ್ಲಿದ್ದಿತು.[೧೨]

ಕರ್ನಾಟಕದಲ್ಲಿ ರಾಷ್ಟ್ರವಾದಿ ಪತ್ರಿಕೆಗಳು ಮೂಡಿಬಂದಿದ್ದರೂ ಸಹ ಬ್ರಿಟಿಷ್ ಕರ್ನಾಟಕ ಮತ್ತು ಮೈಸೂರು ಪ್ರಾಂತ್ಯದ ಕರ್ನಾಟಕದ ಜನತೆ ರಾಷ್ಟ್ರೀಯ ಚಳವಳಿಗೆ ತೋರಿದ ಪ್ರತಿಕ್ರಿಯೆಯಲ್ಲಿ ಭಿನ್ನತೆ ಇದ್ದಿತು. ಬೊಂಬಾಯಿ ಮತ್ತು ಮದರಾಸು ಪ್ರೆಸಿಡೆನ್ಸಿಗಳ ಕರ್ನಾಟಕದ ವಲಯದಲ್ಲಿದ್ದಂತೆ ಮೈಸೂರು ವಲಯದಲ್ಲಿ ನೇರವಾದ ವಸಾಹತು ನಿಯಂತ್ರಣ ಇರಲಿಲ್ಲ. ಮಹಾರಾಜರ ಆಡಳಿತದಿಂದಾಗಿ ಮೇಲ್ವರ್ಗದವರ ರಾಜಕೀಯ ಧೋರಣೆ ಇಲ್ಲಿ ಒಡೆದು ಕಾಣುವಂಥ ಸನ್ನಿವೇಶವಿರಲಿಲ್ಲ.

ಮೈಸೂರಿನ ಬುದ್ಧಿಜೀವಿಗಳು ಬೌದ್ಧಿಕ ಮಟ್ಟದಲ್ಲಿ ರಾಷ್ಟ್ರವಾದಿ ಚರ್ಚೆಗಳಲ್ಲಿ ಮುಳುಗಿದರು. ರಾಜಕೀಯ ಉದ್ದೇಶಗಳಿಗಾಗಿ ಸಾರ್ವಜನಿಕ ಸಂಘಗಳು ಮೈಸೂರಿನಲ್ಲಿ ಪ್ರಾರಂಭವಾಗಲಿಲ್ಲ. ೧೮೮೧ರಲ್ಲಿ ದೇಶೀಯ ಆಡಳಿತ ಪುನಸ್ಥಾಪನೆಗೊಂಡಾಗ ಮೇಲ್ವರ್ಗದವರು ರಾಜಕೀಯವಾಗಿ ತೃಪ್ತರಾದ ಕಾರಣ ಸ್ವಲ್ಪ ಕಾಲ ಮಹಾರಾಜರನ್ನು ಬೆಂಬಲಿಸಿದರು. ದೇಶದ ಇತರ ಭಾಗಗಳಲ್ಲಿ ದೃಢಗೊಳ್ಳುತ್ತಿದ್ದ ರಾಷ್ಟ್ರೀಯ ಚಳವಳಿಯ ಪ್ರಭಾವದಿಂದ ದೂರ ಉಳಿಯಲಾರದೆ ಪತ್ರಿಕೆಗಳ ಮೂಲಕ ಮೈಸೂರಿನ ಮೇಲ್ವರ್ಗ ರಾಷ್ಟ್ರವಾದಿ ವಿಷಯಗಳನ್ನು ಚರ್ಚಿಸತೊಡಗಿತು.[೧೩] ರಾಜ್ಯದ ಬ್ರಾಹ್ಮಣೇತರರ ಚಳವಳಿ ಬೆಳೆಯಲಾರಂಭಿಸಿದಾಗ ೧೯೨೦ ದಶಕದಲ್ಲಿ ಈ ವರ್ಗದ ಬೆಂಬಲ ಬೇರೆ ಕಡೆ ಪಲ್ಲಟವಾಯಿತು. ಇಂಡಿಯನ್ ನ್ಯಾಶನಲ್ ಕಾಂಗ್ರೆಸ್ಸಿನೊಡನೆ ಗುರುತಿಸಿಕೊಂಡ ರಾಜಕೀಯ ಚಳವಳಿಗಾರರು ಮೈಸೂರು ರಾಜ್ಯದಲ್ಲಿ ಇದ್ದರಾದರೂ ಕಾನೂನು ಭಂಗ ಚಳವಳಿ ಹಾಗೂ ಅಸಹಕಾರ ಚಳವಳಿಗಳು ಸ್ಪಷ್ಟವಾಗಿ ರೂಪುಗೊಂಡದ್ದು ೧೯೩೮ರಲ್ಲಿ ಮೈಸೂರು ಕಾಂಗ್ರೆಸ್ ಸ್ಥಾಪನೆಯಾದ ನಂತರವೇ ಎನ್ನಬೇಕು. ಅಸಹಕಾರ ಚಳವಳಿ ಇಲ್ಲದ ಕಡೆಗಳಲ್ಲಿ ಮೈಸೂರು ಪ್ರಾಂತ್ಯದ ಪತ್ರಿಕಾರಂಗ ರಾಷ್ಟ್ರೀಯ ಚಳವಳಿಯನ್ನು ಬೆಂಬಲಿಸಿತು.[೧೪]

ಬ್ರಿಟಿಷ್ ಕರ್ನಾಟಕ ವಲಯಗಳಲ್ಲಿ ರಾಜಕೀಯವಾಗಿ ಬಾಲ ಗಂಗಾಧರ್ ತಿಲಕ್‌ರವರು, ತಮ್ಮ ಮರಣ ಕಾಲದವರೆಗೂ, ಬಹಳ ಗಮನಾರ್ಹವಾದ ಬಲವಾಗಿದ್ದರು, ಮೈಸೂರು ಒಂದನ್ನುಳಿದು ಕರ್ನಾಟಕದ ಎಲ್ಲ ಭಾಗಗಳೂ ತಿಲಕರಿಗೆ ನಿಲುಕುವಂತಿದ್ದುವು; ಅವರು ಹೊರಡಿಸುತ್ತಿದ್ದ ಕೇಸರಿ ಮತ್ತು ಮರಾಠಾ ಪತ್ರಿಕೆಗಳು ಈ ವಲಯಗಳಲ್ಲಿ ತುಂಬಾ ಪ್ರಭಾವ ಬೀರುತ್ತಿದ್ದವು. ಬ್ರಿಟಿಷ್ ಕರ್ನಾಟಕ ವಲಯಗಳಲ್ಲಿ ಮರಾಠಿ ಭಾಷೆಯನ್ನು ಹೇರಿದ್ದ ಪರಿಣಾಮವಾಗಿ ಕೇಸರಿ ಪತ್ರಿಕೆಯ ಮರಾಠಿ ಅವತರಣಿಕೆ ಹೆಚ್ಚು ಪ್ರಭಾವಶಾಲಿಯಾಗಿದ್ದಿತು. ೧೮೯೬-೯೭ರಲ್ಲಿ ಧಾರವಾಡ ಮತ್ತು ಇತರ ಕಡೆ ಪ್ಲೇಗುರೋಗ ಎರಗಿದ

ನಂತರ ಬೊಂಬಾಯಿ ಕರ್ನಾಟಕದಲ್ಲಿ ಬಾಲಗಂಗಾಧರ ತಿಲಕರು ಕರನಿರಾಕರಣೆ ಆಂದೋಲನವನ್ನು ಪ್ರಾರಂಭಿಸುವ ಮಾತನ್ನಾಡಿದರು. ಈ ಭೀಕರ ರೋಗವನ್ನು ತಡೆಗಟ್ಟುವ ದಿಶೆಯಲ್ಲಿ ಸರ್ಕಾರ ಕೈಗೊಂಡ ಕ್ರಮದ ಬಗ್ಗೆ ಕೇಸರಿ ಪತ್ರಿಕೆಯಲ್ಲಿ ತಿಲಕರು ತುಂಬಾ ಕಟುವಾಗಿ ಟೀಕಿಸಿದ್ದರು. ಸ್ಥಳೀಯ ಪತ್ರಿಕೆಗಳೂ ಸಹ ತಿಲಕರ ಅಭಿಪ್ರಾಯವನ್ನು ಪುಷ್ಟೀಕರಿಸಿದ್ದುವಲ್ಲದೆ ಈ ರೋಗವನ್ನು ತಡೆಯುವಲ್ಲಿ ಸರ್ಕಾರ ಅನುಸರಿಸಿದ್ದ ಕಾರ್ಯಕ್ರಮವನ್ನು ಕುರಿತು ಖಾರವಾಗಿ ಬರೆದಿದ್ದುವು. ಮೈಸೂರಿನ ಕೆಲವು ಭಾಗಗಳಿಗೆ ಪ್ಲೇಗರೋಗ ಹರಡಿತ್ತಲ್ಲದೆ ಜನರು ಪ್ರತಿಭಟನಾ ಮೆರವಣಿಗೆಗಳ ರೂಪದಲ್ಲಿ ಇಲ್ಲಿ ಇದಕ್ಕೆ ಪ್ರತಿಕ್ರಿಯೆ ವ್ಯಕ್ತಪಡಿಸಿದರು. ಪತ್ರಿಕೆಗಳ ಸಂಖ್ಯೆ ಇಲ್ಲಿ ಕಡಿಮೆ ಇತ್ತು ಹಾಗೂ ಈ ಸಂಗತಿಯ ಬಗ್ಗೆ ತುಂಬಾ ಮೆಲುದನಿಯ ಟೀಕೆಯನ್ನು ಈ ಪತ್ರಿಕೆಗಳು ಪ್ರಕಟಿಸಿದುವು. ವಸಾಹತು ಅಧಿಕಾರ ಈ ಪ್ರಾಂತ್ಯದಲ್ಲಿ ಅಷ್ಟಾಗಿ ಎದ್ದು ಕಾಣದ ಕಾರಣದಿಂದಲೋ ಏನೋ ಪ್ರತಿಕ್ರಿಯೆ ಸ್ವಲ್ಪ ತಣ್ಣಗೆಯೇ ಇತ್ತೆಂದು ಹೇಳಬಹುದು.[೧೫]

ಕರ್ನಾಟಕದ ಪತ್ರಿಕಾ ಇತಿಹಾಸದಲ್ಲಿ ೧೯೦೮ ಮತ್ತು ೧೯೧೦ ಬಹಳ ಪ್ರಮುಖವಾದ ಇಸವಿಗಳಾಗಿ ಗೋಚರಿಸುತ್ತವೆ. ಇದಕ್ಕೆ ಕಾರಣ, ಈ ವರ್ಷಗಳಲ್ಲಿಯೇ ಬ್ರಿಟಿಷ್ ಕರ್ನಾಟಕ ಮತ್ತು ಮೈಸೂರು ರಾಜ್ಯಗಳಿಗೆ ಸಂಬಂಧಿಸಿದಂತೆ ಪತ್ರಿಕಾ ನಿಯಂತ್ರಣದ ದೃಷ್ಟಿಯಿಂದ ಎರಡು ನಿಯಮಗಳನ್ನು ಜಾರಿ ಗೊಳಿಸಲಾಯಿತು. ಆಡಮ್ಸ್ ಪ್ರೆಸ್ ಆರ್ಡಿನೆನ್ಸ್ ಮಾದರಿಯಲ್ಲಿ ಮೈಸೂರು ವೃತ್ತಪತ್ರಿಕಾ ಕಾಯಿದೆ III ಅನ್ನು ೧೯೦೮ರಲ್ಲಿ ಜಾರಿಗೊಳಿಸಿದರೆ ಬೆಂಗಳೂರಿನ ಸಿವಿಲ್ ಹಾಗೂ ಮಿಲಿಟರಿ ಸ್ಟೇಷನ್‌ನಲ್ಲಿ ಅದೇ ರೀತಿಯ ಕಾನೂನನ್ನು ೧೮೯೧ರಲ್ಲಿ ಜಾರಿಗೊಳಿಸಲಾಯಿತು.[೧೬] ಅಧಿಕೃತವಾದ ಚರ್ಚೆ ಮತ್ತು ಚಿಂತನೆಯ ಮೂಲಕ ಈ ಬಗೆಯ ದೋಷಪೂರಿತ ಪತ್ರಿಕಾ ಕಾನೂನನ್ನು ಅನುಷ್ಠಾನಕ್ಕೆ ತಂದ ಉದ್ದೇಶವೆಂದರೆ, ಮೈಸೂರು ಪತ್ರಿಕೆಗಳು ಪರಮಾಧಿಕಾರಕ್ಕೆ ಅವಿಧೇಯವಾದ ರೀತಿಯಲ್ಲಿ ಬರೆಯಲು ತೊಡಗಿದ್ದು. ಪರಮಾಧಿಕಾರದ ಒತ್ತಡದಿಂದಾಗಿಯೇ ಈ ಕಾನೂನನ್ನು ಜಾರಿಗೊಳಿಸಲಾಗಿತ್ತು.[೧೭] ಮೈಸೂರಿನ ಸುಮಾರು ಐದು ಪತ್ರಿಕೆಗಳು ಈ ಕಾನೂನನ್ನು ಪ್ರತಿಭಟಿಸಿ ತಮ್ಮ ಪ್ರಕಟಣೆಯನ್ನು ನಿಲ್ಲಿಸಿದವು; ಆ ಸಮಯದಲ್ಲಿ ದೇಶದ ಪ್ರಮುಖವಾದ ಎಲ್ಲ ಪತ್ರಿಕೆಗಳೂ ಪತ್ರಿಕಾ ನಿಯಂತ್ರಣ ಕಾನೂನನ್ನು ಕುರಿತು ತಮ್ಮ ಅಭಿಪ್ರಾಯವನ್ನು ಅಭಿವ್ಯಕ್ತಿಸಿದವು; ಇಂಥ ಹೇಯವಾದ ಕಾನೂನನ್ನು ಹೇರಲು ಹುನ್ನಾರ ನಡೆಸಿದ ಎಲ್ಲರನ್ನೂ ತುಂಬಾ ಕಠಿಣವಾದ ಭಾಷೆಯಲ್ಲಿಯೇ ನಿಂದಿಸಿದವು.[೧೮] ರಾಜಕೀಯ ಚಳವಳಿಗಾರರೂ ಪ್ರಮುಖ ಪತ್ರಕರ್ತರೂ ಆಗಿದ್ದ ಆಲೂರು ವೆಂಕಟರಾಯರೇ ದಾಖಲುಗೊಳಿಸಿರುವಂತೆ ಬ್ರಿಟಿಷ್ ಕರ್ನಾಟಕದ ಅನೇಕ ಪತ್ರಿಕೆಗಳು ತಮ್ಮ ಪ್ರಕಟಣೆಯನ್ನು ನಿಲ್ಲಿಸಿದುವು; ಇನ್ನು ಕೆಲವು ೧೯೧೦ರ ಪತ್ರಿಕಾ ಕಾನೂನು ಜಾರಿಯಾದ ಬಳಿಕ ರಾಜಕೀಯ ವಿಷಯಗಳ ಮೇಲೆ ಬರೆಯುವುದನ್ನು ನಿಲ್ಲಿಸಿದುವು.[೧೯]

ಅಧಿಕೃತ ಚರ್ಚೆಗಳ ಮೂಲಕ ವ್ಯಕ್ತವಾಗುವಂತೆ ೧೯೦೮ ಮತ್ತು ೧೯೧೦ರ ಪತ್ರಿಕಾ ಕಾನೂನುಗಳು ಉಗ್ರಗಾಮಿ ಪ್ರಚಾರ ಮತ್ತು ಚಟುವಟಿಕೆಯನ್ನು ಕಡಿಮೆ ಮಾಡಲು ಅನುಷ್ಠಾನಕ್ಕೆ ಬಂದವಾಗಿವೆ. ಆದರೆ ಮೈಸೂರು ರಾಜ್ಯದಲ್ಲಿ ಈ ಬಗೆಯ ಚಟುವಟಿಕೆಗಳು ಇರಲಿಲ್ಲ. ಬ್ರಿಟಿಷ್ ಕರ್ನಾಟಕದ ಕೆಲವು ಭಾಗಗಳಲ್ಲಿ ಮಾತ್ರ ತಿಲಕರು ೧೯೦೫ ಹಾಗೂ ೧೯೦೭ನೇ ಇಸವಿಗಳಲ್ಲಿ ಸಂಚಾರ ಮಾಡಿ ವಿದೇಶಿ ವಸ್ತುಗಳನ್ನು ಬಹಿಷ್ಕರಿಸಬೇಕೆಂಬುದಾಗಿ ಜನರಿಗೆ ತಿಳಿವಳಿಕೆ ನೀಡುತ್ತಿದ್ದರು. ಅನೇಕ ಸ್ಥಳೀಯ ಪತ್ರಿಕೆಗಳು ಸ್ವದೇಶಿ ಚಟುವಟಿಕೆಯ ಬಗ್ಗೆ ನಿಯತವಾಗಿ ಲೇಖನಗಳನ್ನು ಪ್ರಕಟಿಸುತ್ತಿದ್ದವು ಹಾಗೂ ಗದಿಗಯ್ಯ ಹೊನ್ನಾಪೂರಮಠ, ಆಲೂರು ವೆಂಕಟರಾಯ ಮತ್ತು ಮುದವೀಡು ಕೃಷ್ಣರಾವ್ ಅವರಂಥ ಪತ್ರಕರ್ತರು ಸ್ವದೇಶಿ ಪ್ರಚಾರವನ್ನು ಮುಂದುವರಿಸಿದ್ದರು.[೨೦] ಮೂಲತಃ ತಿಲಕರ ಅನುಯಾಯಿಗಳಾದ ಬ್ರಿಟಿಷ್ ಕರ್ನಾಟಕದ ಒಂದು ದೊಡ್ಡ ಗುಂಪು ೧೯೦೭ರಲ್ಲಿ ಜರುಗಿದ ಸೂರತ್ ಅಧಿವೇಶನದಲ್ಲಿ ಭಾಗವಹಿಸಿತ್ತಲ್ಲದೆ ತಿಲಕರ ಮೇಲೆ ಹಲ್ಲೆ ನಡೆದಾಗ ಅವರನ್ನು ರಕ್ಷಣೆ ಮಾಡಿತ್ತು ಕೂಡ.

ಮೈಸೂರು ರಾಜ್ಯದಲ್ಲಿ ೧೯೦೮ರ ನಂತರ ರಾಷ್ಟ್ರವಾದಿ ಧೋರಣೆ ಮುಂದುವರಿಯಿತು. ಸಾಮ್ರಾಜ್ಯಶಾಹಿ ಅಧಿಕಾರವನ್ನು ಟೀಕಿಸುವ ಬರವಣಿಗೆಗಳ ಜೊತೆಗೆ ತಿಲಕರ ಹೋಂ ರೂಲ್ ಚಳವಳಿಯನ್ನು ಬೆಂಬಲಿಸಿದ್ದರು. ಭಾರತಕ್ಕೆ ಹೋಂ ರೂಲ್ ಬೇಕು ಎಂದು ಮೈಸೂರಿನಲ್ಲಿ ಆಂದೋಲನ ನಡೆಸಿದ ಪ್ರಮುಖರಲ್ಲಿ ಬಹುಮುಖಿ ವ್ಯಕ್ತಿತ್ವದ ಎಂ.ವೆಂಕಟಕೃಷ್ಣಯ್ಯನವರನ್ನು ನೆನೆಯಬೇಕು. ವೆಂಕಟಕೃಷ್ಣಯ್ಯನವರು ಅನೇಕ ಪತ್ರಿಕೆಗಳನ್ನು ಸ್ಥಾಪಿಸಿದವರಲ್ಲದೆ ಭಾರತಕ್ಕೆ ಹೋಂ ರೂಲ್ ಬೇಕೆಂದು ಒತ್ತಾಯಿಸಿದರು. ಪರಮಾಧಿಕಾರ ಹಾಗೂ ರೆಸಿಡೆಂಟರ ಸೂಚನೆಯ ಮೇರೆಗೆ ರಾಜ್ಯ ಸರ್ಕಾರ ವೆಂಕಟಕೃಷ್ಣಯ್ಯನವರ ಮೇಲೆ ೧೯೨೩ರಲ್ಲಿ ಕಾನೂನು ಕ್ರಮ ಜರುಗಿಸಲು ಪ್ರಯತ್ನಿಸಿತಾದರೂ ಸಂಪಾದಕರ ಮೇಲಿನ ಕಾನೂನು ಕ್ರಮ ನಿಲ್ಲುವುದಿಲ್ಲವೆಂದು ಅಭಿಪ್ರಾಯಪಟ್ಟು ಅಷ್ಟಕ್ಕೆ ನಿಲ್ಲಿಸಿಬಿಟ್ಟಿತು.

ಕರ್ನಾಟಕದ ಪ್ರೆಸಿಡೆನ್ಸಿ ವಲಯಗಳಲ್ಲಿ ಪತ್ರಿಕೆಗಳು ತಿಲಕರ ಸ್ವದೇಶಿ ಆಂದೋಲನದಿಂದ ಪ್ರಾರಂಭಿಸಿ ಅಸಹಕಾರ ಚಳವಳಿಯ ಅವಧಿಯವರೆಗೂ ತಮ್ಮ ಪ್ರಚಾರವನ್ನು ಮುಂದುವರಿಸಿತು; ಬ್ರಿಟಿಷ್‌ರ ಅಧಿಕಾರದ ವಿರುದ್ಧ ಜನರು ಚಳವಳಿ ಹೂಡುವಂತೆ ಪ್ರೇರೇಪಿಸಿತು. ಆಗಿಂದಾಗ್ಗೆ ಪತ್ರಿಕೆಗಳನ್ನು ಹತ್ತಿಕ್ಕುತ್ತಾ ಸಂಪಾದಕರನ್ನು ಸೆರೆಮನೆ ಯಲ್ಲಿಡುತ್ತಾ ಸರ್ಕಾರ ತನ್ನ ಕ್ರೌರ್ಯವನ್ನು ಮುಂದುವರಿಸಿತ್ತು. ೧೯೨೧ರ ಜುಲೈ ತಿಂಗಳಿನಲ್ಲಿ ಧಾರವಾಡದಲ್ಲಿ ಮದ್ಯದಂಗಡಿಗಳ ಮುಂದೆ ಪಿಕೆಟಿಂಗ್ ನಡೆಸಿದಾಗ ಇಬ್ಬರು ಸ್ವಯಂಸೇವಕರನ್ನು ದಸ್ತಗಿರಿ ಮಾಡಿ ಸೆರೆಮನೆಯಲ್ಲಿಡಲಾಯಿತು.[೨೧] ಎಸಗಿದ ಅಪರಾಧಕ್ಕೂ ವಿಧಿಸಿದ ಶಿಕ್ಷೆಗೆ ಅರ್ಥಾತ್ ಸಂಬಂಧವಿಲ್ಲವಾಗಿ ನಗರದ ಜನರು ಪ್ರತಿಭಟನೆ ನಡೆಸಲು ಜಮಾಯಿಸಿದರು. ಪೋಲೀಸಿನವರೊಡನೆ ನಡೆದ ಮಾತಿನ ಚಕಮಕಿಯು ಘರ್ಷಣೆಗೆ ಎಡೆ ಮಾಡಿಕೊಟ್ಟು ಗುಂಡು ಹಾರಿಸಿದಾಗ ಮೂವರು ಪ್ರಾಣ ಕಳೆದು ಕೊಂಡರು.[೨೨] ಸ್ಥಳೀಯ ವೃತ್ತಪತ್ರಿಕೆಗಳಲ್ಲಿ ಗುಂಡು ಹಾರಿಸಿದ ಸುದ್ದಿ ವರದಿಯಾಗಿ ಗಲಭೆ ಪ್ರೇರೇಪಿಸಿದರು ಎಂಬ ನೆಪವೊಡ್ಡಿ ಅನೇಕ ಸಂಪಾದಕರನ್ನು ಪೋಲೀಸರು ದಸ್ತಗಿರಿ ಮಾಡಿದರು. ಅಷ್ಟೇ ಚಾಕಚಕ್ಯತೆಯಿಂದ ಆಲೂರು ವೆಂಕಟರಾಯರು ಜಿಲ್ಲಾ ಕಾಂಗ್ರೆಸ್ ಸಮಿತಿಗೆ ದಸ್ತಗಿರಿ ಆಗಿರುವ ಸಂಪಾದಕರುಗಳ ಪತ್ರಿಕೆಗಳನ್ನು ಏಕಾಂಗಿಯಾಗಿ ತಾವೊಬ್ಬರೇ ಸಂಪಾದಿಸುವುದಾಗಿ ಭರವಸೆ ನೀಡಿದರಲ್ಲದೆ ಅನೇಕ ತಿಂಗಳುಗಳವರೆಗೆ ತಮ್ಮ ವಚನವನ್ನು ಪರಿಪಾಲಿಸಿದರು. ಹಾಗಾಗಿ ಚಟುವಟಿಕೆ ಮತ್ತು ಸಾರ್ವಜನಿಕ ಅಭಿಪ್ರಾಯ ರೂಪಿಸುವುದನ್ನು ನಿರಂತರವಾಗಿ ಕಾಪಾಡಿಕೊಳ್ಳಲಾಯಿತು.[೨೩]

೧೯೨೧ರ ಅಸಹಕಾರ ಆಂದೋಲನದ ನಂತರ ೧೯೩೦-೩೨ ಹಾಗೂ ೧೯೩೨-೩೪ನೇ ಇಸವಿಗಳಲ್ಲಿ ಸಿರ್ಸಿ, ಸಿದ್ದಾಪುರ, ಅಂಕೋಲ, ಕಾರವಾರ ಮತ್ತು ಬೇರೆ ಕಡೆಗಳಲ್ಲಿಯೂ ಸಹ ಅದ್ಭುತವಾದಂಥ ಸತ್ಯಾಗ್ರಹ ನಡೆಯಿತು. ತಾಯಿನಾಡು, ವಿಶ್ವಕರ್ನಾಟಕ, ಸ್ವರಾಜ್ಯ, ಕನ್ನಡಿಗ, ಡೆಮೊಕ್ರಾಟ್ಸ್, ವಿಜಯ, ನವಯುಗ, ರಾಜಹಂಸ, ಕ್ರಾಂತಿವೀರ, ಸ್ವದೇಶಾಭಿಮಾನಿ, ಕರ್ಮವೀರ, ಸಂಯುಕ್ತ ಕರ್ನಾಟಕ, ಕನ್ನಡವೃತ್ತ, ಕನ್ನಡಧುರೀಣ, ಹಾಗೂ ಕರ್ನಾಟಕ ವೈಭವ, ಮುಂತಾದ ಪತ್ರಿಕೆಗಳು ಸತ್ಯಾಗ್ರಹ ಚಟುವಟಿಕೆಗಳ ಬಗ್ಗೆ ನಿರಂತರವಾಗಿ ವಿವರಗಳನ್ನು ಪ್ರಕಟಿಸುವುದರ ಜೊತೆಗೆ ಅಮಾನುಷವಾದ ಪೋಲೀಸು ಕ್ರೌರ್ಯದ ಎದುರು ಉತ್ತರ ಕರ್ನಾಟಕದ ಜನಸಾಮಾನ್ಯರು ಪ್ರದರ್ಶಿಸಿದ ಶೌರ್ಯದ ಬಗ್ಗೆ ವರದಿ ನೀಡಿದವು. ವೃತ್ತಪತ್ರಿಕೆಗಳನ್ನು ಹತ್ತಿಕ್ಕಿ ಸಂಪಾದಕರನ್ನು ಸೆರೆಮನೆಯಲ್ಲಿಟ್ಟ ನಂತರವೂ ಅನಧಿಕೃತವಾದ ಪತ್ರಿಕಾಪುಟಗಳು ಮತ್ತು ಸುದ್ದಿಸಂಗ್ರಹಗಳು ಪ್ರಕಟವಾಗತೊಡಗಿದವು. ಚಳವಳಿಯ ಕಾಲದಲ್ಲಿ ಮಾಹಿತಿಯನ್ನು ಪ್ರಸಾರ ಮಾಡುವ ಪ್ರಧಾನ ಮಾಧ್ಯಮ ಪತ್ರಿಕೆಯೇ ಆಗಿದ್ದು ಅರೆ-ಶಿಕ್ಷಿತ ಸಮಾಜದಲ್ಲಿಯೂ ಸಹ ಸಾರ್ವಜನಿಕ ಸಂಗತಿಗಳ ಬಗ್ಗೆ ಅಭಿಪ್ರಾಯಗಳನ್ನು ನಿರ್ಮಾಣ ಮಾಡುವ ಕರ್ತವ್ಯವನ್ನು ಪರಿಣಾಮಕಾರಿಯಾಗಿ ನಿಭಾಯಿಸಿದ ರೀತಿಯನ್ನು ಕರ್ನಾಟಕದ ೧೯೩೦-೩೪ರ ಸತ್ಯಾಗ್ರಹದಲ್ಲಿ ನಾವು ಸ್ಪಷ್ಟವಾಗಿ ಕಾಣಬಹುದು.[೨೪]

೧೯೨೯ರ ಜುಲೈನಲ್ಲಿ ಬೆಂಗಳೂರಿನಲ್ಲಿ ನಡೆದ ಗಣಪತಿ ಮಹೋತ್ಸವದ ಗಲಭೆಗಳ ಸಂದರ್ಭದಲ್ಲಿ ರಾಷ್ಟ್ರೀಯ ಕಾಂಗ್ರೆಸ್ಸಿನೊಡನೆ ಮೈತ್ರಿ ಹೊಂದಿದ್ದ ಪತ್ರಕರ್ತರು ಪ್ರಮುಖ ಪಾತ್ರ ವಹಿಸಿದರು. ಈ ಗಲಭೆಗಳು ಎರಡು ವಿಭಿನ್ನ ರೀತಿಯ ವ್ಯಾಖ್ಯಾನಕ್ಕೆ ಒಳಪಟ್ಟಿವೆ; ಅದರೆ ಕಾಂಗ್ರೆಸ್ಸಿನ ಪರವಾದ ಬೆಂಗಳೂರಿನ ಸಾರ್ವಜನಿಕರು ಒಂದು ಸಣ್ಣ ಘಟನೆಯನ್ನು ಬೃಹತ್ತು ಮಾಡಿ ರಾಜಕೀಯ ಚಳವಳಿಗೆ ಒದಗುವಂಥ ಘಟನೆಯನ್ನಾಗಿ ಪರಿವರ್ತಿಸಿಕೊಂಡರು. ಮೈಸೂರಿನ ರಾಜಕೀಯ ಚಳವಳಿಗಳಲ್ಲಿ ಗಣಪತಿ ಹಬ್ಬದ ಗಲಭೆಗಳೇ ಆರಂಭದ ಚಳವಳಿಗಳು ಎನ್ನಬೇಕು; ಇವುಗಳಲ್ಲಿ ಕಾಂಗ್ರೆಸ್ಸಿನ ಪರವಾದ ಪತ್ರಕರ್ತರು ಭಾಗವಹಿಸಿದ್ದರು.[೨೫] ಅದರೆ ಅವರ ಬರವಣಿಗೆ ಮತ್ತು ಚಟುವಟಿಕೆಗಳು ಹಲವು ವೇಳೆ ಕೋಮುವಾದಿಯಾಗಿದ್ದವು.

ದೇಶೀಯ ಸಂಸ್ಥಾನಗಳಲ್ಲಿ ರಾಷ್ಟ್ರೀಯ ಹೋರಾಟವನ್ನು ಪ್ರಾರಂಭಿಸಲು ಸ್ವತಂತ್ರವಾದ ಸಂಘಟನೆಗಳಿಗೆ ಅನುಮತಿ ನೀಡುವಂತೆ ೧೯೩೮ರ ಹರಿಪುರ ಅಧಿವೇಶನದಲ್ಲಿ ತೀರ್ಮಾನ ತೆಗೆದುಕೊಂಡ ನಂತರ ಮೈಸೂರು ಕಾಂಗ್ರೆಸ್ಸಿನ ಸ್ಥಾಪನೆಯಾಯಿತು. ಮೈಸೂರು ಕಾಂಗ್ರೆಸ್ಸು ಅಸ್ತಿತ್ವಕ್ಕೆ ಬಂದ ಕೂಡಲೇ ಅದರ ಮುಂದಿದ್ದ ಮೊದಲನೇ ಬೇಡಿಕೆಯೆಂದರೆ ಮೈಸೂರಿನಲ್ಲಿ ಜವಾಬ್ದಾರಿ ಸರ್ಕಾರವನ್ನು ಸ್ಥಾಪಿಸಬೇಕೆಂಬುದು; ಜೊತೆಗೆ ಪತ್ರಿಕೆಗಳ ಮೂಲಕ ಈ ಬೇಡಿಕೆಯನ್ನು ನಿರಂತರವಾಗಿ ಪುನರುಚ್ಚರಿಸಲಾಯಿತು.

ಏಪ್ರಿಲ್, ೧೯೩೮ರಲ್ಲಿ ಮೈಸೂರು ಕಾಂಗ್ರೆಸ್ಸು ತನ್ನ ಮೊದಲನೇ ಅಧಿವೇಶನದಲ್ಲೇ ರಾಜ್ಯದ ಅನೇಕ ಕಡೆಗಳಲ್ಲಿ ಧ್ವಜಸತ್ಯಾಗ್ರಹವನ್ನು ನಡೆಸಲು ತೀರ್ಮಾನ ಕೈಗೊಂಡಿತು. ರಾಷ್ಟ್ರಧ್ವಜ ಹಾರಿಸುವುದನ್ನು ಸರ್ಕಾರ ಬಹಿಷ್ಕರಿಸಿದ್ದರೂ ಕೂಡ ಅದೇ ತಿಂಗಳು ಕೋಲಾರ ಜಿಲ್ಲೆಯ ವಿದುರಾಶ್ವತ್ಥದಲ್ಲಿ ಧ್ವಜ ಹಾರಿಸುವ ಕಾರ್ಯಕ್ರಮವನ್ನು ಯೋಜಿಸಲಾಯಿತು. ವಿದುರಾಶ್ವತ್ಥದಲ್ಲಿ ನಡೆದ ಗೋಲಿಬಾರಿನಲ್ಲಿ ಅನೇಕರು ಅಸುನೀಗಿದರು. ಕರ್ನಾಟಕದ ಅನೇಕ ಪತ್ರಿಕೆಗಳಲ್ಲಿ ಈ ಘಟನೆಗಳು ವರದಿಯಾದವು. ಇದರ ಪರಿಣಾಮವೆಂದರೆ ರಾಷ್ಟ್ರೀಯ ಕಾಂಗ್ರೆಸ್ ಮತ್ತು ಅದರ ನಾಯಕತ್ವದ ಕಡೆ ಎಲ್ಲರ ಗಮನ ಹರಿಯಿತು–ತತ್ಫಲವಾಗಿ ಮೈಸೂರು ಕಾಂಗ್ರೆಸ್ಸು ಹಾಗೂ ರಾಜ್ಯದ ರಾಜಕೀಯ ಚಳವಳಿಗೆ ಇದರಿಂದ ಉತ್ತೇಜನ ದೊರಕಿತು.[೨೬]

೧೯೩೮ರ ನಂತರ ಮೈಸೂರು ಪ್ರಾಂತ್ಯದ ಪತ್ರಿಕೆಗಳು ಎಲ್ಲ ರಾಷ್ಟ್ರವಾದಿ ಸಂಗತಿಗಳ ಬಗ್ಗೆ ವಿಶ್ಲೇಷಿಸಿದವಾದರೂ ಬ್ರಿಟಿಷ್ ಭಾರತದ ಪತ್ರಿಕೆಗಳಿಗಿಂತ ತೀರಾ ಭಿನ್ನವಾದ ರೀತಿಯಲ್ಲಿ ಅವರ ಧೋರಣೆ ಇರಲಿಲ್ಲ. ೧೯೨೦ ಹಾಗೂ ೧೯೪೦ರ ದಶಕಗಳಲ್ಲಿ ಮೈಸೂರು ರಾಜ್ಯದಲ್ಲಿದ್ದ ಅತ್ಯಂತ ವರ್ಣರಂಜಿತ ಪತ್ರಕರ್ತರು ಹಾಗೂ ಸಾಮಾಜಿಕ–ರಾಜಕೀಯ ಚಳವಳಿಗಾರರೆಂದರೆ ತಗಡೂರು ರಾಮಚಂದ್ರರಾಯರು. ತಗಡೂರು ರಾಮಚಂದ್ರರಾಯರು ಮೈಸೂರು ರಾಜ್ಯದ ಮೊಟ್ಟಮೊದಲನೆಯ ರಾಜಕೀಯ ಖೈದಿ. ೧೯೨೬ರಲ್ಲಿ ಅವರು ಕಣಿಯರ ಪತ್ರಿಕೆಯನ್ನು ಪ್ರಾರಂಭಿಸಿದರು. ಚಳವಳಿಗಾರರಾಗಿ ಅವರು ತಮ್ಮ ವಿಲಕ್ಷಣ ವಿಧಾನಗಳಿಂದ ಪೊಲೀಸರನ್ನು ಬೇಸ್ತು ಬೀಳಿಸುತ್ತಿದ್ದರು.[೨೭]

೧೯೦೮ರ ಮೈಸೂರು ವೃತ್ತಪತ್ರಿಕೆ ಕಾಯಿದೆ III ಯನ್ನು ೧೯೪೦ರಲ್ಲಿ ತೆಗೆದು ಹಾಕಲಾಯಿತು ಹಾಗೂ ಅದೇ ವರ್ಷ ಕಾಯಿದೆ XIV ಅನ್ನು ಜಾರಿಗೊಳಿಸಲಾಯಿತು. ಇವೆರಡು ಕಾಯಿದೆಗಳ ನಡುವಿನ ವ್ಯತ್ಯಾಸವೇನೆಂದರೆ ಮೊದಲನೇ ಕಾಯಿದೆಗಿಂತ ಭಿನ್ನವಾದ ರೀತಿಯಲ್ಲಿ ಕಾಯಿದೆ XIV ರಲ್ಲಿ ಆಕ್ಷೇಪಾರ್ಹ ಸಂಗತಿಗಳೆಂದರೆ ಯಾವುವು ಎಂಬುದರ ಬಗ್ಗೆ ವಿವರವಾದ ಮಾಹಿತಿ ಇದೆ; ಜೊತೆಗೆ ಪತ್ರಕರ್ತರ ಮೇಲೆ ವಿಧಿಸಬಹುದಾದ ದಂಡದ ಪ್ರಕ್ರಿಯೆಯನ್ನೂ ತಿಳಿಸಲಾಗಿದೆ.

ಕ್ವಿಟ್ ಇಂಡಿಯಾ ಚಳವಳಿಯು ಪ್ರಾರಂಭವಾದ ಸಂದರ್ಭದಲ್ಲಿ ಮೈಸೂರು ರಾಜ್ಯದಲ್ಲಿ ಸುಮಾರು ಹದಿನಾರು ಬೇರೆ ಬೇರೆ ಅನಧಿಕೃತವಾದ ಸುದ್ದಿ ಪತ್ರಿಕೆಗಳು ಪ್ರಾರಂಭವಾದವು. ಸಾಮಾನ್ಯವಾಗಿ ಈ ಪತ್ರಿಕೆಗಳು ಕಾಂಗ್ರೆಸ್ ಚಳವಳಿಗಾರರ ಚಟುವಟಿಕೆಗಳ ಕುರಿತು ನಾಟಕೀಯವಾದ ವರದಿಗಳನ್ನು ನೀಡುತ್ತಾ ಪತ್ರಿಕಾರಂಗದ ವಿಶಿಷ್ಟಾಭಿನಯದಲ್ಲಿ ತಲ್ಲೀನವಾದವು. ಅನೇಕ ಸಂದರ್ಭಗಳಲ್ಲಿ ಸರ್ಕಾರದ ವಿರುದ್ಧ ಜನರು ದಂಗೆಯೇಳುವಂತೆ, ಬಹಿರಂಗವಾಗಿ ಕರೆಕೊಡುವಂಥ ಪುಟ್ಟಪುಟ್ಟ ಲೇಖನಗಳನ್ನು ಪ್ರಕಟಿಸಿದುವು. ದೇಶದ ಉದ್ದಗಲಕ್ಕೂ ಕಂಡುಬರುತ್ತಿದ್ದ ಬ್ರಿಟಿಷ್ ವಿರೋಧಿ ಪ್ರವಾಹವನ್ನು ತಡೆಗಟ್ಟುವ ಪ್ರಯತ್ನದಲ್ಲಿ ಪೋಲೀಸರು ಮತ್ತು ಮಿಲಿಟರಿಯವರು ಮುಂದಾದಾಗ ಅವರ ಬಗ್ಗೆ ಕಟಕಿಯಾಡುವುದು ಸಾಮಾನ್ಯವಾಯಿತು. ೧೯೪೨ರ ಕೊನೆಯ ವೇಳೆಗೆ ಮೈಸೂರು ರಾಜ್ಯದಲ್ಲಿ ಕ್ವಿಟ್ ಇಂಡಿಯಾ ಚಳವಳಿಯ ಕಾವು ಕಡಿಮೆಯಾಯಿತು; ಜೊತೆಗೆ ೧೯೪೩ ಮತ್ತು ೧೯೪೬ರ ಅವಧಿಯಲ್ಲಿ ರಾಜ್ಯದಲ್ಲಿ ರಾಜಕೀಯವಾದ ಸ್ಥಗಿತತೆ ತಲೆದೋರಿತ್ತು. ಕಾಂಗ್ರೆಸ್ಸನ್ನು ನಿಷೇಧಿಸಲಾಗಿತ್ತು; ಹಾಗಾಗಿ ಯಾವುದೇ ರೀತಿಯ ರಾಜಕೀಯ ಚಟುವಟಿಕೆ, ವಿಶೇಷವಾಗಿ ಚಳವಳಿಗಳು ಬಹಿರಂಗವಾಗಿ ನಡೆಯುವ ಹಾಗೆ ಇರಲಿಲ್ಲ.

೧೯೪೨ರ ಆಗಸ್ಟ್‌ನಲ್ಲಿ ಮೈಸೂರು ಸರ್ಕಾರ ಭಾರತ ರಕ್ಷಣಾ ನಿಯಮಗಳ ಅಡಿಯಲ್ಲಿ ಪ್ರೀ-ಸೆನ್ಸರ್ ಶಿಪ್ ಕಾಯಿದೆಯನ್ನು ಜಾರಿಗೊಳಿಸಿತು. ಈ ಕಾಯಿದೆಯ ಪ್ರಕಾರ ಅಖಿಲಭಾರತ ಕಾಂಗ್ರೆಸ್ ಸಮಿತಿ ಮಂಜೂರು ಮಾಡಿರುವ ಜನಾಂದೋಲನಗಳ ಬಗ್ಗೆ ಮಾಹಿತಿ ಪ್ರಕಟಿಸುವುದನ್ನು ನಿಷೇಧಿಸಲಾಯಿತು; ಹಾಗೆಯೇ ಅಂಥ ಜನಾಂದೋಲನಗಳ ವಿರುದ್ಧ ಮೈಸೂರು ಸರ್ಕಾರವಾಗಲಿ ಅಥವಾ ಭಾರತ ಸರ್ಕಾರವಾಗಲಿ ತೆಗೆದುಕೊಂಡ ಕಾನೂನು ಕ್ರಮವನ್ನು ಜಾಹೀರುಗೊಳಿಸುವುದೂ ನಿಷಿದ್ಧ ಎಂದಾಯಿತು. ಈ ಕಾನೂನನ್ನು ಪ್ರತಿಭಟಿಸಿ ಅನೇಕ ಪತ್ರಿಕೆಗಳು ಪ್ರಕಟಣೆಯನ್ನು ನಿಲ್ಲಿಸಿದವು. ಮೈಸೂರಿನ ಇಬ್ಬರು ಪ್ರಮುಖ ಪತ್ರಕರ್ತರಾದ ತೀತಾಶರ್ಮ ಮತ್ತು ಪಿ.ಆರ್.ರಾಮಯ್ಯ ಅವರು ಸರ್ಕಾರಕ್ಕೆ ಮನವಿಯೊಂದನ್ನು ಸಲ್ಲಿಸಿ ತಾವು ಪತ್ರಿಕಾ ಪ್ರಕಟನೆಯನ್ನು ಪುನರಾರಂಭಿಸುವುದಾಗಿ ತಿಳಿಸಿದರು; ಪತ್ರಿಕೆಗಳು ಸಾರ್ವಜನಿಕ ಗಲಭೆಗಳನ್ನು ಪ್ರಚೋದಿಸಬಾರದೆಂಬ ಸರ್ಕಾರದ ನಿಯಮಕ್ಕೆ ತಾವು ಬದ್ಧರಾಗಿರುವುದಾಗಿ ಅವರು ಆ ಮೂಲಕ ಒಪ್ಪಿಕೊಂಡಿದ್ದರು. ಸರ್ಕಾರ ಕಾಯಿದೆಯನ್ನು ವಾಪಸ್ಸು ತೆಗೆದುಕೊಂಡಿತು.[೨೮]

ರಾಜ್ಯದಲ್ಲಿ ಜವಾಬ್ದಾರಿ ಸರ್ಕಾರದ ಸ್ಥಾಪನೆಯಾಗಬೇಕೆಂದು ಆಗ್ರಹಪಡಿಸಿ ನಡೆಸಿದ ಮೈಸೂರು ಚಲೋ ಆಂದೋಲನವೇ ಈ ಪ್ರಾಂತ್ಯದಲ್ಲಿ ಕಾಣಿಸಿಕೊಂಡ ಕಡೆಯ ರಾಷ್ಟ್ರೀಯ ಆಂದೋಲನ. ಪೌರವಾಣಿ ಪತ್ರಿಕೆಯು ಈ ಕಡೆಯ ಸಮರದಲ್ಲಿ ಮುಖ್ಯ ಪಾತ್ರವನ್ನು ವಹಿಸಿತು. ಈ ಚಳವಳಿಯ ಸಂದರ್ಭಕ್ಕಾಗಿಯೇ ರೂಪುಗೊಂಡ ಈ ಪತ್ರಿಕೆ ಈ ಕಡೆಯ ಕದನದ ಕಥೆಯನ್ನು ಜನರ ಮುಂದೆ ವಿವರಿಸಿತು; ಜೀವನದ ಎಲ್ಲ ರಂಗದ ಜನರೂ ಆ ಹೋರಾಟದಲ್ಲಿ ಭಾಗವಹಿಸಿದ್ದರು. 'ಮೈಸೂರು ಚಲೋ' ಕ್ಕೆ ಸರಿಸಾಟಿಯಾದ ಜನಾಂದೋಲನ ಪ್ರಾಯಶಃ ಮೈಸೂರಿನಲ್ಲಿ ಇನ್ನೊಂದು ನಡೆದಿರಲಾರದು; ಇದರ ಯಶಸ್ಸು ಪೌರವಾಣಿ ಪತ್ರಿಕೆಗೆ ಸಲ್ಲಬೇಕು.

ಮೈಸೂರು ರಾಜ್ಯದಲ್ಲಿ ಪ್ರಚಲಿತವಿದ್ದ ಪತ್ರಿಕಾ ಕಾನೂನಿನ ಪ್ರಕಾರ ಕೇವಲ ಒಬ್ಬ ಪತ್ರಕರ್ತರಿಗೆ ಮಾತ್ರ ಶಿಕ್ಷೆಯಾದದ್ದು ಒಂದು ಗಮನಾರ್ಹವಾದ ಬೆಳವಣಿಗೆ. ೧೯೩೬ರಲ್ಲಿ ಪ್ರಜಾಮತ ಮತ್ತು ಜನವಾಣಿ ಪತ್ರಿಕೆಗಳ ಸಂಪಾದಕರಾಗಿದ್ದ ಬಿ.ಎನ್.ಗುಪ್ತಾರವರನ್ನು ರಾಜ್ಯದಿಂದ ಗಡೀಪಾರು ಮಾಡಲಾಯಿತು. ಗುಪ್ತಾರ ಪ್ರಜಾಮತ ಪತ್ರಿಕೆಯು ಒಂದು ಶುದ್ಧಾಂಗ ರಾಜಕೀಯ ಪತ್ರಿಕೆಯೆಂದು ೧೯೩೦ರಲ್ಲೇ ಸರ್ಕಾರಕ್ಕೆ ತಿಳಿದಿತ್ತು

ಹಾಗೂ ಸಂಪಾದಕರು ರಾಜಕೀಯ ಚಟುವಟಿಕೆಗಳಲ್ಲಿ ತೊಡಗಿರುವ ಸಂಗತಿಯೂ ಅದರ ಗಮನಕ್ಕೆ ಬಂದಿತ್ತು. ರಾಜಕೀಯ ಚಟುವಟಿಕೆಗಳಲ್ಲಿ ತೊಡಗಬಾರದೆಂದು ಗುಪ್ತಾರಿಗೆ ನೀಡಿದ ಎಚ್ಚರಿಕೆ ಪ್ರಯೋಜನಕ್ಕೆ ಬಾರದಾಗ ಅನಿವಾರ್ಯವಾಗಿ ಅವರನ್ನು ರಾಜ್ಯದಿಂದ ಹೊರಹಾಕಬೇಕಾಯಿತು. ೧೯೩೭ರಲ್ಲಿ ತಾವು ರಾಜಕೀಯ ಚಟುವಟಿಕೆಗಳಲ್ಲಿ ತೊಡಗುವುದಿಲ್ಲ ಮತ್ತು ತಮ್ಮ ಪತ್ರಿಕೆಯನ್ನು ರಾಜಕೀಯ ಆಂದೋಲನಗಳಿಗೆ ಬಳಸುವುದಿಲ್ಲ ಎಂದು ಮೈಸೂರು ಸರ್ಕಾರಕ್ಕೆ ಗುಪ್ತಾ ಅವರು ಭರವಸೆ ನೀಡಿದ ಮೇಲೆ ಅವರ ಗಡೀಪಾರು ಆದೇಶವನ್ನು ಹಿಂದಕ್ಕೆ ಪಡೆಯಲಾಯಿತು.[೪೯]

ಮೈಸೂರು ಸಂಸ್ಥಾನದಲ್ಲಿದ್ದ ಪರೋಕ್ಷ ಅಧಿಕಾರದ ಸಹಾಯದಿಂದ ಪರಮಾಧಿಕಾರವು ಪತ್ರಿಕಾರಂಗವನ್ನು ನಿಯಂತ್ರಿಸುವ ಜವಾಬ್ದಾರಿಯನ್ನು ತನ್ನ ಆಂಗಿಕ ಸರ್ಕಾರಕ್ಕೆ ವಹಿಸಿತು. ರಾಷ್ಟ್ರೀಯ ಚಳವಳಿಯ ಬೆಳವಣಿಗೆ. ಸಾಮ್ರಾಜ್ಯಶಾಹಿ ಅಧಿಕಾರಕ್ಕೆ ದಿಗಿಲೊಡ್ಡುವ ಸಂದರ್ಭ ಬಂದಾಗ ಮೈಸೂರು ಸಂಸ್ಥಾನವು ತಡೆ(buffer) ರಾಜ್ಯವಾಗಿ ಪಾತ್ರವಹಿಸಿತು. ಮೈಸೂರಿನ ಪರೋಕ್ಷಾಡಳಿತ ರಾಷ್ಟ್ರೀಯ ರಾಜಕೀಯ ಧೋರಣೆಯ ನಿಶಿತತೆಯನ್ನು ತಗ್ಗಿಸುವುದಕ್ಕೂ ಸಹ ಸಹಾಯ ಮಾಡಿತು. ರಾಷ್ಟ್ರೀಯ ರಾಜಕಾರಣದಲ್ಲಿ ಭಾಗವಹಿಸುವುದು ಅನೇಕ ವರ್ಷಗಳವರೆಗೆ ಕೇವಲ ವಾದದ ಹಂತದಲ್ಲೇ ನಿಂತುಹೋಯಿತು; ಮಹಾರಾಜರ ಹಾಜರಿಯಲ್ಲಿ ಜನರು ರಾಷ್ಟ್ರೀಯ ರಾಜಕೀಯದತ್ತ ಚಿಂತನೆ ನಡೆಸುವುದಕ್ಕೆ ಪ್ರೋತ್ಸಾಹ ದೊರಕಲಿಲ್ಲ. ಮೈಸೂರು ಕಾಂಗ್ರೆಸ್ಸು ಸ್ಥಾಪನೆಯಾದ ಬಳಿಕ ರಾಷ್ಟ್ರೀಯ ರಾಜಕೀಯ ಚಳವಳಿಯ ಗತಿ ತೀವ್ರವಾಯಿತಾದರೂ ಮಹಾರಾಜರ ಪರ ಮತ್ತು ವಿರೋಧವಾದ ದ್ವಂದ್ವವನ್ನು ಇಲ್ಲಿ ಕಾಣುವಂತಾಯಿತು.[೫೦]

ಆದರೆ ಮೈಸೂರಿನ ಪತ್ರಿಕೆಗಳು ಸ್ವತಂತ್ರವಾಗಿದ್ದವೆ? ಮಹಾರಾಜರು, ಅವರ ದಿವಾನರು ಹಾಗೂ ಅಧಿಕಾರವನ್ನು ಹೊಂದಿದವರೆಲ್ಲ ಮೈಸೂರು ಒಂದು ಸಂಸ್ಥಾನವೆಂದು ಘೋಷಿಸಿದರು. ಆ ಕಾಲದಲ್ಲಿ ಬಹಳ ಕಠಿಣವಾದ ಕಾನೂನುಗಳನ್ನು ಅನುಷ್ಠಾನಕ್ಕೆ ತಂದಿದ್ದರಾದರೂ ಕೇವಲ ಒಬ್ಬ ಪತ್ರಕರ್ತನನ್ನು ಮಾತ್ರ ಶಿಕ್ಷೆಗೆ ಗುರಿ ಪಡಿಸಿದ್ದರು.[೫೧]

ಸಾಮಾಜಿಕ-ಧಾರ್ಮಿಕ ಸುಧಾರಣೆಗೆ ಸಂಬಂಧಿಸಿದ ಬರವಣಿಗೆಯಲ್ಲಿ ಗೋಚರವಾಗುವಂತೆ 'ನಿಧಾನಗತಿ' ಯ ಧೋರಣೆ ನಮ್ಮ ಗಮನಕ್ಕೆ ಬರುತ್ತದೆ. ಸುಧಾರಣೆಗೆ ಆತುರವಿಲ್ಲ; ಶಾಸ್ತ್ರ ವಿಧಿಗಳಲ್ಲಿ ಸ್ವಲ್ಪ ಬದಲಾವಣೆಗಳನ್ನು ಮಾಡಿಕೊಳ್ಳುವುದಕ್ಕೆ ಒತ್ತು ಬಿದ್ದಿತ್ತು. ತಿಲಕರ ಪ್ರಭಾವದ ಕಾರಣದಿಂದಾಗಿ ಬ್ರಿಟಿಷ್ ಕರ್ನಾಟಕದಲ್ಲಿ ಆಲೂರು ವೆಂಕಟರಾವ್ ಅಂಥವರು ಸಮಾಜ ಸುಧಾರಣೆಯನ್ನು ತಮ್ಮ ಕಾರ್ಯಕ್ಷೇತ್ರದಿಂದ ಹೊರಗೆ ಇಟ್ಟರು. ಆದಾಗ್ಯೂ ಉಳಿದ ಕೆಲವರು ರಾಜಕೀಯ ವಿಷಯಗಳಲ್ಲಿ ತಿಲಕರನ್ನು ಅನುಸರಿಸಿಯೂ ಸಮಾಜ ಸುಧಾರಣೆಯನ್ನು ಮುಂದುವರಿಸಿದರು.

೧೯೨೦ರ ತನಕ ತಿಲಕರು ಕರ್ನಾಟಕದ ರಾಷ್ಟ್ರೀಯ ರಾಜಕೀಯ ರಂಗವನ್ನು ವ್ಯಾಪಿಸಿಕೊಂಡಿದ್ದರು. ಆಗಸ್ಟ್ ೧೯೨೦ರಲ್ಲಿ ತಿಲಕರು ತೀರಿಕೊಂಡಾಗ ಅವರ ಅನುಯಾಯಿಗಳು ಮಹಾತ್ಮಾ ಗಾಂಧಿಯವರ ನೇತೃತ್ವದ ಕಾಂಗ್ರೆಸ್ ಆಧಾರಿತ ಸತ್ಯಾಗ್ರಹ ಹೋರಾಟಕ್ಕೆ ಅಗೋಚರವಾಗಿ ಸೇರ್ಪಡೆಯಾದರು. ಆದಾಗ್ಯೂ ಈ ಮಾದರಿಗೆ ಒಬ್ಬರು ಅಪವಾದವಾಗಿದ್ದರು; ಅವರೇ ಆಲೂರು ವೆಂಕಟರಾಯರು. ತಿಲಕರ ಮರಣದ ತರುವಾಯ ಇವರು ರಾಷ್ಟ್ರೀಯ ರಾಜಕಾರಣದಿಂದ ಹೊರಗುಳಿದರಲ್ಲದೇ ಕರ್ನಾಟಕದ ಏಕೀಕರಣದ ಹೋರಾಟದಲ್ಲಿ ಭಾಗವಹಿಸಿದರು. ತಿಲಕರ ಅನುಯಾಯಿಗಳಾಗಿದ್ದು, ಒಬ್ಬ ಪತ್ರಕರ್ತರಾಗಿ ಕಾಂಗ್ರೆಸ್ಸನ್ನು ಪ್ರವೇಶಿಸಿದ್ದ ಕಾರಣ ನಾವು ಈ ಅಪವಾದವನ್ನು ಗಮನಿಸಬೇಕು.[೫೨]

೧೯೨೦ರ ತನಕ ದಕ್ಷಿಣದಲ್ಲಿ ಏನೂ ನಡೆಯುತ್ತಿರಲಿಲ್ಲವೇನೂ ಎನ್ನುವ ರೀತಿಯಲ್ಲಿ ಭಾರತ ರಾಷ್ಟ್ರೀಯ ಚಳವಳಿಯ ಇತಿಹಾಸವನ್ನು ಬರೆಯಲಾಗಿದೆ. ಚರಿತ್ರಕಾರರು ಈ ಪರಿಪೇಕ್ಷದಿಂದ ಬಿಡುಗಡೆಯಾಗಬೇಕಾದದ್ದು ಅನಿವಾರ್ಯವೆಂದು ಕರ್ನಾಟಕದ ಪತ್ರಿಕೆಗಳ ಅಧ್ಯಯನದಿಂದ ಹೆಚ್ಚು ಸ್ಪಷ್ಟವಾಗುತ್ತದೆ.

**ಡಾ. ಆರ್. ರಾಮಕೃಷ್ಣನ್**

## ಟಿಪ್ಪಣಿಗಳು

೧ ಕಾಮತ್, ಎಸ್.ಯು.: ಕರ್ನಾಟಕ ಸ್ಟೇಟ್ ಗೆಜೆಟೀಯರ್, ಭಾಗ-೧ (ಬೆಂಗಳೂರು: ಕರ್ನಾಟಕ ಸರ್ಕಾರ, ೧೯೮೨), ಪು. ೨೭೧-೨೬೨ ಹಾಗೂ ೩೮೬-೩೮೭

೨ ವಿಶೇಷವಾಗಿ ಉಪಯುಕ್ತವಾಗುವಂಥವು ಈ ಮೂರು ಸಂಪುಟ: ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, (ಸಂ).ಸೂರ್ಯನಾಥ ಕಾಮತ್, ಮೈಸೂರು: ಗೀತಾ ಬುಕ್‌ಹೌಸ್, ೧೯೭ ಹಾಗೂ ೧೯೮೦. ಕರ್ನಾಟಕ ಸ್ವಾತಂತ್ರ್ಯ ಹೋರಾಟಗಾರರ ಸ್ಮೃತಿಗಳ ಸಂಕಲನವಾದ ಈ ಗ್ರಂಥ ಸುಮಾರು ಎಂಟು ನೂರು ಮಂದಿಯ ಅನುಭವಗಳನ್ನು ದಾಖಲುಮಾಡಿದೆ. ಹಾಗೂ ತುಂಬಾ ವಿಶಿಷ್ಟವಾದ ಗ್ರಂಥವಾಗಿದ್ದು ಸಾಂಪ್ರದಾಯಿಕ ಮೂಲಗಳಲ್ಲಿ ಕಂಡುಬಾರದ ಮಾಹಿತಿ ಹಾಗೂ ಒಳನೋಟಗಳನ್ನು ನೀಡುತ್ತದೆ.

೩ ಸೋಫಿಯಾ ಡಾಬ್ಸನ್ ಕೋಲೆಟ್: ದ ಲೈಫ್ ಅಂಡ್ ಲೆಟರ್ಸ್ ಆಫ್ ರಾಜಾ ರಾಮ್‌ಮೋಹನ್ ರಾಯ್, ಕಲ್ಕತ್ತಾ, ಸಾಧಾರಣ್ ಬ್ರಹ್ಮಸಮಾಜ್, ೧೯೦೦, ಪು. ೧೬೭-೨೦೮ ಹಾಗೂ ೪೨೩-೪೨೬

೪ ಈ ನುಡಿಯನ್ನು ಮೊದಲಬಾರಿಗೆ ೧೮೨೦ರಲ್ಲಿ ಬಳಸಲಾಯಿತು. ಮೂಲ: ಥಾಮ್ಸನ್‌ಎಡ್ವರ್ಡ್, ದ ಮೇಕಿಂಗ್ ಆಫ್ ದ ಇಂಡಿಯನ್ ಪ್ರಿನ್ಸಸ್, ಲಂಡನ್, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ೧೯೪೩, ಪು. ೨೮೩, ಸಂ.೧.

೫ ನಾಯಕ್ ಆರ್.ಬಿ.: ಪ್ಯಾರಮೌಂಟ್ಸಿ ಇನ್ ಇಂಡಿಯನ್ ಕಾನ್ಸಿಟ್ಯೂಷನಲ್‌ಲಾ, ಕೋಲ್ಹಾಪುರ್, ಆರ್ಯಭಾನು ಪ್ರೆಸ್, ೧೯೪೮, ಪು. ೧೪

೬ ದ ಮೇಕಿಂಗ್ ಆಫ್ ದ ಇಂಡಿಯನ್ ಪ್ರೆನ್ಸಸ್: ಪೂರ್ವೋಕ್ತ, ಪು. ೨೮೭

೭ ಪರಮಾಧಿಕಾರದ ಬಗ್ಗೆ ಬರೆದಿರುವ ಮೊಟ್ಟಮೊದಲ ಗ್ರಂಥವೆಂದರೆ ಟಪರ್ ಸಿ.ಎಲ್. ಅವರ ಅವರ್ ಇಂಡಿಯನ್ ಪ್ರೊಟೆಕ್ಟೊರೇಟ್, ಲಂಡನ್, ಲಾಂಗ್‌ಮನ್ಸ್‌ಗ್ರೀನ್ ಅಂಡ್ ಕೊ. ೧೮೯೮. ಪರಮಾಧಿಕಾರದ ಬಗ್ಗೆ ೧೮೬೮-೧೯೪೭ರವರೆಗೆ ಎಷ್ಟೊಂದು ಗ್ರಂಥಗಳು ರಚನೆಯಾಗಿವೆಯೆಂದರೆ, ಇತಿಹಾಸ ಲೇಖನಗಳ ಒಂದು ಅರ್ಥ ಪೂರ್ಣ ಅಧ್ಯಾಯನವನ್ನೇ ಕೈಗೊಳ್ಳಬಹುದು.

೮ ಮೈಸೂರ್ ಸ್ಟೇಟ್ ಪೇಪರ್ಸ್ ಸಲೆಕ್ಷನ್ಸ್, ಮೈಸೂರು, ಸರ್ಕಾರಿ ಮುದ್ರಣ ಶಾಖೆ, ೧೯೨೨, ಸಂಪುಟ II, ಪು. ೪೩, ಪ್ಯರೆಕ್ಟೊರೇಟ್ ಆಫ್ ದ ಚೇಂಬರ್ಸ್ ಸ್ಪೆಷಲ್ ಆರ್ಗನೈಜೇಷನ್: ದ ಬ್ರಿಟಿಷ್ ಕ್ರೌನ್ ಅಂಡ್ ದ ಇಂಡಿಯನ್ ನೇಟೀವ್ ಸ್ಟೇಟ್ಸ್, ಲಂಡನ್, ಪಿ.ಎಸ್. ಕಿಂಗ್ ಅಂಡ್ ಸನ್ಸ್, ೧೯೨೯, ಪು. ೨೨-೨೩

೯ ೧೮೩೧ರ ಮೈಸೂರಿನ ಹಸ್ತಾಂತರಕ್ಕೆ ಸಂಬಂಧಿಸಿದ ಪರಿಸ್ಥಿತಿಗಳ ಬಗ್ಗೆ ಹಾಗೂ ನಗರ್ ಗಲಾಟೆಗಳ ಕಾರಣ ೧೮೮೧ರಲ್ಲಿ ಸ್ವಾಧೀನವಾದ ವಿಷಯದ ಬಗ್ಗೆ ನೋಡಿ: ಆರಿಜಿನ್, ಪ್ರೋಗ್ರೆಸ್ ಅಂಡ್ ಸಪ್ರೆಷನ್ ಆಫ್ ದ ರೀಸೆಂಟ್ ಡಿಸ್ಟರ್ಬೆನ್ಸಸ್ ಇನ್ ಮೈಸೂರು, ಬೆಂಗಳೂರು, ಸರ್ಕಾರಿ ಮುದ್ರಣಾಲಯ ೧೮೩೩, ಗೋಪಾಲ್.ಎಮ್.ಎಚ್.: ದ ಫೈನಾನ್ಸಸ್ ಆಫ್ ದ ಮೈಸೂರ್ ಸ್ಟೇಟ್, ೧೭೯೯-೧೮೩೧, ಬಾಂಬೆ, ಓರಿಯಂಟ್ ಲಾಂಗ್‌ಮನ್ಸ್, ೧೯೬೦, ಹಾಗೂ; ರಾಯ್, ಎಂ.ಕೆ. ಪ್ರಿನ್ಸ್‌ಲಿ ಸ್ಟೇಟ್ಸ್ ಅಂಡ್ ಪ್ಯಾರಮೌಂಟ್ ಪವರ್ ನವದೆಹಲಿ: ರಾಜೇಶ್ ಪಬ್ಲಿಕೇಶನ್ಸ್, ೧೯೮೧, ಪು. ೯೫-೧೨೦

೧೦ ಮೈಸೂರು ಪ್ರಜಾಪ್ರತಿನಿಧಿ ಸಭೆಯ ಕಲಾಪಗಳು, ೧೮೮೧, ಪು. ೧ ಹಾಗೂ ೧೮೯೧, ಪು. ೩೩; ಎ ನೋಟ್ ಆನ್ ದ ಆರಿಜಿನ್ ಅಂಡ್ ಕಾನ್ಸ್‌ಟಿಟ್ಯೂಷನ್ ಆಫ್ ದ ಮೈಸೂರ್ ದಸರಾ ಎಸೆಂಬ್ಲಿ (೧೯೦೧), ಪು.೫ ಹಾಗೂ: ಶ್ರೀಮನ್ ಮಹಾರಾಜರಾದ ಶ್ರೀ ಕೃಷ್ಣರಾಜ ಒಡೆಯರ್‌ರವರ ಭಾಷಣಗಳು, ೧೯೦೨-೧೯೩೩, ಮೈಸೂರು, ಸರ್ಕಾರಿ ಮುದ್ರಣ ಶಾಖೆ, ೧೯೩೪, ಪು. ೨೨೯, ೧೯೩೫ರ ನಂತರ ಮೈಸೂರಿನ

ಪ್ರಜಾಪ್ರತಿನಿಧಿ ಸಭೆ ಹಾಗೂ ಶಾಸನ ಮಂಡಳಿಗಳಲ್ಲಿ ರಾಜಕೀಯ ಚಳವಳಿಗಳು ಮೈಸೂರಿನಲ್ಲಿ ಹೆಚ್ಚು ಕಾಣಿಸಿಕೊಳ್ಳತೊಡಗಿದವು.

೧೧ ೧೮೯೪ರಿಂದ ವಾಗ್ಭೂಷಣ (ಕರ್ನಾಟಕ ವಿದ್ಯಾವರ್ಧಕ ಸಂಘದ ಸಾಹಿತ್ಯ ಪತ್ರಿಕೆ, ಧಾರವಾಡ). ಜಯಕರ್ನಾಟಕ, ೧೯೨೦ರಿಂದ (ಮಿಥಿಕ್ ಸೊಸೈಟಿ, ಬೆಂಗಳೂರು ಹಾಗೂ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು), ಕೃಷ್ಣೇಗೌಡ, ಎಚ್.ಟಿ., ಕೆರೋಡಿ ಸುಬ್ಬರಾಯರು ಜೀವನ ಮತ್ತು ಕೃತಿಗಳು, (ಮೈಸೂರು, ಚೈತ್ರಪಲ್ಲವಿ, ೧೯೮೯); ಹಾಲಪ್ಪ, ಜಿ.ಎಸ್., ರಾಷ್ಟ್ರಧರ್ಮ ಪ್ರಷ್ಟಾರ ಹರ್ಡೀಕರ್ ಮಂಜಪ್ಪ, (ಧಾರವಾಡ : ಹರ್ಡೀಕರ್ ಮಂಜಪ್ಪ ಸ್ಮಾರಕ ಗ್ರಂಥಮಾಲೆ, ೧೯೬೬).

೧೨ ಕರ್ನಾಟಕ ಪ್ರಕಾಶಿಕ, ೨೪.೧.೧೮೮೭, ೨೪.೧೦.೧೮೮೭, ೧೬.೧.೧೮೮೮, ೧೭.೯.೧೮೮೮, ೨೪.೯.೧೮೮೮, ೮.೧೦.೧೮೮೮, ೨೪.೨.೧೮೮೮, ೩.೧೨.೧೮೮೮, ೧೭.೧೨.೧೮೮೮, ೧೩.೧.೧೮೮೮, ೧೦.೨.೧೮೯೬, ೨೮.೩.೧೮೯೭, ೫.೪.೧೮೯೭, ೧೨.೯.೧೮೯೭, ೧೯.೭.೧೮೯೭, ೨೬.೭.೧೮೯೭, ೧೦.೫.೧೮೯೦ ೧೧.೮.೧೮೯೦,

(ಗೋಖಲೆ ಇನ್ಸ್ಟಿಟ್ಯೂಟ್ ಆಫ್ ಪಬ್ಲಿಕ್ ಅಫೇರ್ಸ್‌ನ ದಾಖಲೆಗಳಲ್ಲಿದೆ); ವೃತ್ತ ಚಿಂತಾಮಣಿ, ಮದರಾಸು ಪ್ರೆಸಿಡೆನ್ಸಿಯ ದೇಶೀಯ ವೃತ್ತಪತ್ರಿಕೆಗಳ ವರದಿಗಳು (ಎನ್‌ಎನ್‌ಆರ್), ದಿನಾಂಕ ಸ್ಪಷ್ಟವಾಗಿ ಕಾಣುತ್ತಿಲ್ಲ. ೧೮.೬.೧೯೦೪; ನಡೆಗನ್ನಡಿ, ೧೮.೯.೧೯೦೪; ಸರ್ವೋದಯ ಪ್ರಕಾಶಿಕೆ,೧೯.೧೦.೧೯೦೪, ಎನ್‌ಎನ್‌ಆರ್ ೧೯೦೪; ವೃತ್ತಾಂತ ಚಿಂತಾಮಣಿ, ೩೦.೧೨.೧೯೦೫, ಎನ್‌ಎನ್‌ಆರ್ ೧೯೦೫, ಸರ್ವೋದಯ ಪ್ರಕಾಶಿಕ, ೩.೧.೧೯೦೬, ಎನ್‌ಎನ್‌ಆರ್ ೧೯೦೬; ಸರ್ವೋದಯ ಪ್ರಕಾಶಿಕ, ೩೦.೭.೧೮೯೭; ವೃತ್ತಾಂತ ಬೋಧಿನಿ, ೩.೬.೧೮೯೭, ಎನ್‌ಎನ್‌ಆರ್, ೧೮೯೭; ವೃತ್ತಾಂತ ಚಿಂತಾಮಣಿ, ೬.೧೦.೧೮೯೭, ಎನ್‌ಎನ್‌ಆರ್, ೧೮೯೭; ಸರ್ವೋದಯ ಪ್ರಕಾಶಿಕ, ೨೫.೪.೧೮೯೨, ಎನ್‌ಎನ್‌ಆರ್, ೧೮೯೨, (ತಮಿಳುನಾಡು ರಾಜ್ಯಪತ್ರಾಗಾರ, ಮದರಾಸು) ಕರ್ನಾಟಕ ಪ್ರಕಾಶಿಕ, ೧೮.೭.೧೮೮೮, ೨೩.೭.೧೮೮೮, ೧೭.೧೨.೧೮೮೮, ೨೪.೧೨.೧೮೮೮, ೨೦.೬.೧೮೭೭, ೫.೧೧.೧೮೭೭, ೧೯.೧೧.೧೮೭೭, ೨೬.೧೧.೧೮೭೭, ೩.೧೨.೧೮೭೭, ೧೨.೧೧.೧೮೭೭, ೩.೧೨.೧೮೭೭, ೨೩.೭.೧೮೭೮, ೭.೧.೧೮೭೮, ೨೧.೧.೧೮೭೮, ೧೧.೬.೧೮೯೦, ೧೧.೮.೧೮೯೦, ೧೮.೮.೧೮೯೦, ೧.೯.೧೮೯೦, ೧೫.೯.೧೮೯೦, ೨೨.೯.೧೮೯೦, ೨೯.೯.೧೮೯೦, ೧೩.೧೦.೧೮೯೦, ೩.೧೧.೧೮೯೦, ೧೭.೧೧.೧೮೯೦, ೨೪.೧೧.೧೮೯೦, ೨.೨.೧೮೯೦ (ಗೋಖಲೆ ಸಾರ್ವಜನಿಕ ವ್ಯವಹಾರಗಳ ಸಂಸ್ಥೆಯ ದಾಖಲುಗಳಲ್ಲಿ ಬೆಂಗಳೂರು) ; ವೃತ್ತಾಂತ ಪತ್ರಿಕೆ, ೩೧.೭.೧೮೯೦ ; ವೃತ್ತಾಂತ ಚಿಂತಾಮಣಿ ೨೮.೧.೧೮೯೧ ಎನ್‌ಎನ್‌ಆರ್, ೧೮೯೦ ಹಾಗೂ ೧೮೯೧ನೇ ಸಾಲಿಗೆ ; ೧೮೯೨ರ ಪ್ರಜಾಪ್ರತಿನಿಧಿ ಸಭೆಯಲ್ಲಿ ದಿವಾನರು ಮಾಡಿದ ಕೆಲವು ಉಪನ್ಯಾಸಗಳು (ಮೈಸೂರು. ೧೮೯೩); ಕೃಷ್ಣೇಗೌಡ, ಎಚ್.ಟಿ., ಕೆರೋಡಿ ಸುಬ್ಬರಾಯರು, ಜೀವನ ಮತ್ತು ಕೃತಿಗಳು, (ಮೈಸೂರು: ಚೈತ್ರಪಲ್ಲವಿ, ೧೯೮೯), ಪು. ೪-೫೧; ರಾಮಚಂದ್ರ ವಾದಿ, (ಭಾಷಾಂತರ) ಶ್ರೀ ದೇಶಪಾಂಡೆ ಗಂಗಾಧರರಾಯರು, (ಹುಬ್ಬಳ್ಳಿ - ಲೋಕಶಿಕ್ಷಣ ಟ್ರಸ್ಟ್, ೧೯೬೦),೧೯ ಹಾಗೂ ೨೦ನೇ ಶತಮಾನಗಳಲ್ಲಿ ಕರ್ನಾಟಕದಲ್ಲಿ ನಡೆದಿರುವ ಸಾಮಾಜಿಕ-ಧಾರ್ಮಿಕ ಚಳವಳಿಗಳ ಬಗ್ಗೆ ಸಾಕಷ್ಟು ಸಂಶೋಧನೆಯಾಗದೆ ಈ ಕ್ಷೇತ್ರ ಸಂಶೋಧಕರಿಗೆ ತುಂಬಾ ಫಲವತ್ತಾದುದಾಗಿದೆ. ಈ ಮೇಲಿನ ಉಲ್ಲೇಖದಿಂದ ಸುಧಾರಕರು ಹಾಗೂ ಸುಧಾರಣಾ ಸಂಘಟನೆಗಳು ಸಾಕಷ್ಟು ಇದ್ದುದಕ್ಕೆ ಪುರಾವೆಗಳು ದೊರೆಯುತ್ತವೆ; ಹಾಗೂಕಾಮತ್, ಎಸ್.ಯು. ಅವರ 'ಸೋಷಿಯಲ್ ರಿಫಾರ್ಮ್ ಮೂವ್‌ಮೆಂಟ್: ಎಮೆನ್ಸಿಪೇಷನ್ ಆಫ್ ವುಮೆನ್ ಇನ್ ಕರ್ನಾಟಕ' ಎಂಬ ಲೇಖನ ಗಮನಾರ್ಹ-ದ ಕ್ವಾರ್ಟರ್ಲಿ ಜರ್ನಲ್ ಆಫ್ ಮಿಥಿಕ್ ಸೊಸೈಟಿ ಎಂಬ ತ್ರೈಮಾಸಿಕದಲ್ಲಿ (ಸಂಪುಟ LXXV, ಸಂಚಿಕೆ.೨. ಏಪ್ರಿಲ್-ಜೂನ್ ೧೯೮೪, ಪು. ೨೦೮-೨೧೭) ಪ್ರಕಟವಾಗಿದೆ. ಕೆನತ್, ಡಬ್ಲ್ಯೂ. ಜೋನ್ಸ್ ಅವರಿಂದ ರಚಿತವಾದ 'ದ ನ್ಯೂ ಕೇಂಬ್ರಿಜ್ ಹಿಸ್ಟರಿ ಆಫ್ ಇಂಡಿಯಾ' ಸರಣಿಯಲ್ಲಿ (iii.) (ಕೇಂಬ್ರಿಜ್: ಕೇಂಬ್ರಿಜ್ ಯೂನಿವರ್ಸಿಟಿ ಪ್ರೆಸ್,೧೯೮೯) ಥಿಯಸಾಫಿಕಲ್ ಸೊಸೈಟಿಯ ಪ್ರಸ್ತಾಪವನ್ನು ಬಿಟ್ಟು ಕರ್ನಾಟಕದಲ್ಲಿನ ಸುಧಾರಣಾ ಬೆಳವಣಿಗೆಗಳ ಬಗ್ಗೆ ಹೆಚ್ಚು ಉಲ್ಲೇಖ ಇರುವುದಿಲ್ಲ.

೧೩ ಕರ್ನಾಟಕ ಪ್ರಕಾಶಿಕ, ೯.೧೦.೧೮೮೫, ೮.೧೧.೧೮೮೬, ೨೪.೧.೧೮೮೭, ೨೪.೧೦.೧೮೮೭, ೧೬.೧.೧೮೮೮,

೨೭.೯.೧೮೮೮, ೨೪.೯.೧೮೮೮, ೮.೧೦.೧೮೮೮, ೨೪.೧೨.೧೮೮೮, ೩.೧೨.೧೮೮೮, ೧೭.೧೨.೧೮೮೮, ೧೩.೧.೧೮೯೬, ೧೦.೨.೧೮೯೬, ೨೮.೩.೧೮೮೭, ೫.೪.೧೮೯೭, ೧೨.೬.೧೮೯೭, ೨೬.೭.೧೮೯೭, ಇತ್ಯಾದಿ, ಇತ್ಯಾದಿ, ಎಸ್‌ಎನ್‌ಆರ್ ೧೮೮೫ರಿಂದ ೧೯೦೮ರವರೆಗೆ.

೧೪ ಆದಾಗ್ಯೂ ೧೯೨೧ರ ನಾಗಪುರ ಅಧಿವೇಶನ ನಂತರ ಕೆ.ಪಿ.ಸಿ.ಸಿ.ಯ ಆಶ್ರಯದಲ್ಲಿ ಮೈಸೂರು ಜಿಲ್ಲಾ ಕಾಂಗ್ರೆಸ್ ಮಂಡಳಿಯ ಸ್ಥಾಪನೆಯಾಯಿತು. ಬ್ರಿಟಿಷ್ ಕರ್ನಾಟಕದ ಚಳವಳಿಗಳಲ್ಲಿ ಮೈಸೂರಿನ ಕಾಂಗ್ರೆಸ್ ಕಾರ್ಯಕರ್ತರೂ ಸಹ ಭಾಗವಹಿಸುತ್ತಿದ್ದರು; ನೋಡಿ ಎಸ್‌ಎನ್‌ಆರ್(ಮದರಾಸು) ೧೯೩೯ರ ವರೆಗೆ ರಾಷ್ಟ್ರವಾದಿ ಸಂಗತಿಗಳಿಗೆ ಸಂಬಂಧಿಸಿದಂತೆ ಮೈಸೂರು ಪ್ರಾಂತ್ಯದ ಪತ್ರಿಕೆಗಳ ಪ್ರತಿಕ್ರಿಯೆಗಳನ್ನು ನೋಡಲು.

೧೫ ಕಾಮತ್, ಎಸ್.ಯು.: ಸ್ವಾತಂತ್ರ್ಯ ಸಂಗ್ರಾಮದ ಸಂಸ್ಮೃತಿಗಳು ೩ ಸಂಪುಟಗಳಲ್ಲಿ, ಮೈಸೂರು, ಗೀತಾ ಬುಕ್ ಹೌಸ್, ೧೯೭೪-೧೯೮೦. ಸಂಪುಟ.೧, ಪು. ೩೫, ೩೯, ೧೧೯, ೧೩೯, ೧೬೮, ೧೭೬, ೧೯೨, ೨೫೩, ೨೭೦, ೨೯೮, ೩೩೭, ೫೭೭, ೬೧೩, ೬೩೭, ೬೮೬, ೮೧೦, ೧೦೧೧, ೧೧೭೩, ಸಂ. II, ೨೮, ೨೨೯, ಇತ್ಯಾದಿ., ಸಂ. III, ಪು. ೯೭, ೧೨೭, ೧೩೦, ೧೮೩, ೧೮೪, ೨೫೬, ೨೭೦, ೪೫೪, ೪೫೯, ೪೩೪, ೪೭೦, ಇತ್ಯಾದಿ., ವೆಂಕಟರಾವ್ ಆಲೂರು: ನನ್ನ ಜೀವನ ಸ್ಮೃತಿಗಳು, ಧಾರವಾಡ: ಮನೋಹರ ಗ್ರಂಥಮಾಲ, ೧೯೭೪, ಪು. ೫೧

೧೬ ಮೈಸೂರು ರೆಸಿಡೆನ್ಸಿ ಫಾಯಿಲುಗಳು, ೧೮೯೧ರ ಫೈಲ್ ನಂ. ೨೬೯. ಸೂಚನೆಯ ಸಂಖ್ಯೆ. ೨೬೫೧-I (ಕರ್ನಾಟಕ ರಾಜ್ಯ ಪತ್ರಾಗಾರ).

೧೭ ಕ್ರೌನ್ ರೆಪ್ರೆಸೆಂಟೇಟಿವ್ ರೆಕಾರ್ಡ್ಸ್, ಕಲಾಪಗಳ ಸಂಖ್ಯೆಗಳ. ೧೫-೧೭, ೧೯೦೧. ಮೈಸೂರು ಮಹಾರಾಜರು ಹಾಗೂ ಅಧಿಕಾರಿಗಳ ಮೇಲಿನ ಟಿಪ್ಪಣಿಗಳು, ಮತ್ತು ಸಿ ಮತ್ತು ಎಮ್ ಸ್ಟೇಷನ್‌ಗಳ ಆಡಳಿತದ ಬಗ್ಗೆ ಟಿಪ್ಪಣಿಗಳು, ಬೆಂಗಳೂರು; ಮೈಸೂರಿನ ಮೇಲಿನ ರಹಸ್ಯ ಟಿಪ್ಪಣಿ. ಕಲಾಪಗಳ ಸಂಖ್ಯೆಗಳು. ೧೫-೧೬, ೧೯೦೮, (ಮೈಕ್ರೊಫಿಲ್ಮ್ ರೀಲ್ ಸಂಖ್ಯೆ.೫, ಕೆಎಸ್‌ಎ); ವಿದೇಶಿ ಇಲಾಖೆ, ಡಿಪೊಸಿಟ್-I, ಆಗಸ್ಟ್ ೧೯೦೮ರ ಕಲಾಪಗಳು ಸಂಖ್ಯೆ ೧೩೫. ಸ್ಟೂವರ್ಟ್ ಫ್ರೇಸರ್ ಅವರಿಂದ ಹಾರ್ಕೋರ್ಟ್ ಬಟ್ಲರ್‌ವರೆಗೆ, ದಿನಾಂಕ: ೧.೭.೧೯೦೮, (ಭಾರತದ ರಾಷ್ಟ್ರೀಯ ಪತ್ರಾಗಾರ); ಮೈಸೂರು ರಾಜ್ಯಪತ್ರ-ಪುರವಣಿ, ೬.೮.೧೯೦೮, ಪು. ೨-೧೧, (ಕೆಎಸ್‌ಎ).

೧೮ ಮೈಸೂರ್ ಹೆರಾಲ್ಡ್, ಮೈಸೂರ್ ಸ್ಟ್ಯಾಂಡರ್ಡ್, ವೃತ್ತಾಂತ ಚಿಂತಾಮಣಿ, ಭಾರತಿ ಹಾಗೂ ನಡೆಗನ್ನಡಿ ಈ ಪತ್ರಿಕೆಗಳು ಪ್ರತಿಭಟನೆಯ ರೂಪದಲ್ಲಿ ಪ್ರಕಟಣೆಯನ್ನು ನಿಲ್ಲಿಸಿದುವು. ತಿರುಮಲಾಚಾರ್,ಪಿ. (ಸಂಗ್ರಹ); ದ ಪ್ರೆಸ್ ಗ್ಯಾಗ್ ಇನ್ ಮೈಸೂರ್, ಮದರಾಸು. ಗಣೇಶ್ ಅಂಡ್ ಕೊ., ೧೯೦೮, ಪು. ೭೧

೧೯ ಅದೇ, ಹಾಗೂ ರಾಮಕೃಷ್ಣನ್, ಆರ್.: ದ ರೋಲ್ ಆಫ್ ದ ಪ್ರೆಸ್ ಇನ್ ಪ್ರಿನ್ಸಲಿ ಮೈಸೂರ್-೧೮೫೯-೧೯೪೭, (ಅಪ್ರಕಟಿತ ನಿಬಂಧ), ಬೆಂಗಳೂರು ವಿಶ್ವವಿದ್ಯಾನಿಲಯ, ೧೯೮೫, ಪು. ೨೦೦-೨೦೨

೨೦ ನನ್ನ ಜೀವನ ಸ್ಮೃತಿಗಳು, ಪೂರ್ವೋಕ್ತ., ಪು.೧೫೧-೧೫೨

೨೧ ಹಾಲಪ್ಪ, ಜಿ.ಎಸ್: ಹಿಸ್ಟರಿ ಆಫ್ ಫ್ರೀಡಂ ಮೂವ್‌ಮೆಂಟ್ ಇನ್ ಕರ್ನಾಟಕ, ಸಂಪುಟ.II , ಬೆಂಗಳೂರು, ೧೯೬೪, ಪು. ೧೦೬

೨೨ ಸಾಧ್ವಿ,೧೬.೬.೧೯೧೨,೧೬.೭.೧೯೧೨, ಸಂಪದಭ್ಯುದಯ,೧೩.೨.೧೯೧೯,೨೦.೧.೧೯೨೨,೧೨.೮.೧೯೨೨, ೧೫.೬.೧೯೨೨, ೨೧.೯.೧೯೨೩, ಮೈಸೂರ್ ಪೇಟ್ರಿಯಾಟ್, ೧೩.೨.೧೯೧೯ ಎಸ್‌ಎನ್‌ಆರ್ ಆಯಾ ವರ್ಷಗಳಿಗೆ. ೧೯೧೭ ಹಾಗೂ ೧೯೧೮ರ ಎಸ್‌ಎನ್‌ಆರ್ ವರದಿಗಳು ವೆಂಕಟಕೃಷ್ಣಯ್ಯನವರ ಸಂಪಾದಕತ್ವದ ಪತ್ರಿಕೆಗಳ ಅನೇಕ ಭಾಗಗಳನ್ನು ಪ್ರಕಟಿಸಿವೆ ಸಾಮಾನ್ಯವಾಗಿ ಇವು ಬ್ರಿಟಿಷ್ ವಿರೋಧಿಯಾಗಿಯೇ ಇದ್ದುವು. ವೆಂಕಟಕೃಷ್ಣಯ್ಯನವರ ವಿರುದ್ಧದ ಮೊಕದ್ದಮೆಗಾಗಿ ನೋಡಿ, ಮಹಾರಾಜರ ಆಪ್ತ ಕಾರ್ಯದರ್ಶಿ: ಸಂ.೧೧೯, ೧೯೧೯, ಮಿರ್ಜಾ ಇಸ್ಮಾಯಿಲ್‌ರೊಡನೆ ವೆಂಕಟಕೃಷ್ಣಯ್ಯನವರ ಪತ್ರವ್ಯವಹಾರ; ವೆಂಕಟಕೃಷ್ಣಯ್ಯನವರ ಕಾಗದಗಳು ಎಂಬ ಶೀರ್ಷಿಕೆ ಹೊತ್ತ ಕಡತಗಳು: ಕ್ರೌನ್ ರೆಪ್ರೆಸೆಂಟೇಟಿವ್ ರೆಕಾರ್ಡ್ಸ್, ರೆಸಿಡೆಂಟರ್ ಟಿಪ್ಪಣಿಗಳು. ಡಿಪೊ.ಸಿ/೨೧೭೦/೧೯೪, ದಿನಾಂಕ. ೧೮.೧೦.೧೯೨೨ ಹಾಗೂ; ಹಿಸ್ಟರಿ ಆಫ್ ಫ್ರೀಡಂ ಮೂವ್‌ಮೆಂಟ್ ಇನ್ ಕರ್ನಾಟಕ, ಪೂರ್ವೋಕ್ತ, ಪು. ೭೬೯

೨೩ ನನ್ನ ಜೀವನ ಸ್ಮೃತಿಗಳು, ಪೂರ್ವೋಕ್ತ, ೧೬೯-೧೭೦

೨೪ ಎಸ್‌ಎನ್‌ಆರ್, ೧೯೩೧-೩೩ನೇ ಸಾಲಿಗಾಗಿ ಮದರಾಸು ಮತ್ತು ಬೊಂಬಾಯಿ ವರದಿಗಳು; ದಿವಾಕರ್

(ಅನು) ರಾಮಪ್ರಸಾದ್, ಎನ್.ಎಸ್., ಸತ್ಯಾಗ್ರಹಿ ಒಂದು ಜೀವನ ಕಥೆ, (ಬೆಂಗಳೂರು: ಸರ್‌ದಾರ್ ವೆಂಕಟ ರಾಮಯ್ಯ ಸ್ಮಾರಕ ಸಮಿತಿ, ೧೯೮೫) ಹಾಗೂ ಇನ್ ದ ವೇಕ್ ಆಫ್ ದ ಆರ್ಡಿನೆನ್ಸಸ್ ಗ್ರೇಸ್ ೧೯೩೨, ಬೆಂಗಳೂರು, ಇಂಡಿಯನ್ ಪ್ರೆಸ್, ೧೯೩೨.

೨೫ ಡಿಸ್ಟರ್ಬೆನ್ಸಸ್ ಇನ್ ಬೆಂಗಳೂರ್ ಸಿಟಿ ಜುಲೈ ೧೯೨೮, ರಿಪೋರ್ಟ್ ಆಫ್ ದಿ ಕಮಿಟಿ ಆಫ್ ಎನ್‌ಕೊಯಿರಿ ಅಂಡ್ ಎವಿಡೆನ್ಸ್ ಬಿಫೋರ್ ದಿ ಕಮಿಟಿ ಆಫ್ ಎನ್‌ಕೊಯಿರಿ. I, IIa, IIb, ಹಾಗೂ IIc, ಬೆಂಗಳೂರು, ಸರ್ಕಾರಿ ಮುದ್ರಣಾಲಯ, ೧೯೨೯, ಮೈಸೂರಿನ ಶ್ರೀಮನ್ಮಹಾರಾಜರ ಸರ್ಕಾರದ ಸಾಮಾನ್ಯ ಹಾಗೂ ಕಂದಾಯ ಸಚಿವಾಲಯ, ಕಂದಾಯ ಸಂಗ್ರಹ, ಕಡತ ಸಂಖ್ಯೆ. ೩೨, ೧೯೩೦-೩೧ (ರಹಸ್ಯ). ಸರಣಿ ೧-೭. ಮೈಸೂರು ಶಾಸನ ಸಭೆಯ ಕಲಾಪಗಳು, ಜೂನ್ ೧೯೨೯, ಪು.೬೨೦-೬೨೩ (ಕೆಎಸ್ಎ); ಎಂ.ವಿ. ಸ್ಮೃತಿ ಗಳು, ಸಂಪುಟ.VI (ವಿಶ್ವೇಶ್ವರಯ್ಯ ಇಂಡಸ್ಟ್ರಿಯಲ್ ಅಂಡ್ ಟೆಕ್ನಲಾಜಿಕಲ್ ಮ್ಯೂಸಿಯಂ, ಬೆಂಗಳೂರು) ಹಾಗೂ ವೀರಣ್ಣಗೌಡ, ಎಚ್.ಕೆ., ಬದುಕು ಮೆಲುಕು (ಮೈಸೂರು ಪ್ರಬುದ್ಧ ಪ್ರಕಾಶನ, ೧೯೭೪), ಪು.೧೧೮-೧೨೧. ಈ ಗಲಭೆಗಳಲ್ಲಿ ಈ ಕೆಳಗೆ ಕಾಣಿಸಿದ ಪತ್ರಿಕೆಗಳು ಭಾಗವಹಿಸಿದ್ದವು. ವೀರಕೇಸರಿ, ನವಜೀವನ, ಪ್ರಜಾಮಿತ್ರ, ವಿಶ್ವಕರ್ನಾಟಕ ಹಾಗೂ ಮೈಸೂರ್ ಸ್ಟಾರ್. ಈ ಗಲಭೆಗಳ ಬಗ್ಗೆ ನಡೆಸಿದ ಸಮಿತಿಯ ವಿಚಾರಣೆಯ ಕಲಾಪ ಗಳನ್ನು ವಿಶ್ವಕರ್ನಾಟಕ ಪತ್ರಿಕೆ ಪ್ರಕಟಿಸಿತು. ೯.೯.೧೯೨೮, ೨೩.೯.೧೯೨೮, ೩೦.೯.೧೯೨೮ ಇತ್ಯಾದಿ., (ರಾಷ್ಟ್ರೋತ್ಥಾನ ಪರಿಷತ್ ಬೆಂಗಳೂರು); ತಾಯಿನಾಡು, ೨೫.೬.೧೯೨೮, ೨೬.೯.೧೯೨೮, ೨೭.೯.೧೯೨೮, ೨೮.೯.೧೯೨೮, ೨.೧೦.೧೯೨೮ (ಕೆ.ಎಸ್.ಎ).

೨೬ ಲಿಂಗಯ್ಯ, ಡಿ.: ಶಿವಪುರ ಧ್ವಜ ಸತ್ಯಾಗ್ರಹ, ಬೆಂಗಳೂರು, ಶಿವಪುರ ಧ್ವಜ ಸತ್ಯಾಗ್ರಹ ಸ್ಮಾರಕ ಟ್ರಸ್ಟ್, ೧೯೭೯, ಪು. ೮೫-೧೯೮; ವಿದುರಾಶ್ವತ್ಥ ಗಲಭೆಗಳ ವಿಚಾರಣಾ ಸಮಿತಿ, ಮುಖ್ಯವರದಿ(೨೨ ಸಂಪುಟಗಳು) (ಕೆ.ಎಸ್.ಐ).

೨೭ ಜೋಯಿಸ್, ಎಂ.ಎಸ್, (ಸಂ): ಕರ್ಮಯೋಗಿ, ಮೈಸೂರು, ತಗಡೂರು ರಾಮಚಂದ್ರರಾವ್ ಸನ್ಮಾನ ಸಮಿತಿ, ೧೯೭೪.

೨೮ ದ ರೋಲ್ ಆಫ್ ದ ಪ್ರೆಸ್ ಇನ್ ಪ್ರಿನ್ಸ್‌ಲಿ ಮೈಸೂರು, ಪೂರ್ವೋಕ್ತ ಪು. ೨೧೯-೨೨೮

೨೯ ಅದೇ, ಪು. ೧೭೯-೧೮೩

೩೦ ಅದೇ, ಪು. ೨೨೮- ೨೨೯

೩೧ ದೊರೆಸ್ವಾಮಿ, ಎಚ್.ಎಸ್.: ಹೋರಾಟದ ದಿಟ್ಟ ಹೆಜ್ಜೆಗಳು, ಬೆಂಗಳೂರು, ಯೋಧರಮೇಳ ಪ್ರಕಾಶನ, ೧೯೭೨

೩೨ ದ ರೋಲ್ ಆಫ್ ದ ಪ್ರೆಸ್ ಇನ್ ಪ್ರಿನ್ಸ್‌ಲಿ ಮೈಸೂರ್, ಪೂರ್ವೋಕ್ತ., ಪು. ೨೧೭-೨೧೯

ಅಧ್ಯಾಯ : ಒಂಬತ್ತು

# ರೈತರ ಪಾತ್ರ

ಕೃಷಿ ಭಾರತದ ವಸಾಹತು ಆರ್ಥಿಕತೆಯ ಬೆನ್ನುಮೂಳೆಯಾಗಿದ್ದ ಕಾರಣ, ಕೃಷಿಯಲ್ಲಿ ನಿರತವಾಗಿದ್ದ ರೈತ ಉದ್ಭವವಾಗುತ್ತಿದ್ದ ಆಧುನಿಕ ರಾಷ್ಟ್ರದ ಅತ್ಯಂತ ಪ್ರಮುಖವಾದ ಅಂಗವಾಗಿ ಪರಿಣಮಿಸಿದ್ದು ಸಹಜವೇ ಆಗಿದೆ. ತನ್ನ ಸ್ವಾರ್ಥಸಾಧನೆಗಾಗಿ ತನಗಿಷ್ಟ ಬಂದ ರೀತಿಗೆ ಕೃಷಿ ರಚನೆಯನ್ನು ಬದಲಾಯಿಸಿಕೊಂಡ ಈಸ್ಟ್ ಇಂಡಿಯಾ ಕಂಪೆನಿಯು ಗುರುತು ಒಡಿಯಲಾರದ ರೀತಿಯಲ್ಲಿ ಕೃಷಿ ಸಂಬಂಧಗಳನ್ನು ವಿರೂಪಗೊಳಿಸಿತು. ಭೂ ಕಾಯಿದೆಯ ಮೂರು ಪದ್ಧತಿಗಳಿಂದ ಹೆಚ್ಚು ತೊಂದರೆಗೊಳಗಾದವರೆಂದರೆ ರೈತಾಪಿ ಜನರು. ವಸಾಹತು ಆಳ್ವಿಕೆಯು, ರೈತರ ನಡುವೆ ಶ್ರೇಣೀಕರಣವನ್ನು ಸೃಷ್ಟಿ ಮಾಡಿತ್ತೆಂಬುದು ನಿಜವಾದರೂ ಛಿದ್ರಗೊಂಡಿದ್ದ ಕರ್ನಾಟಕದ ವಿಷಯದಲ್ಲಿ ಯಾವ ಭಾಗ ಯಾವ ಭೂ ಕಾಯಿದೆಯಡಿಯಲ್ಲಿ ಬರುತ್ತದೆ ಎಂಬುದನ್ನು ಹೇಳುವುದು ಕಷ್ಟವಾಗಿತ್ತು.

ಸ್ಥೂಲವಾಗಿ ಹೇಳುವುದಾದರೆ ಮೈಸೂರು ಸಂಸ್ಥಾನ ಹಾಗೂ ಬೊಂಬಾಯಿ ಕರ್ನಾಟಕ ಪ್ರಾಂತ್ಯಗಳು ರೈತವಾರಿ ಪದ್ಧತಿಯಲ್ಲಿದ್ದರೆ ಹೈದರಾಬಾದು ಕರ್ನಾಟಕ ಅಷ್ಟಾಗಿ ಬದಲಾವಣೆಯನ್ನು ಮಾಡಿಕೊಳ್ಳದೆ ಊಳಿಗಮಾನ್ಯ ಪದ್ಧತಿಯನ್ನೇ ಉಳಿಸಿಕೊಂಡಿತು; ಇದರ ಬಗ್ಗೆ ಈಗಾಗಲೇ ಪ್ರಸ್ತಾಪಿಸಲಾಗಿದೆ. ಕೃಷಿ ಪದ್ಧತಿಯಲ್ಲಾದ ಬದಲಾವಣೆ, ಕೃಷಿಯಲ್ಲಾದ ಹೆಚ್ಚು ಹೆಚ್ಚು ವಾಣಿಜ್ಯೀಕರಣ, ಕಂದಾಯ ಪದ್ಧತಿಯ ಶೋಷಣೆ, ನೀರಾವರಿಯನ್ನು ಕಡೆಗಣಿಸಿದ ವಸಾಹತು ಪ್ರಭುತ್ವದ ಬೇಜವಾಬ್ದಾರಿ, ಇತ್ಯಾದಿಗಳ ಕಾರಣದಿಂದ ರೈತರು ಹೆಚ್ಚು ಹೆಚ್ಚು ನಿರ್ಗತಿಕರಾಗತೊಡಗಿದರು.

ರೈತರು ಬಡವರಾಗುತ್ತಾ ಹೋದ ಕಾರಣವೇ ಹತ್ತೊಂಭತ್ತನೆಯ ಶತಮಾನದ ಉದ್ದಕ್ಕೂ ಅವರು ದಂಗೆಯೇಳುವ ಪ್ರವೃತ್ತಿಯನ್ನು ರೂಢಿಸಿಕೊಂಡದ್ದನ್ನು ಕಾಣುತ್ತೇವೆ. ವಸಾಹತುಶಾಹಿಯ ಮುನ್ನುಗ್ಗುವಿಕೆಯ ವಿರುದ್ಧ ಯಾವುದೇ ದಂಗೆ ಸಾಧ್ಯವಾಗುತ್ತಿರಲಿಲ್ಲ ಎಂಬ ಅಂಶವು ಕಲ್ಯಾಣಸ್ವಾಮಿ ಹಾಗೂ ಸ್ವಾಮಿ ಅಪರಂಪಾರರವರು ದಂಗೆ ಎದ್ದಾಗ ರೈತರ ಮೇಲೆ ಹೆಚ್ಚು ಅವಲಂಬಿಸಬೇಕಾಯಿತಲ್ಲದೆ ಆಕರ್ಷಣೀಯವಾದ ಅನುಕೂಲತೆಗಳನ್ನು ಅವರ ಮುಂದೆ ಆಮಿಷವಾಗಿ ಒಡ್ಡಬೇಕಾದ ಅಗತ್ಯ ಬಿದ್ದಿತು.[1] ವಸಾಹತು ಶಕ್ತಿಯ ವಿರುದ್ಧ ಎದ್ದ ರೈತರ ದಂಗೆಯು ಆ ಆಡಳಿತದ ಒಂದು ಪ್ರಮುಖವಾದ ಗುರುತಾಗಿತ್ತು. ರಾಷ್ಟ್ರೀಯ ಬಿಡುಗಡೆಯ ಹೋರಾಟದ ಮೇಲೆ ಈ ದಂಗೆಗಳು ನಿರ್ಣಾಯಕವಾದ ಪರಿಣಾಮ ಬೀರಿದವು.

ಸ್ವಾತಂತ್ರ್ಯಪೂರ್ವದ ವರ್ಷಗಳಲ್ಲಿ ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಭೂನಿಯಂತ್ರಣದ ರೀತಿ ಹೇಗಿತ್ತು ಎಂದು ವರ್ತಮಾನದಲ್ಲಿ ಲೆಕ್ಕ ಹಾಕುವುದು ತುಂಬಾ ಕಷ್ಟದ ಕೆಲಸವೇ. ಮೈಸೂರು ಪ್ರಾಂತ್ಯದಲ್ಲಿ

ವಿಂಧ್ಯಾದ ದಕ್ಷಿಣದಲ್ಲಿನ ಬೇರೆ ಭಾಗಗಳಿಗಿಂತ ಹೆಚ್ಚು ಭೂಮಿ ಮಾಲೀಕರ ಒಡೆತನದಲ್ಲಿತ್ತು.[೨] ಆದರೆ ಬೊಂಬಾಯಿ ಮತ್ತು ಹೈದರಾಬಾದು ಕರ್ನಾಟಕ ಪ್ರಾಂತ್ಯಗಳಲ್ಲಿ ಸನ್ನಿವೇಶ ಬೇರೆಯ ರೀತಿಯದಾಗಿತ್ತು; ದೊಡ್ಡ ಜಮೀನ್ದಾರರಿದ್ದರು ಹಾಗೆಯೇ ಕೃಷಿ ಅವಲಂಬಿತ ಜನಸಂಖ್ಯೆಯ ಬಹುಪಾಲು ಗುತ್ತಿಗೆದಾರರು ಅಥವಾ ಕೃಷಿ ಕಾರ್ಮಿಕರಿಂದ ಕೂಡಿತ್ತು. ಬೊಂಬಾಯಿ ಕರ್ನಾಟಕದಲ್ಲಿ ಇದಕ್ಕೆ ಸಂಬಂಧಿಸಿದ ಸಂಖ್ಯೆ ಕ್ರಮವಾಗಿ ೭೧ ಹಾಗೂ ೬೦ ಅನುಪಾತವಿತ್ತು.[೩] ಜೊತೆಗೆ ಮೈಸೂರಿನಲ್ಲಿ ಅತಿದೊಡ್ಡ ಜಮೀನ್ದಾರರು ಇರಲಿಲ್ಲ; ಸುಮಾರು ೪೯ ಮಂದಿ ಭೂ ಹಿಡುವಳಿದಾರರು ಸಾಲಿಯಾನ ೫೦೦ ರೂಪಾಯಿಗಳನ್ನು ಭೂಕಂದಾಯವಾಗಿ ನೀಡುತ್ತಿದ್ದರು. ಬೊಂಬಾಯಿ ಮತ್ತು ಹೈದರಾಬಾದು ಕರ್ನಾಟಕಕ್ಕೆ ಸಂಬಂಧಿಸಿದಂತೆ ನಮ್ಮ ಬಳಿ ವಿವರಗಳಿಲ್ಲ. ಆದಾಗ್ಯೂ ಭೂ ನಿಯಂತ್ರಣದಲ್ಲಿನ ವ್ಯತ್ಯಾಸದಿಂದಾಗಿ ಆಯಾ ಪ್ರದೇಶಗಳಲ್ಲಿ ಸ್ವಾತಂತ್ರ್ಯ ಆಂದೋಲನದ ಮೇಲೆ ಪರಿಣಾಮವುಂಟಾಯಿತು.

ಕಾನೂನು ಭಂಗ ಚಳವಳಿಯ ಪ್ರಾರಂಭವಾಗುವ ತನಕ ಕರ್ನಾಟಕದ ಹಳ್ಳಿಗಾಡು ಪ್ರದೇಶದಲ್ಲಿ ಹೋರಾಟದ ಕಾವು ಕಾಣಿಸಿಕೊಳ್ಳಲಿಲ್ಲ. ಅದಕ್ಕೆ ಎರಡು ಕಾರಣಗಳಿದ್ದವು. ಮೊದಲನೆಯದಾಗಿ ಈ ಚಳವಳಿಯ ಮುಂಚೂಣಿಯಲ್ಲಿದ್ದವರು ಬ್ರಾಹ್ಮಣ ಜನಾಂಗಕ್ಕೆ ಸೇರಿದ್ದವರಾದ್ದರಿಂದ ಭೂಮಿಗೆ ಸಂಬಂಧಿಸಿದ ವಿಷಯಗಳು ಅವರನ್ನು ನೇರವಾಗಿ ಬಾಧಿಸದ ಕಾರಣ ಇದರ ಬಗ್ಗೆ ಅವರು ಹೆಚ್ಚು ಆಸಕ್ತಿ ತೋರಲಿಲ್ಲ. ಭೂಹಿಡುವಳಿದಾರರ ಪೈಕಿ ಬಹುತೇಕರು ಗೈರುಹಾಜರಿ ಜಮೀನುದಾರರಾದ್ದರಿಂದ ರೈತರನ್ನು ಹೋರಾಟಕ್ಕಿಳಿಸುವ ಯಾವುದೇ ಪ್ರಯತ್ನದಿಂದ ಅವರ ಹಿತಕ್ಕೆ ಧಕ್ಕೆಯುಂಟಾಗುವಂತಿತ್ತು. ಎರಡನೆಯದಾಗಿ ಭೂಮಿಯ ಮೇಲೆ ಅವಲಂಬಿಸಿದ್ದ ಅಬ್ರಾಹ್ಮಣರು ಕಾಂಗ್ರೆಸ್ಸಿನ ವಿಷಯದಲ್ಲಿ ತಟಸ್ಥರಾಗಿದ್ದುದಕ್ಕೆ ಕಾರಣ ಆ ಪಕ್ಷದಲ್ಲಿ ಬ್ರಾಹ್ಮಣರೇ ತುಂಬಿಹೋಗಿದ್ದರು, ಹಾಗೂ ರಾಷ್ಟ್ರೀಯ ಹೋರಾಟದಲ್ಲಿ ಬ್ರಾಹ್ಮಣರದೇ ಮೇಲುಗೈ ಆಗಿ ಬ್ರಾಹ್ಮಣೇತರ ಜನಾಂಗಗಳ ಆಸೆ ಆಕಾಂಕ್ಷೆಗಳ ಬಗ್ಗೆ ಅವರಿಗೆ ಹೆಚ್ಚು ಸಹಾನುಭೂತಿ ಇರಲಿಲ್ಲ. ಇದರ ಜೊತೆಗೆ, ಅಬ್ರಾಹ್ಮಣರ ನಾಯಕರು ಬಹುತೇಕ ಸ್ವತಃ ಜಮೀನುದಾರರಾದ್ದರಿಂದ ರೈತರ ಸಮಸ್ಯೆಗಳನ್ನು ಸಂಕಷ್ಟಗಳೆಂದು ಮುಂದೊಡ್ಡಲು ಅವರು ಸಿದ್ಧರಿರಲಿಲ್ಲ. ಹಾಗಾಗಿ ರೈತವರ್ಗ ಬಹುಕಾಲ ರಾಷ್ಟ್ರೀಯ ಚಳವಳಿಯ ಪರಿಧಿಯ ಹೊರಗೆ ಉಳಿಯುವಂತಾಯಿತು.

ಆದರೆ ಗಾಂಧೀಜಿಯವರ ಪ್ರವೇಶದಿಂದ ಸನ್ನಿವೇಶ ಬದಲಾಗುವಂತೆ ಆಯಿತು. ಅವರ ನೇತೃತ್ವದಲ್ಲಿ ನಡೆದ ಚಂಪಾರಣ್ಯ ಹಾಗೂ ಖೇಡಾ ಸತ್ಯಾಗ್ರಹಗಳು ಕರ್ನಾಟಕದಲ್ಲೂ ಪ್ರಭಾವ ಬೀರಿದುವು. ಜೊತೆಗೆ ರೈತರ ಭಾಗವಹಿಸುವಿಕೆ ಇಲ್ಲದೆ ಕಾಂಗ್ರೆಸ್ಸು ಜನಾಂದೋಲನದ ವ್ಯಾಪ್ತಿಯನ್ನು ಗಳಿಸುವಂತಿರಲಿಲ್ಲ. ತನ್ನ ವ್ಯಾಪ್ತಿಯನ್ನು ಹೆಚ್ಚು ಮಾಡಿಕೊಳ್ಳುತ್ತಿದ್ದ ಬ್ರಾಹ್ಮಣೇತರರ ಪಕ್ಷಕ್ಕೂ ಕೂಡ ರೈತಾಪಿ ಜನಗಳನ್ನು ಬಿಟ್ಟು ಮುಂದುವರಿಯುವುದು ಕಷ್ಟವಾಗಿತ್ತು. ಎಸ್.ಪಿ.ಘಾಟೆ, ಸಿ.ಬಿ.ಹೊನ್ನಯ್ಯ, ಎನ್.ಕೆ.ಉಪಾಧ್ಯಾಯ, ಗಂಗಾಧರ ನಾಮೋಷಿ ಹಾಗೂ ಧಾರೇಶ್ವರರಂಥ ಮುಖಂಡರ ಕ್ರಿಯೆಗಳಲ್ಲಿ ಸಮತಾವಾದಿ ಸಿದ್ಧಾಂತದ ಪ್ರಭಾವವನ್ನು ಕಾಣಬಹುದಾಗಿತ್ತು. ಎಚ್.ಕೆ.ವೀರಣ್ಣಗೌಡ ಹಾಗೂ ಸರ್‌ದಾರ್ ವೀರಣ್ಣಗೌಡ ಪಾಟೀಲ್‌ರಂಥ ರೈತಾಪಿ ವರ್ಗದ ಯುವಕರು ಪ್ರವೇಶಿಸಿದ ನಂತರ ಈ ಪ್ರಾಂತ್ಯದ ಸ್ವಾತಂತ್ರ್ಯ ಚಳವಳಿಗ ಹೊಸ ಕಳೆ ಬಂದಿತೆನ್ನಬೇಕು. ೧೯೨೦ರ ದಶಕದ ವಿಶ್ವವ್ಯಾಪಿ ಆರ್ಥಿಕ ಇಳಿತದ ಪ್ರಭಾವ ಇಲ್ಲಿಯೂ ಕಾಣಿಸಿಕೊಂಡಿತು. ಹಾಗೆಯೇ ಬಾರ್ಡೋಲಿ ಸತ್ಯಾಗ್ರಹದ ಪಾಠಗಳನ್ನು ಇಲ್ಲಿನವರು ಮರೆಯುವಂತಿರಲಿಲ್ಲ.

ಬೊಂಬಾಯಿ ಕರ್ನಾಟಕ ಪ್ರಾಂತ್ಯದಲ್ಲಿ ಉದಾರವಾದಿ ರಾಷ್ಟ್ರವಾದಿಗಳು ರೈತರನ್ನು ಸಂಘಟಿಸುವ ಪ್ರಯತ್ನಗಳನ್ನು ಮಾಡಿದರು. ಬೆಳಗಾವಿ ಹಾಗೂ ಬಿಜಾಪುರ ಜಿಲ್ಲೆಗಳಲ್ಲಿ ಅಂಥ ಚಟುವಟಿಕೆಗಳು

ನಡೆಯುವಲ್ಲದೆ ೧೯೨೦ರ ದಶಕದಲ್ಲಿ ದೊಂಡೊ ವಿಷ್ಣೊ ಕುಲಕರ್ಣಿ ಸಭೆಗಳನ್ನು ನಡೆಸಿ ಜನರ ಸಮಸ್ಯೆಗಳಿಗೆ ದನಿಕೊಟ್ಟರು. ಶ್ರೀನಿವಾಸರಾವ್ ಮಂಗಳವಾಡೆ ಅವರಂಥ ರಾಷ್ಟ್ರವಾದಿಗಳ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿದ್ದ 'ಕನ್ನಡಿಗ' ಎಂಬಂಥ ಪತ್ರಿಕೆಗಳು ರೈತರ ಬಡತನ ಹಾಗೂ ಕ್ಷಾಮದ ಪರಿಸ್ಥಿತಿಯಲ್ಲೂ ಕಂದಾಯ ವಸೂಲು ಮಾಡಲು ಟೊಂಕಕಟ್ಟಿ ನಿಂತಿದ್ದ ಅಧಿಕಾರಶಾಹಿಯ ಕ್ರೌರ್ಯದ ವಿರುದ್ಧ ನಿರ್ಭಯವಾಗಿ ಬರೆದವು. ಬಿಜಾಪುರ ಜಿಲ್ಲೆಯ ಚಡಚಣದಲ್ಲಿ ಮೊಟ್ಟಮೊದಲ ರೈತರ ಸಂಘಟನೆ, 'ರೈತರ ಕಷ್ಟ ನಿವಾರಕ ಸಂಘ' ಸ್ಥಾಪನೆಗೊಂಡಿತು. ಆ ಸಂದರ್ಭದಲ್ಲಿ ಎನ್.ಎಸ್.ಹರ್ಡೀಕರರು ಹಾಜರಿದ್ದರು. ಬ್ರಾಹ್ಮಣೇತರರು ತಮ್ಮ ಪಕ್ಷದ ವಿಷಯದಲ್ಲಿ ಅಲಕ್ಷ್ಯದಲ್ಲಿದ್ದುದನ್ನು ತುಂಬಿಕೊಳ್ಳಲೋ ಎಂಬಂತೆ ಈ ಪ್ರಾಂತ್ಯದ ರೈತರ ಬೆಂಬಲವನ್ನು ಪಡೆಯಲು ಕಾಂಗ್ರೆಸ್ ಪಕ್ಷ ಹೆಚ್ಚು ಆಸಕ್ತಿ ತೋರತೊಡಗಿತು.[೨]

ಸರ್‌ದಾರ್ ಪಟೇಲರ ನೇತೃತ್ವದಲ್ಲಿ ಬಾರ್ಡೋಲಿ ರೈತ ಸತ್ಯಾಗ್ರಹ ಪರಾಕಾಷ್ಠೆ ಮುಟ್ಟಿದ್ದ ಸಂದರ್ಭದಲ್ಲಿ ೧೯೨೮ರಲ್ಲಿ ಸರ್‌ದಾರ್ ವೀರಣ್ಣಗೌಡ ಪಾಟೀಲರು ಅಲ್ಲಿಗೆ ಭೇಟಿ ನೀಡಿ ಸಮಸ್ಯೆಯ ಸುಳಿವು ತಿಳಿದುಕೊಂಡರು. ಹೊಸ ವಿಧಾನದಲ್ಲಿ ಆಂದೋಲನ ನಡೆದಿರುವುದನ್ನು ವೀರಣ್ಣಗೌಡರು ಪರಿಚಯ ಮಾಡಿಕೊಂಡರು. ಕರ್ನಾಟಕದ ಬ್ರಿಟಿಷ್ ಹಾಗೂ ಸಂಸ್ಥಾನಿಕ ಪ್ರದೇಶಗಳೆರಡರಲ್ಲೂ ದೇಶದ ಇತರೆಡೆಗಳಲ್ಲಿ ಪ್ರಚಲಿತವಾಗುತ್ತಿದ್ದ ಸಮಾಜವಾದಿ ಸಿದ್ಧಾಂತ ಕಮಲಾದೇವಿ ಚಟ್ಟೋಪಾಧ್ಯಾಯರ ಮೂಲಕ ಕಾಣಿಸಿಕೊಂಡಿತು.

ಆದಾಗ್ಯೂ ಕಾನೂನು ಭಂಗ ಚಳವಳಿ(೧೯೨೯-೧೯೩೪) ಮಾತ್ರ ವ್ಯಾಪಕವಾಗಿ ವಸಾಹತು-ವಿರೋಧಿ ಹೋರಾಟದಲ್ಲಿ ರೈತರನ್ನು ಆಕರ್ಷಿಸಿತು ಎನ್ನಬೇಕು. ಕರ್ನಾಟಕದ ಪಶ್ಚಿಮ ಭಾಗದಲ್ಲಿ ಆ ಘಟ್ಟದಲ್ಲಿ ರೈತರ ಹೋರಾಟ ಹೇಗೆ ನಡೆಯಿತು ಎಂಬುದರ ಬಗ್ಗೆ ಈಗಾಗಲೇ ನಾವು ವಿವರವಾಗಿ ಚರ್ಚಿಸಿದ್ದೇವೆ. ಈ ಶತಮಾನದ ಮೂವತ್ತರ ದಶಕದಲ್ಲಿ ಕಾಂಗ್ರೆಸ್ ಸೋಷಲಿಸ್ಟ್ ಪಾರ್ಟಿ ಮತ್ತು ಅಖಿಲ ಭಾರತ ಕಿಸಾನ್ ಸಭಾಗಳು ಸ್ಥಾಪನೆಗೊಂಡವಲ್ಲದೆ, ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾಗಿದ್ದ ಜವಹರ್‌ಲಾಲ್ ನೆಹರೂರವರ ಬೆಂಬಲದಿಂದ ಒಳ್ಳೆಯ ಉತ್ತೇಜನ ದೊರೆತಂತಾಯಿತು. ಉಪ್ಪಿನ ಸತ್ಯಾಗ್ರಹ ಹಾಗೂ ಕಾನೂನು ಭಂಗ ಚಳವಳಿಗಳಲ್ಲಿ ರೈತರು ಭಾಗವಹಿಸದಿದ್ದರೆ ಭಾರತೀಯ ಮನಸ್ಸಿನ ಮೇಲೆ ಮತ್ತು ವಿಶೇಷವಾಗಿ ವಸಾಹತು ಅಧಿಕಾರಿಗಳ ಮೇಲೆ ಪರಿಣಾಮಕಾರಿಯಾದ ಪರಿಣಾಮ ಉಂಟಾಗುತ್ತಿರಲಿಲ್ಲ.

'ಕರನಿರಾಕರಣೆ' ಹಾಗೂ 'ಅರಣ್ಯ ಸತ್ಯಾಗ್ರಹ' ದಲ್ಲಿ- ಇವು ಕಾನೂನು ಭಂಗ ಚಳವಳಿಯ ಭಾಗವಾಗಿ ಪ್ರಾರಂಭವಾದುವು- ಒಂದು ದಿನದಲ್ಲಿ (೧ನೇ ಮೇ ೧೯೩೨) ಸುಮಾರು ೪೦೦೦ ಮಂದಿ ರೈತರು ಭಾಗವಹಿಸಿ ಸರ್ಕಾರದ ಆಜ್ಞೆಯನ್ನು ಧಿಕ್ಕರಿಸಿ ಅಂಕೋಲಾದಲ್ಲಿ ಮರಗಳನ್ನು ಕಡಿದರು. ಜನವರಿ ೧೯೩೨ರಿಂದ ೧೯೩೩ರ ಮಾರ್ಚಿಯ ಕೊನೆಯವರೆಗೆ ಸಿದ್ಧಾಪುರ ತಾಲೂಕಿನ ಸುಮಾರು ೨೦೦ ಗ್ರಾಮಗಳ ರೈತರು ಕಂದಾಯ ಕೊಡಲು ನಿರಾಕರಿಸಿದರು ಹಾಗೂ ರಾಜ್ಯಾದ್ಯಂತ ಸುಮಾರು ೧,೨೦,೦೦೦ ಕರನಿರಾಕರಣೆಗಾರರನ್ನು ದಸ್ತಗಿರಿ ಮಾಡಲಾಯಿತು. ವಸಾಹತು ಸರ್ಕಾರ ಹೆಚ್ಚು ಹೆಚ್ಚು ಕ್ರೂರವಾಗತೊಡಗಿತು. ಸತ್ಯಾಗ್ರಹಿಗಳ ಆಸ್ತಿಪಾಸ್ತಿಯನ್ನು ವಶಕ್ಕೆ ತೆಗೆದುಕೊಂಡು ಹರಾಜು ಮಾಡಲಾಯಿತು. ಅಷ್ಟೇ ಅಲ್ಲ, ಮಹಿಳಾ ಸತ್ಯಾಗ್ರಹಿಗಳನ್ನು ವರ್ಣಿಸಲಾರದ ರೀತಿಯ ಅವಮಾನಕ್ಕೆ ಗುರಿಪಡಿಸಲಾಯಿತು.[೫]

ವಸಾಹತು ಸಂದರ್ಭದಲ್ಲಿ ನಡೆದ ರೈತ ಚಳವಳಿಗಳ ಇತಿಹಾಸವನ್ನು ಗಮನಿಸುವಾಗ ಅಗತ್ಯವಾಗಿ ದಾಖಲಿಸಬೇಕಾದ ಇನ್ನೊಂದು ಘಟನೆ ಎಂದರೆ 'ಇರ್ವಿನ್ ನಾಲೆ ರೈತ ಚಳವಳಿ' . ಕಾನೂನು ಭಂಗ ಚಳವಳಿಯ ಕಾಲದಲ್ಲೇ ಮೈಸೂರು ಸಂಸ್ಥಾನದಲ್ಲಿ ಇದು ನಡೆದುದು ಕುತೂಹಲಕಾರಿಯಾಗಿದೆ. ಕೃಷ್ಣರಾಜಸಾಗರದ

ನೀರನ್ನು ನೀರಾವರಿಗಾಗಿ ಬಿಡುಗಡೆ ಮಾಡಿದ ಬಳಿಕ ಮಂಡ್ಯ ಜಿಲ್ಲಾ ರೈತರ ಮೇಲೆ ಮಹಾರಾಜರ ಸರ್ಕಾರ ಹೇರಿದ ನೀರಾವರಿ ತೆರಿಗೆಯನ್ನು ಪ್ರತಿಭಟಿಸಲು ಚಳವಳಿಯನ್ನು ಪ್ರಾರಂಭಿಸಲಾಯಿತು. ನೀರಾವರಿಯಾದ ಪ್ರತಿ ಎಕರೆ ಭೂಮಿಯ ಮೇಲೆ ರೂಪಾಯಿ ೧೦೦/- ರಿಂದ ರೂಪಾಯಿ ೧೫೦/- ರವರೆಗೆ ಶೇ. ರೂಪಾಯಿ ೬ ೧/೪ ರಂತೆ ಬಡ್ಡಿ ಸೇರಿಸಿ ೧೦ ಸಮಕಂತುಗಳಲ್ಲಿ ನೀಡುವಂತೆ ಲೆವಿ ಹಾಕಲಾಯಿತು. ಲೆವಿ ಹಾಕಿದ್ದರಿಂದಲೇ ರೈತರು ನಿರಾಕರಣೆಯ ಮಾರ್ಗ ಅನುಸರಿಸಲಿಲ್ಲ; ತಾವು ನೀರಾವರಿ ಸೌಕರ್ಯವನ್ನು ಉಪಯೋಗಿಸಿಕೊಳ್ಳದಿದ್ದರೂ ಸರ್ಕಾರ ಲೆವಿ ಹಾಕಿದ್ದರಿಂದ ಅವರು ಕ್ರೋಧಗೊಂಡಿದ್ದರು. ಇದರ ಜೊತೆಗೆ ಮೂರು ವರ್ಷಕ್ಕೊಮ್ಮೆ ಬೆಳೆ ಬದಲಾಯಿಸಬೇಕು ಎಂದು ಕಡ್ಡಾಯಗೊಳಿಸಿದ್ದರಿಂದ ಸಹಜವಾಗಿಯೇ ಅವರು ಇದನ್ನು ಪ್ರತಿಭಟಿಸಲು ಮುಂದಾದರು.

ಆದಾಗ್ಯೂ ರೈತರ ಪರ ವಹಿಸಿ ಸರ್ಕಾರಕ್ಕೆ ಹೋದವರು ಮೊದಲು ಕಾಂಗ್ರೆಸ್ಸಿಗರಲ್ಲ ಎಂಬುದನ್ನು ನೆನಪಿಡಬೇಕು. ಬ್ರಾಹ್ಮಣೇತರರ ಪಕ್ಷವಾದ ಪ್ರಜಾಪಕ್ಷವು ಈ ವಿಷಯವಾಗಿ ಶಾಸನಸಭೆಯ ಒಳಗೆ ಮತ್ತು ಹೊರಗೆ ಗಮನ ಸೆಳೆಯಿತು. ಎಸ್.ಸಿ.ಮಲ್ಲಯ್ಯ, ಎಚ್.ಸಿ. ದಾಸಪ್ಪ ಹಾಗೂ ಡಿ.ಎಸ್.ಮಲ್ಲಪ್ಪನವರು ನೀರಾವರಿ ಸೌಕರ್ಯವು ಜಲಾಶಯ ಯೋಜನೆಯ ಉಪ ಉತ್ಪನ್ನವಾಗಿದ್ದು ಅಣೆಕಟ್ಟೆ ಕಟ್ಟಿದ ಮೂಲ ಉದ್ದೇಶ ವಿದ್ಯುಚ್ಛಕ್ತಿ ಉತ್ಪಾದನೆಯಾಗಿದೆ ಎಂದು ವಾದಿಸಿದರು. ಆದರೆ ಸರ್ಕಾರ ಪಟ್ಟು ಬಿಡಲಿಲ್ಲ. ಸರ್ಕಾರದೊಡನೆ ಸಂಘರ್ಷಕ್ಕಿಳಿಯುವ ಹಂತಕ್ಕೆ ವಿಷಯವನ್ನು ತೆಗೆದುಕೊಂಡು ಹೋಗಲು ಪ್ರಜಾಪಕ್ಷದ ನಾಯಕರು ಸಿದ್ಧರಿರಲಿಲ್ಲ.[೬] ಕಾಂಗ್ರೆಸ್ಸು ಪಕ್ಷದವರೂ ದೂರ ಉಳಿದರು. ಆ ಸಂದರ್ಭದಲ್ಲಿ ಕಾಂಗ್ರೆಸ್ಸೇತರ ಗಾಂಧಿವಾದಿಯಾದ ಎಚ್.ಕೆ.ವೀರಣ್ಣಗೌಡರು ವಿಭಿನ್ನ ಹಿನ್ನೆಲೆಯ ರೈತರನ್ನು ಸಂಘಟಿಸುವ ಜವಾಬ್ದಾರಿಯನ್ನು ಹೊತ್ತುಕೊಂಡರು. ವೀರಣ್ಣಗೌಡರ ನೇತೃತ್ವದಲ್ಲಿ ರೈತರ ಸಭೆ ನಡೆಯಿತು ಹಾಗೂ ರೈತರ ನಿಯೋಗವೊಂದು ದಿವಾನರನ್ನು ಭೇಟಿ ಮಾಡಿತಾದರೂ ಮಹತ್ವವಾದದ್ದೇನೂ ಜರುಗಲಿಲ್ಲ. ಬೆಂಗಳೂರಿನ ಸಚಿವಾಲಯಕ್ಕೆ ರೈತರ ಜಾಥಾ ಹೊರಡಿಸುವ ನಿರ್ಧಾರ ತೆಗೆದುಕೊಳ್ಳಲಾಯಿತು. ಸುಮಾರು ೧೦೦ ಕಿಲೋಮೀಟರ್ ದೂರದ ಬೆಂಗಳೂರಿಗೆ ಹತ್ತಿರ ಹತ್ತಿರ ೪೦೦೦ ಜನ ರೈತರು ಶಾಂತಿಯುತವಾಗಿ ಮೆರವಣಿಗೆಯಲ್ಲಿ ಹೊರಟು ಯಶಸ್ವಿಯಾದದ್ದು ತುಂಬಾ ಗಮನಾರ್ಹವಾದ ಸಂಗತಿಯಾಗಿದೆ. ಜಾಥಾಕ್ಕೆ ಗುರಿ ತಲುಪಲು ೪ ದಿನಗಳು ಹಿಡಿಯಿತು. ೩೧ನೇ ಡಿಸೆಂಬರ್ ೧೯೩೧ರಂದು ಮದ್ದೂರು ಬಿಟ್ಟು ೪ನೇ ಜನವರಿ ೧೯೩೨ರಂದು ಅವರು ಬೆಂಗಳೂರು ತಲುಪಿದರು. ಜಾಥಾ ಕಾಲದಲ್ಲಿ ರೈತರು ಎಷ್ಟು ಶಿಸ್ತು ಬದ್ಧರಾಗಿ, ಶಾಂತಿಯಿಂದ ನಡೆದುಕೊಂಡರೆಂಬುದು ದಾಖಲಿಸಲು ಅರ್ಹವಾದದ್ದಾಗಿದೆ. ಎರಡು ಸಾಲುಗಳಲ್ಲಿ ಹೊರಟ ಮೆರವಣಿಗೆಯು ೨ ೧/೨ ಕಿಲೋ ಮೀಟರುಗಳ ಉದ್ದಕ್ಕೆ ಚಾಚಿಕೊಂಡಿತ್ತು. ರೈತರ ಶಾಂತಿಯುತ ನಡವಳಿಕೆಯಿಂದ ಸಾರ್ವಜನಿಕರು ಹಾಗೂ ಆಡಳಿತಕ್ಕೆ ಆಶ್ಚರ್ಯವಾಯಿತು.

ಬೆಂಗಳೂರಿನ ಸಚಿವಾಲಯವಾದ 'ಅಠಾರಾ ಕಚೇರಿ' ಯ ಮುಂದೆ ರೈತರು ಜಮಾಯಿಸಿದಾಗ ದಿವಾನರಾದ ಮಿರ್ಜಾ ಇಸ್ಮಾಯಿಲ್ಲರು ಸಹಿ ಮಾಡಿದ ಮನವಿಯನ್ನು ಸ್ವೀಕರಿಸಲು ಕೆಳಗಿಳಿದು ಬಂದರು. ಮನವಿಯಲ್ಲಿ ನಾವು ಮುಖ್ಯವಾಗಿ ಗಮನಿಸಬೇಕಾದ ಸಂಗತಿಯೆಂದರೆ ರೈತರು ಲೆವಿ ಕೊಡುವುದರ ವಿರುದ್ಧವಾಗಿರಲಿಲ್ಲ, ಅದರ ಪ್ರಮಾಣದಲ್ಲಿ ಕಡಿಮೆಯಾಗಬೇಕು ಹಾಗೂ ನೀರಾವರಿ ಅನುಕೂಲತೆಯನ್ನು ಉಪಯೋಗಿಸಲು ಪ್ರಾರಂಭಿಸುವ ತನಕ ಬಡ್ಡಿಯನ್ನು ಮನ್ನಾ ಮಾಡಬೇಕೆಂಬುದು ಅವರ ಬೇಡಿಕೆಯಾಗಿತ್ತು. ಕ್ಷೇತ್ರಕ್ಕೆ ಭೇಟಿ ನೀಡಿ ತಮಗೆ ಒಪ್ಪಿಗೆಯೆನಿಸಿದರೆ ಅವರ ಬೇಡಿಕೆಗಳಲ್ಲಿ ಕೆಲವನ್ನು ಈಡೇರಿಸುವುದಾಗಿ ದಿವಾನರು ಸಮ್ಮತಿಸಿದರು.

ರೈತರಿಗೆ ಸಂಸ್ಥಾನವು ಸಂಪೂರ್ಣವಾಗಿ ವಿರೋಧವಾಗಿದ್ದುದು ಆಶ್ಚರ್ಯಕರವಾಗಿದೆ. ರೈತರು ಸಭೆ ಸೇರುವುದನ್ನು ಕೂಡ ನಿರ್ಬಂಧಿಸಲಾಗಿತ್ತು. ಪ್ರತೀ ಬಾರಿ ಅವರು ಸಭೆ ಸೇರಲು ಪ್ರಯತ್ನಿಸಿದಾಗಲೂ ಜಿಲ್ಲಾ ನ್ಯಾಯಾಧೀಶರು ಅದನ್ನು ನಿಷೇಧಿಸಿ ಆಜ್ಞೆ ಹೊರಡಿಸುತ್ತಿದ್ದರು. ಸಮಸ್ಯೆಯನ್ನು ವಿವರಿಸುವಂಥ ಕರಪತ್ರಗಳನ್ನು ಹಂಚುವುದನ್ನು ಸಹ ನಿಷೇಧಿಸಲಾಯಿತು.[೬] ಸರ್ಕಾರ ಬಡ್ಡಿ ಮನ್ನಾ ಮಾಡಿತು. ಹಾಗೂ ಕಂತುಗಳನ್ನು ೧೦ ರಿಂದ ೧೨ ವರ್ಷಗಳಿಗೆ ಹೆಚ್ಚಿಸಿತು. ಇದನ್ನು ಬಿಟ್ಟು ಉಳಿದಂತೆ ಸರ್ಕಾರದ ನಿಲುವು ಬಹಳ ಬಿಗಿಯಾಗಿದ್ದಿತು. ಈ ವಿಷಯವನ್ನು ರಾಜಕೀಯಗೊಳಿಸಿಬಿಡಬಹುದೆಂಬ ದಿಗಿಲಿನಿಂದ ಸರ್ಕಾರ ಅಷ್ಟೊಂದು ವಿರೋಧವಾಗಿ ವರ್ತಿಸಿತು. ಹಾಗಾಗಿ ಸಂಘ ಸೇರುವ ಸ್ವಾತಂತ್ರ್ಯವನ್ನು ಕೂಡಾ ಜನರಿಂದ ಕಸಿದುಕೊಳ್ಳಲಾಯಿತು. ವಾಸ್ತವವಾಗಿ ಸರ್ಕಾರ ತಳೆದ ಈ ನಿಲುವಿನಿಂದಾಗಿ ರಾಜಕೀಯಗೊಳ್ಳದ ರೈತರನ್ನು ಸರ್ಕಾರ ರಾಜಕೀಯಗೊಳ್ಳುವಂತೆ ಪ್ರೇರೇಪಿಸಿದಂತಾಯಿತು; ಇಂಥದೇ ಅವಕಾಶವನ್ನು ರಾಜಕಾರಣಿಗಳು ಉಪಯೋಗಿಸಿಕೊಂಡು ರೈತರನ್ನು ತಮ್ಮ ತೆಕ್ಕೆಗೆ ತೆಗೆದುಕೊಳ್ಳಲು ಮುಂದಾದರು.

ಆ ಸಂದರ್ಭದಲ್ಲಿ ರೈತರು ಗಾಂಧೀಜಿಯವರ ಮಾರ್ಗದಿಂದ ಸ್ಫೂರ್ತಿಗೊಂಡು ಒಂದು ನವೀನ ಮಾದರಿಯನ್ನು ಅಳವಡಿಸಿಕೊಂಡರು. ನೀರನ್ನು ಉಪಯೋಗಿಸಿಕೊಳ್ಳದೆ ಸುಂಕಕೊಡುವುದನ್ನು ನಿರಾಕರಿಸಿದರು. ರೈತರ ಮನವೊಲಿಸುವ ಸರ್ಕಾರದ ಪ್ರಯತ್ನಕ್ಕೆ ಯಶಸ್ಸು ದೊರಕಲಿಲ್ಲ. ಸರ್ಕಾರಕ್ಕೆ ಇದರ ಸಂದೇಶ ತಲುಪಿದ ಕೂಡಲೇ 'ಕ್ಷೇತ್ರಪದ್ಧತಿ ಕೃಷಿ' (block System)ಯನ್ನು ಕಡ್ಡಾಯಗೊಳಿಸಲಿಲ್ಲ; ಹಾಗೂ ನೀರನ್ನು ಉಪಯೋಗಿಸಲೇ ಬೇಕೆಂದು ರೈತರಿಗೆ ನಿರ್ಬಂಧ ಹೇರಲಿಲ್ಲ. ಹಾಗಾಗಿ ಕಡೆಗೆ ಎರಡೂ ಪಕ್ಷದವರು ರಾಜಿಯಾಗಿ ಸನ್ನಿವೇಶಕ್ಕೆ ಹೊಂದಿಕೊಳ್ಳಲು ತೀರ್ಮಾನಿಸಿದರು. ತಮ್ಮ ಬೆಳೆ ವಿಧಾನವನ್ನು ರೈತರು ಮುಂದುವರಿಸಿದರು; ಸರ್ಕಾರ ಇದನ್ನು ಒಪ್ಪಿ ಲೆವಿಯನ್ನು ಮಾತ್ರ ಸ್ವೀಕರಿಸಲು ಸಮ್ಮತಿಸಿತು. 'ಕ್ಷೇತ್ರಪದ್ಧತಿ ಕೃಷಿ ಹಾಗೂ ಪರ್ಯಾಯ ಬೆಳೆ' ಬೆಳೆಯಬೇಕೆಂಬ ನಿಯಮವನ್ನಾಗಲಿ ಅಥವಾ ಲೆವಿ ಮೇಲಿನ ಬಡ್ಡಿಯನ್ನು ಕಡ್ಡಾಯವಾಗಿ ನೀಡಬೇಕೆಂಬ ತನ್ನ ಆದೇಶವನ್ನು ಹೇರದೆ ಕೈಬಿಟ್ಟಿತು. ಕುತೂಹಲದ ಸಂಗತಿಯೆಂದರೆ ಎರಡೂ ಪಕ್ಷದವರು ಈ ವಿಷಯವಾಗಿ ಕುಳಿತು ಚರ್ಚಿಸಿ ನಿರ್ಧಾರಕ್ಕೆ ಬಂದಿರಲಿಲ್ಲ.[೭] ರೈತರ ಚಳವಳಿಯಿಂದ ಸ್ಪಷ್ಟವಾಗಿ ಕಾಣುವ ಒಂದು ಅಂಶವೆಂದರೆ ಸನ್ನಿವೇಶವನ್ನು ಚೆನ್ನಾಗಿ ಅರ್ಥಮಾಡಿಕೊಳ್ಳುವಂಥ ನಾಯಕತ್ವ ರೈತರಲ್ಲಿರಲಿಲ್ಲ ಎಂಬುದು. ಸ್ವಲ್ಪ ಕಾಲ ಮುಖಂಡತ್ವವನ್ನು ವಹಿಸಿದ ವೀರಣ್ಣಗೌಡರು ಗಾಂಧೀವಾದದಿಂದ ಸ್ಫೂರ್ತಿ ಪಡೆದಿದ್ದರಾದರೂ ವಸಾಹತು–ವಿರೋಧಿ ಚಳವಳಿಗೆ ರೈತರನ್ನು ಕೊಂಡೊಯ್ಯುವಷ್ಟು ರಾಜಕೀಯಗೊಳಿಸುವಲ್ಲಿ ಅವರು ಯಶಸ್ವಿಯಾಗಲಿಲ್ಲ. ರಾಜ್ಯದಲ್ಲಿನ ರಾಜಕೀಯ ಗುಂಪುಗಳಿಗೆ ಈ ವಿಷಯವನ್ನು ಎತ್ತಿಕೊಳ್ಳಲು ಮನಸ್ಸಿರಲಿಲ್ಲ. ತಾವು ಚಳವಳಿ ಮಾರ್ಗ ಹಿಡಿಯುವುದಿಲ್ಲವೆಂದು ತೀರ್ಮಾನಿಸಿರುವ ಹಿನ್ನೆಲೆಯಲ್ಲಿ ಕಾಂಗ್ರೆಸ್ಸಿನ ನಾಯಕರು ಸುಮ್ಮನಾದರೆಂದು ತಿಳಿಯಬಹುದಾದರೂ ಬ್ರಾಹ್ಮಣೇತರರ ಪ್ರಜಾಪಕ್ಷದ ಮುಂದಿಗೆ ರೈತರನ್ನು ಪ್ರೇರೇಪಿಸುವ ಅಗತ್ಯ ಕಂಡುಬರಲಿಲ್ಲ; ಜೊತೆಗೆ ರೈತರನ್ನು ಕ್ರಿಯೆಗೆ ಪ್ರೇರೇಪಿಸಿದ ಬಳಿಕ ಮುಂದೇನು ಮಾಡಬೇಕೆಂದು ಅವರಿಗೆ ಹೊಳೆದಿರಲಿಲ್ಲ.

ಅಗಾಧವಾದ ರೈತರ ಚೈತನ್ಯವನ್ನು ವಸಾಹತು ಹಾಗೂ ಸಂಸ್ಥಾನಿಕ ಆಳ್ವಿಕೆ ಎರಡರ ವಿರುದ್ಧವೂ ಹುರಿದುಂಬಿಸಬಹುದಾಗಿದ್ದ ಸಂದರ್ಭದಲ್ಲಿ ಅದಕ್ಕೆ ವಿಶ್ರಾಂತಿ ನೀಡಿದ ಹಾಗಾಯಿತು. ಅದಾಗ್ಯೂ ಮಹತ್ವಾಕಾಂಕ್ಷೆಯ ಎಲ್ಲ ರಾಜಕೀಯ ಗುಂಪುಗಳಿಗೂ ಇದರಲ್ಲಿ ಒಂದು ಪಾಠವಿತ್ತು. ಆ ಪಾಠವೆಂದರೆ, ರೈತಾಪಿ ಜನ ಪ್ರಜ್ಞಾವಂತರಾಗಿ ಮೇಲೆ ಬಂದಿದ್ದಾರೆ ಹಾಗೂ ಅವರ ಉಕ್ಕುವ ಚೈತನ್ಯವನ್ನು ಸರಿಯಾದ ರೀತಿಯಲ್ಲಿ ಬಳಸಿಕೊಳ್ಳುವಂಥ ನಾಯಕತ್ವವನ್ನು ಮಾತ್ರ ಅದು ನಿರೀಕ್ಷಿಸುತ್ತಿದೆ ಎಂಬುದು. ಸಭೆಗಳನ್ನು ನಿಷೇಧಿಸುವುದರ ಮೂಲಕ ಸರ್ಕಾರ–ಆಡಳಿತವರ್ಗ ನಿಜವಾಗಿ ಅಗತ್ಯಕ್ಕಿಂತ ಹೆಚ್ಚು ಪ್ರತಿಕ್ರಿಯಿಸಿತ್ತಲ್ಲದೆ ಆ ಪ್ರಕ್ರಿಯೆಯಲ್ಲಿ ರೈತರ ವಿರೋಧವನ್ನು ಕಟ್ಟಿಕೊಂಡಿತ್ತು.

ಆ ಕ್ಷಣದಲ್ಲಿಲ್ಲದಿದ್ದರೂ ರೈತರ ನಿರಾಶೆಯನ್ನು ತಮ್ಮ ಅನುಕೂಲಕ್ಕೆ ಬಳಸಿಕೊಳ್ಳುವುದರಲ್ಲೂ ಸಫಲರಾದವರು ಬ್ರಾಹ್ಮಣೇತರ ಪ್ರಜಾಪಕ್ಷದ ಜನರು. ಸರ್ಕಾರದಿಂದ ರಿಯಾಯ್ತಿ ಪಡೆಯುವ ತಮ್ಮ ಎಲ್ಲ ಭರವಸೆಗಳೂ ನುಚ್ಚುನೂರಾದಾಗ ಸರ್ಕಾರವನ್ನು ಮಣಿಸುವುದಕ್ಕಾಗಿ ತಮ್ಮ ಸಂಘಟನೆಗೆ ಒಂದು ವಿಶಾಲ ತಳಹದಿಯನ್ನು ನಿರ್ಮಿಸಲು ಪ್ರಯತ್ನಿಸಿದರು. ಪ್ರೆಸಿಡೆನ್ಸಿಗಳಿಗೆ ಪ್ರಾದೇಶಿಕ ಸ್ವಾಯತ್ತತೆಯನ್ನು ನೀಡಿದ ೧೯೩೫ರ ಭಾರತ ಸರ್ಕಾರದ ಕಾಯಿದೆಯು ಮೈಸೂರಿನ ಎಲ್ಲ ಬಗೆಯ ರಾಷ್ಟ್ರವಾದಿಗಳನ್ನೂ ಕೆಣಕಿತು. ಕಾಂಗ್ರೆಸ್ ಸೋಷಲಿಸ್ಟ್ ಪಕ್ಷ ಹಾಗೂ ಅಖಿಲ ಭಾರತ ಕಿಸಾನ್ ಸಭಾ ಇವೂ ಕೂಡ ಅವರಿಗೆ ಈ ದಿಶೆಯಲ್ಲಿ ಸ್ಫೂರ್ತಿ ನೀಡಿದವು.[೯] ಬ್ರಾಹ್ಮಣೇತರರು 'ಪ್ರಜಾ ಸಂಯುಕ್ತ ಪಕ್ಷ' ವೆಂಬ ರಾಜಕೀಯ ಪಕ್ಷವನ್ನು ಸ್ಥಾಪಿಸಿ ರಾಜ್ಯದ ಎಲ್ಲ ತಾಲೂಕುಗಳಲ್ಲಿಯೂ ರೈತರ ಸಮಾವೇಶವನ್ನು ಸಂಘಟಿಸಲು ತೀರ್ಮಾನಿಸಿದರು.[೧೦] ಆದರೆ ಆ ರೀತಿಯ ಯಾವುದೇ ಚಟುವಟಿಕೆಯನ್ನು ಸಹಿಸದ ಮೈಸೂರು ಏಕಾಧಿಪತ್ಯವು ರೈತರ ಸಭೆಗಳನ್ನು ನಿಷೇಧಿಸಿತು. ರಾಜಕೀಯ ಚಳವಳಿ ಮತ್ತು ಅದರ ಕಷ್ಟಗಳನ್ನು ಅಷ್ಟಾಗಿ ಅನುಭವಿಸದ ಮೈಸೂರು ನಾಯಕತ್ವವು ಇದನ್ನು ಮುಂದುವರಿಸಲಿಲ್ಲ. ಯಾವ ಘಟ್ಟದಲ್ಲಿಯೂ ಸಹ ವಾಸ್ತವವಾಗಿ ಇಲ್ಲಿನ ನಾಯಕತ್ವ ರೈತರ ಸಂಘಟನೆಯ ಬಗ್ಗೆ ಚಿಂತಿಸಲಿಲ್ಲ. ಏನಾದರೂ ಪ್ರಯತ್ನಗಳು ನಡೆದಿದ್ದರೆ ಅದು ಕೇವಲ ಅಲಂಕಾರಿಕವಾಗಿದ್ದುವಲ್ಲದೆ ತಮ್ಮ ಅನುಕೂಲಕ್ಕೆ ತಕ್ಕಂತೆ ಮತ್ತು ಮೇಲಿನವರ ಒತ್ತಡಕ್ಕೆ ಉತ್ತರವಾಗಿ ಎನ್ನಬೇಕು. ಉದಾಹರಣೆಗೆ ೧೯೩೮ರಲ್ಲಿ ಬ್ರಿಟಿಷ್ ಕರ್ನಾಟಕ ಹಾಗೂ ಮೈಸೂರು ಪ್ರಾಂತ್ಯದಲ್ಲಿ ಕಾಂಗ್ರೆಸ್ಸಿಗರು ಎಲ್ಲ ಕಡೆ ರೈತರ ಸಭೆಗಳನ್ನು ಸಮಾವೇಶಗೊಳಿಸಿ ಮುಂದಿನ ಹೋರಾಟದ ಸಂಬಂಧ ಅವರನ್ನು ಸಿದ್ಧಗೊಳಿಸುವ ಪ್ರಯತ್ನ ಮಾಡಿದರು. ವಾಸ್ತವವಾಗಿಯೂ ಈ ಸಭೆಗಳು ರೈತರನ್ನು ಹುರಿದುಂಬಿಸಿದುವಲ್ಲದೆ ಸ್ವಾತಂತ್ರ್ಯ ಹೋರಾಟದ ಸಿದ್ಧತೆಗೆ ಪೂರಕವಾಗಿದ್ದವು; ಆವಾಗಲೇ 'ಅಸಹಕಾರ ಚಳವಳಿ' ಹಾಗೂ 'ಭಾರತ ಬಿಟ್ಟು ತೊಲಗಿ' ಆಂದೋಲನಗಳು ಪ್ರಾರಂಭವಾದದ್ದು. ರಾಷ್ಟ್ರೀಯ ಚಳವಳಿಯಲ್ಲಿ ರೈತರ ಭಾಗವಹಿಸುವಿಕೆ ಹೆಚ್ಚಾದುದನ್ನು- ೧೯೩೮ರಲ್ಲಿ ಮೈಸೂರಿನಲ್ಲಿ ಬಂಧಿಸಿದ ೧೪೬೮ ರಾಜಕೀಯ ಬಂಧಿಗಳಲ್ಲಿ ೬೪೪ ಜನ ರೈತರಿದ್ದರು ಎನ್ನುವುದರಿಂದ ಸ್ಪಷ್ಟವಾಗುತ್ತದೆ.[೧೧]

ರಾಷ್ಟ್ರವಾದಿ ಚಳವಳಿ ಹಾಗೂ ವಸಾಹತು-ವಿರೋಧಿ ಚಳವಳಿಗಳ ಜೊತೆಗೆ ಜನರಲ್ಲಿ ಹೆಚ್ಚು ಅತೃಪ್ತಿಯುಂಟಾಗಲು ಕಾರಣ ಆ ಕಾಲದ ದೊಡ್ಡ ಆರ್ಥಿಕ ಮುಗ್ಗಟ್ಟಿನ ಪರಿಣಾಮವಾಗಿ ಎಲ್ಲಾ ಕೃಷಿ ಉತ್ಪನ್ನಗಳ ಬೆಲೆಗಳೂ ಇಳಿಮುಖವಾದವು ಮತ್ತು ಭೂಕಂದಾಯ ಹೆಚ್ಚಾಯಿತು.[೧೨] ರೈತರ ಹೆಚ್ಚುತ್ತಿದ್ದ ಉತ್ಸಾಹವನ್ನು ಮನಗಂಡರೋ ಎಂಬಂತೆ ಕಾಂಗ್ರೆಸ್ಸಿನವರು ಮೈಸೂರು ರಾಜ್ಯದ ಕಾಂಗ್ರೆಸ್ಸು ೧೭ರಿಂದ ೨೪ಮೇ ೧೯೩೮ರ ತನಕ ಕಾಂಗ್ರೆಸ್ ಸಪ್ತಾಹ ಆಚರಿಸುವ ಸಂದರ್ಭದಲ್ಲಿ 'ರೈತರು ಮತ್ತು ಕಾರ್ಮಿಕ ದಿನ' ಎಂದು ಪ್ರತ್ಯೇಕವಾಗಿ ಒಂದು ದಿನವನ್ನು ಮೀಸಲಿಟ್ಟು ಆಚರಿಸಲಾಯಿತು. ಅದೇ ವರ್ಷದ ಕೊನೆಯ ಭಾಗದಲ್ಲಿ ತಾಲೂಕು ಮಟ್ಟದ ರೈತರ ಸಮಾವೇಶಗಳನ್ನು ನಡೆಸಲಾಯಿತು.[೧೩] ಜನಜಾಗೃತಿ ಸಂಘ, ರೈತ ಸಂಘ, ಮಲೆನಾಡು ಒಕ್ಕಲಿಗರ ಸಂಘ, ಗೇಣಿದಾರರ ಸಂಘ ಇತ್ಯಾದಿ ವಾಮಪಂಥೀಯ ಸಂಘಟನೆಗಳು ರೈತರ ಜೊತೆ ಕೆಲಸ ಮಾಡಿದವು.

ಜನಜಾಗೃತಿ ಸಂಘ ಹೊರಡಿಸಿದ ತನ್ನ ಕರಪತ್ರದಲ್ಲಿ, ಭೂಕಂದಾಯದಲ್ಲಿ ಶೇ.೫೦ ಭಾಗ ಕಡಿತ, ಮೇಪಿನ ಮಾಳದ ಮೇಲಿನ ಲೆವಿಯ ರದ್ದತಿ, ಅರಣ್ಯ ಕಾನೂನಿನ ತಿದ್ದುಪಡಿ, ರೈತರಿಗೆ ನೀಡಿರುವ ಸಾಲದ ಮೇಲೆ ಹಾಕಿರುವ ಬಡ್ಡಿಯಲ್ಲಿ ಕಡಿತ ಇವಿಷ್ಟು ಬೇಡಿಕೆಗಳನ್ನು ಮುಂದಿಟ್ಟಿತ್ತು. ಆದರೆ ಮೈಸೂರು ಕಾಂಗ್ರೆಸ್ ಅಂಥ ಬೇಡಿಕೆಗಳನ್ನು ಪುನರುಚ್ಚರಿಸುವ ಗೋಜಿಗೆ ಹೋಗಲಿಲ್ಲ.[೧೪]

ಬ್ರಿಟಿಷ್ ಭಾರತದಲ್ಲಿ ಕಾಂಗ್ರೆಸ್ ಮಂತ್ರಿಮಂಡಲಗಳ ಸ್ಥಾಪನೆ, ಭೂಕಂದಾಯದ ಪ್ರಮಾಣದಲ್ಲಿ ಕಡಿತ ಹಾಗೂ ಸಭೆ ನಡೆಸಲು ಮತ್ತು ಮುಷ್ಕರ ಹೂಡಲು ರೈತರಿಗೆ ನೀಡಿದ ಸ್ವಾತಂತ್ರ್ಯ ಇವುಗಳಿಂದ ಮೈಸೂರಿನ ರೈತರ ಚಳವಳಿಗೆ ಸ್ವಲ್ಪ ಚೈತನ್ಯ ಬಂದ ಹಾಗಾಯಿತು. ಕಾಂಗ್ರೆಸ್ ಮಂತ್ರಿಮಂಡಲದಿಂದ ಆಗಿರುವ ಒಳ್ಳೆಯ ಕೆಲಸದ ಬಗ್ಗೆ ರೈತರ ಗಮನ ಸೆಳೆಯುತ್ತಾ ಅವರು ಕಾಂಗ್ರೆಸ್ಸಿಗೆ ಬೆಂಬಲ ಸೂಚಿಸಬೇಕೆಂದು ಕೇಳಿದರಲ್ಲದೆ, ಏಕಾಧಿಪತ್ಯದ ವಿರುದ್ಧ ಹೋರಾಡುವಾಗ ಯಾವ ತ್ಯಾಗಕ್ಕೂ ಅವರು ಸಿದ್ಧರಾಗಿರಬೇಕೆಂದು ಆಗ್ರಹಪಡಿಸಲಾಯಿತು.[೧೫]

ರೈತರ ನಡುವೆ ವಾಮಪಂಥೀಯ ಸಂಘಟನೆಗಳು ನಡೆಸಿದ ಕೆಲಸ, ಮಹಾತ್ಮಾ ಗಾಂಧಿಯವರ ನಿಸ್ವಾರ್ಥ ಸೇವೆ, ಸ್ವಾತಂತ್ರ್ಯದ ದಾಹ, ಜೊತೆಗೆ ಸರ್ಕಾರದ ಮೇರೆ ಮೀರಿದ ದಬ್ಬಾಳಿಕೆ–ಇವೆಲ್ಲವೂ ಸೇರಿಕೊಂಡು ವಸಾಹತು–ವಿರೋಧಿ ಚಳವಳಿಯಲ್ಲಿ ಕರ್ನಾಟಕದ ರೈತರು ಭಾಗವಹಿಸುವಂತೆ ಪ್ರೇರೇಪಿಸಿತು. ರೈತರ ಬೇಡಿಕೆಗಳ ಆಧಾರದ ಮೇಲೆಯೇ ಅವರನ್ನು ಒಗ್ಗೂಡಿಸುವ ಆಸಕ್ತಿ ಕಾಂಗ್ರೆಸ್‌ನ ಯಜಮಾನ್ಯ ನಾಯಕತ್ವಕ್ಕೆ ಇರಲಿಲ್ಲ. ಜನಜಾಗೃತಿ ಸಂಘದವರು ಸಿದ್ಧಗೊಳಿಸಿದ ಬೇಡಿಕೆಗಳ ಸನ್ನದಿನೊಂದಿಗೆ ಶಾಮೀಲಾಗಲು ನಾಯಕತ್ವ ಹಿಂಜರಿದುದರಲ್ಲೇ ಸಾಬೀತಾಗುತ್ತದೆ ಕಾಂಗ್ರೆಸ್ಸಿಗೆ ರೈತರ ಸಮಸ್ಯೆಗಳನ್ನು ಪರಿಹರಿಸುವ ಜರೂರು ಇರಲಿಲ್ಲ ಎಂಬುದು.

ಆದಾಗ್ಯೂ ರೈತಾಪಿ ಜನರೇ ಗ್ರಾಮೀಣ ಕರ್ನಾಟಕದ ಸ್ವಾತಂತ್ರ್ಯ ಆಂದೋಲನದ ಬೆನ್ನುಮೂಳೆಯಾಗಿದ್ದರು ಎನ್ನಬೇಕು. ಅವರು ಭಾಗವಹಿಸದಿದ್ದರೆ ಕ್ವಿಟ್ ಇಂಡಿಯಾ ಚಳವಳಿಯಾಗಲಿ ಅಥವಾ ಮೈಸೂರು ಚಲೋ ಆಂದೋಲನವಾಗಲಿ– ಈ ಆಂದೋಲನದ ಕಾರಣಕ್ಕಾಗಿ ಮೈಸೂರು ಸಂಸ್ಥಾನ ಬೇಡಿಕೆಗೆ ಮಣಿಯುವಂತಾದದ್ದು– ಅಷ್ಟು ಶೀಘ್ರವೂ, ಯಶಸ್ವಿಯೂ ಆಗುತ್ತಿರಲಿಲ್ಲ. ಕಾನೂನು ಭಂಗ ಚಳವಳಿಯಲ್ಲಿ ಭಾಗವಹಿಸಿದ್ದ ರೈತರು ತಮ್ಮ ಸರ್ವಸ್ವವನ್ನೂ ಕಳೆದುಕೊಂಡರಲ್ಲದೆ ಬೊಂಬಾಯಿ ಪ್ರೆಸಿಡೆನ್ಸಿಯಲ್ಲಿ ಕಾಂಗ್ರೆಸ್ಸು ಪಕ್ಷ ಅಧಿಕಾರಕ್ಕೆ ಬಂದ ನಂತರವೂ ಅವರ ಆಸ್ತಿ–ಪಾಸ್ತಿ ಮರಳಿ ಅವರಿಗೆ ಲಭ್ಯವಾಗಲಿಲ್ಲವೆನ್ನುವ ಸತ್ಯ ಕಾಂಗ್ರೆಸ್ ರೈತ ಸಮಸ್ಯೆಯನ್ನು ಪರಿಗಣಿಸಲಿಲ್ಲವೆನ್ನುವುದಕ್ಕೆ ಸಾಕ್ಷಿಯಾಗುತ್ತದೆ.

ವಸಾಹತು ಕರ್ನಾಟಕದ ರೈತ ಚಳವಳಿಯನ್ನು ಒಟ್ಟು ಭಾರತದ ಹಿನ್ನೆಲೆಯಲ್ಲಿಟ್ಟು ನೋಡಿದಾಗ ಕೆಲವು ಸಂಗತಿಗಳು ಎದ್ದು ಕಾಣುತ್ತವೆ. ಮೊದಲನೆಯದಾಗಿ ಈ ಕ್ಷೇತ್ರದಲ್ಲಿ ಇತರೆಡೆಗಳಲ್ಲಿ ಆಗಿದ್ದಂತೆಯೇ ಕರ್ನಾಟಕದಲ್ಲಿ ವಾಮಪಂಥೀಯರಿಗೆ ಸ್ವಲ್ಪ ಪರಿಣಾಮ ಬೀರುವುದಕ್ಕೆ ಸಾಧ್ಯವಾಯಿತು; ಇಲ್ಲಿನ ಪರಿಸ್ಥಿತಿ ತುಂಬಾ ಸಂಕೀರ್ಣವಾದದ್ದಾಗಿತ್ತು. ಜೊತೆಗೆ ಸ್ವತಃ ಮಾಲೀಕರೇ ಸಾಗುವಳಿ ಮಾಡುತ್ತಿದ್ದವರ ಸಂಖ್ಯೆ ಕರ್ನಾಟಕದಲ್ಲಿ ಹೆಚ್ಚಿಗೆ ಇದ್ದುದರಿಂದ ಆ ಸಮಸ್ಯೆಯನ್ನು ಗಮನದಲ್ಲಿರಿಸಿಕೊಳ್ಳಬೇಕಾಯಿತು. ಉತ್ತರ ಕರ್ನಾಟಕದ ಕೆಲವು ಭಾಗಗಳಲ್ಲಿ ದೊಡ್ಡ ಜಮೀನುದಾರರು ಇದ್ದರೆನ್ನುವುದು ನಿಜ, ಆದರೆ ಜಮೀನುದಾರರೇ ಕಾಂಗ್ರೆಸ್ಸಿನ ನಾಯಕರಾಗಿದ್ದರು ಮತ್ತು ಸ್ವಾತಂತ್ರ್ಯ ಚಳವಳಿಯ ಮುಂದಾಳತ್ವ ವಹಿಸಿದ್ದರು; ಹಾಗಾಗಿ ವಾಮಪಂಥೀಯರೂ ಕೂಡ ರೈತರು ಮತ್ತು ಗೇಣಿದಾರರನ್ನು ಅವರ ವಿರುದ್ಧ ನಿಲ್ಲಿಸುವ ಉಗ್ರವಾದೀ ನಿಲುವನ್ನು ತಳೆಯಲಾರದವರಾಗಿದ್ದರು. ಎರಡನೆಯದಾಗಿ, ಮೈಸೂರು ಸಂಸ್ಥಾನಕ್ಕೆ 'ಮಾದರಿ ರಾಜ್ಯ' ವೆಂಬ ಪ್ರತಿಷ್ಠೆ ದೊರಕಿದ್ದ ಜೊತೆಗೆ, ಲಾಗಾಯ್ತಿನಿಂದ ರೈತರು ಮಹಾರಾಜರಿಗೆ ನಿಷ್ಠೆ ತೋರಿದ್ದಿತು; ಗಾಂಧೀಜಿಯವರೂ ಸೇರಿದಂತೆ ರಾಷ್ಟ್ರೀಯ ಮಟ್ಟದ ಕಾಂಗ್ರೆಸ್ ನಾಯಕತ್ವವು ಇಲ್ಲಿನ ಆಡಳಿತವನ್ನು ಉತ್ತಮ ಆಡಳಿತವೆಂದು ತಿಳಿದುಕೊಂಡಿದ್ದ ಕಾರಣ–ಇವೆಲ್ಲವುಗಳಿಂದಾಗಿ ಏಕಾಧಿಪತ್ಯದ ವಿರುದ್ಧ ರೈತರನ್ನು ಹುರಿದುಂಬಿಸುವುದು ತುಂಬಾ ಕಠಿಣವಾದ ಕ್ರಮವಾಗಿದ್ದಿತು. ಕರ್ನಾಟಕದ ಕಾಂಗ್ರೆಸ್‌ನ ಸ್ಥಾಪಿತ ನಾಯಕತ್ವಕ್ಕೆ, ಈಗಾಗಲೇ

ಸೂಚಿಸಿದಂತೆ, ರೈತರನ್ನು ಮರಿದುಂಬಿಸುವ ಜರೂರು ಕಂಡುಬರಲಿಲ್ಲ; ಈ ರಾಜ್ಯದಲ್ಲಿ ಅಸ್ತಿತ್ವದಲ್ಲಿದ್ದಂಥ ರಾಜಕೀಯ ಶಕ್ತಿ ಸಂರಚನೆಯನ್ನು ಗಣನೆಗೆ ತೆಗೆದುಕೊಂಡಾಗ ಇದರ ಅವಶ್ಯಕತೆ ಕಂಡುಬರಲಿಲ್ಲ. ರಾಜ್ಯದ ಪಶ್ಚಿಮ ಜಿಲ್ಲೆಗಳನ್ನು ಹೊರತುಪಡಿಸಿದರೆ, ಗೇಣಿದಾರರ ಸಮಸ್ಯೆ ಕೂಡ ಗಂಭೀರವಾಗಿದ್ದಂತೆ ಕಾಣಲಿಲ್ಲ. ೧೯೨೦ರಿಂದ ಕಾಂಗ್ರೆಸ್ಸು ಪ್ರಾರಂಭಿಸಿದ ಎಲ್ಲ ಹೋರಾಟಗಳಲ್ಲಿಯೂ ರೈತಾಪಿವರ್ಗ ಭಾಗವಹಿಸುತ್ತಾ ಬಂದಿದ್ದರೂ ಸಹ ವಸಾಹತು ಕಾಲದಲ್ಲಿ ಕಾಂಗ್ರೆಸ್ ನಾಯಕತ್ವ ಕರ್ನಾಟಕದ ರೈತ ಹೋರಾಟದ ವಿಷಯವಾಗಿ ಬಿಗಿ ನಿಲುವನ್ನು ತಳೆಯದುದಕ್ಕೆ ಮುಖ್ಯಕಾರಣ ಕಾಂಗ್ರೆಸ್ ನಾಯಕರಲ್ಲನೇಕರು ಭೂ ಒಡೆಯರಾಗಿದ್ದುದು.

**-ಪ್ರೊ. ಎಸ್. ಚಂದ್ರಶೇಖರ್**

## ಟಿಪ್ಪಣಿಗಳು

೧ ವಿವರಗಳಿಗಾಗಿ ನೋಡಿ: ಹಾಲಪ್ಪ ಹಾಗೂ ಕೃಷ್ಣರಾವ್ ಎಂ.ವಿ. (ಸಂ.): ಹಿಸ್ಟರಿ ಆಫ್ ಫ್ರೀಡಂ ಮೂವ್‌ಮೆಂಟ್ ಇನ್ ಕರ್ನಾಟಕ, ಸಂಪುಟ ೧, ಬೆಂಗಳೂರು, ೧೯೯೨, ಪು. ೮೧–೨೬೬

೨ ಈ ಅಂಶಕ್ಕೆ ಸಂಬಂಧಿಸಿದಂತೆ ಹೆಚ್ಚಿನ ವಿವರಗಳಿಗಾಗಿ ನೋಡಿ: ಮೇನರ್, ಜೆ.: ಪೊಲಿಟಿಕಲ್ ಚೇಂಜ್ ಇನ್ ಆ್ಯನ್ ಇಂಡಿಯನ್ ಸ್ಟೇಟ್, ಮೈಸೂರು ೧೯೧೭–೧೯೫೫, ನವದೆಹಲಿ, ೧೯೭೭, ಪು.೨೮–೩೦.

೩ ಅದೇ.

೪ ಕಾಮತ್, ಎಸ್.ಯು.: ಅಗ್ರೇರಿಯನ್ ಅಜಿಟೇಷನ್ಸ್ ಅಂಡ್ ಫ್ರೀಡಂ ಮೂವ್‌ಮೆಂಟ್ ಇನ್ ಕರ್ನಾಟಕ, ಕ್ಯೂ.ಜೆ.ಎಂ.ಎಸ್. ಸಂಪುಟ ೭೩, ಸಂಚಿಕೆ ೨, ಬೆಂಗಳೂರು, ೧೯೮೨, ಪು. ೧೪–೨೩

೫ ದಿವಾಕರ್, ಆರ್.ಆರ್.: ಕರನಿರಾಕರಣೆಯ ವೀರಕಥೆ, ಹುಬ್ಬಳಿ, ೧೯೫೫

೬ ಈ ಸಂಗತಿಯ ಮೇಲಿನ ಸಂಕ್ಷಿಪ್ತ ಚರ್ಚೆಗಾಗಿ ಗಮನಿಸಿ: ಪ್ರೊಸೀಡಿಂಗ್ಸ್ ಆಫ್ ದ ಮೈಸೂರ್ ರೆಪ್ರೆಸೆಂಟೇಟಿವ್ ಅಸೆಂಬ್ಲಿ, ದಸರಾ ಅಧಿವೇಶನ, ಬೆಂಗಳೂರು, ೧೯೩೧, ಪು. ೧೩–೧೫ ಹಾಗೂ ೨೯೦–೨೯೬. ಹಾಗೂ ವೀರತಪ್ಪ, ಕೆ.: ರೀಡಿಂಗ್ಸ್ ಇನ್ ಮಾಡರ್ನ್ ಹಿಸ್ಟರಿ ಆಫ್ ಮೈಸೂರ್, ನವದೆಹಲಿ, ೧೯೮೫, ಪು. ೫೦–೫೭

೭ ವಿಶ್ವಕರ್ನಾಟಕ, ೧೨ನೇ ಜೂನ್ ೧೯೩೨

೮ ಈ ಅಂಶದ ಸಂಕ್ಷಿಪ್ತ ಚರ್ಚೆಗಾಗಿ ನೋಡಿ: ವೀರಣ್ಣಗೌಡ, ಎಚ್.ಕೆ.: ಬದುಕು ಮೆಲುಕು, ಮೈಸೂರು, ೧೯೭೪

೯ ಬಿಪಿನ್ ಚಂದ್ರ, ಇತ್ಯಾದಿಗಳು: ಇಂಡಿಯಾಸ್ ಸ್ಟ್ರಗಲ್ ಫಾರ್ ಫ್ರೀಡಂ, ನವದೆಹಲಿ, ೧೯೮೩, ಪು. ೩೩೩–೩೩೪

೧೦ ದ ಹಿಂದು, ೪ ಜನವರಿ ೧೯೩೫

೧೧ ಗಾಂಧಿ ಟೂ ಮಿರ್ಜಾ ಇಸ್ಮಾಯಿಲ್, ೧೩ ಜನವರಿ ೧೯೪೦

೧೨ ಮೇನರ್, ಜೆ. ಪು. ೧೨೯

೧೩ ತಾಯಿನಾಡು, ಬೆಂಗಳೂರಿನಿಂದ ಹೊರಡುತ್ತಿದ್ದ ಕನ್ನಡ ದೈನಿಕ, ೧೧ ಅಕ್ಟೋಬರ್ ೧೯೩೯, ಹಾಗೂ ಕಾಮತ್, ಎಸ್.ಯು. ೧೯೮೨, ಪು. ೧೯

೧೪ ಅದೇ.

೧೫ ವಿವರಗಳಿಗಾಗಿ ತುಮಕೂರು ಜಿಲ್ಲೆಯಲ್ಲಿನ ಕಾಂಗ್ರೆಸ್ ಸಭೆಗಳಿಗೆ ಸಂಬಂಧಿಸಿದ ಕಡತವನ್ನು ನೋಡಿ: ೬ ಜನವರಿ ೧೯೩೮, ೨೮ ಮಾರ್ಚ್ ೧೯೩೯ (ಕೆಎಸ್ಎ).

## ಅಧ್ಯಾಯ : ಹತ್ತು

# ನಗರ ಕಾರ್ಮಿಕವರ್ಗದ ಪಾತ್ರ

ಕಾರ್ಮಿಕವರ್ಗದ ಉಗಮಕ್ಕೂ ಆಧುನಿಕ ಭಾರತೀಯ ರಾಷ್ಟ್ರದ ಹೊರಹೊಮ್ಮುವಿಕೆಗೂ ಸಂಬಂಧವಿದೆ. ಹಾಗೆಯೇ ಆಧುನಿಕ ಕೈಗಾರಿಕೆಯ ಉಗಮ ಮತ್ತು ಬೆಳವಣಿಗೆಗೂ ಇವುಗಳು ಒಟ್ಟಾಗುವ ಪ್ರಕ್ರಿಯೆಗೂ ಅವಿನಾಭಾವದ ಸಂಬಂಧವಿದೆ.

ಕರ್ನಾಟಕದ ಕಾರ್ಮಿಕವರ್ಗದ ಚಳವಳಿ ಸಂಘಟಿತ ಅಖಿಲ ಭಾರತ ಚಳವಳಿಯ ಒಂದು ಭಾಗವಾಗಿ ಬಂದಿತು. ಆದರೆ ಇದು ಇಲ್ಲಿ ಬೇರು ಬಿಡಲು ಸ್ವಲ್ಪ ಸಮಯ ಹಿಡಿದದ್ದಕ್ಕೆ ಕಾರಣವೆಂದರೆ, ಈ ಪ್ರಾಂತ್ಯದಲ್ಲಿ ಆಧುನಿಕ ಕೈಗಾರಿಕೆ ಕಾಣಿಸಿಕೊಂಡದ್ದು ೧೯ನೇ ಶತಮಾನದ ಕೊನೆಯ ವರ್ಷಗಳಲ್ಲಿ ಹಾಗೂ ೨೦ನೇ ಶತಮಾನದ ಆದಿಯಲ್ಲಿ. ಆದಾಗ್ಯೂ ಕೈಗಾರಿಕೀಕೃತ ಬೊಂಬಾಯಿ ಮತ್ತು ಮದರಾಸು ಪ್ರಾಂತ್ಯಗಳ ಕನ್ನಡಿಗ ಕಾರ್ಮಿಕರು ಬೊಂಬಾಯಿಯ ಉದಾರವಾದಿ ಕಾರ್ಮಿಕನಾಯಕರಾದ ಲೋಕಂಡೆಯವರ ಸಂಪರ್ಕಕ್ಕೆ ಬಂದಿದ್ದರು. ೧೮೮೪ರಲ್ಲಿ ಬೆಂಗಳೂರಿನಲ್ಲಿ ಎರಡು ಹತ್ತಿ ಗಿರಣಿಗಳು– ಬಿನ್ನಿ ಮತ್ತು ಮಿನರ್ವ– ಸ್ಥಾಪನೆಯಾದವು. ಎರಡು ವರ್ಷಗಳ ನಂತರ ಕೋಲಾರದ ಚಿನ್ನದ ಗಣಿ ಪ್ರಾರಂಭವಾಯಿತು. ಕೆಲವು ವರ್ಷಗಳ ಹಿಂದೆ ಬೆಂಗಳೂರು ಮತ್ತು ಮೈಸೂರು ನಗರಗಳು ರೈಲ್ವೆ ಮಾರ್ಗದಿಂದ ಸಂಪರ್ಕಗೊಂಡಿದ್ದವು. ೧೯೦೨ರಲ್ಲಿ ಶಿವನಸಮುದ್ರದಲ್ಲಿ ವಿದ್ಯುಚ್ಛಕ್ತಿ ತಯಾರಿಕಾ ಘಟಕ ಸ್ಥಾಪನೆಗೊಂಡಿತ್ತು. ಕೊಡಗು, ಹಾಸನ ಹಾಗೂ ದಕ್ಷಿಣ ಕನ್ನಡ ಪ್ರದೇಶಗಳಲ್ಲಿ ಕಾಫಿ ತೋಟಗಳು ಪ್ರಾರಂಭವಾಗಿದ್ದವು ಹಾಗೂ ಮಂಗಳೂರಿನಲ್ಲಿ ಹೆಂಚಿನ ಕಾರ್ಖಾನೆಗಳು ಆರಂಭಗೊಂಡಿದ್ದವು. ಮುದ್ರಣಾಲಯ ಹಾಗೂ ಕೆನರಾಬ್ಯಾಂಕು ಸ್ಥಾಪನೆಗೊಂಡ ನಂತರ ಕಾರ್ಮಿಕ ವರ್ಗದ ಹೊರಹೊಮ್ಮಿಕ್ಕೆಗೆ ನಾಂದಿಯಾಯಿತು. ಆದರೆ ವಿಶ್ವೇಶ್ವರಯ್ಯನವರು ದಿವಾನರಾಗಿದ್ದ ಕಾಲದಲ್ಲಿ ಈ ಪ್ರದೇಶದ ಕೈಗಾರಿಕಾ ಮುಂದುವರಿಕೆಯಲ್ಲಿ ಗಣನೀಯವಾದ ಪ್ರಗತಿಯಾಯಿತು ಎನ್ನಬೇಕು. ಕೃಷ್ಣರಾಜಸಾಗರ ಅಣೆಕಟ್ಟಿನ ನಿರ್ಮಾಣ, ಅದರಿಂದ ವಿದ್ಯುಚ್ಛಕ್ತಿ ಪ್ರಮಾಣ ೧೦ ಪಟ್ಟು ಹೆಚ್ಚಾಯಿತು, ಮೈಸೂರು ಬ್ಯಾಂಕಿನ ಸ್ಥಾಪನೆ, ಭದ್ರಾವತಿಯಲ್ಲಿ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ, ಹತ್ತಿ ಬಟ್ಟೆ ಗಿರಣಿಗಳು, ಮೈಸೂರಿನಲ್ಲಿ ರೇಷ್ಮೆ ಕಾರ್ಖಾನೆ, ಬೆಂಗಳೂರು ಮತ್ತು ದಾವಣಗೆರೆಯಲ್ಲಿ ಸ್ಥಾಪನೆಗೊಂಡ ಗಿರಣಿಗಳಿಂದಾಗಿ ಕಾರ್ಮಿಕವರ್ಗದ ಬೆಳವಣಿಗೆಯಲ್ಲಿ ಹೆಚ್ಚಳವುಂಟಾಯಿತು. ಕೈಗಾರಿಕಾ ವಲಯದ ಸಾಂಸ್ಥೀಕರಣ ಕೂಡ ಪ್ರಾರಂಭವಾಯಿತು.

ಬೆಂಗಳೂರಿನ ಕಾರ್ಮಿಕ ವರ್ಗವನ್ನು ಸಂಘಟಿಸಲು ಪ್ರಯತ್ನಿಸಿದ ನಾಯಕರೆಂದರೆ ರಾಮಶರ್ಮ ಹಾಗೂ ಕೆ.ಟಿ. ಭಾಷ್ಯಾಂ ಅವರು. ಮೊದಲನೆಯವರು ರಾಷ್ಟ್ರೀಯ ಚಳವಳಿಯಿಂದ ಪ್ರಭಾವಿತರಾಗಿದ್ದರೆ, ಎರಡನೆಯವರು ಬದ್ಧ ಕಾಂಗ್ರೆಸ್ಸಿಗರು ಹಾಗೂ ಗಾಂಧೀವಾದಿಯಾಗಿದ್ದರು.

ಕಾರ್ಮಿಕರನ್ನು ಮೈಸೂರಿನಲ್ಲಿ ಹಿತಾಸಕ್ತಿಯೆಂದು ಎಂದೂ ಮಾನ್ಯ ಮಾಡದೇಹೋದ ವಾತಾವರಣದಲ್ಲಿ ಅವರ ಹಕ್ಕಿಗಾಗಿ ಮಾತನಾಡುವುದನ್ನು ಕಲ್ಪಿಸಿಕೊಳ್ಳುವುದೂ ಕಷ್ಟವಾಗುತ್ತದೆ. ೧೬೧೪ರಲ್ಲಿ ವಿಶ್ವೇಶ್ವರಯ್ಯನವರು ದಿವಾನರಾಗಿದ್ದ ಸಂದರ್ಭದಲ್ಲಿ, ಕಾರ್ಖಾನೆಗಳ ಕಾಯಿದೆಯನ್ನು ಜಾರಿಗೊಳಿಸಲಾಯಿತು.[೧] ೧೮೮೧ ಹಾಗೂ ೧೮೯೧ರ ಕಾರ್ಖಾನೆ ಕಾಯಿದೆಗಳನ್ನು ಕಾಂಗ್ರೆಸ್ಸಿನವರು ಹಾಗೂ ರಾಷ್ಟ್ರವಾದಿಗಳು ವಿರೋಧಿಸಲು ಕಾರಣ ಆ ಕಾಯಿದೆಗಳು ಸ್ವಲ್ಪಮಟ್ಟಿಗೆ ಕಾರ್ಮಿಕರ ಹಿತವನ್ನು ರಕ್ಷಣೆ ಮಾಡುತ್ತಿದವು. ಬಡತನಕ್ಕೆ ಬಿದ್ದಿದ್ದ ಕಾರ್ಮಿಕರು ಅಲ್ಲೊಂದು ಇಲ್ಲೊಂದು ಮುಷ್ಕರ ನಡೆಸಿದಾಗಲೂ ರಾಷ್ಟ್ರವಾದಿಗಳು ಇದನ್ನು ನಿಂದಿಸಿದರು– ಭಾರತೀಯ ಬಂಡವಾಳಶಾಹಿಗಳು ಒಡೆಯರಾಗಿರುವ ಕಾರ್ಖಾನೆಗಳಲ್ಲಿ ಕೆಲಸದ ಸಮಯವನ್ನು ಕಡಿತ ಗೊಳಿಸುವುದು ಭಾರತದ ಹಿತದ ದೃಷ್ಟಿಯಿಂದ ಒಳ್ಳೆಯದಲ್ಲವೆಂದು ಅವರು ತಿಳಿದಿದ್ದರು. ಹಾಗಾಗಿ ಪ್ರಮುಖರಾದ ಯಾವ ಮುಖಂಡರೂ ಮುಂದೆ ಬಂದು ಕಾರ್ಮಿಕರ ಹಕ್ಕಿನ ಪರವಾಗಿ ದನಿಯೆತ್ತಲಿಲ್ಲ. ಆದರೆ ವಿದೇಶೀಯರ ಕಾರ್ಖಾನೆಗಳಲ್ಲಿ ಕೆಲಸ ಮಾಡುತ್ತಿದ್ದ ಕಾರ್ಮಿಕರ ಬೇಡಿಕೆಗಳನ್ನು ಎತ್ತಿ ಹಿಡಿಯುವಲ್ಲಿ ರಾಷ್ಟ್ರವಾದಿಗಳು ಮುಂದಾದ್ದನ್ನು ನಾವು ಕಾಣುತ್ತೇವೆ. ಇದಕ್ಕೆ ಅವರು ಮುಂದೊಡ್ಡಿದ ವಾದವೆಂದರೆ 'ಕಾರ್ಮಿಕರು ಮತ್ತು ಮಾಲೀಕರು ರಾಷ್ಟ್ರಕ್ಕೆ ಸೇರಿದವರಲ್ಲ' .[೨]

ದ ಹಿಂದು ಪತ್ರಿಕೆಯ ಸಂಪಾದಕರೂ, ದಕ್ಷಿಣ ಭಾರತದ ಕಾಂಗ್ರೆಸ್ಸಿಗರೂ ಆಗಿದ್ದ ಜಿ.ಸುಬ್ರಹ್ಮಣ್ಯ ಅಯ್ಯರ್‌ರವರು ಕಾರ್ಮಿಕರನ್ನು ಆಗ್ರಹಪಡಿಸಿ, ಯೂರೋಪಿಯನ್ನರು ಮಾಲೀಕರಾಗಿರುವ ಅಥವಾ ಭಾರತೀಯರ ಒಡೆತನದ ಕಾರ್ಖಾನೆಗಳ ಕಾರ್ಮಿಕರನ್ನು ಸಂಘಟಿಸಿ ಅವರ ಹಿತವನ್ನು ಕಾಪಾಡಬೇಕೆಂದು ಆಗ್ರಹಪಡಿಸಿದರು.[೩]

ಮೈಸೂರಿನ ಕಾರ್ಮಿಕರ ಮಧ್ಯೆ ಕೆಲಸ ಮಾಡಬೇಕಾದ ನಾಯಕರು ತುಂಬಾ ಕಠಿಣ ಪರಿಸ್ಥಿತಿಯನ್ನು ಎದುರಿಸಬೇಕಾಯಿತು; ಏಕೆಂದರೆ, ಕಾರ್ಮಿಕರಲ್ಲಿ ಬಹುತೇಕ ಮಂದಿ ಮದರಾಸು ಪ್ರೆಸಿಡೆನ್ಸಿಯಿಂದ ಬಂದವರಾಗಿದ್ದು ತಮಿಳು ಭಾಷಿಕರಾಗಿದ್ದರು. ೧೯೨೦ರ ತನಕ ನಾಯಕರು ಮತ್ತು ಕಾರ್ಮಿಕರು ಪರಸ್ಪರ ಹೊಂದಾಣಿಕೆಯಾಗದೆ ಉಳಿದರು. ಪ್ರಮುಖವಾದ ವಿಷಯಗಳನ್ನು ಎತ್ತಿಕೊಳ್ಳುವುದರಲ್ಲಿ ಮುಖಂಡರು ಹಿಂಜರಿದದ್ದು ಈ ಪರಿಸ್ಥಿತಿಗೆ ಮುಖ್ಯ ಕಾರಣವೆನ್ನಬೇಕು. ೧೯೨೦ರ ನಾಗಪುರ ಅಧಿವೇಶನದ ನಂತರ ಮೈಸೂರು ಜಿಲ್ಲಾ ಕಾಂಗ್ರೆಸ್ ಸಮಿತಿ ರಚನೆಯಾದ ಬಳಿಕ ಮೈಸೂರಿನ ಕೆಲವು ರಾಷ್ಟ್ರವಾದಿಗಳು ಅಸಹಕಾರ ಚಳವಳಿಯಿಂದ ಪ್ರಭಾವಿತರಾಗಿ ಕಾರ್ಮಿಕರನ್ನು ಸಂಘಟಿಸಲು ಮುಂದಾದರು; ರಾಜಕೀಯ ಚಳವಳಿ ಹಾಗೂ ಸಾರ್ವಜನಿಕ ಕೆಲಸದಲ್ಲಿ ಕಾರ್ಮಿಕರು ಭಾಗವಹಿಸುವುದು ಎಷ್ಟು ಮುಖ್ಯವೆಂದು ಅವರಿಗೆ ಆ ವೇಳೆಗೆ ಮನವರಿಕೆಯಾಗಿತ್ತು. ಮೈಸೂರಿನ ವಿಚಾರದಲ್ಲಿ ಹೇಳುವುದಾದರೆ, ಕಾರ್ಮಿಕರ ಸಂಘಟನೆಗೆ ಸಂಬಂಧಿಸಿದಂತೆ ಇನ್ನೊಂದು ಆಯಾಮವಿದ್ದಿತು. ಸಂಖ್ಯೆಯಲ್ಲಿ ಅಧಿಕವಾಗಿದ್ದ ಬ್ರಾಹ್ಮಣೇತರರ ಪಕ್ಷದವರು ಕಾರ್ಮಿಕರನ್ನು ಸಂಘಟಿಸಲು ಹಿಂಜರಿದ ಕಾರಣ ಬ್ರಾಹ್ಮಣ ರಾಷ್ಟ್ರವಾದಿಗಳು ಅವರನ್ನು ಸಂಘಟಿಸಲು ಮುಂದಾದರು. ಏಕೆಂದರೆ ಬೆಂಗಳೂರು ಹಾಗೂ ಮೈಸೂರು ನಗರಗಳಲ್ಲಿ ಸಭೆಗಳು ಹಾಗೂ ಚಳವಳಿಗಳನ್ನು ನಡೆಸಲು ಅವರು ಹೆಚ್ಚು ಹೆಚ್ಚು ಕಾರ್ಮಿಕರ ಮೇಲೆ ಅವಲಂಬಿಸಬೇಕಾಗಿ ಬಂದಿತು. ಈ ವಿಷಯವಾಗಿ ಬ್ರಾಹ್ಮಣೇತರರಿಗೆ ಆಸಕ್ತಿಯಿಲ್ಲದ್ದರಿಂದ ವಿಶಾಲವಾದ ತಳಹದಿಯನ್ನು ಒದಗಿಸಲು ಕಾಂಗ್ರೆಸ್ ಪಕ್ಷವನ್ನೂ ಸಹ ಅದು ಸೇರಲಿಲ್ಲ.

ಸರ್ಕಾರ ಈ ಕಾರ್ಮಿಕ ಸಂಘಗಳಿಗೆ ಮಾನ್ಯತೆ ನೀಡಲು ನಿರಾಕರಿಸಿದ ಕಾರಣ ಆ ಕಾಲಾವಧಿಯ ಪೂರ್ತಿ ಮೈಸೂರಿನ ಕಾರ್ಮಿಕ ಸಂಘಟನೆಗಳು ದತ್ತಿಯ ಆಧಾರದ ಮೇಲೆ ತಮ್ಮ ಚಟುವಟಿಕೆಗಳನ್ನು ನಡೆಸುತ್ತಿದ್ದವು.

ಮೈಸೂರು ಪ್ರಾಂತ್ಯದ ಮೊದಲನೇ ಕಾರ್ಮಿಕ ಮುಷ್ಕರವನ್ನು ಬೆಂಗಳೂರಿನ ಬಿನ್ನಿಮಿಲ್ಲಿನ ಕಾರ್ಮಿಕರು ನಡೆಸಿದರು; ಸರ್ಕಾರ ಈ ಮುಷ್ಕರವನ್ನು ಬಗ್ಗು ಬಡಿದಾಗ ನಡೆದ ಗೋಲಿಬಾರಿನಲ್ಲಿ ಒಬ್ಬ ಸತ್ತು ಅನೇಕ ಮಂದಿ ಗಾಯಗೊಂಡರು.[೪] ೧೯೨೫ರಲ್ಲಿ ೧೯೧೪ರ ಕೈಗಾರಿಕಾ ಕಾಯಿದೆಗೆ ತಿದ್ದುಪಡಿ ಮಾಡಿ, ಕೆಲಸದ ಅವಧಿಯನ್ನು ಕಡಿಮೆ ಮಾಡಿದರಲ್ಲದೆ, ವಾರದ ರಜೆಯನ್ನು ಜಾರಿಗೊಳಿಸಿದರು; ಆದರೆ ಸರ್ಕಾರವೇ ಮಾಲೀಕನಾದ್ದರಿಂದ ಈ ಕಾಯಿದೆಯು ಅನುಷ್ಠಾನಗೊಳ್ಳದೆ ಉಳಿಯುವಂತಾಯಿತು.[೫]

೧೯೨೦ರ ದಶಕದ ಮಹಾಮುಗ್ಗಟ್ಟಿನಿಂದಾಗಿ ಕಾರ್ಮಿಕರ ಜೀವನ ತೀರಾ ಚಿಂತಾಜನಕವಾಗಿತ್ತು. ಕೈಗಾರಿಕಾ ನಗರಗಳಲ್ಲೆಲ್ಲಾ ಸರಣಿ ಮುಷ್ಕರಗಳೇ ನಡೆದುವು. ಚಿನ್ನದ ಗಣಿ ಪ್ರದೇಶದ ಅತ್ಯಂತ ಗಂಭೀರವಾದ ಮುಷ್ಕರ ನಡೆದು ಅದನ್ನು ಹತೋಟಿಗೆ ತರಲು ಸೈನ್ಯವನ್ನೇ ಕರೆಸಬೇಕಾಯಿತು. ಗಣಿಗಳು ಯುರೋಪಿಯನ್ನರ ಒಡೆತನದಲ್ಲಿದ್ದದ್ದರಿಂದ ಸರ್ಕಾರಕ್ಕೆ ಹೆಚ್ಚಿನ ಜವಾಬ್ದಾರಿಯಿತ್ತು. ಕುತೂಹಲದ ಸಂಗತಿಯೆಂದರೆ ಮುಷ್ಕರ ಪ್ರಾರಂಭವಾದದ್ದು ಯಾವುದೇ ಆರ್ಥಿಕವಾದ ಲಾಭಕ್ಕಾಗಿರದೆ ಒಂದು ತಪ್ಪು ಕಲ್ಪನೆಯಿಂದ ಪ್ರೇರಿತವಾಗಿತ್ತು. ಆದರೆ ಕಾನೂನು ಭಂಗ ಚಳವಳಿಯು ಪ್ರಾರಂಭವಾದದ್ದು ಗಮನಾರ್ಹವಾದ ಸಂಗತಿಯಾಗಿದೆ. ಜುಲೈ ೧೯೩೧ರಲ್ಲಿ ರಾಷ್ಟ್ರವಾದಿಗಳು ಬಿನ್ನಿಮಿಲ್ಲು ಮುಷ್ಕರವನ್ನು ಪ್ರಪ್ರಥಮ ಮುಷ್ಕರವಾಗಿ ಸಂಘಟಿಸಿದರು. ಕೆ.ಟಿ.ಭಾಷ್ಯಂ ಮತ್ತು ರಾಮಶರ್ಮಾ ಅವರು ಮುಷ್ಕರದ ನೇತೃತ್ವ ವಹಿಸಿದ್ದರು. ಮುಗ್ಗಟ್ಟಿನ ಹೊಡೆತಕ್ಕೆ ಸಿಕ್ಕು ಆಗಲೇ ತತ್ತರಿಸಿದ್ದ ಕಾರ್ಮಿಕರು ತಮಗೆ ಅರ್ಧವಾರ್ಷಿಕ ಬೋನಸ್ಸನ್ನು ನಿರ್ವಹಣಾ ಮಂಡಳಿ ನಿರಾಕರಿಸಿದ ಕಾರಣ ಈ ಮುಷ್ಕರವನ್ನು ಪ್ರಾರಂಭಿಸಿದ್ದರು. ಬಿನ್ನಿಮಿಲ್ಲಿನ ಮಾಲೀಕರು ಯೂರೋಪಿನವರಾಗಿದ್ದು ಕಾನೂನು ಭಂಗ ಚಳವಳಿಯು ಪರಾಕಾಷ್ಠೆಯಲ್ಲಿದ್ದದ್ದರಿಂದ ಕಾಂಗ್ರೆಸ್ಸಿಗರು ಸಹಜವಾಗಿಯೇ ಈ ವಿಷಯವನ್ನು ಕೈಗೆತ್ತಿಕೊಂಡು ೪೦೦೦ ಕಾರ್ಮಿಕರನ್ನು ಸಂಘಟಿಸಿದರು. ಕಾರ್ಮಿಕರು ಶಾಂತಿಯುತವಾಗಿ ಮುಷ್ಕರ ನಡೆಸಿದ್ದರಲ್ಲದೆ ತಮ್ಮ ಬೇಡಿಕೆಗಳು ಈಡೇರದ ಹೊರತು ತಾವು ಕಾರ್ಖಾನೆಯ ಸರಹದ್ದಿನಿಂದ ಹೊರಗೆ ಹೋಗುವುದಿಲ್ಲವೆಂದು ಪಟ್ಟು ಹಿಡಿದರು. ಇದರಿಂದ ದಿಗಿಲುಗೊಂಡ ವ್ಯವಸ್ಥಾಪಕರು ಮತ್ತು ಪೋಲೀಸರು ಕಾರ್ಮಿಕರ ಮೇಲೆ ಗುಂಡು ಹಾರಿಸಿ ಮೂರು-ನಾಲ್ಕು ಜನರನ್ನು ಕೊಂದು ೧೦೦ಕ್ಕೂ ಮಿಕ್ಕ ಕಾರ್ಮಿಕರನ್ನು ಗಾಯಗೊಳಿಸಿದರು.[೬]

ಸರ್ಕಾರದ ದೌರ್ಜನ್ಯದ ಬಗ್ಗೆ ವಿಚಾರಣೆ ನಡೆಸಲು ಒಂದು ವಿಚಾರಣಾ ಸಮಿತಿಯನ್ನು ನೇಮಕ ಮಾಡಬೇಕೆಂದು ಕಾಂಗ್ರೆಸ್ಸಿಗರು ಒತ್ತಾಯಿಸಿದರು. ಸರ್ಕಾರ ತಮ್ಮ ಒತ್ತಡಕ್ಕೆ ಮಣಿಯದಾಗ ಕಾಂಗ್ರೆಸ್ ಪಕ್ಷವೇ ಒಂದು ಸಮಿತಿಯನ್ನು ನೇಮಕಮಾಡಿತು. ನೂರು ಮಂದಿ ಸಾಕ್ಷಿಗಳ ಹೇಳಿಕೆ ಪಡೆದ ನಂತರ ಸಮಿತಿಯು 'ಪೋಲೀಸರ ದೌರ್ಜನ್ಯ ಹಾಗೂ ಸರ್ಕಾರದ ಅಲಕ್ಷ್ಯದ' ಬಗ್ಗೆ ಸಾಬೀತುಪಡಿಸಿತು.[೭] ರಾಜಿಸೂತ್ರ ಮಂಡಳಿಯನ್ನು ರಚಿಸುವುದಾಗಿ ಮಾತ್ರ ಮಾತುಕೊಟ್ಟ ಸರ್ಕಾರವು ಬೇರೇನನ್ನೂ ಈಡೇರಿಸದ ರೀತಿ ದೃಢ ನಿಲುವು ತಾಳಿತು. ಕಾರ್ಮಿಕರ ಬೆಂಬಲ ಪಡೆಯುವುದರಲ್ಲಿ ಕಾಂಗ್ರೆಸ್ಸು ಯಶಸ್ವಿಯಾಗಿತ್ತು.[೮]

ಮೈಸೂರು ಆಡಳಿತವು ಕಾರ್ಮಿಕ ಮುಷ್ಕರವನ್ನು ಹತ್ತಿಕ್ಕಿದ ರೀತಿಯನ್ನು ಗಮನಿಸಿದರೆ 'ಮಾದರಿ ಸರ್ಕಾರ' ತನಗೆ ಎದುರಾದ ವಿರೋಧವನ್ನು ನಿವಾರಿಸಲು ಅನುಸರಿಸಿದ ಕ್ರಮದ ಬಗ್ಗೆ ಮನವರಿಕೆಯಾಗುತ್ತದೆ. ವಸಾಹತು ಸರ್ಕಾರ ಕೂಡ ಕಾರ್ಮಿಕರಿಗೆ ಮಾಡಿದ ದೇಶೀಯ ಸಂಸ್ಥಾನದ 'ಉಪಚಾರವನ್ನು' ಕಂಡು ಬೆರಗಾದದ್ದು ಉತ್ಪ್ರೇಕ್ಷೆಯಲ್ಲ. ಉದಾರವಾದಿ ಬಲಪಂಥೀಯ ಕಾರ್ಮಿಕ ನಾಯಕರನ್ನೂ ಸಹ ಮೈಸೂರು ಸರ್ಕಾರ ಹೇಗೆ ನಡೆಸಿಕೊಂಡಿತು ಎಂಬುದನ್ನು ಈ ಸಂದರ್ಭದಲ್ಲಿ ತಿಳಿಯುವುದು ಔಚಿತ್ಯಪೂರ್ಣ. ಆಗಿನ ರೈಲ್ವೆ ಕಾರ್ಮಿಕ ಒಕ್ಕೂಟದ ಮಹಾಕಾರ್ಯದರ್ಶಿಯಾಗಿದ್ದ ವಿ.ವಿ.ಗಿರಿಯವರು ಮೈಸೂರನ್ನು ಪ್ರವೇಶಿಸದಂತೆ

ಸರ್ಕಾರ ತಡೆಯಿತು. ಗಿರಿಯವರು ಮಂದಗಾಮಿ ಪ್ರವೃತ್ತಿಯ ಕಾರ್ಮಿಕ ನಾಯಕರಾಗಿದ್ದರಿಂದ ಸಾಮಾನ್ಯವಾಗಿ ಮುಷ್ಕರಗಳಿಗೆ ಉತ್ತೇಜನ ನೀಡುತ್ತಿರಲಿಲ್ಲ. ಸಂಘವನ್ನು ಅಂಗೀಕರಿಸಬೇಕೆಂದು ರೈಲ್ವೆ ವ್ಯವಸ್ಥಾಪಕರನ್ನು ಒತ್ತಾಯಿಸಲು ರೈಲ್ವೆ ನೌಕರರನ್ನು ಸಂಘಟಿಸಲು ವಿ.ವಿ. ಗಿರಿಯವರು ಮೈಸೂರಿಗೆ ಆಗಮಿಸುತ್ತಾರೆಂಬ ಸುದ್ದಿ ತಿಳಿದ ಕೂಡಲೇ ಸರ್ಕಾರ ನಿಷೇಧಾಜ್ಞೆಯನ್ನು ಹೊರಡಿಸಿತು. 'ಮಾತುಕತೆಯ ಮೂಲಕ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳುವುದರಲ್ಲಿ ತಮಗೆ ನಂಬಿಕೆ ಇರುವುದಲ್ಲದೆ ಕಾರ್ಮಿಕರು ಹಾಗೂ ಮಾಲೀಕರ ನಡುವಿನ ನೇರವಾದ ಕ್ರಿಯೆ(Direct Action)ಗೆ ತಮ್ಮ ವಿರೋಧವಿದೆ' ಯೆಂದು ಗಿರಿಯವರು ಮೊದಲೇ ಸ್ಪಷ್ಟಪಡಿಸಿದ್ದರು.[೬]

ಆದರೆ ಗಿರಿಯವರನ್ನು ಶ್ರೀರಂಗಪಟ್ಟಣದ ಬಳಿ ತಡೆದು ಆದೇಶವನ್ನು ಅವರಿಗೆ ಕೊಡಲಾಯಿತು. ೧೯೩೦ರಲ್ಲಿ ಜನವರಿಯಲ್ಲಿ ಮೈಸೂರು ರೈಲ್ವೆಯ ಉದ್ಯೋಗಿಗಳು ಹಾಗೂ ಕಾರ್ಮಿಕರ ಮುಂದೆ ಕೆಲವು ಉದ್ರೇಕಕಾರಿ ಭಾಷಣಗಳನ್ನು ಮಾಡುವುದರ ಮೂಲಕ ಕಾರ್ಮಿಕರಲ್ಲಿ ಮುಷ್ಕರ ಮನೋಭಾವವನ್ನು ಮೂಡಿಸಿದ ಕಾರಣ ನೀಡಿ ಆಜ್ಞೆ ಹೊರಡಿಸಲಾಗಿತ್ತು.[೧೦] ಗಿರಿಯವರು ರಾಷ್ಟ್ರಮಟ್ಟದಲ್ಲಿ ಪ್ರಸಿದ್ಧರಾದ ಕಾರ್ಮಿಕ ನಾಯಕರಾಗಿದ್ದರಲ್ಲದೆ ಅಂತರರಾಷ್ಟ್ರೀಯ ಸಾರಿಗೆ ಕಾರ್ಮಿಕರ ಸಂಘಟನೆಯೊಡನೆ ಸಂಪರ್ಕ ಬೆಳೆಸಿಕೊಂಡಿದ್ದರು. ದೆಹಲಿಯ ಸರ್ಕಾರ ಕೂಡ ಗಿರಿಯವರ ಚಟುವಟಿಕೆಗಳನ್ನು ಒಪ್ಪಿಕೊಂಡಿತ್ತು. 'ಮೈಸೂರಿನ ರೈಲ್ವೆ ಆಡಳಿತ ಮಂಡಳಿ ಹಾಗೂ ಅಧಿಕಾರಿಗಳ ಧೋರಣೆ ಖಂಡಿತಾ ಸಮರ್ಥನೀಯವಲ್ಲ' ಎಂದು ಗಿರಿಯವರು ಮೊದಲೇ ಲಿಖಿತ ರೂಪದಲ್ಲಿ ತಿಳಿಸಿದ್ದರು.[೧೧]

ರಾಜ್ಯದ ಹೊರಗೆ ಬೇರು ಬಿಟ್ಟಿರುವಂಥ ಜನರು ಮತ್ತು ಸಂಘಟನೆಗಳಿಗೆ ಇಲ್ಲಿ ಪ್ರವೇಶವಿಲ್ಲವೆಂದು ಮಿರ್ಜಾ ಇಸ್ಮಾಯಿಲ್‌ರು ಮತ್ತು ಮೈಸೂರು ಸರ್ಕಾರ ಪಟ್ಟು ಹಿಡಿದಿದ್ದರು. ಮೈಸೂರು ಸರ್ಕಾರದ ವಿರುದ್ಧ ಇದು ಕಾಂಗ್ರೆಸ್ಸು ಪಕ್ಷ ಹಾಗೂ ರಾಷ್ಟ್ರವಾದಿ ನಾಯಕರ ನಿರಂತರವಾದ ಆಪಾದನೆಯಾಗಿತ್ತು. ಮಂದಗಾಮಿ ಧೋರಣೆಯ ಕಾರ್ಮಿಕ ನಾಯಕ ಗಿರಿಯವರು ಇದರಿಂದ ಬಹಳ ನೊಂದುಕೊಂಡಿದ್ದರಲ್ಲದೆ 'ಅಧಿಕಾರವನ್ನು ಈ ರೀತಿ ಚಲಾಯಿಸುವುದರಿಂದ.......ಸಾರ್ವಜನಿಕ ಅಭಿಪ್ರಾಯವನ್ನು ಬದಿಗೆ ತಳ್ಳಿ.......ಉತ್ಪನ್ನವಾಗುವ ಫಲಿತಾಂಶಗಳಿಂದ ದೀರ್ಘಕಾಲೀನವಾಗಿ ಕೆಡುಕುಂಟಾಗುವುದು' ಎಂದು ಘೋಷಿಸಿದರು.

ಈ ಪ್ರಸಂಗದ ಪರಿಣಾಮವಾಗಿ, ಭಾರತ ಸರ್ಕಾರದ ಕಾರ್ಮಿಕ ಸದಸ್ಯರು, ವೈಸ್‌ರಾಯ್ ಮತ್ತು ಸರ್ಕಾರಿ ಕಾರ್ಯದರ್ಶಿಗಳ ನಡುವೆ ಮೈಸೂರು ಆಳ್ವಿಕೆಯ ಸರ್ವಾಧಿಕಾರಿ ಪ್ರವೃತ್ತಿಯ ಬಗ್ಗೆ ಸುದೀರ್ಘವಾದ ಚರ್ಚೆ ನಡೆಯಿತು. ಕಾರ್ಮಿಕ ಸದಸ್ಯರಾದ ಶ್ರೀ ಭೋರೆ ಅವರು 'ಮೇಲು ನೋಟಕ್ಕೆ ಕಾಣುವಂತೆ ಗಿರಿಯವರ ವಿರುದ್ಧ ಮೈಸೂರು ಸರ್ಕಾರ ಕ್ರಮ ಕೈಗೊಂಡಿರುವುದು ದುರದೃಷ್ಟಕರವಾಗಿ ಕಾಣುತ್ತದೆ' ಎಂದು ಹೇಳಿದರು. ರೈಲ್ವೆ ನೌಕರರ ಒಕ್ಕೂಟ, ಇದು ನಾಗಪುರದಲ್ಲಿ ಉಗ್ರವಾದಿಗಳನ್ನು ವಿರೋಧಿಸಿದ ಒಂದು ಮಧ್ಯಮ ಮಾರ್ಗದ ಸಂಘಟನೆ, ಇದರ ಮಹಾಕಾರ್ಯದರ್ಶಿಯವರು ಉಗ್ರವಾದಿ ಸಂಘದ ಕ್ರಿಯೆಯನ್ನು ವಿರೋಧಿಸಲು ಬಂದರು...... ಮಂದಗಾಮಿ ಕಾರ್ಮಿಕ ಸಂಘಗಳು ಅಥವಾ ಅವುಗಳ ನಾಯಕರ ಮೇಲೆ ಈ ಬಗೆಯಾದ ಕ್ರಮ ಕೈಗೊಂಡಾಗ ಸಹಜವಾಗಿಯೇ ಉಗ್ರವಾದಿ ಹಿನ್ನೆಲೆಯವರು ಕಾರ್ಮಿಕರ ಗಮನ ಸೆಳೆದು ಮಂದಗಾಮಿ ಮಾರ್ಗವನ್ನನುಸರಿಸುವುದರ ಮೂಲಕ ಏನೂ ಸಾಧನೆ ಯಾಗದೆಂದೂ ಯಾವಾಗಲೂ ಉಗ್ರಗಾಮಿ ಮಾರ್ಗದಿಂದ ಮಾತ್ರ ಕಾರ್ಮಿಕರ ಕೆಲಸಗಳು ಆಗುವುದೆಂದು ವಾದಿಸಲು ಅನುಕೂಲವಾಗುತ್ತದೆ. ನಿಷೇಧಾಜ್ಞೆಯನ್ನು ಹೊರಡಿಸಲು ಆಧಾರವಾಗಿದ್ದ ಗಿರಿಯವರ ಭಾಷಣ ವನ್ನು ಉಲ್ಲೇಖಿಸಿ ಅವರು ಹೇಳಿದರು. 'ಗಿರಿಯವರ ಭಾಷಣಗಳನ್ನು ನಾನು ಓದಿದ್ದೇನೆ, ಬ್ರಿಟಿಷ್ ಭಾರತದ ಕಾರ್ಮಿಕ ಸಂಘಗಳ ಸದಸ್ಯರನ್ನುದ್ದೇಶಿಸಿ ಕಾರ್ಮಿಕರ ನಾಯಕರು ಈ ತರಹದ ಭಾಷಣಗಳನ್ನು

ಮಾಡಬೇಕೆಂದು ನಾನು ಇಚ್ಛೆ ಪಡುತ್ತೇನೆ..... ಕಲಂ ೧೪೪ ಸಿ.ಆರ್.ಪಿ.ಸಿ. ಪ್ರಕಾರ ಹೊರಡಿಸಿರುವ ಆದೇಶದಿಂದ ನಾನು ಗಲಿಬಿಲಿಗೊಂಡಿದ್ದೇನೆ......ಸೆಕ್ರೆಟರಿ ಆಫ್ ಸ್ಟೇಟ್ ಫಾರ್ ಇಂಡಿಯಾ ಅವರು ಈ ಬಗ್ಗೆ ನಮ್ಮನ್ನು ಖಂಡಿತ ವಿವರಣೆ ಕೇಳಿ ಮೈಸೂರು ಸರ್ಕಾರದ ಮೇಲೆ ಒತ್ತಡ ಹೇರಿ ಗಿರಿಯವರ ಮೇಲಿನ ಕ್ರಮವನ್ನು ಕೈಬಿಡುವಂತೆ ಕೇಳಿಕೊಳ್ಳುತ್ತಾರೆಂದುಕೊಂಡಿದ್ದೇನೆ.[೧೩]

ಮೈಸೂರು ಪ್ರಾಂತ್ಯದ ಜನರು, ರಾಜಕೀಯ ಹಾಗೂ ಕಾರ್ಮಿಕ ನಾಯಕರುಗಳಿಗೆ ಯಾವುದೇ ಬಗೆಯ ಹಕ್ಕುಗಳು ಹಾಗೂ ನಾಗರೀಕ ಹಕ್ಕುಗಳು ಇರಲಿಲ್ಲವೆಂಬುದನ್ನು ಮೇಲಿನ ವಿವರಗಳಿಂದ ತಿಳಿಯಬಹುದಾಗಿದೆ. ಮೈಸೂರು ಒಂದು 'ಮಾದರಿ ರಾಜ್ಯ' ಹಾಗೂ 'ಸಂವೈಧಾನಿಕ ಸರ್ಕಾರ' ಎಂದೆಲ್ಲಾ ವರ್ಣಿತವಾಗಿದ್ದ ಹಿನ್ನೆಲೆಯಲ್ಲಿ ಈ ಕಳಂಕಗಳನ್ನು ಮರೆಮಾಚಿಬಿಡುವ ಸಾಧ್ಯತೆಯಿದೆ. ಶ್ರೀ ಭೋರೆಯವರು ಮುಂದುವರಿದು ಹೀಗೆ ದಾಖಲಿಸಿದರು: ಭಾರತೀಯ ರಾಜ್ಯದಲ್ಲಿ, ಪ್ರಜಾಸತ್ತಾತ್ಮಕ ಸರ್ಕಾರದ ವಿಷಯವಾಗಿ ಅದರ ತತ್ವವೇನೇ ಇರಲಿ, ಇಬ್ಬರು ಏಕಾಧಿಪತಿಗಳಿಗೆ ಸ್ಥಾನವಿರುವುದಿಲ್ಲ; ಇದು ಹೀಗಾದುದರಿಂದಲೇ ದಿವಾನರು ಈ ರೀತಿಯಾಗಿ ವರ್ತಿಸಿದ್ದಾರೆ. ಇದರ ಜೊತೆಗೆ ಅಂತರರಾಷ್ಟ್ರೀಯ ಸಾರಿಗೆ ನೌಕರರ ಸಂಘಟನೆ ಕೂಡ ಪ್ರತಿಭಟನೆ ಸೂಚಿಸಿ ಗಿರಿಯವರಿಗೆ ವಿಧಿಸಿದ ಶಿಕ್ಷೆ ಸರಿಯಲ್ಲವೆಂದು ಆಗ್ರಹಪಡಿಸಿ ಬ್ರಿಟಿಷ್ ಸರ್ಕಾರದ ಕಾರ್ಯದರ್ಶಿಯವರಿಗೆ ಬರೆಯಿತು; ಅವರು ಪ್ರತಿಯಾಗಿ ದೆಹಲಿ ಸರ್ಕಾರಕ್ಕೆ ಬರೆದರು. ಗಿರಿಯವರ ಪ್ರಸಂಗವು ಎಷ್ಟು ಜಟಿಲವಾಗಿತ್ತೆಂದರೆ ಬ್ರಿಟಿಷ್ ಸದನದಲ್ಲಿ ಇದರ ಬಗ್ಗೆ ಪ್ರಶ್ನೆಗಳು ಉದ್ಭವವಾದವು. ಹೌಸ್ ಆಫ್ ಕಾಮನ್ಸ್‌ನಲ್ಲಿ ಕೂಡ ಭಾರತೀಯ ಸಂಸ್ಥಾನಗಳಲ್ಲಿ ಕಾರ್ಮಿಕರ ಬಗೆಗಿನ ಶಾಸನದ ಬಗ್ಗೆ ಪ್ರಶ್ನೆ ಕೇಳುವಂತಾಯಿತು. ಆದರೆ ಕಾರ್ಮಿಕರ ಸಂಘಗಳ ಮೇಲೆ ಪರಿಣಾಮ ಬೀರುವಂಥ ಕಾನೂನುಗಳನ್ನು ಅಲ್ಲಿ ಜಾರಿಗೊಳಿಸಿಲ್ಲವೆಂದು ಬ್ರಿಟಿಷ್ ಸರ್ಕಾರಿ ಕಾರ್ಯದರ್ಶಿಯವರು ಉತ್ತರ ನೀಡಿದರು.[೧೪]

ಮೈಸೂರು ಸರ್ಕಾರ ತುಂಬಾ ಉಗ್ರವಾಗಿ ಏಕಾಧಿಪತ್ಯವನ್ನು ಪ್ರದರ್ಶಿಸಿತು ಎಂಬುದು ನಿರ್ವಿವಾದ.........ದಿವಾನರಾಗಿದ್ದ ಮಿರ್ಜಾ ಇಸ್ಮಾಯಿಲ್ಲರು ಪಶ್ಚಾತ್ತಾಪ ಅಥವಾ ರಾಜೀ ಮನೋಭಾವವನ್ನು ಪ್ರದರ್ಶಿಸದೆ ಸಾರ್ವಜನಿಕ ಅಭಿಪ್ರಾಯಕ್ಕೆ ವಿಮುಖರಾಗಿದ್ದ ಕಾರಣ ಅವರ ವರ್ತನೆ ಸಾಮ್ರಾಜ್ಯಶಾಹಿ ಸರ್ಕಾರಕ್ಕೆ ಹಾಗೂ ಬ್ರಿಟಿಷ್ ಸಂಸತ್ತಿಗೆ ನುಂಗಲಾರದ ತುತ್ತಾಯಿತು.

೧೯೪೧ರಲ್ಲಿ ಮೈಸೂರು ಕಾರ್ಮಿಕ ಮಸೂದೆಯನ್ನು ಅಂಗೀಕರಿಸುವುದರ ಮೂಲಕ ಸರ್ಕಾರವು ಕಾರ್ಮಿಕ ಸಂಘಗಳ ಚಟುವಟಿಕೆಯನ್ನು ಗಣನೆಗೆ ತೆಗೆದುಕೊಳ್ಳಲು ತೀರ್ಮಾನಿಸಿತು. ಈ ಮಸೂದೆಯಲ್ಲೂ ಸಹ ಗಂಭೀರ ರೀತಿಯ ಇತಿಮಿತಿಗಳಿದ್ದವು; ಉದಾಹರಣೆಗೆ, 'ಮುಷ್ಕರಗಳು ಮತ್ತು ಲಾಕೌಟುಗಳು' 'ನ್ಯಾಯ ಬಾಹಿರ' ವೆಂತಲೂ 'ಹೊರಗಿನವರ ಚಿತಾವಣೆಯು ಶಿಕ್ಷಾರ್ಹವಾದುದೆಂತಲೂ' ಪರಿಗಣನೆಯಾಗಿತ್ತು. ಹಿಟ್ಲರ್ ಮೇಲೇರಿ ಬರುತ್ತಿದ್ದ ಪ್ರಸಂಗದಿಂದ ಉತ್ತೇಜಿತರಾಗಿ ದಿವಾನ್ ಮಿರ್ಜಾ ಇಸ್ಮಾಯಿಲ್ಲರ ದಬ್ಬಾಳಿಕೆ ಹೆಚ್ಚಾಯಿತಲ್ಲದೆ, 'ಪ್ರಜಾಪ್ರಭುತ್ವ ಕ್ಷೀಣಿಸುತ್ತಿದೆ' , ಹಾಗೂ ಮೈಸೂರಿಗರು ಇದನ್ನು ಗಮನಿಸಬೇಕೆಂದು ತಮ್ಮ ಒಂದು ಭಾಷಣದಲ್ಲಿ ತಿಳಿಸಿದ್ದರು.[೧೫]

ಅಂಥ ಸನ್ನಿವೇಶದಲ್ಲಿ ಮೈಸೂರಿನ ರಾಷ್ಟ್ರವಾದಿಗಳು ಕಾರ್ಮಿಕ ಬಲವನ್ನು ಸಂಘಟಿಸಬೇಕಾಗಿ ಬಂದಿತು ಹಾಗೂ ಕಾರ್ಮಿಕ ವರ್ಗದವರೂ ಸಹ ತಮ್ಮ ಹಿತರಕ್ಷಣೆಗಾಗಿ ಒಗ್ಗೂಡಬೇಕಾದ ಜರೂರು ಕಾಣಿಸಿಕೊಂಡಿತು. ಸರ್ಕಾರದ ದಬ್ಬಾಳಿಕೆ ಹೆಚ್ಚಾದಂತೆಲ್ಲಾ ೧೯೩೭ರ ನಂತರ ಕಾರ್ಮಿಕ ಸಂಘಟನೆಗಳು ಹೆಚ್ಚು ಸದೃಢವಾಗ ತೊಡಗಿದವು. ಹಾಗಾಗಿ ಏಕಾಧಿಪತ್ಯವನ್ನು ವಿರೋಧಿಸುವ ಸಲುವಾಗಿ ರಾಜಕೀಯ ಮತ್ತು ಕಾರ್ಮಿಕ ಸಂಘಟನೆಗಳು ಹೆಚ್ಚು ಹೆಚ್ಚು ಹತ್ತಿರಕ್ಕೆ ಬಂದವು. ೧೯೩೭ರಲ್ಲಿ ಬ್ರಾಹ್ಮಣೇತರರ ಪಕ್ಷ ಕಾಂಗ್ರೆಸ್ಸಿನೊಡನೆ

ವಿಲೀನವಾದಾಗ ಕಾರ್ಮಿಕರು ಹಾಗೂ ಕಾಂಗ್ರೆಸ್ಸು ಪರಸ್ಪರ ಶಕ್ತಿಯನ್ನು ಪಡೆದುಕೊಂಡವು. ಇದಾದ ನಂತರ ಕಾರ್ಮಿಕರ ಅನುಕೂಲಕ್ಕಾಗಿ ಹಾಗೂ ಸ್ವಾತಂತ್ರ್ಯಗಳಿಸುವ ಉದ್ದೇಶವನ್ನು ದೃಷ್ಟಿಯಲ್ಲಿಟ್ಟುಕೊಂಡು ಒಂದಾದ ಮೇಲೊಂದರಂತೆ ಮುಷ್ಕರಗಳು ನಡೆದವು.

ಎರಡನೇ ಮಹಾಯುದ್ಧ ಪ್ರಾರಂಭವಾದ ಹಿನ್ನೆಲೆಯಲ್ಲಿ ಪದಾರ್ಥಗಳ ಬೆಲೆ ಏರಿದ ಕಾರಣ ದುಡಿಯುವ ವರ್ಗದ ಮೇಲೆ ಭಾರಿ ಒತ್ತಡವುಂಟಾಯಿತು. ಆ ಸಂದರ್ಭದಲ್ಲೇ ಕಾರ್ಮಿಕ ರಂಗದಲ್ಲಿ ಕಮ್ಯೂನಿಸ್ಟರ ಚಟುವಟಿಕೆಗಳು ಹೆಚ್ಚು ಕಾಣಿಸಿಕೊಳ್ಳತೊಡಗಿತು. ಕಮ್ಯೂನಿಸ್ಟ್ ಕಾರ್ಯಕರ್ತರಾದ ಎಂ.ಎಸ್.ರಾಮರಾವ್, ಸಿ.ಬಿ.ಮೊನ್ನಯ್ಯ ಹಾಗೂ ಎನ್.ಡಿ.ಶಂಕರ್‌ರವರು ಕೈಗಾರಿಕಾ ನಗರಗಳಲ್ಲಿ ಕಾರ್ಮಿಕರ ನಡುವೆ ಕೆಲಸ ಮಾಡಲು ಪ್ರಾರಂಭಿಸಿದರು. ೧೯೪೦ರ ಕೊನೆಯ ವೇಳೆಗೆ ಬಿನ್ನಿಮಿಲ್ಲಿನ ಕಾರ್ಮಿಕರು ೩೦ ದಿನಗಳ ಹೋರಾಟವನ್ನು ಮಾಡಿದರು. ಕಾರ್ಮಿಕ ನಾಯಕರ ದಸ್ತಗಿರಿಯಾಯಿತಾದರೂ ಮುಷ್ಕರ ಮಾತ್ರ ನಿಲ್ಲಲಿಲ್ಲ. ಹಾಗಾಗಿ ಸರ್ಕಾರ ಕಾರ್ಮಿಕರ ಕೆಲವು ಬೇಡಿಕೆಗಳನ್ನಾದರೂ ಈಡೇರಿಸುವುದು ಅನಿವಾರ್ಯವಾಯಿತು; ಅವುಗಳಲ್ಲಿ ಅತ್ಯಂತ ಮುಖ್ಯವಾದುದು ಮೈಸೂರು ಕಾರ್ಮಿಕ ಮಸೂದೆಯನ್ನು ಜಾರಿಗೊಳಿಸಿದುದು. ಭದ್ರಾವತಿ, ಮಂಡ್ಯ ಹಾಗೂ ಕೆ.ಜಿ.ಎಫ್.ಗಳಲ್ಲಿಯೂ ಸಹ ಕಾರ್ಮಿಕರು ಮುಷ್ಕರ ಪ್ರಾರಂಭಿಸಿದರು. ೧೯೩೯ರಲ್ಲಿ ಬ್ರಿಟಿಷ್ ಪ್ರಾಂತ್ಯಗಳಲ್ಲಿ ಸಚಿವ ಸಂಪುಟದಿಂದ ಕಾಂಗ್ರೆಸ್ ಪಕ್ಷ ಹೊರಬಂದ ನಂತರ ಯುದ್ಧ-ವಿರೋಧಿ ಚಳವಳಿಯನ್ನು ಪ್ರಾರಂಭಿಸಿತ್ತಾಗಿ, ಈ ಮುಷ್ಕರಗಳಿಗೆ ಒಂದು ಸಾಮ್ರಾಜ್ಯಶಾಹಿ ವಿರೋಧಿ ಮುಖವೂ ಪ್ರಾಪ್ತಿಯಾಗಿದ್ದುದು ಗಮನಾರ್ಹ ಸಂಗತಿಯಾಗಿದೆ.[೯]

ಕಾರ್ಮಿಕರು ಮತ್ತು ವಿದ್ಯಾರ್ಥಿಗಳು ಹೆಚ್ಚಿನ ಪ್ರಮಾಣದಲ್ಲಿ ಭಾಗವಹಿಸಿದ ಕಾರಣ ಕ್ವಿಟ್ ಇಂಡಿಯಾ ಚಳವಳಿ ಅಧಿಕ ಪರಿಣಾಮ ಉಂಟು ಮಾಡುವಂತಾಯಿತು. ಒಂದು ವೇಳೆ ಈ ಸಮುದಾಯಗಳು ಭಾಗವಹಿಸದಿದ್ದರೆ ಚಳವಳಿಯು ವಿಶೇಷವಾಗಿ ಕರ್ನಾಟಕದ ನಗರ ಕೇಂದ್ರಗಳಲ್ಲಿ ದುರ್ಬಲವಾಗುತ್ತಿತ್ತು ಎಂಬುದನ್ನು ಮರೆಯಬಾರದು. ಕಮ್ಯೂನಿಸ್ಟ್ ಪಕ್ಷ ಮತ್ತು ಅದರ ನಾಯಕರು ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಭಾಗವಹಿಸಬಾರದೆಂದು ತೀರ್ಮಾನ ತೆಗೆದುಕೊಂಡದ್ದು ನಿಜ. ಆದರೆ ಈ ನಿರ್ಣಯದಿಂದ ಏನೂ ಪರಿಣಾಮವಾಗಲಿಲ್ಲ. ಕಾರ್ಮಿಕರು ವಿಶೇಷವಾಗಿ ವಿದ್ಯಾರ್ಥಿಗಳನ್ನು ತಮ್ಮ ಜೊತೆಗಿರುವಂತೆ ಪ್ರೇರೇಪಿಸಿದರು. ಇಬ್ಬಗೆಯ ಹೊಡೆತದಲ್ಲಿ ಸರ್ಕಾರ ತತ್ತರಿಸಿತ್ತಲ್ಲದೆ ಮುಂದೇನು ಮಾಡಬೇಕೆಂದು ಅದಕ್ಕೆ ತೋಚಲಿಲ್ಲ. ತಮ್ಮ ಮೇಲೆ ಲಾಠಿ ಚಾರ್ಜು ಮತ್ತು ಗೋಲಿಬಾರು ಮಾಡಿದ ಬಳಿಕ ಕಾರ್ಮಿಕರು ರೋಷಗೊಂಡು ೧೯೪೨ರ ಆಗಸ್ಟ್ ತಿಂಗಳ ಮಧ್ಯ ಭಾಗದಲ್ಲಿ ಹೋರಾಡಿದರು. ಚಳವಳಿಯನ್ನು ತಹಬಂದಿಗೆ ತರಲು ಸೈನ್ಯವನ್ನೇ ಕರೆಸಬೇಕಾಯಿತು.

ಆಗಸ್ಟ್ ೧೭ರಂದು ಇಡೀ ಬೆಂಗಳೂರನ್ನು ಕಾರ್ಮಿಕರು ಮುತ್ತಿಗೆ ಹಾಕಿದ್ದರು. ಸರ್ಕಾರದ ಆಸ್ತಿಪಾಸ್ತಿ ಅವರ ಆಕ್ರಮಣದ ಗುರಿಯಾಗಿತ್ತು. ನ್ಯಾಯ ಬೆಲೆ ಅಂಗಡಿಗಳು ಹಾಗೂ ಸಾರಾಯಿ ಅಂಗಡಿಗಳನ್ನು ಲೂಟಿ ಮಾಡಿ ಬೆಂಕಿಹಚ್ಚಿದರು. ಪೋಲೀಸು ಠಾಣೆಗಳು ಹಾಗೂ ಅಂಚೆ ಕಚೇರಿಗಳನ್ನು ಧ್ವಂಸಮಾಡಿ ಬೆಂಕಿ ಹಚ್ಚಿದರು. ಪೋಲೀಸರ ವಿವೇಚನಾರಹಿತವಾದ ಗೋಲಿಬಾರಿನಲ್ಲಿ ಅನೇಕರು ಸತ್ತು ಸಾವಿರಾರು ಮಂದಿ ಗಾಯಗೊಂಡರು.[೧೦] ಸರ್ಕಾರದ ರೀತಿಯಲ್ಲೇ ಕಾಂಗ್ರೆಸ್ಸು ನಾಯಕರುಗಳಿಗೂ ಮುಂದೇನು ಮಾಡಲು ತೋಚದಾಯಿತು. ಮೆರವಣಿಗೆ ಹಾಗೂ ಮುಷ್ಕರಗಳನ್ನು ನಿಷೇಧಿಸಲಾಗಿದ್ದರೂ ಪೋಲೀಸರ ಗುಂಡಿಗೂ ಹೆದರದೆ ಆಗಸ್ಟ್ ತಿಂಗಳು ಪೂರ್ತಿ ಮುಷ್ಕರವನ್ನು ಮುಂದುವರಿಸಿದರು. ಸರ್ಕಾರಕ್ಕೆ ಈ ಬೆಳವಣಿಗೆಯಿಂದ ದಿಗಿಲಾಗಿತ್ತು ಎಂಬುದನ್ನು ಮಹಾರಾಜರು ಬ್ರಿಟಿಷ್ ಅಧಿಕಾರಿಗಳಿಗೆ 'ಕಾಂಗ್ರೆಸ್ ರಾಜ್ಯದಲ್ಲಿ

ಬಲಗೊಂಡಿದೆ.....'. ಎಂದು ತಿಳಿಸಿರುವುದರಲ್ಲೇ ಅರ್ಥಮಾಡಿಕೊಳ್ಳಬಹುದಾಗಿದೆ.[೧೭] ನಗರ ಪ್ರದೇಶಗಳಲ್ಲಿ ಕಾರ್ಮಿಕರು ಭಾಗವಹಿಸಿದ ಪರಿಣಾಮವಾಗಿ ಚಳವಳಿಗೆ ಬಲ ಬಂದಿತಲ್ಲದೆ ಗ್ರಾಮಾಂತರ ಪ್ರದೇಶಕ್ಕೆ ವಿಸ್ತರಿಸಲು ಸಹಾಯವಾಯಿತು. ವಿದ್ಯಾರ್ಥಿಗಳು, ಕಾರ್ಮಿಕರು ಹಾಗೂ ರೈತರಲ್ಲಿ ರಾಷ್ಟ್ರವಾದಿ ಪ್ರಜ್ಞೆ ಬೆಳೆಯುತ್ತಿದ್ದ ಕಾರಣ ಕ್ವಿಟ್ ಇಂಡಿಯಾ ಹೋರಾಟ ಅಷ್ಟು ದೊಡ್ಡ ಪ್ರಮಾಣದಲ್ಲಿ ಮೂಡಿಬರಲು ಸಾಧ್ಯವಾಯಿತಲ್ಲದೆ ವಿಶೇಷವಾಗಿ ಕರ್ನಾಟಕದಲ್ಲಿ ರಾಷ್ಟ್ರವಾದಿ ನಾಯಕರುಗಳ ಮೇಲೆ ಸಾಮಾಜಿಕ ಒತ್ತಡವುಂಟು ಮಾಡಲು ಸಹಕಾರಿಯಾಯಿತು. ಒಮ್ಮೆ ಚಳವಳಿಯಲ್ಲಿ ಭಾಗವಹಿಸಲು ಹಿಂಜರಿಯುತ್ತಿದ್ದ ನಾಯಕರು ಮೇಲೆ ಹೆಸರಿಸಿದ ಬಲಗಳ ಆಕರ್ಷಣೆಯನ್ನು ಮೀರಲಾರದೆ ಚಳವಳಿಗೆ ಧುಮುಕುವುದು ಅನಿವಾರ್ಯವಾಯಿತು; ಇದರಿಂದ ಆಡಳಿತದ ವೈರವನ್ನು ಕಟ್ಟಿಕೊಂಡ ಅವರು ಬೇರೆ ಪರ್ಯಾಯವಿಲ್ಲದೆ ಆಡಳಿತವನ್ನು ಅಂತಿಮವಾಗಿ ಧ್ವಂಸಮಾಡುವ ಗುರಿಯನ್ನಿಟ್ಟುಕೊಂಡು ಮುಂದುವರಿಯಬೇಕಾಯಿತು.

ಕ್ವಿಟ್ ಇಂಡಿಯಾ ಚಳವಳಿಯ ನಂತರದ ವರ್ಷಗಳಲ್ಲಿ ವಾಮಪಂಥೀಯರು ಪೌರಕಾರ್ಮಿಕರನ್ನೂ ಸಹ ಸಂಘಟಿಸಿದರು. ೧೯೪೪ರಲ್ಲಿ ಶ್ರೀರಾಮುಲು ಹಾಗೂ ಮರಿದಾಸ್ ಎಂಬುವವರು ಪೌರಕಾರ್ಮಿಕರ ಮುಷ್ಕರವನ್ನು ಸಂಘಟಿಸಿದರು. ಅದೇ ರೀತಿ ರಾಷ್ಟ್ರವಾದಿ ಸಂಘಟನೆಗೆ ಅಧೀನವಾಗಿದ್ದ ಚರ್ಮ ಕೈಗಾರಿಕೆ, ಹೋಟೆಲ್ಲುಗಳು ಹಾಗೂ ಅದೇ ತಾನೆ ಸ್ಥಾಪನೆಗೊಂಡಿದ್ದ ಹಿಂದೂಸ್ತಾನ್ ಏರೋನಾಟಿಕ್ಸ್ ಲಿಮಿಟೆಡ್ ಕಾರ್ಖಾನೆಯ ಕಾರ್ಮಿಕರನ್ನೂ ಸಹ ಸಂಘಟಿಸಲಾಯಿತು. ಕಾಂಗ್ರೆಸ್, ಸಮಾಜವಾದಿ ಹಾಗೂ ಕಮ್ಯೂನಿಸ್ಟ್ ಪಕ್ಷಗಳ ಪ್ರಭಾವದಿಂದ ಅನೇಕ ಕಾರ್ಮಿಕ ನಾಯಕರು ರಾಜ್ಯಾದ್ಯಂತ ಕಾರ್ಮಿಕರನ್ನು ಸಂಘಟಿಸಿದರು; ಮೈಸೂರು ಸಂಸ್ಥಾನವನ್ನು ದೊರೆಗಳ ಆಳ್ವಿಕೆಯಿಂದ ಮುಕ್ತಗೊಳಿಸಿ ಜವಾಬ್ದಾರಿ ಸರ್ಕಾರವನ್ನು ಸ್ಥಾಪಿಸುವಲ್ಲಿ ಸೆಪ್ಟಂಬರ್ ೧೯೪೭ರಲ್ಲಿ ಪ್ರಾರಂಭಿಸಿದ 'ಮೈಸೂರು ಚಲೋ' ಚಳವಳಿಯಲ್ಲಿ ಮುಂಚೂಣಿಯಲ್ಲಿದ್ದ ಕಾರ್ಮಿಕರು ಮತ್ತೆ ಇಲ್ಲಿ ಪ್ರಮುಖಪಾತ್ರ ವಹಿಸಿದ್ದರು.

ಕರ್ನಾಟಕದ ಉತ್ತರದ ಭಾಗದಲ್ಲಿ, ಕೈಗಾರಿಕಾ ಹಿಂದುಳಿದಿರುವಿಕೆಯ ಕಾರಣದಿಂದಾಗಿ, ಬಲವಾದ ಕಾರ್ಮಿಕ ಚಳವಳಿ ಹೊರಹೊಮ್ಮಲಿಲ್ಲ. ಆದಾಗ್ಯೂ, ಹುಬ್ಬಳ್ಳಿಯ ರೈಲ್ವೆ ಕಾರ್ಮಿಕರು ಹಾಗೂ ಗಿರಣಿ ಕೆಲಸಗಾರರು, ಗುಲ್ಬರ್ಗಾದ ಗಿರಣಿ ಕೆಲಸಗಾರರು. ಶಹಾಬಾದಿನ ಸಿಮೆಂಟು ಕಾರ್ಮಿಕರು, ಮಂಗಳೂರಿನ ಬೀಡಿ ಕಾರ್ಮಿಕರನ್ನು ವಾಮಪಂಥೀಯರು ಸಂಘಟಿಸಿದರು. ೧೯೪೮ರಲ್ಲಿ ಕಾಂಗ್ರೆಸ್ ಸಮಾಜವಾದಿ ಪಕ್ಷವು ಒಡೆದದ್ದರಿಂದ ಕಾರ್ಮಿಕರಲ್ಲಿ ಗೊಂದಲವುಂಟಾಯಿತು. ಆದಾಗ್ಯೂ ೧೯೩೦ರ ದಶಕದಲ್ಲಿ ರಾಜಕೀಕರಣಗೊಂಡ ಕಾರ್ಮಿಕ ವರ್ಗ ರಾಷ್ಟ್ರವಾದಿ ಗುಂಪಿನ ಶಕ್ತಿಯನ್ನು ಹೆಚ್ಚಿಸಿತಲ್ಲದೆ ರಾಜ್ಯದಲ್ಲಿ ಆಗ ಸ್ವಾತಂತ್ರ್ಯ ಹೋರಾಟಕ್ಕೆ ಅತ್ಯಗತ್ಯವಾಗಿ ಬೇಕಾಗಿದ್ದ ವ್ಯಾಪಕ ತಳಹದಿಯನ್ನು ಒದಗಿಸಿತು.

೧೯೪೫-೪೭ರ ಅವಧಿಯಲ್ಲಿ ಕಾರ್ಮಿಕರ ಚಟುವಟಿಕೆ ಅಧಿಕಗೊಂಡಿತು. ಯುರೋಪಿನಲ್ಲಿ ಯುದ್ಧ ನಿಂತುಹೋದದ್ದರಿಂದ ಕಾರ್ಮಿಕವರ್ಗದವರಲ್ಲಿ ಹೊಸ ಭರವಸೆ ಮೂಡಲು ಕಾರಣವಾಯಿತು. ಕಾರ್ಮಿಕ ಮುಷ್ಕರಗಳು ನಡೆಯದ ಯಾವುದೇ ಕೈಗಾರಿಕೆ ಆ ಅವಧಿಯಲ್ಲಿ ಇರಲಿಲ್ಲವೆಂದರೆ ಕಾರ್ಮಿಕ ಸಂಘಟನೆ ಎಷ್ಟು ಬಲವಾಗಿತ್ತೆನ್ನುವುದು ಮನದಟ್ಟಾಗುತ್ತದೆ. ಎರಡನೇ ಮಹಾಯುದ್ಧ ಸಮಯದಲ್ಲಿ ಉಂಟಾಗಿದ್ದ ಸಂಕಷ್ಟಗಳು ಜನರ ಭಾವನೆಗಳನ್ನು ಕೆರಳಿಸಿದವು. ಹೊಸ ವ್ಯವಸ್ಥೆಗಾಗಿ ಅವರು ಹಂಬಲಿಸಿದರು. ಬ್ರಿಟಿಷ್ ವ್ಯವಸ್ಥೆಗೆ ಬದಲಾದ ತಮ್ಮದೇ- ವ್ಯವಸ್ಥೆಯಾಗಬೇಕು; ಹಾಗಾಗಿ ಸ್ವಾತಂತ್ರ್ಯ ಹೋರಾಟದೊಡನೆ ತಮ್ಮನ್ನು ತಾವು ಗುರುತಿಸಿಕೊಂಡರು; ತಮ್ಮ ಹೋರಾಟದಲ್ಲಿ ಯಶಸ್ವಿಯಾದರು ಕೂಡ.

**-ಪ್ರೊ. ಎಸ್. ಚಂದ್ರಶೇಖರ್**

## ಟಿಪ್ಪಣಿಗಳು

೧ ರಿಪೋರ್ಟ್ ಆನ್ ದಿ ಅಡ್ಮಿನಿಸ್ಟ್ರೇಷನ್ ಆಫ್ ಮೈಸೂರ್. ೧೯೧೪-೧೫, ಬೆಂಗಳೂರು, ೧೯೧೫, ಪು. ೫
೨ ೧೮೯೧ರ ಕಾಂಗ್ರೆಸ್ಸು ವಾರ್ಷಿಕ ಅಧಿವೇಶನದಲ್ಲಿ ಆನಂದಚಾರ್ಲುರವರ ಅಧ್ಯಕ್ಷೀಯ ಭಾಷಣ. ಬಿಪಿನ್ ಚಂದ್ರ ಅವರ 'ರೈಸ್ ಅಂಡ್ ಗ್ರೋತ್ ಆಫ್ ಎಕನಾಮಿಕ್ ನ್ಯಾಷನಲಿಸಮ್ ಇನ್ ಇಂಡಿಯಾ' ಎಂಬ ಗ್ರಂಥದಲ್ಲಿ ಉದ್ಧರಿಸಲಾಗಿದೆ, ನವದೆಹಲಿ, ೧೯೯೮, ಪು. ೩೬೦
೩ ಸುಬ್ರಮಣಿಯ ಅಯ್ಯರ್,ಜಿ.: ಸಮ್ ಎಕನಾಮಿಕ್ ಆಸ್ಪೆಕ್ಟ್ ಆಫ್ ಬ್ರಿಟಿಷ್ ರೂಲ್ ಇನ್ ಇಂಡಿಯಾ, ಮದರಾಸು, ೧೯೦೩, ಪು. ೧೭೫-೨೩೨
೪ ವಿಶ್ವ ಕರ್ನಾಟಕ, ೨೫ ಜುಲೈ ೧೯೨೬
೫ ಮೈಸೂರು ಶಾಸನ ಸಭೆಯ ಕಲಾಪಗಳು, ಏಪ್ರಿಲ್ ೧೯೨೫, ಬೆಂಗಳೂರು, ೧೯೨೫, ಪು. ೫೦-೬೦
೬ ವಿವರಗಳಿಗಾಗಿ ನೋಡಿ: ಫಾರಿನ್: ಪೊಲಿಟಿಕಲ್ ರಿಫಾರ್ಮ್ ಬ್ರಾಂಚ್, ಕಡತ ಸಂಖ್ಯೆ ೧೬೭-ಆರ್/೩೧. ರೆಸಿಡೆಂಟರಿಂದ ಭಾರತ ಸರ್ಕಾರಕ್ಕೆ. ೮ ಜೂನ್ ೧೯೩೧, ಜುಲೈ ೧೯೩೧ರ ಉತ್ತರಾರ್ಧ ಪಾಕ್ಷಿಕ ವರದಿಗಾಗಿ: ಕಡತ ಸಂಖ್ಯೆ ೨೨೫-ಆರ್/೩೧, ೧೯೩೧
೭ ದೊರೆಸ್ವಾಮಿ, ಎಚ್.ಎಸ್.: ಪು. ೬
೮ ವಿವರಗಳಿಗಾಗಾಗಿ ನೋಡಿ: ಹೆಟ್ನೆ.ಬಿ. ೧೯೭೮, ಪು. ೧೬೪
೯ ವಿ.ವಿ ಗಿರಿಯವರು ಶ್ರೀ ಖಾನ್ ಅವರಿಗೆ ಬರೆದಿರುವ ೨ಮೇ ೧೯೩೦ರ ಪತ್ರ ಮೈಸೂರು ರೈಲ್ವೆ ಮಂಡಳಿ(ಎನ್‌ಎಐ).
೧೦ ವಿ.ವಿ. ಗಿರಿಯವರಿಂದ ಮಿರ್ಜಾ ಇಸ್ಮಾಯಿಲ್ಲರಿಗೆ ಪತ್ರ: ದಿನಾಂಕ: ೩ಮೇ ೧೯೩೦
೧೧ ಕೈಗಾರಿಕಾ ಮತ್ತು ಕಾರ್ಮಿಕ ಇಲಾಖೆಗೆ ವೈಸ್‌ರಾಯ್‌ಯಾನ ಸಚಿವ ಸಂಪುಟದ ಸದಸ್ಯರಾದ ಶ್ರೀ ಭೋರೆ ಅವರಿಗೆ ವಿ.ವಿ.ಗಿರಿಯವರ ಪತ್ರ: ೩ಮೇ ೧೯೩೦, ಕಡತ ಸಂಖ್ಯೆ ೧೫೩ ದೇಶೀಯ ವಿದೇಶೀ ರಾಜಕೀಯ ಇಲಾಖೆಯ ರಹಸ್ಯಗಳು.
೧೨ ವಿ.ವಿ.ಗಿರಿಯವರು ಮಿರ್ಜಾ ಇಸ್ಮಾಯಿಲ್ಲರ ಖಾಸಗಿ ಕಾರ್ಯದರ್ಶಿಯವರಿಗೆ ಬರೆದ ಪತ್ರ. ೩ ಮೇ ೧೯೩೧
೧೩ ಭಾರತ ಸರ್ಕಾರದ ಕಾರ್ಮಿಕ ಸದಸ್ಯರ ಒಂದು ಟಿಪ್ಪಣಿ: ೧೩ಮೇ ೧೯೩೦, ಕಡತ ಸಂಖ್ಯೆ ೧೫೩, ದೇಶೀಯ ವಿದೇಶಿ ರಾಜಕೀಯ ಇಲಾಖೆ.
೧೪ ಹೌಸ್ ಆಫ್ ಕಾಮನ್ಸ್‌ನ ಸದಸ್ಯರಾದ ಗ್ರಯಿಮ್‌ಪೋಲ್‌ರವರಿಗೆ ಭಾರತ ಸರ್ಕಾರದ ಕಾರ್ಯದರ್ಶಿಯವರ ಪತ್ರ. ೧ ಜೂನ್ ೧೯೩೧. ಅದೇ.
೧೫ ದ ಹಿಂದು, ೫ ಜೂನ್ ೧೯೩೫
೧೬ ರಾಜ್ಯದ ಕಾರ್ಮಿಕ ಚಳವಳಿಯ ಬಗೆಗೆ ವಿವರವಾದ ಮಾಹಿತಿಗಾಗಿ ನೋಡಿ: ಭಾರತ ಕಮ್ಯೂನಿಸ್ಟ್ ಪಕ್ಷದ ಕನ್ನಡ ಮಾಸಿಕ 'ಅರುಣ' ನೋಡಿ. ವಿಶೇಷ ಸಂಚಿಕೆ, ಸಂಪುಟ ೩೧, ಸಂಚಿಕೆ ೫, ಅಕ್ಟೋಬರ್ ೧೯೭೭
೧೭ ದ ಹಿಂದು, ೧೮ ಆಗಸ್ಟ್ ೧೯೪೨. ಹಾಗೂ ಹಾಲಪ್ಪ.ಜಿ.ಎಸ್. ಸಂಪುಟ. ೨, ಪು. ೨೮೦
೧೮ ಮೇನರ್, ಜೆ. ಪು. ೧೪೧

## ಅಧ್ಯಾಯ : ಹನ್ನೊಂದು

# ಸ್ವಾತಂತ್ರ್ಯ ಚಳವಳಿಯಲ್ಲಿ ಮಹಿಳೆಯರು

ಸಮಗ್ರವಾಗಿ ಸ್ವಾತಂತ್ರ್ಯ ಚಳವಳಿಯನ್ನು ಅವಲೋಕಿಸಿದಾಗ ಇದುವರೆಗೆ ಪಂಡಿತರು ಅಥವಾ ಸಾಮಾನ್ಯಜನರ ಗಮನವನ್ನು ಸೆಳೆಯದಂಥ ಅನೇಕ ಸಂಗತಿಗಳು ಗೋಚರವಾಗುತ್ತವೆ. ಒಂದು ವೇಳೆ ವಿದ್ವಾಂಸರು ಈ ಸಂಗತಿಗಳ ಬಗ್ಗೆ ಮಾತನಾಡಿದ್ದರೆ ಕೇವಲ ಪ್ರಾಸಂಗಿಕವಾಗಿ ಪ್ರಸ್ತಾಪ ಮಾಡಿರುವರೇ ಹೊರತು ಚಳವಳಿಗೆ ನ್ಯಾಯ ದೊರಕಿಸಿಕೊಡುವ ರೀತಿಯಲ್ಲಲ್ಲ. ಸ್ವಾತಂತ್ರ್ಯ ಚಳವಳಿಯ ಇತಿಹಾಸ ಲೇಖನ ವಿಧಾನವನ್ನು ಗಮನಿಸಿದಾಗ ಈ ಅಂಶ ಸಾಬೀತಾಗುತ್ತದೆ. ಈ ಚಳವಳಿಯನ್ನು ಒಂದು ಜನಾಂದೋಲನವಾಗಿ ಮಾರ್ಪಡಿಸಿದಂಥ ಕ್ರಮವನ್ನು ಪರಿಗಣಿಸುವಾಗ ಈ ಸಂಗತಿಗಳನ್ನು ಗಂಭೀರವಾಗಿ ಅಧ್ಯಯನ ಮಾಡಬೇಕಾಗುತ್ತದೆ. ರಾಷ್ಟ್ರವನ್ನು ವಸಾಹತು ಅಂಕಿತದಿಂದ ಬಿಡುಗಡೆ ಮಾಡುವ ದಿಶೆಯಲ್ಲಿ ಸ್ತ್ರೀಯರು ವಹಿಸಿದ ಪಾತ್ರವನ್ನು ನಾವು ಈ ನಿಟ್ಟಿನಲ್ಲಿ ಅರ್ಥ ಮಾಡಿಕೊಳ್ಳಬೇಕು. ಈ ಸಂದರ್ಭದಲ್ಲಿ ನಾವು ಉಚಿತವೂ, ಸರ್ವಗ್ರಾಹಿಯೂ ಆದ ಒಂದು ಪ್ರಶ್ನೆಯನ್ನು ಕೇಳಬೇಕಾಗುತ್ತದೆ; ಅದೆಂದರೆ: ಇಂಥ ಚಳವಳಿಯೊಂದರಲ್ಲಿ ಮಹಿಳೆಯರು ಭಾಗವಹಿಸುವಂತೆ ಪ್ರೇರೇಪಣೆ ನೀಡಿದ ಅಂಶ ಯಾವುದು?

ಈ ಪ್ರಶ್ನೆಗೆ ಸಮಂಜಸವಾಗಿ ಉತ್ತರ ನೀಡಲು ಸ್ವಾತಂತ್ರ್ಯ ಚಳವಳಿಯಲ್ಲಿ ಅವರು ವಹಿಸಿದ ಪಾತ್ರದ ಬಗ್ಗೆ ಅರಿಯಬೇಕಾದುದು ಅನಿವಾರ್ಯವಾಗುತ್ತದೆ. ಮಹಾತ್ಮಾ ಗಾಂಧಿಯವರು ಕಾಣಿಸಿಕೊಂಡ ನಂತರ ಮಹಿಳೆಯರು ಚಳವಳಿಯಲ್ಲಿ ಧುಮುಕಿದರೆಂಬುದು ಎಲ್ಲರಿಗೂ ತಿಳಿದಿರುವ ಸಂಗತಿ. ಆದರೆ ಗಾಂಧೀಜಿಯವರು ಕಾಣಿಸಿಕೊಳ್ಳುವುದಕ್ಕೆ ಮೊದಲು ಅವರಿಗೆ ಪೂರ್ವದವರು ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಚರ್ಚೆಗಳಲ್ಲಿ ಭಾಗವಹಿಸಲು ಅನುಕೂಲವಾಗುವಂತೆ ಮಹಿಳೆಯರು ಸದಸ್ಯರಾಗಲು ಅವಕಾಶ ಕಲ್ಪಿಸಿದ್ದರು. ಈ ಸಂಘಟನೆಯಲ್ಲಿ ಆರಂಭದ ದಿನಗಳಲ್ಲಿ ಮಹಿಳೆಯರು ಸಕ್ರಿಯವಾದ ಪಾತ್ರವನ್ನು ವಹಿಸಿರಲಿಲ್ಲ. ಆ ವೇಳೆಗೆ, ಬಹಳಷ್ಟು ಮಹಿಳಾ ಸಂಘಟನೆಗಳು ಅಸ್ತಿತ್ವಕ್ಕೆ ಬಂದಿದ್ದವು. ಮತದಾನದ ಹಕ್ಕು, ಲಿಂಗಾಧಾರಿತ ತಾರತಮ್ಯದ ನಿವಾರಣೆ, ಹೆಚ್ಚಿನ ಮಟ್ಟದ ಪ್ರಾತಿನಿಧ್ಯ ಇತ್ಯಾದಿ ವಿಷಯಗಳ ಬಗ್ಗೆ ಈ ಸಂಘಟನೆಗಳು ಹೆಚ್ಚು ಗಮನ ಹರಿಸಿದರೂ ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನಲ್ಲಿ ಅವರ ಭಾಗವಹಿಸುವಿಕೆಯು ಕೇವಲ ಅಲಂಕಾರಿಕವಾಗಿದ್ದಿತ್ತೆನ್ನಬೇಕು.

ಇವರಲ್ಲಿ ಬಹುತೇಕ ಮಹಿಳೆಯರು ಮೇಲ್ವರ್ಗದಿಂದ ಬಂದವರೆಂಬುದನ್ನು ನಾವು ಮರೆಯಲಾಗದು. ಚಳವಳಿಯು ಮೇಲ್‌ಜಾತಿ ಶ್ರೀಮಂತವರ್ಗದವರ ಹಿಡಿತದಲ್ಲಿ ಇದ್ದ ಕಾರಣ ಹೀಗಾಯಿತೆಂದು ಬೇರೆ ಹೇಳಬೇಕಾಗಿಲ್ಲ. ಈ ಮಹಿಳೆಯರ ಕುಟುಂಬದ ಪುರುಷರು ಸಾಮಾಜಿಕ ಸುಧಾರಣಾ ಚಳವಳಿ ಇಲ್ಲವೇ ರಾಜಕೀಯ ಚಳವಳಿಯಲ್ಲಿ ಭಾಗವಹಿಸಿದ್ದವರು. ಆರಂಭದಲ್ಲಿ ಈ ಮೇಲ್ವರ್ಗದ ಮಹಿಳೆಯರ ಸದಸ್ಯತ್ವದ

ಕಾರಣವಾಗಿಯೇ ನಗರ ಹಾಗೂ ಗ್ರಾಮಾಂತರ ಪ್ರದೇಶಗಳಲ್ಲಿನ ಮಹಿಳೆಯರು ಉತ್ತೇಜಿತರಾಗಿ ಚಳವಳಿಯಲ್ಲಿ ಭಾಗವಹಿಸಲಿಲ್ಲವಾದರೂ ತರುವಾಯದಲ್ಲಿ ಸಮಾಜದ ಎಲ್ಲ ವರ್ಗದ ಮಹಿಳೆಯರನ್ನೂ ಚಳವಳಿ ಒಳಗೊಂಡಿತೆಂಬುದನ್ನು ಮನಗಾಣಬೇಕು.

ಮಹಿಳೆಯರ ಪಾತ್ರವು ಅನೂಚಾನವಾಗಿ ಒಂದು ಮಾದರಿಯಲ್ಲಿ ಕಲ್ಪಿತವಾಗಿದ್ದ ಕಾರಣ ಅನೇಕ ಸಾಮಾಜಿಕ–ಸಾಂಸ್ಕೃತಿಕ ಅಂಶಗಳ ಆಧಾರದ ಮೇಲೆ ಅವರನ್ನು ಪ್ರತ್ಯೇಕಗೊಳಿಸಲಾಗಿತ್ತು. ತಮ್ಮ ಸೀಮಿತ ವಲಯಗಳಿಂದ ಮಹಿಳೆಯರು ವಿಶಾಲ ಪ್ರಪಂಚಕ್ಕೆ ಹೊರಬರುವಂತೆ ಪ್ರೇರೇಪಣೆ ದೊರೆತದ್ದು ಮಹಾತ್ಮಾ ಗಾಂಧಿಯವರಿಂದ. ಸ್ವಾತಂತ್ರ್ಯಗಳಿಕೆಯ ಹಾದಿಯಲ್ಲಿ ಸಮಾಜದ ಎಲ್ಲ ವರ್ಗದ ಜನರನ್ನೂ ಜೊತೆಯಲ್ಲಿ ಕೊಂಡೊಯ್ಯಬೇಕೆಂದು ಮೊಟ್ಟಮೊದಲು ಮನಗಂಡವರು ಮಹಾತ್ಮರು. ಪುರುಷರು ಸೆರೆವಾಸಕ್ಕೆ ಈಡಾದ ಸಂದರ್ಭದಲ್ಲಿ ಸ್ತ್ರೀಯರು ಹೋರಾಟವನ್ನು ಮುಂದುವರಿಸಬೇಕಾದ ಕಾರಣ ಅವರ ಪಾತ್ರದ ಮಹತ್ವ ದ್ವಿಗುಣಗೊಂಡಿತು.

ಸಮಾಜದ ಎಲ್ಲ ವರ್ಗದ ಜನರನ್ನೂ ಒಳಗೊಂಡು ಹೋರಾಟ ಮಾಡಿ ಸ್ವಾತಂತ್ರ್ಯ ಗಳಿಸಬೇಕೆಂಬ ಗುರಿ ಹೊಂದಿದ್ದ ಕಾರಣ ಮತ್ತು ಆಗ ಮಾತ್ರವೇ ಸ್ವಾತಂತ್ರ್ಯ ಚಳವಳಿ ಯಶಸ್ವಿಯಾಗಲು ಸಾಧ್ಯವಿದ್ದ ಕಾರಣ ಹೋರಾಟದ ಮಾದರಿಯೇ ಭಿನ್ನವಾಗಬೇಕಾಗಿದ್ದಿತು. ಭಾರತೀಯರ ಭಾವನೆಗಳಿಗೆ ಊನವಾಗದ ರೀತಿಯಲ್ಲಿ ಬ್ರಿಟಿಷ್ ವಸಾಹತುವಾದಿಗಳನ್ನು ಅಸಹಾಯಕತೆಗೆ ಇಳಿಸುವುದು ಉದ್ದೇಶವಾಗಿದ್ದಿತು. ಆ ಸನ್ನಿವೇಶದಲ್ಲಿ ಭಾರತವು ಇದ್ದ ಪರಿಸ್ಥಿತಿಯಲ್ಲಿ ಶಸ್ತ್ರಾಸ್ತ್ರಗಳಿಂದ ಬ್ರಿಟಿಷರನ್ನು ಎದುರಿಸುವುದು ಅಸಾಧ್ಯವಾದ ಮಾತೇ ಆಗಿತ್ತು; ಕಾರಣ ಅನೇಕ ಸಂದರ್ಭಗಳಲ್ಲಿ ಬ್ರಿಟಿಷರು ತಮ್ಮ ಸೇನಾ ಸಾಮರ್ಥ್ಯವನ್ನು ಮೆರೆದಿದ್ದರು. ಹಾಗಾಗಿ ಗಾಂಧೀಜಿಯವರು 'ಸತ್ಯಾಗ್ರಹ' ವೆಂಬ ಸಾಧನವನ್ನು ಕಂಡುಹಿಡಿದರು; ಜೊತೆಗೆ ರಚನಾತ್ಮಕ ಕೆಲಸ ಹಾಗೂ ಅಸಹಕಾರ ಚಳವಳಿಗಳು ಅವರ ನೆರವಿಗೆ ಬಂದವು. ಗಾಂಧೀಜಿಯವರ ಹೋರಾಟದ ಹುನ್ನಾರಿನಲ್ಲಿ ಈ ಆಯುಧಗಳು ಅನುಕೂಲಕರವಾಗಿ ರೂಪುಗೊಂಡವಲ್ಲದೆ ಸಮಾಜದ ಎಲ್ಲ ವರ್ಗದ ಜನರನ್ನೂ, ಅದರಲ್ಲೂ ವಿಶೇಷವಾಗಿ ಮಹಿಳೆಯರನ್ನು ಹೋರಾಟಕ್ಕೆ ಪ್ರೇರೇಪಿಸಲು ಸುಲಭವಾಯಿತು. ರಕ್ಷಿತ ಆವರಣದಿಂದ ಹೊರಬಂದು ಘನವಾದ ಉದ್ದೇಶಕ್ಕಾಗಿ ಹೋರಾಡಲು ಮಹಿಳೆಯರಿಗೆ ಅವಕಾಶ ದೊರಕಿತು.

ದಕ್ಷಿಣ ಆಫ್ರಿಕಾದಲ್ಲಿ ಮೊದಲು ಅಂಕುರಿಸಿದ ಅಹಿಂಸೆ, ರಚನಾತ್ಮಕ ಕಾರ್ಯಕ್ರಮ ಹಾಗೂ ಅಸಹಕಾರ ಚಳವಳಿಯಂಥ ಗಾಂಧೀಜಿಯವರ ಪರಿಕಲ್ಪನೆಗಳು ಮಹಿಳೆಯರ ಮನೋಭಾವನೆಗಳಿಗೆ ಹೆಚ್ಚು ಸೂಕ್ತವಾಗಿ ಕಂಡವು. ದಕ್ಷಿಣ ಆಫ್ರಿಕಾದಲ್ಲಿ ಈ ಪರಿಕಲ್ಪನೆಗಳನ್ನು ಪ್ರಯೋಗ ಮಾಡಿದ್ದಲ್ಲದೆ ಅವು ಯಶಸ್ವಿಯಾಗಿ ಕಂಡಿದ್ದವೂ ಕೂಡ. ಅಸಹಕಾರ ಚಳವಳಿಯ ಮೂಲಕ ಸ್ತ್ರೀತ್ವದ ಗೌರವವನ್ನು ಕಾಪಾಡುವುದು ಭಾರತೀಯ ಸಮುದಾಯದ ಆದ್ಯ ಕರ್ತವ್ಯವೆಂದು[೧] ಗಾಂಧೀಜಿಯವರು ಕಳಕಳಿಯಿಂದ ಹೇಳಿದ್ದರು.

ಮಹಿಳೆಯನ್ನು ಗಾಂಧೀಜಿಯವರು 'ತ್ಯಾಗದ ಸಾಕಾರಮೂರ್ತಿ' ಯೆಂದು ಬಣ್ಣಿಸಿದರಲ್ಲದೆ, ಆತ್ಮ–ತ್ಯಾಗ, ಪ್ರೇಮ, ಸಹಿಷ್ಣುತೆ ಹಾಗೂ ದೃಢತೆ ಅವಳ ಅಂತರಂಗದ ಗುಣಗಳೆಂದು ಒತ್ತಿ ಹೇಳಿದರು. ಸಮರಪೀಡಿತ ಜಗತ್ತಿನ ಸಮಸ್ಯೆಯ ಪರಿಹಾರಕ್ಕೆ ಅವಳ ಈ ಗುಣಗಳನ್ನು ವಿಸ್ತರಿಸಬೇಕೆಂದು ತಿಳಿಸಿದರು. ರಾಷ್ಟ್ರೀಯ ಉದ್ದೇಶಗಳಿಗಾಗಿ ಅವರು ಸಿದ್ಧಗೊಳಿಸಿದ ಇನ್ನೊಂದು ಮುಖ್ಯ ಆಯುಧವೆಂದರೆ 'ಚರಕ' . ರಚನಾತ್ಮಕ ಕಾರ್ಯಕ್ರಮದಲ್ಲಿ ಮಹಿಳೆಯ ಉದ್ಧಾರ ಹಾಗೂ ಆರ್ಥಿಕ ಪುನರ್ವಸತಿಯ ಜೊತೆಗೆ ಖಾದಿ

ನೂಲುವುದನ್ನು ಒಂದು ಮುಖ್ಯವಾದ ಅಂಶವಾಗಿ ಸೇರಿಸಲಾಗಿತ್ತು. ನೂಲುಪಿಕೆಯನ್ನು ಕೇಂದ್ರಸ್ಥಾನದಲ್ಲಿ ಸ್ಥಾಪಿಸಿ, ಸಾಮ್ರಾಜ್ಯಶಾಹಿ ನೊಗದಿಂದ ಭಾರತವನ್ನು ಬಿಡುಗಡೆ ಮಾಡುವುದರಿಂದ, ಈ ನಾಡಿನ ಮಹಿಳೆಯರಿಗೆ ವಿಶೇಷ ಸ್ಥಾನಮಾನ ಪ್ರಾಪ್ತವಾಗುತ್ತದೆ'ಯೆಂದು ಗಾಂಧೀಜಿ ಹೇಳಿದರು.

ಚರಕದ ಮೂಲಕ ಜನರಲ್ಲಿ ಆತ್ಮವಿಶ್ವಾಸ, ರಾಷ್ಟ್ರಪ್ರೇಮ ಹಾಗೂ ಸ್ವಾತಂತ್ರ್ಯದ ಆಕಾಂಕ್ಷೆ ಅಂಕುರಿಸುವುದೆಂಬ ಉದ್ದೇಶ ಗಾಂಧೀಜಿಯವರದಾಗಿತ್ತು. ಒಂದು ಕುಟುಂಬದಲ್ಲಿ ಮಹಿಳೆ ಗಳಿಸುವ ಸಾಮರ್ಥ್ಯ ಪಡೆದರೆ ಅವಳಿಗೆ ಆತ್ಮವಿಶ್ವಾಸ ಹೆಚ್ಚುವುದೆಂಬುದು ಅವರ ಅಭಿಮತವಾಗಿತ್ತು. ಅವಳ ಗಳಿಕೆ ಕುಟುಂಬಕ್ಕೆ ಹೆಚ್ಚುವರಿ ವರಮಾನವಾಗುವುದು. ಮಹಿಳೆಯ ಮುಖಾಂತರ ಜನರಲ್ಲಿ ದುಡಿಮೆಯ ಬಗೆಗಿನ ಪ್ರೀತಿಯನ್ನು ಹೆಚ್ಚಿಸಿ ತನ್ಮೂಲಕ ವಿದೇಶಿ ವಸ್ತುಗಳ ಮೇಲಿನ ವ್ಯಾಮೋಹವನ್ನು ತಡೆಯುವುದು ಅವರ ಉದ್ದೇಶವಾಗಿತ್ತು. ತನ್ನ ದುಡಿಮೆಯ ಮೂಲಕ ಮಹಿಳೆ ರಾಷ್ಟ್ರೀಯ ಉತ್ಪಾದನೆ ಹಾಗೂ ವರಮಾನಕ್ಕೆ ತನ್ನ ಕೊಡುಗೆ ನೀಡುವುದರ ಜೊತೆಗೆ ಒಂದು ಬಗೆಯ ತೃಪ್ತಿ ಹಾಗೂ ರಾಷ್ಟ್ರಪ್ರೇಮವನ್ನು ಹೊಂದುವಳೆಂದು ಅವರು ನಂಬಿದ್ದರು. ಆರ್ಥಿಕವಾದ ಸ್ವಾವಲಂಬನೆಯನ್ನು ಅವಳು ಹೊಂದುವುದರಿಂದ ಸ್ವಾತಂತ್ರ್ಯದ ನಿರುಮ್ಮಳತೆಯನ್ನು ಅವಳು ತನ್ನದಾಗಿಸಿಕೊಳ್ಳುವಳು. ಗಾಂಧೀಜಿಯವರ ಈ ಹೊಸ ಆವಿಷ್ಕಾರದಿಂದ ಮಹಿಳೆ ಸಂಪೂರ್ಣವಾಗಿ ತನ್ನ ಗೃಹಕೃತ್ಯದ ಕೆಲಸಗಳಿಂದ ದೂರವಾಗಬೇಕಾದ ಪ್ರಮೇಯವುಂಟಾಗಲಿಲ್ಲ. ಮದ್ಯದಂಗಡಿಗಳು ಹಾಗೂ ವಿದೇಶಿ ವಸ್ತ್ರಗಳ ಅಂಗಡಿಗಳ ಮುಂದೆ ಮಹಿಳೆಯರು ಪಿಕೆಟಿಂಗ್ ಮಾಡುವುದರಿಂದ ಸಂಪೂರ್ಣವಾಗಿ ಮಹಿಳೆಯರೇ ಚಳವಳಿಯನ್ನು ಪ್ರಾರಂಭಿಸಿ ನಿಯಂತ್ರಿಸುವುದರಲ್ಲಿ ಒಂದು ಹೊಸರೀತಿಯ ಆಕರ್ಷಣೆ ಇರುವುದಾಗಿ[೩] ಗಾಂಧೀಜಿ ಭಾವಿಸಿದರು.

ಗಾಂಧೀಜಿಯವರ ಕರೆಗೆ ಮಹಿಳೆಯರು ಅಭೂತಪೂರ್ವವಾದ ರೀತಿಯಲ್ಲಿ ಓಗೊಟ್ಟರು. ನೂರಾರು ಮಹಿಳೆಯರು ಚಳವಳಿಯಲ್ಲಿ ಧುಮುಕಿದರು. ಅಲ್ಲಿಂದ ಮುಂದೆ ಅವರು ಹಿಂತಿರುಗಿ ನೋಡಲಿಲ್ಲ. ಗಾಂಧೀಜಿಯವರು ಆವಿಷ್ಕರಿಸಿದ ಆಯುಧ ಮತ್ತು ಹೋರಾಟದ ವಿಧಾನ ಕೇವಲ ಭಾರತೀಯ ಪರಿಸರಕ್ಕೆ ಹಾಗೂ ಮಹಿಳೆಯರಿಗೆ ಅನುಕೂಲಕರವಾದದ್ದೊಂದಾಗದೆ ಯಾವುದೇ ಸಂದರ್ಭದಲ್ಲಿ ಶತ್ರುವನ್ನು ಎದುರಿಸುವ ಸನ್ನಿವೇಶಕ್ಕೆ ಅಸ್ತ್ರವಾಯಿತು. ಮಹಿಳೆಯರು ಈ ಹೋರಾಟದಲ್ಲಿ ಅಹಿಂಸಾತ್ಮಕ ಸೈನಿಕರಾಗಿ ಪದಾರ್ಪಣ ಮಾಡಿದಾಗ ಹೋರಾಟದ ರೀತಿ ರಿವಾಜಿನಲ್ಲಿ ಹೊಸ ಬಗೆ ಕಾಣಿಸಿಕೊಂಡಿತು. ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರು ಸೇರ್ಪಡೆಯಾದ ಕಾರಣ ರಾಜಕೀಯ ಚಳವಳಿ ಹೊಸ ತಿರುವು ಪಡೆದುಕೊಂಡು ಬ್ರಿಟಿಷರು ಸನ್ನಿವೇಶದ ನಾವೀನ್ಯತೆಯಿಂದಾಗಿ ಕಂಗಾಲಾಗುವ ಪ್ರಮೇಯವುಂಟಾಯಿತು. ಬ್ರಿಟಿಷರು ಹೆಚ್ಚು ಹಿಂಸಾತ್ಮಕವಾದ ಬಂಡಾಯ ಮತ್ತು ಚಳವಳಿಗಳನ್ನು ಮಾತ್ರ ಅರಿತಿದ್ದರು. ಆದರೆ ಭಾರತದಲ್ಲಿ ಹೊಸ ರೀತಿಯಲ್ಲಿ ಮಹಿಳೆಯರು ಪ್ರಾರಂಭಿಸಿದ ಚಳವಳಿಯನ್ನು ಎದುರಿಸುವುದರ ಬಗ್ಗೆ ಅವರಿಗೆ ತಿಳಿದಿರಲಿಲ್ಲ.

ಕರ್ನಾಟಕದಲ್ಲಿ ಪ್ರಾರಂಭವಾದ ಮಹಿಳೆಯರ ಚಳವಳಿಯ ಮಾರ್ಗ ತನ್ನ ತೀಕ್ಷ್ಣತೆಯಲ್ಲಿ ಬೇರಾವ ಚಳವಳಿಗೂ ಕಡಿಮೆ ಇರಲಿಲ್ಲ. ಸರಿಸುಮಾರು ಕರ್ನಾಟಕದ ಅರ್ಧಭಾಗ ಪ್ರೆಸಿಡೆನ್ಸಿಗಳಿಗೂ ಉಳಿದರ್ಧಭಾಗ ದೇಶೀಯ ಸಂಸ್ಥಾನಗಳಿಗೂ ಸೇರಿದ್ದಿತು. ಬ್ರಿಟಿಷ್ ಪ್ರಾಂತ್ಯದಲ್ಲಿ ಚಳವಳಿಗೆ ಹೆಚ್ಚಿನ ಉತ್ತೇಜನ ದೊರೆತಿತ್ತು. ಪ್ರೆಸಿಡೆನ್ಸಿ ರಾಷ್ಟ್ರೀಯ ಪ್ರಜ್ಞೆ ವೃದ್ಧಿಯಾಗುವುದರ ಜೊತೆಜೊತೆಗೆ ಸಮಾಜ ಸುಧಾರಣಾ ಕಾರ್ಯಗಳು ನಡೆದಿದ್ದವು. ರಾಷ್ಟ್ರೀಯ ಸಾಮಾಜಿಕ ಅಧಿವೇಶನ ಬೊಂಬಾಯಿ ಪ್ರೆಸಿಡೆನ್ಸಿಯಲ್ಲಿ ಚಳವಳಿಯ ಪ್ರಸಾರಕ್ಕೆ ಹೆಚ್ಚಿನ ರೀತಿಯಲ್ಲಿ ಕೊಡುಗೆ ನೀಡಿತ್ತು; ವಿಧವಾ ವಿವಾಹವನ್ನು ಪ್ರೋತ್ಸಾಹಿಸುವ ಅನೇಕರು ಕಂಡುಬಂದರು. ಬೊಂಬಾಯಿ ಕರ್ನಾಟಕ ಪ್ರದೇಶದಲ್ಲಿ ಮಹಿಳಾ ವಿಮೋಚನಾ ಚಳವಳಿಯು ಬಹಳ ಶಕ್ತರೀತಿಯಲ್ಲೇ ನಡೆದಿತ್ತು. ಗುಲ್ವಾಡಿ

ವೆಂಕಟರಾವ್, ಕರ್ಕಿ ವೆಂಕಟರಮಣ ಶಾಸ್ತ್ರೀ, ವೆಂಕಟರಂಗೋ ಕಟ್ಟಿ ಕೇವಲ ಮಹಿಳಾ ವಿಮೋಚನೆಯ ಬಗ್ಗೆ ಉಪದೇಶ ನೀಡದೆ ನೂರಾರು ವಿಧವಾ ವಿವಾಹಗಳನ್ನು ಸ್ವತಃ ನೆರವೇರಿಸಿದ ಫಲವಾಗಿ ಜಾತಿಯಿಂದ ಬಹಿಷ್ಕೃತರಾಗಿದ್ದರು. ದೇಶೀಯ ಸಂಸ್ಥಾನಗಳಲ್ಲಿ ಈ ಕಾರ್ಯ ಮಂದಗತಿಯಲ್ಲಿ ಸಾಗಿತ್ತು. ಮಹಿಳೆಯರು ರಾಜಕೀಯ ಕ್ಷೇತ್ರವನ್ನು ಪ್ರವೇಶಿಸುವುದು ಇದರಿಂದ ಸಹಜವಾಗಿಯೇ ವಿಳಂಬವಾಯಿತು. ಪ್ರೆಸಿಡೆನ್ಸಿ ಪ್ರಾಂತ್ಯಗಳಲ್ಲಿ ಮೇಲೆ ಕಾಣಿಸಿಕೊಂಡ ಅನೇಕ ಮಹಿಳೆಯರು ಮುಂದೆ ರಾಷ್ಟ್ರಮಟ್ಟದ ನಾಯಕರಾಗಿ ರೂಪುಗೊಂಡರು. ಬೊಂಬಾಯಿ ಕರ್ನಾಟಕ ಪ್ರೆಸಿಡೆನ್ಸಿ ಪ್ರಾಂತ್ಯದ ಮಹಿಳೆಯರು ಗೋಖಲೆ ಮತ್ತು ತಿಲಕರಂಥ ನಾಯಕರಿಂದ ಪ್ರಭಾವಿತರಾಗಿದ್ದರು.

ಬ್ರಿಟಿಷ್ ಕರ್ನಾಟಕದಲ್ಲಿ ತಿಲಕರ ಪ್ರಭಾವದಿಂದ ಚಳವಳಿಗೆ ಹೊಸ ಚೈತನ್ಯ ಬಂದಿತ್ತು. ಬೊಂಬಾಯಿ ಮತ್ತು ಮದರಾಸು ಪ್ರೆಸಿಡೆನ್ಸಿಗಳ ಮಹಿಳೆಯರಿಗೆ ಶ್ರೀಮತಿ ಆನಿ ಬೆಸೆಂಟ್ ಹಾಗೂ ಶ್ರೀಮತಿ ಮಾರ್ಗರೇಟ್ ಕಸಿನ್ಸ್‌ರವರ ನಿಕಟ ಸಂಪರ್ಕ ಲಭಿಸಿತ್ತು. ಈ ಇಬ್ಬರು ಮಹಿಳಾ ನಾಯಕರು ಭಾರತೀಯ ಮಹಿಳೆಯರಲ್ಲಿ ಉದಾರವಾದ ಚಿಂತನೆಗಳನ್ನು ಮೂಡಿಸಿದರಷ್ಟೇ ಅಲ್ಲದೆ ದಕ್ಷಿಣದಲ್ಲಿ ಮಹಿಳೆಯರು ಸಾಮಾಜಿಕ ಹಾಗೂ ರಾಜಕೀಯ ತತ್ವಗಳಿಗಾಗಿ ಹೋರಾಡುವ ಮನೋಭಾವವನ್ನು ಬೆಳೆಸಿಕೊಳ್ಳುವುದಕ್ಕೂ ಕಾರಣಕರ್ತರಾದರು. ಮಹಿಳೆಯರಲ್ಲಿ ರಾಷ್ಟ್ರೀಯಪ್ರಜ್ಞೆಯನ್ನು ಮೂಡಿಸುವಲ್ಲಿ ಉತ್ತೇಜನ ನೀಡಿದ ಮತ್ತೊರ್ವ ವ್ಯಕ್ತಿಯೆಂದರೆ ಶ್ರೀಮತಿ ಸರೋಜಿನಿ ನಾಯ್ಡುರವರು; ಶ್ರೀಮತಿ ನಾಯ್ಡು ಅವರು ಆ ವೇಳೆಗಾಗಲೇ ಒಬ್ಬ ರಾಷ್ಟ್ರನಾಯಕಿಯಾಗಿ ಗೋಚರವಾಗಿದ್ದರು.

ಗಾಂಧೀಜಿಯವರ ಇಚ್ಛೆಗನುಸಾರವಾಗಿ ದೀರ್ಘಕಾಲದವರೆಗೆ ಮಹಿಳೆಯರು ರಚನಾತ್ಮಕ ಕಾರ್ಯಕ್ರಮಕ್ಕೆ ಮಾತ್ರ ತಮ್ಮ ಚಟುವಟಿಕೆಯನ್ನು ಸೀಮಿತಗೊಳಿಸಿಕೊಂಡಿದ್ದರು. ಆದರೆ ಈ ಪರಿಮಿತಿಯಿಂದ ಹೊರಗೆ ನಡೆಯಬೇಕಾದ ಅಗತ್ಯ ಕಂಡುಬಂದು ಉಪ್ಪಿನ ಸತ್ಯಾಗ್ರಹವು ಅವರ ಚಟುವಟಿಕೆಗಳನ್ನು ವಿಸ್ತಾರ ಗೊಳಿಸಿಕೊಳ್ಳುವುದಕ್ಕೆ ಒಂದು ಅವಕಾಶ ಕಲ್ಪಿಸಿತು. ಮಹಿಳೆಯರು ನೇರವಾಗಿ ಭಾಗವಹಿಸಿದಂಥ ಮೊದಲನೇ ಪ್ರಸಂಗವಿದು. ಈ ಮಹತ್ವದ ಘಟನೆಯಲ್ಲಿ ಮಹಿಳೆಯರು ಭಾಗವಹಿಸದ ರೀತಿಯಲ್ಲಿ ಗಾಂಧೀಜಿಯವರು ಬುದ್ಧಿಪೂರ್ವಕವಾಗಿಯೇ ಪ್ರಯತ್ನಿಸಿದ್ದರು. ಆದರೆ ಮಹಿಳೆಯರು ಈ ಮನೋಭಾವವನ್ನು ವಿರೋಧಿಸಿದ್ದರು. ಗಾಂಧೀಜಿಯವರ ನಿಲುವನ್ನು ಪ್ರಶ್ನಿಸಿ ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯರು ದನಿಯೆತ್ತಿದಾಗ ಗಾಂಧೀಜಿಯವರು ಮಹಿಳೆಯರಿಗೆ ಬೇರೊಂದು ರೀತಿಯ ಮಾರ್ಗದ ಅನ್ವೇಷಣೆಯಾಗಿದೆಯೆಂದು ತಿಳಿಸಿದರು. ಅವರ ಪ್ರಕಾರ ಮಹಿಳೆಯರು ಹೊಂದಿರುವ ಉತ್ತಮ ಗುಣಗಳಿಗೆ ತಕ್ಕುದಾದಂಥ ಮಾರ್ಗವದು. ದೇಶೀಯ ಉತ್ಪಾದನೆಯ ಮೂಲಕ ಸ್ವದೇಶಿ ಚಳವಳಿಯನ್ನು ಮುಂದುವರಿಸುವುದು ಹಾಗೂ ನಮ್ಮ ಸಮಾಜದಿಂದ ಮದ್ಯಪಾನವನ್ನು ತೊಡೆದು ಹಾಕುವುದು ಮಹಿಳೆಯರ ಹೊಣೆಗಾರಿಕೆ. ಕೇವಲ ಘೋಷಣೆಯನ್ನು ಕೂಗಿ ಮೆರವಣಿಗೆಯಲ್ಲಿ ಸಾಗುವುದಕ್ಕೆ ಬದಲಾಗಿ ಸ್ತ್ರೀ ಸಹಜಗುಣವಾದ ಕರ್ತವ್ಯ ಪಾಲನೆಯನ್ನು ಬೇಡುವಂಥ ಹೊಣೆಗಾರಿಕೆ ಇದು.[೪] ಆದರೆ ಗಾಂಧೀಜಿಯ ನಿಲುವನ್ನು ಪ್ರತಿಭಟಿಸಿದ ಫಲವಾಗಿ ಕೆಲವು ಮಹಿಳೆಯರು ಚಳವಳಿಯಲ್ಲಿ ಭಾಗವಹಿಸುವ ಅವಕಾಶ ಪಡೆದುಕೊಂಡರು. ಆದಾಗ್ಯೂ ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಿ ಮೊದಲನೆಯ ಬಾರಿಗೆ ಕಾನೂನು–ಭಂಗದಲ್ಲಿ ಭಾಗಿಯಾದ ಮಹಿಳೆಯರ ಅನುಭವ ಅನನ್ಯವಾದುದು. ಈ ಘಟನೆಯಿಂದ ಮಹಿಳೆಯರು ಸಂಘಟಿತರಾಗಿ ಹೋರಾಡಲು ಅನುಕೂಲವಾಗುವಂತೆ ಭಿನ್ನವಾದ ತಂಡಗಳನ್ನು ರಚಿಸಿಕೊಳ್ಳಲು ಸಹಾಯಕವಾಯಿತು; ದೇಶ ಸೇವಕಿಯರು, ವಾನರ ಸೈನ್ಯದ ರಚನೆಯಾಯಿತು; ಪ್ರಭಾತ್‌ಫೇರಿ, ಪಿಕೆಟಿಂಗ್, ಅರಣ್ಯ ಕಾನೂನು ಭಂಗ, ಮರಕಡಿಯುವುದು, ನಿಷೇಧಾಜ್ಞೆಯನ್ನು ಉಲ್ಲಂಘಿಸಿ ಧ್ವಜ ಹಾರಿಸುವುದರಲ್ಲಿ ಅವರು ಮುಂದಾದರು. ಹೆಚ್ಚೂ ಕಡಿಮೆ ಪ್ರತಿಯೊಂದು ಮನೆಯೂ ಕಾನೂನು

ಭಂಗ ಚಳವಳಿಯ ಕೇಂದ್ರವಾಗಿ ಪರಿಣಮಿಸಿತು. ಮಹಿಳೆಯರು ಈ ರೀತಿಯಾಗಿ ಮುನ್ನುಗ್ಗತೊಡಗಿದಾಗ ವಸಾಹತು ಸರ್ಕಾರ ಕಂಗಾಲಾಯಿತಲ್ಲದೆ ರಾಷ್ಟ್ರವಾದಿ ಚಳವಳಿಯ ನಾಯಕರೂ ಸಹ ಮಹಿಳೆಯರ ಚಳವಳಿಯನ್ನು ಒಳಗೊಳ್ಳುವ ಮಾರ್ಗವನ್ನು ಅರಿಯದಾದರು.

ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮವು ಮೈಸೂರು ಸಂಸ್ಥಾನದಲ್ಲಿ ಜನಪ್ರಿಯವಾಗಿತ್ತಾದರೂ ಒಂದು ದೃಢವಾದ ರಾಜಕೀಯ ಚಳವಳಿ ಇಲ್ಲಿ ಬೇರು ಬಿಟ್ಟಿರಲಿಲ್ಲವೆಂಬುದನ್ನು ಮನಗಾಣಬೇಕು. ಆದರೆ ಕಮಲಾದೇವಿ ಚಟ್ಟೋಪಾಧ್ಯಾಯ, ಉಮಾಬಾಯಿ ಕುಂದಾಪುರ, ಕೃಷ್ಣಾಬಾಯಿ ಪಂಜೀಕರ್‌ರಂಥ ಮಹಿಳೆಯರು ತಮ್ಮ ಚಟುವಟಿಕೆಗಳನ್ನು ಕೇವಲ ಪ್ರೆಸಿಡೆನ್ಸಿಗಳಿಗೆ ಮಾತ್ರ ಸೀಮಿತಗೊಳಿಸಿ ಕೂರುವ ಮನೋಭಾವದವರಾಗಿರಲಿಲ್ಲ.

ಮೈಸೂರು ಸಂಸ್ಥಾನದಲ್ಲಿ ಅವರು ಪಟ್ಟ ಶ್ರಮದ ಫಲವಾಗಿ ಸ್ತ್ರೀಯರು ಹಾಗೂ ಪುರಷರು ಉತ್ತಮವಾದ ರೀತಿಯಲ್ಲಿ ಸ್ಪಂದಿಸಿದರು. ಕರ್ನಾಟಕದ ಪ್ರತಿಯೊಂದು ವಲಯದಿಂದಲೂ ಅನೇಕ ಮಹಿಳಾ ನಾಯಕರು ಮೇಲೆ ಬರುವ ಸನ್ನಿವೇಶವೇರ್ಪಟ್ಟಿತು. ಕರ್ನಾಟಕ ನೀಡಿದ ಮಹಿಳಾ ನಾಯಕರನ್ನು ನೆನೆಯುವಾಗ ಈ ಹೆಸರುಗಳು ಕಾಣಿಸಿಕೊಳ್ಳುತ್ತವೆ: ಬಳ್ಳಾರಿ ಸಿದ್ದಮ್ಮ, ನಾಗಮ್ಮ ಪಾಟೀಲ್, ಸುಬ್ಬಮ್ಮ ಜೋಯಿಸ್, ಟಿ.ಸುನಂದಮ್ಮ, ಯಶೋಧರಮ್ಮ ದಾಸಪ್ಪ, ನಾಗರತ್ನಮ್ಮ ಹಿರೇಮಠ್, ಪದ್ಮಾವತಿ ಬಿದರಿ, ಜಯದೇವಿ ತಾಯಿ ಲಿಗಾಡೆ, ಶಕುಂತಲಾ ಕುರ್ತಕೋಟಿ, ಸಿದ್ದಮತಿ ಮೈಲಾರ್, ಲಕ್ಷಮ್ಮ, ಬಾಲ್ಯತಂಡ ಮುದ್ದಮ್ಮ, ಇನ್ನೂ ಅನೇಕರು. ಈ ಮಹಿಳಾ ನಾಯಕಿಯರು ಹೆಚ್ಚು ರಾಜಕೀಯ ಹಾಗೂ ಸಾಮಾಜಿಕ ಕ್ಷೇತ್ರಗಳಲ್ಲಿ ಸೇವೆಸಲ್ಲಿಸಿದ್ದರು. ಪುರುಷರನ್ನು ಸೆರೆಮನೆಯೊಳಗಿಟ್ಟಾಗ, ಈ ಮಹಿಳೆಯರು ಅವರ ಸ್ಥಾನಗಳಲ್ಲಿ ನಿಂತರು. ಹಾಗಾಗಿ ಸಮಾಜದ ಬೇರೆ ವಲಯದ ಸ್ತ್ರೀಯರು ಇದರಿಂದ ಪ್ರಭಾವಗೊಳ್ಳಲು ಅನುಕೂಲವಾಯಿತು. ಈ ನಾಯಕರ ಉದಾಹರಣೆಯನ್ನನುಸರಿಸಿ ಮಹಿಳಾ ಸ್ವಾತಂತ್ರ್ಯ ಹೋರಾಟಗಾರರು 'ಜೈಲು ಭರೋ' ಚಳವಳಿಯನ್ನು ಕೈಗೊಂಡು ತಾಯಿನಾಡಿಗೋಸ್ಕರ ತಮ್ಮ ಸರ್ವಸ್ವವನ್ನೂ ತೊರೆದು ಹೊರಟರು.

ಪ್ರತಿಯೊಬ್ಬ ಮಹಿಳಾ ನಾಯಕರ ಹಿಂದೆ ಒಬ್ಬ ಪುರುಷ ಇದ್ದನೆಂಬುದನ್ನು ನಾವು ನೆನೆಯಬೇಕು. ಮುಂದೆ ರಾಷ್ಟ್ರನಾಯಕರಾಗಿ ಬೆಳೆದ ಈ ಮಹಿಳಾ ಹೋರಾಟಗಾರರು ಬಾಲ್ಯದಲ್ಲೇ ರಾಜಕೀಯ ತರಬೇತು ಪಡೆದವರು. ತರುವಾಯದಲ್ಲಿ ಅವರಲ್ಲಿ ಅನೇಕರು ಬದ್ಧ ರಾಷ್ಟ್ರಸೇವಕರಾದ ಪುರುಷರ ಕೈಹಿಡಿದದ್ದು ಅವರ ದೇಶ ಸೇವೆಯ ಮುಂದುವರಿಕೆಗೆ ಅನುಕೂಲವಾಯಿತು. ಅವರಲ್ಲನೇಕರಿಗೆ ತಮ್ಮ ತಂದೆ ಮತ್ತು ಪತಿಯ ಸಹಕಾರ ಲಭಿಸಿದರೆ ಉಮಾಬಾಯಿ ಕುಂದಾಪುರ ಅವರಂಥ ನಾಯಕರಿಗೆ ಮಾವನ ಪ್ರೋತ್ಸಾಹ ದೊರಕಿತು. ರಾಷ್ಟ್ರದ ಉದ್ದೇಶಗಳಿಗಾಗಿ ಪುರುಷರು ಈ ಮಹಿಳೆಯರ ಪ್ರತಿಭೆ ಹಾಗೂ ಸಾಮರ್ಥ್ಯವನ್ನು ಉಪಯೋಗಿಸಿಕೊಂಡರು.

ಮಹಿಳೆಯರು ಪೂರ್ವಸೂಚನೆಯಿಲ್ಲದೇ ನಾಯಕರಾಗಿ ಗೋಚರವಾದದ್ದರಿಂದ ಬ್ರಿಟಿಷರಿಗೆ ದಿಗಿಲಾಯಿತು. ಮಹಿಳೆಯರು ಚಳವಳಿಯನ್ನು ಪ್ರವೇಶಿಸಿದ ಸಂದರ್ಭದಲ್ಲಿ ಅವರ ವಿರುದ್ಧ ಎಲ್ಲ ರೀತಿಯ ಕ್ರಮವನ್ನು ಕೈಗೊಳ್ಳಲು ಆಳುವವರು ಹಿಂದೇಟು ಹೊಡೆದರಾದರೂ, ಮಹಿಳೆಯರ ಧೈರ್ಯ, ಸ್ಥೈರ್ಯ ಮತ್ತು ದೃಢ ನಿರ್ಧಾರವನ್ನು ಗಮನಿಸಿ ದಮನಕಾರಿ ನೀತಿಯನ್ನು ಅನುಸರಿಸಿದುದು ತಿಳಿಯುತ್ತದೆ. ಪೋಲೀಸಿನವರ ದುಷ್ಟಶಕ್ತಿಯನ್ನು ಅವರು ತಾಳಿಕೊಂಡರು. ಅವರ ಮೇಲೆ ಎಸಗಿದ ದೈಹಿಕ ಅತ್ಯಾಚಾರದ ಪ್ರಮಾಣ ಎಷ್ಟಿತ್ತೆಂದರೆ ಅವರಲ್ಲನೇಕರು ಅದಕ್ಕೆ ಬಲಿಯಾದರೂ ಕೂಡ. ಅವಾಚ್ಯವಾದ ಬೈಗುಳಗಳನ್ನು ಧೈರ್ಯವಾಗಿ ಮಹಿಳೆಯರು ಸಹಿಸಿದ ಬಗೆ ಅಸದೃಶವಾದುದು.

೧೯೩೦ರ ದಶಕದ ಕಾನೂನು ಭಂಗ ಚಳವಳಿಯು ಪ್ರಾರಂಭವಾದ ಸಂದರ್ಭದಲ್ಲಿಯೇ ಮಹಿಳೆಯರು ಸಂಘಟನೆಯಿಂದ ಹೆಚ್ಚು ಕ್ರಿಯಾಶೀಲವಾದದ್ದನ್ನು ನಾವು ಕಾಣುತ್ತೇವೆ. ಅಸಹಕಾರ ಚಳವಳಿಯು ಪ್ರೆಸಿಡೆನ್ಸಿಗಳಲ್ಲಿ ಉತ್ತಮವಾದ ಪ್ರತಿಕ್ರಿಯೆಯನ್ನು ಕಂಡಿತ್ತಾದರೂ ಮೈಸೂರು ಸಂಸ್ಥಾನದಲ್ಲಿ ಅದರ ಪ್ರಭಾವ ಅಷ್ಟಾಗಿ ಇರಲಿಲ್ಲ.

ಕರ್ನಾಟಕದಲ್ಲಿ ಕರನಿರಾಕರಣ ಆಂದೋಲನ ಪ್ರಾರಂಭವಾದಾಗ ಅಪಾರ ಸಂಖ್ಯೆಯ ಜನರು, ಸ್ತ್ರೀಯರೂ ಸೇರಿ, ಅದನ್ನು ಬೆಂಬಲಿಸಿ ಕಾರ್ಯಪ್ರವೃತ್ತರಾದರು. ಈ ಬೃಹತ್ ಹೋರಾಟದಲ್ಲಿ ಉತ್ತರ ಕನ್ನಡದ ರೈತರು ಹಿಂದೇಟು ಹೊಡೆಯದೆ ಮುಂದೆ ಬಂದು ಆಂದೋಲನದಲ್ಲಿ ಭಾಗವಹಿಸಿದರು. ಧಾರವಾಡ ಜಿಲ್ಲೆಯ ಹಿರೇಕೆರೂರು, ಕಾರವಾರ ಜಿಲ್ಲೆಯ ಅಂಕೋಲ, ಸಿರ್ಸಿ ಹಾಗೂ ಸಿದ್ದಾಪುರ ತಾಲೂಕುಗಳಲ್ಲಿ ಪ್ರಾರಂಭವಾದ ಕರನಿರಾಕರಣ ಆಂದೋಲನವು ರೈತರನ್ನು ಆ ವೇಳೆಗಾಗಲೇ ಅತಿ ಗರೀಬರ ಸ್ಥಿತಿಗೆ ಇಳಿಸಿದ್ದ ಕಂದಾಯದ ವಿರುದ್ಧ ಪ್ರತಿಭಟಿಸಲು ಹುಟ್ಟಿಕೊಂಡ ಆಂದೋಲನವಾಗಿತ್ತು.[೫] ಕಂದಾಯವನ್ನು ಕೊಡಲು ರೈತರು ನಿರಾಕರಿಸಿದ್ದನ್ನು ಆಗಿನ ಸರ್ಕಾರ ಹೇಯವಾದ ಕೃತ್ಯವೆಂದು ಪರಿಗಣಿಸಿತ್ತು. ಗ್ರಾಮಗಳ ಪುರುಷರನ್ನು ದಸ್ತಗಿರಿ ಮಾಡಲಾಯಿತು. ಆಸ್ತಿಪಾಸ್ತಿಯನ್ನು ವಶಪಡಿಸಿಕೊಂಡು ಕುಟುಂಬಗಳನ್ನು ಬಲವಂತವಾಗಿ ಹೊರದೂಡಿದಾಗ ಗ್ರಾಮಾಂತರ ಪ್ರದೇಶದ ಜನರು ವಸತಿಹೀನರಾದರು. ಸಾಮಾನ್ಯರಾದ, ತಿಳಿವಳಿಕೆಯಿಲ್ಲದ ಗ್ರಾಮೀಣ ಪ್ರದೇಶದ ಮಹಿಳೆಯರು ಆ ಸನ್ನಿವೇಶದಲ್ಲಿ ಪೋಲೀಸಿನವರ ದೌರ್ಜನ್ಯವನ್ನು ತಾಳಲಾರದೆ ಕಾನೂನು ಭಂಗ ಚಳುವಳಿಯನ್ನು ಪ್ರಾರಂಭಿಸಿದರು. ಬಲವಂತವಾಗಿ ಸರ್ಕಾರ ವಶಪಡಿಸಿಕೊಂಡಿದ್ದ ತಮ್ಮ ಮನೆಗಳನ್ನು ಪ್ರವೇಶಿಸಲು ಅವರು ಪ್ರಯತ್ನಿಸಿದರು. ಗರ್ಭಿಣಿಯರು ಹಾಗೂ ಬಾಣಂತಿ ಹೆಂಗಸಾದಿಯಾಗಿ ಪೋಲೀಸಿನವರ ಕ್ರೌರ್ಯಕ್ಕೆ ಹೆದರದೆ ಮುನ್ನುಗ್ಗಿದರು.

ವಶಪಡಿಸಿಕೊಂಡ ಆಸ್ತಿಪಾಸ್ತಿಯನ್ನು ಹರಾಜು ಹಾಕುವಂಥ ಅನೇಕ ಸಂದರ್ಭಗಳಲ್ಲಿ ಮಹಿಳಾ ಸತ್ಯಾಗ್ರಹಿಗಳು ತಡೆದ ಉದಾಹರಣೆಗಳಿವೆ. ಹರಾಜಾದ ವಸ್ತುಗಳನ್ನು ಮತ್ತೆ ಪಡೆಯುವ ಪ್ರಯತ್ನದಲ್ಲಿ ಮಹಿಳಾ ಸತ್ಯಾಗ್ರಹಿಗಳು ವಸ್ತುಗಳನ್ನು ಕೊಂಡುಕೊಂಡವರ ಮನೆಗಳ ಮುಂದೆ ಉಪವಾಸ ಕುಳಿತದ್ದಿದೆ. ಶಿವಮೊಗ್ಗ ಜಿಲ್ಲೆಯ ಹೆಚ್ಚೆ ಎಂಬಲ್ಲಿ ಹೀಗೆ ಸತ್ಯಾಗ್ರಹ ಮಾಡಲಾಯಿತು. ಗೌರಮ್ಮ, ಕಾವೇರಮ್ಮ, ಲಕ್ಷಮ್ಮ ಮತ್ತು ಇತ್ಯಾದಿಯವರ ಸಂಘಟನಾ ಸಾಮರ್ಥ್ಯ ಮೆಚ್ಚುವಂಥದು. ಈ ಮಹಿಳಾ ನಾಯಕರು ದುಗ್ಗಮ್ಮ ಮತ್ತು ಭಾಗೀರಥಮ್ಮನವರೊಡಗೂಡಿ ಅಕ್ಕುಂಜಿಯಲ್ಲಿ ಸತ್ಯಾಗ್ರಹ ನಡೆಸಿದರು. ಸತ್ಯಾಗ್ರಹಿಗಳು ತಮ್ಮ ಹೋರಾಟವನ್ನು ಇನ್ನೂ ದೃಢಗೊಳಿಸಬೇಕೆಂದು ತಿಗಣೆ ಸತ್ಯಾಗ್ರಹದಲ್ಲಿ ಸುಬ್ಬಮ್ಮ ಜೋಯಿಸ್ ಅವರು ಅವರಿಗೆ ಮನವರಿಕೆ ಮಾಡಿಕೊಟ್ಟರು.

ಮೂಲತಃ ಹರಾಜಿನಲ್ಲಿ ಚರಾಸ್ತಿಯನ್ನು, ಎಮ್ಮೆಗಳೂ ಸೇರಿದಂತೆ ಕೊಂಡುಕೊಂಡ ಕಾರಣ ಈ ಸತ್ಯಾಗ್ರಹಗಳು ನಡೆದವು. ಅವಮಾನ, ನಿಂದನೆ ಹಾಗೂ ಅನೇಕ ಬಗೆಯ ಹಿಂಸೆಗೆ ಒಳಗಾದರೂ ಮಹಿಳೆಯರು ಅದಕ್ಕೆಲ್ಲಾ ಜಗ್ಗದೆ ಮುನ್ನುಗ್ಗಿದರು; ಅದರ ಫಲವಾಗಿ ಅನೇಕ ಮಹಿಳೆಯರು ಏಟು ತಿಂದು ಗಂಭೀರತರವಾಗಿ ಗಾಯಗೊಂಡರು. ಆದರೆ ತಮ್ಮ ಚಟುವಟಿಕೆಗಳನ್ನು ನಿಲ್ಲಿಸಲು ಮಾತ್ರ ಮಹಿಳೆಯರು ಒಪ್ಪಲಿಲ್ಲ. ಸೆರೆಮನೆಯಲ್ಲಿದ್ದ ಮಹಿಳೆಯರು ಇದೇ ರೀತಿಯ ಚಿತ್ರಹಿಂಸೆಗೆ ಒಳಗಾದರು. ಪತ್ರಿಕೆಗಳು ಸೆರೆಮನೆಯಲ್ಲಿದ್ದ ರಾಜಕೀಯ ಖೈದಿಗಳ ಹಿಂಸೆಯ ವಿರುದ್ಧ ದನಿಯೆತ್ತಿದವು.[೬]

ಕಾನೂನು ಭಂಗ ಚಳವಳಿ ಆರಂಭವಾದ ಸಂದರ್ಭದಲ್ಲಿ ದಕ್ಷಿಣ ಕನ್ನಡದಲ್ಲಿ ಹೆಚ್ಚು ಕ್ರಿಯಾಶೀಲತೆ ಕಂಡುಬರಲಿಲ್ಲ. ೧೯೩೧ನೇ ಇಸವಿಯಿಂದ ಜಿಲ್ಲೆಯಲ್ಲಿ ಹೆಚ್ಚಿನ ಚಟುವಟಿಕೆಗಳು ಹೆಚ್ಚು ಗೋಚರವಾದವು.

ಮಂಗಳೂರು, ಉಡುಪಿ, ಕುಂದಾಪುರ, ಕಾಸರಗೋಡು, ಪುತ್ತೂರು, ಕಾರ್ಕಳ ಹಾಗೂ ಬೆಳ್ತಂಗಡಿ ಇವು ಹೆಚ್ಚಿನ ರಾಜಕೀಯ ಚಟುವಟಿಕೆಗಳ ಕೇಂದ್ರವಾದವು. ಕಾನೂನು ಬಾಹಿರ ಉಪ್ಪಿನ ತಯಾರಿಕೆಯನ್ನು ನಿಷೇಧಿಸಲಾಯಿತು. ಮದ್ಯದಂಗಡಿಗಳ ಮುಂದೆ ಪಿಕೆಟಿಂಗ್ ಮಾಡುವುದನ್ನು ನಿಷೇಧಿಸಲಾಯಿತು. ಪಿಕೆಟಿಂಗ್‌ಗಳಲ್ಲಿ ಭಾಗವಹಿಸುವಂಥ ಮಹಿಳೆಯರು ಹಾಗೂ ಅವರ ಸಂಬಂಧೀಕರನ್ನು ಗಂಭೀರವಾದ ರೀತಿಯಲ್ಲಿ ಎಚ್ಚರಿಸಲಾಯಿತು.[೭] ಕೆಲವು ಪುರುಷರು ನಿಷ್ಕ್ರಿಯರಾದದ್ದನ್ನು ಗಮನಿಸಿದ ಮಹಿಳೆಯರು ಅವರಿಗೆ ಬಳೆಗಳನ್ನು ನೀಡಲು ಮುಂದಾದರು.

ಕರ್ನಾಟಕದ ಬಹುತೇಕ ಎಲ್ಲ ಕಡೆ ಚಳವಳಿ ಪ್ರಾರಂಭವಾದಾಗ ಮೈಸೂರಿನ ಮಹಿಳೆಯರು ಮುಂಚೂಣಿಯಲ್ಲಿ ಕಾಣಿಸಿಕೊಳ್ಳತೊಡಗಿದರು. ಕಮಲಾದೇವಿ ಚಟ್ಟೋಪಾಧ್ಯಾಯ ಹಾಗೂ ಕೃಷ್ಣಾಬಾಯಿ ಪಂಜೀಕರ್‌ರಂಥ ನಾಯಕರು ಕರ್ನಾಟಕದಾದ್ಯಂತ ಭಾಷಣ ಮಾಡಿ ಸ್ವಾತಂತ್ರ್ಯ ಹೋರಾಟಗಾರರನ್ನು ಕೂಡಿಕೊಳ್ಳುವಂತೆ ಜನರನ್ನು ಹುರಿದುಂಬಿಸಿದರು. ಸಕ್ರಿಯ ಸಮಾಜವಾದಿ ಕಾಂಗ್ರೆಸ್ಸಿಗರಾದ ಕಮಲಾ ದೇವಿಯವರು ರಾಜ್ಯದಲ್ಲಿ ಪ್ರವಾಸ ಮಾಡುವ ಕಾಲಕ್ಕೆ ಜನರಲ್ಲಿ ಸಮಾಜವಾದಿ ಚಿಂತನೆಗಳನ್ನು ತಿಳಿಸಿದರು.[೮] ಮೂಲತಃ ಕಮಲಾದೇವಿಯವರಿಂದಲೇ ಸಮಾಜವಾದಿ ಚಿಂತನೆಗಳು ಇಲ್ಲಿ ಬೀಜಾಂಕುರವಾದದ್ದು ಎನ್ನಬೇಕು. ರಾಜ್ಯದ ನಾನಾ ಭಾಗಗಳಲ್ಲಿ ಅವರು ಮಾಡಿದ ಪರಿಣಾಮಕಾರಿ ಭಾಷಣದ ಫಲವಾಗಿ ಅನೇಕರು ಅವರಿಂದ ಸ್ಫೂರ್ತಿ ಪಡೆದರು. ಬೆಂಗಳೂರು, ಮೈಸೂರು, ವಿರಾಜಪೇಟೆ ಮುಂತಾದ ಕಡೆಗಳಲ್ಲಿ ಅವರ ಭಾಷಣವನ್ನು ತಡೆಯುವಂತೆ ನಿಷೇಧಾಜ್ಞೆ ವಿಧಿಸಿದರು. ಆದರೆ ಇಂಥ ಕ್ರಮಕ್ಕೆ ಅಂಜುವ ಸ್ವಭಾವ ಅವರದಾಗಿರಲಿಲ್ಲ. ಅನೇಕರೊಡನೆ ಅವರು ಆ ಕಾಲದಲ್ಲಿ ನಡೆಸಿರುವ ಪತ್ರವ್ಯವಹಾರದಿಂದ ಸ್ಪಷ್ಟವಾಗುವಂತೆ ಕಮಲಾ ದೇವಿಯವರು ತಮ್ಮ ಅನುಯಾಯಿಗಳಿಗೆ ಸದಾ ದಾರಿದೀವಿಗೆಯಾಗಿದ್ದರು.

ಉಮಾಬಾಯಿ ಕುಂದಾಪುರ್ ಅವರೂ ಸಹ ರಾಜ್ಯಾದ್ಯಂತ ಪ್ರವಾಸ ಕೈಗೊಂಡರು. ಉಪ್ಪಿನ ಸತ್ಯಾಗ್ರಹದ ಸಂದರ್ಭದಲ್ಲಿ ಬೆಳಕಿಗೆ ಬಂದ ಕುಂದಾಪುರ್‌ರವರು ಮಹಿಳೆಯರು ರಾಜಕೀಯವಾಗಿ ಭಾಗವಹಿಸಬೇಕಾದ ಅಗತ್ಯವನ್ನು ಮನಗಂಡಿದ್ದರು. ಅಷ್ಟೇ ಅಲ್ಲ, ಜೊತೆಗೆ ಮಹಿಳೆಯರು ಸಾಮಾಜಿಕವಾಗಿ ಸೇವೆ ಸಲ್ಲಿಸಬೇಕಾದ ಅಗತ್ಯತೆಯನ್ನು ಅದರಲ್ಲೂ ವಿಶೇಷವಾಗಿ ಬಾಲಕಿಯರ ಶಿಕ್ಷಣದ ಬಗ್ಗೆ ಒತ್ತಿಹೇಳಿದರು.

ಮೈಸೂರಿನ ಮಹಿಳೆಯರು ೧೯೩೮ರ ಏಪ್ರಿಲ್‌ನಲ್ಲಿ ಶಿವಪುರದ ಧ್ವಜಸತ್ಯಾಗ್ರಹದ ಸಂದರ್ಭದಲ್ಲಿ ಮೊದಲನೇ ಬಾರಿಗೆ ತಮ್ಮ ಧೈರ್ಯವನ್ನು ಮೆರೆದರು. ಸಿದ್ಧಲಿಂಗಯ್ಯನವರ ಅಧ್ಯಕ್ಷತೆಯಲ್ಲಿ ಜರುಗಿದ ಕಾಂಗ್ರೆಸ್ ಸಭೆಯಲ್ಲಿ ಮದ್ದೂರಿನ ಶಿವಪುರ ಗ್ರಾಮದಲ್ಲಿ ಶಿಂಷಾ ನದಿಯ ದಂಡೆಯ ಮೇಲೆ ಮೈಸೂರು ಕಾಂಗ್ರೆಸ್ ಮೊದಲನೇ ಸಮಾವೇಶವನ್ನು ನಡೆಸಬೇಕೆಂದು ತೀರ್ಮಾನವಾಗಿತ್ತು. ನಾಯಕರು ಧ್ವಜಾರೋಹಣ ಹಾಗೂ ಧ್ವಜವಂದನಾ ಕಾರ್ಯಕ್ರಮಗಳನ್ನು ರೂಪಿಸಿದ್ದರು. ಕಾಂಗ್ರೆಸ್ ಧ್ವಜವನ್ನು ಹಾರಿಸುವುದರಿಂದ ಮೈಸೂರು ಮಹಾರಾಜರ ಪ್ರಭುತ್ವಕ್ಕೆ ಕುಂದು ಬರುವುದೆಂದು ಭಾವಿಸಿ ಮೈಸೂರು ಜಿಲ್ಲಾ ಮ್ಯಾಜಿಸ್ಟ್ರೇಟರು ಧ್ವಜಾರೋಹಣ ಕಾರ್ಯಕ್ರಮವನ್ನು ನಿಷೇಧಿಸಿದ್ದರು. ಇದಕ್ಕೆ ಸಂಬಂಧಿಸಿದ ಆದೇಶದ ಪ್ರತಿಯನ್ನು ಸುಮಾರು ಇಪ್ಪತ್ತೈದು ಮಂದಿ ಕಾಂಗ್ರೆಸ್ ನಾಯಕರಿಗೆ ತಲುಪಿಸಬೇಕೆಂದು ಆಜ್ಞೆಯಾಗಿತ್ತು.[೯]

ಶಿವಪುರದಲ್ಲಿ ಅಸಂಖ್ಯಾತ ಜನರು ಸೇರಿದರು. ಸುಮಾರು ಇಪ್ಪತ್ತರಿಂದ ಮುವ್ವತ್ತು ಸಾವಿರ ಜನರು ಸಮಾವೇಶದ ಸ್ಥಳದಲ್ಲಿ ಜಮಾಯಿಸಿದರು. ೧೯೩೮ರ ಏಪ್ರಿಲ್ ೧೧ರಂದು, ತಗಡೂರು ರಾಮಚಂದ್ರರಾವ್ ಅವರ ನೇತೃತ್ವದಲ್ಲಿ 'ದ ಮೈಸೂರ್ ಯೂತ್ ಲೀಗ್' ಸಮಾವೇಶ ನಡೆಯಿತು. ಮರುದಿನ ಧ್ವಜಾ

ರೋಹಣ ಕಾರ್ಯಕ್ರಮ ನಿಗದಿಯಾಗಿತ್ತು. ಸಿದ್ಧಲಿಂಗಯ್ಯನವರು ಧ್ವಜಾರೋಹಣ ಮಾಡಿದಾಗ ತಕ್ಷಣವೇ ಅವರನ್ನು ದಸ್ತಗಿರಿ ಮಾಡಲಾಯಿತು. ಎಚ್.ಸಿ.ದಾಸಪ್ಪನವರು ಅಧ್ಯಕ್ಷತೆ ಸ್ವೀಕರಿಸಿದರು. ನಂತರ ಕಾಂಗ್ರೆಸ್ಸಿನ ನಾಯಕರು ಭಾಷಣ ಮಾಡಿದರು. ಸುಬ್ಬಮ್ಮ ಜೋಯಿಸರೂ ಸಹ ಆ ಸಂದರ್ಭದಲ್ಲಿ ಮಾತನಾಡಿದರು. ಗಣ್ಯ ರಾಷ್ಟ್ರನಾಯಕರ ಸಂದೇಶಗಳನ್ನು ವಾಚನ ಮಾಡಲಾಯಿತು. ಆ ಸಂದೇಶಗಳಲ್ಲಿ ಕಮಲಾದೇವಿ ಚಟ್ಟೋಪಾಧ್ಯಾಯ ಹಾಗೂ ಉಮಾಬಾಯಿ ಕುಂದಾಪುರ್‌ರವರ ಸಂದೇಶಗಳೂ ಸೇರಿದ್ದವು. ತಮ್ಮ ಸಂದೇಶದಲ್ಲಿ ಕಮಲಾದೇವಿಯರು ಹೇಳಿದ್ದರು. 'ಯಾವುದೇ ಕಾರಣಕ್ಕೆ ಕೆಲಸಕ್ಕೆ ಬಾರದ ಚಟುವಟಿಕೆಗಳಲ್ಲಿ ತೊಡಗದೆ, ಸ್ವಾತಂತ್ರ್ಯಕ್ಕಾಗಿ ಅಖಿಲ ಭಾರತ ರಾಷ್ಟ್ರೀಯ ಹೋರಾಟದ ಒಂದು ಅವಿಭಾಜ್ಯ ಅಂಗವಾಗಿ ನೀವು ಇದ್ದೀರಿ ಎಂಬುದನ್ನು ಮರೆಯಬಾರದೆಂದು ನಿಮ್ಮನ್ನು ವಿಶೇಷವಾಗಿ' ಕೇಳಿಕೊಳ್ಳುತ್ತಿದ್ದೇನೆ'.[೧೦]

ಆಜ್ಞೆಯನ್ನು ಉಲ್ಲಂಘಿಸಿದ ಕಾರಣಕ್ಕೆ ಪುರುಷರನ್ನು ಒಬ್ಬೊಬ್ಬರನ್ನಾಗಿ ದಸ್ತಗಿರಿ ಮಾಡಿದ ಸಂದರ್ಭದಲ್ಲಿ ಮಹಿಳೆಯರು ಮುಂದೆ ಬಂದು ಅಭೂತಪೂರ್ವವಾದ ಧೈರ್ಯವನ್ನು ಮೆರೆದರು. ಯಶೋಧಮ್ಮ ದಾಸಪ್ಪ, ಸುಬ್ಬಮ್ಮ ಜೋಯಿಸ್, ಬಳ್ಳಾರಿ ಸಿದ್ದಮ್ಮ, ವೆಂಕಮ್ಮ, ಕಮಲಮ್ಮ, ಸಾವಿತ್ರಮ್ಮ ಮುಂತಾದ ಮಹಿಳಾ ನಾಯಕರ ಧೈರ್ಯ ಮತ್ತು ದೃಢತೆ ಮೆಚ್ಚುವಂಥವು. 'ರಾಷ್ಟ್ರಧ್ವಜವನ್ನು ರಕ್ಷಿಸುವಲ್ಲಿ ವೀರಸ್ವರ್ಗವನ್ನು ಸೇರಿ' ಎಂದು ತಾವು ಪುರುಷ ನಾಯಕರ ಜೊತೆಯಲ್ಲಿ ದಸ್ತಗಿರಿಯಾಗುವ ಹಿಂದಿನ ದಿನ ಬಳ್ಳಾರಿ ಸಿದ್ದಮ್ಮನವರು ಯುವಕರಿಗೆ ಕರೆ ನೀಡಿದ್ದರು. ಧ್ವಜರಕ್ಷಣೆಗೆ ಬಂದಿದ್ದ ಒಂದು ಸ್ವಯಂಸೇವಕ ತಂಡದ ನಾಯಕಿಯಾಗಿ ಟಿ.ಸುನಂದಮ್ಮನವರಿದ್ದರು. ಈ ಸಮಾವೇಶವು ಇನ್ನೂ ತೀವ್ರತರವಾದ ಚಟುವಟಿಕೆಗೆ ನಾಂದಿಯಾಯಿತು ಎನ್ನಬೇಕು.

ವಿದುರಾಶ್ವತ್ಥದ ದುರಂತದಲ್ಲಿ ಅಮಾಯಕರು ಬಲಿಪಶುಗಳಾದ ಕಾರಣ ಮೈಸೂರಿನ ಜನರು ಹೋರಾಟವನ್ನು ಮುಂದುವರಿಸಲು ಪ್ರೇರಣೆ ನೀಡಿತು. ಗೌರಮ್ಮ ಎಂಬ ಗರ್ಭಿಣಿ ಸ್ತ್ರೀಯನ್ನು ಕೊಂದ ಘಟನೆ ಹೃದಯವಿದ್ರಾವಕವಾದದ್ದಾಗಿತ್ತು.

ಆ ವೇಳೆಗೆ ಸತ್ಯಾಗ್ರಹವನ್ನು ನಡೆಸುವುದು ಹೆಚ್ಚು ರೂಢಿಗೆ ಬಂದು ಮಹಿಳೆಯರು ಪ್ರಧಾನಪಾತ್ರ ವಹಿಸತೊಡಗಿದ್ದರು. ಮೈಸೂರಿನ ದೊಡ್ಡಪೇಟೆಯ ಪೋಲೀಸು ಠಾಣೆಯೊಂದಕ್ಕೆ ವಿದೇಶೀಯರಾದ ಹ್ಯಾಮಿಲ್ಟನ್‌ನ ಹೆಸರು ನೀಡಿದ ಪ್ರಸಂಗವನ್ನು ವಿರೋಧಿಸಿ 'ಹ್ಯಾಮಿಲ್ಟನ್ ಬಿಲ್ಡಿಂಗ್ ಸತ್ಯಾಗ್ರಹ' ನಡೆಯಿತು. ಕ್ರೌರ್ಯಕ್ಕೆ ಇನ್ನೊಂದು ಹೆಸರಾಗಿದ್ದ ಆ ಪರಕೀಯ ಐಜಿಪಿಯ ಹೆಸರಿಡುವುದು ಸಹಜವಾಗಿಯೇ ದೇಶೀಯರ ವಿರೋಧವನ್ನು ಕೆರಳಿಸಿತ್ತು. ೧೯೩೯ರ ಫೆಬ್ರವರಿ ೧೫ನೇ ತಾರೀಖು ಸತ್ಯಾಗ್ರಹ ಪ್ರಾರಂಭವಾಯಿತು. ಯಶೋಧರಮ್ಮ ದಾಸಪ್ಪನವರು ಸತ್ಯಾಗ್ರಹವನ್ನು ಸಂಘಟಿಸಿದವರಲ್ಲೊಬ್ಬರು. ಟಿ.ಸುನಂದಮ್ಮನವರು ಭಾಗವಹಿಸಿದ ಪ್ರಮುಖರಲ್ಲೊಬ್ಬರು.

೧೯೩೯ರ ಏಪ್ರಿಲ್‌ನಲ್ಲಿ ಮೈಸೂರು ಕಾಂಗ್ರೆಸ್ಸಿನ ಎರಡನೇ ಸಮಾವೇಶ ವಿದುರಾಶ್ವತ್ಥದಲ್ಲಿ ಪ್ರಾರಂಭವಾಯಿತು. ಡಾ.ಪಟ್ಟಾಭಿ ಸೀತಾರಾಮಯ್ಯನವರು ಕೈಗಾರಿಕಾ ವಸ್ತುಪ್ರದರ್ಶನವನ್ನು ಉದ್ಘಾಟಿಸಿದರು. ಅಲ್ಲಿ ನಡೆಯಲ್ಲಿದ್ದ ಅಖಿಲ ಕರ್ನಾಟಕ ಸಮಾಜವಾದಿ ಸಮಾವೇಶದಲ್ಲಿ ಭಾಗವಹಿಸುವ ಸಲುವಾಗಿ ಕಮಲಾದೇವಿ ಚಟ್ಟೋಪಾಧ್ಯಾಯ ಅವರು ವಿದುರನಗರದಲ್ಲಿ ಬೀಡುಬಿಟ್ಟಿದ್ದರು. ಅವರು ಅಲ್ಲಿಗೆ ತಲುಪುತ್ತಿದ್ದಂತೆಯೇ ಸಮಾವೇಶದಲ್ಲಿ ಭಾಗವಹಿಸಿ ಭಾಷಣ ನೀಡಕೂಡದೆಂದು ಹೊರಡಿಸಿದ್ದ ಡೆಪ್ಯುಟಿ ಕಮೀಷನರ್‌ರವರ ಆದೇಶವನ್ನು ಅವರಿಗೆ ವಿತರಿಸಲಾಯಿತು. ತಮ್ಮ ಮೇಲೆ ಹೇರಲಾದ ಆ ಬಗೆಯ ನಿರ್ಬಂಧವನ್ನು ಧಿಕ್ಕರಿಸಿ ಶ್ರೀಮತಿ ಚಟ್ಟೋಪಾಧ್ಯಾಯ

ಅವರು ರೋಷಭರಿತವಾದ ತಮ್ಮ ಭಾಷಣದಲ್ಲಿ ಹೀಗೆ ಗುಡುಗಿದರು: 'ಧ್ವಜವನ್ನು ಗೌರವಿಸುವುದೆಂದರೆ ರಾಷ್ಟ್ರವನ್ನು ಗೌರವಿಸುವುದು ಮತ್ತು ರಾಷ್ಟ್ರವನ್ನು ಗೌರವಿಸುವುದೆಂದರೆ ಅದರ ರಕ್ಷಣೆಗಾಗಿ ಹೋರಾಡುವುದು ಅನಿವಾರ್ಯ'.[೧೧] ಅದೇ ದಿನ ಅವರು ಮೈಸೂರು ಕಾಂಗ್ರೆಸ್ ಸಮಾಜವಾದಿ ಸಮಾವೇಶದಲ್ಲಿ ಭಾಗವಹಿಸಿ ಮಾತನಾಡಿ ಅದರ ಗುರಿ ಮತ್ತು ಉದ್ದೇಶಗಳನ್ನು ವಿವರಿಸಿದರು.

ಯಶೋಧರಮ್ಮ ದಾಸಪ್ಪ ಹಾಗೂ ಅನ್ನಪೂರ್ಣ ತಿಮ್ಮರೆಡ್ಡಿಯವರು ಹಿದುರನಗರದಲ್ಲಿ ಮಹಿಳಾ ಸಮಾವೇಶವನ್ನು ಉದ್ದೇಶಿಸಿ ಮಾತನಾಡಿ ಸ್ವಾತಂತ್ರ್ಯಕ್ಕೆ ಹೋರಾಡುವುದನ್ನು ಮುಂದುವರಿಸಬೇಕೆಂದು ತಿಳಿಸಿದರಲ್ಲದೆ ರಾಜ್ಯದಲ್ಲಿ ಜವಾಬ್ದಾರಿ ಸರ್ಕಾರದ ಸ್ಥಾಪನೆಯ ಅಗತ್ಯತೆಯನ್ನು ವಿವರಿಸಿದರು.

ಅರಣ್ಯ ಸತ್ಯಾಗ್ರಹಗಳನ್ನು ಗಮನಿಸುವಾಗ ಹೆಚ್ಚಿನ ಸಂಖ್ಯೆಯಲ್ಲಿ ಸತ್ಯಾಗ್ರಹಗಳಲ್ಲಿ ಭಾಗವಹಿಸುವ ಪ್ರಕ್ರಿಯೆಯನ್ನು ಮಹಿಳೆಯರು ಮುಂದುವರಿಸಿರುವುದು ತಿಳಿಯುತ್ತದೆ. ಚಿತ್ರದುರ್ಗ ಜಿಲ್ಲೆಯಲ್ಲಿ ಈಚಲ ಮರಗಳನ್ನು ಕಡಿಯುವ ಕಾರ್ಯ ನಡೆಯಿತು. ೧೯೪೧ರ ಸೆಪ್ಟೆಂಬರ್ ೧೮ರಂದು ತುರುವನೂರು ಸತ್ಯಾಗ್ರಹ ಪ್ರಾರಂಭವಾಯಿತು. ಬಳ್ಳಾರಿ ಸಿದ್ದಮ್ಮ ಹಾಗೂ ನಾಗರತ್ನಮ್ಮ ಹಿರೇಮಠ್ ಸತ್ಯಾಗ್ರಹವನ್ನು ಸಂಘಟಿಸುವುದರಲ್ಲಿ ತೊಡಗಿದರು. ಈ ಸತ್ಯಾಗ್ರಹದಲ್ಲಿ ಮಹಿಳೆಯರು ವಹಿಸಿದ ಪಾತ್ರವು ಪುರುಷರ ಪಾತ್ರದಷ್ಟೇ ಪ್ರಧಾನವಾಗಿದ್ದದ್ದು ಗಮನಾರ್ಹ; ಈಚಲಮರಗಳನ್ನು ಕಡಿಯುವುದರಲ್ಲಿ ಅವರು ಬಹಳ ಶ್ರಮವಹಿಸಿದರು. ಜಿಲ್ಲೆಯಲ್ಲಿ ಸುಮಾರು ೫೦೦೦ ಮರಗಳನ್ನು ಕಡಿಯಲಾಯಿತು. ಸತ್ಯಾಗ್ರಹಿಗಳ ದಸ್ತಗಿರಿ ಪ್ರಾರಂಭವಾಯಿತು; ದಸ್ತಗಿರಿಯಾದವರ ಪೈಕಿ ಬಳ್ಳಾರಿ ಸಿದ್ದಮ್ಮ ಒಬ್ಬರು. ಆ ನಂತರ ಚಳವಳಿಯು ದಾವಣಗೆರೆ, ತುಮಕೂರು ಹಾಗೂ ಸಿರಾ ತಾಲ್ಲೂಕುಗಳಿಗೆ ಹರಡಿತು.

ಕ್ವಿಟ್ ಇಂಡಿಯಾ ಚಳವಳಿಯಲ್ಲಿಯೂ ಮಹಿಳೆಯರು ಪುರುಷರಷ್ಟೇ ಪ್ರಧಾನ ಭೂಮಿಕೆಯನ್ನು ನಿರ್ವಹಿಸಿದರು. ಸ್ವಾತಂತ್ರ್ಯ ಚಳವಳಿಯ ಕಡೆಯ ಘಟ್ಟವನ್ನು ಈ ಚಳವಳಿಯು ಸೂಚಿಸುತ್ತದೆ. ಇಡೀ ರಾಷ್ಟ್ರದಲ್ಲಿ ವ್ಯಾಪಕವಾದ ರೀತಿಯಲ್ಲಿ ಚಳವಳಿಗಳು ಹಾಗೂ ಗಲಭೆಗಳು ಕಂಡುಬಂದವು. ಕ್ವಿಟ್ ಇಂಡಿಯಾ ಚಳವಳಿಗೆ ಕರೆ ಕೊಡುತ್ತಿದ್ದಂತೆಯೇ ಪ್ರಮುಖ ರಾಷ್ಟ್ರವಾದಿಗಳ ದಸ್ತಗಿರಿಯಾಯಿತು. ಮಹಾತ್ಮ ಗಾಂಧಿಯವರ ದಸ್ತಗಿರಿಯ ಸುದ್ದಿ ಪ್ರಸಾರವಾದ ಕೂಡಲೇ ಚಟುವಟಿಕೆ ಬಿರುಸಾಯಿತು. ಚಳವಳಿ ಸ್ವಲ್ಪ ಉಗ್ರ ರೂಪ ತಾಳಿ ಹಿಂಸೆಗೆ ತಿರುಗಿತು. ವಿದ್ಯಾರ್ಥಿಗಳು ಶಿಕ್ಷಣ ಸಂಸ್ಥೆಗಳಿಂದ ಹೊರಗೆ ಉಳಿದರು. ಎಲ್ಲಕಡೆ ಪ್ರದರ್ಶನಗಳಾದವು ಮತ್ತು ಪ್ರಭಾತ್‌ಫೇರಿಗಳು ಸರ್ವೇಸಾಮಾನ್ಯ ದೃಶ್ಯವಾಯಿತು. ಅಂಥ ಗಲಭೆಗಳಿಂದ ಪರಿಸ್ಥಿತಿ ಅಸ್ತವ್ಯಸ್ತವಾದಾಗ ನಡೆದ ಗೋಲಿಬಾರಿನಲ್ಲಿ ಅನೇಕರ ಪ್ರಾಣ ಹಾನಿಯಾಯಿತು. ಕರ್ನಾಟಕ ಪ್ರಾಂತ್ಯದಲ್ಲಿ ಎಲ್ಲ ಕಡೆ ಈ ಬಗೆಯ ಗಲಭೆ ಗೋಚರವಾಯಿತು. ದೂರವಾಣಿ ಹಾಗೂ ತಾರು ತಂತಿಗಳನ್ನು ಕತ್ತರಿಸುವುದು, ರೈಲ್ವೆ ಹಳಿಯ ನಾಶ ಇತ್ಯಾದಿ ಚಟುವಟಿಕೆಗಳು ವ್ಯಾಪಾಕವಾಗಿ ನಡೆದವು. ರೈಲ್ವೆ ನಿಲ್ದಾಣಗಳ ಮೇಲೆ ಆಕ್ರಮಣ ಮಾಡಿ ದಾಖಲುಗಳನ್ನು ಭಸ್ಮ ಮಾಡಲಾಯಿತು. ಎಲ್ಲ ಕಡೆ ಈ ಕ್ರಿಯೆಗಳನ್ನು ತುಂಬಾ ಆಕ್ರಮಣಕಾರೀ ರೀತಿಯಲ್ಲಿ ನಡೆಸಲಾಯಿತು.

'ಮಾಡು ಇಲ್ಲವೇ ಮಡಿ' ಘೋಷಣೆಯಿಂದ ಸ್ಫೂರ್ತಿಗೊಂಡ ಮಹಿಳೆಯರು ಚಳವಳಿಯಲ್ಲಿ ತಂತಾನೆ ಧುಮುಕಿದರು. ಅನೇಕ ಜನ ವಿದ್ಯಾರ್ಥಿನಿಯರು ಇದರಲ್ಲಿ ಪಾಲ್ಗೊಂಡರು. ತರಗತಿಗಳನ್ನು ಬಹಿಷ್ಕರಿಸಿ ಲಾಠಿ ಪ್ರಹಾರ ಹಾಗೂ ದಸ್ತಗಿರಿಗೆ ಹೆದರದೆ ಮುನ್ನುಗ್ಗಿದರು. ಭೂಗತರಾಗಿದ್ದ ಅನೇಕರಿಗೆ ಸಹಾಯ

ಮಾಡಲು ಮಹಿಳೆಯರು ಹಿಂದೇಟು ಹೊಡೆಯಲಿಲ್ಲ. ತಮ್ಮ ಬೇರೆ ಬೇರೆ ಚಟುವಟಿಕೆಗಳಿಗಾಗಿ ದಸ್ತಗಿರಿಯಾದವರಲ್ಲಿ ಬಳ್ಳಾರಿ ಸಿದ್ದಮ್ಮನವರು ಒಬ್ಬರು. ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿದ್ದ ಕೃಷ್ಣಾಬಾಯಿ ಪಂಜೀಕರ್‌ರವರು ಒಂದು ವರ್ಷದ ಸೆರೆವಾಸದ ಶಿಕ್ಷೆಗೆ ಗುರಿಯಾದರು. ತಮ್ಮ ವಿದೇಶಿಯಾತ್ರೆಯಿಂದ ಮರಳಿ ಬಂದ ಬಳಿಕ ಕಮಲಾದೇವಿ ಚಟ್ಟೋಪಾಧ್ಯಾಯರೂ ಸಹ ತುಂಬಾ ಶ್ಲಾಘ್ಯವಾದ ಕರ್ತವ್ಯದಲ್ಲಿ ತೊಡಗಿದರು.

ಈ ಹೋರಾಟದಲ್ಲಿ ಮಹಿಳೆಯರು ಅಗಾಧವಾದ ರೀತಿಯ ಕ್ರೌರ್ಯ ಮತ್ತು ದಮನಕ್ಕೆ ಈಡಾದರು. ಮೈಸೂರು ರಾಜ್ಯದಲ್ಲಿ ಕೂಡ ದಮನ ಕಾರ್ಯ ಹೆಚ್ಚು ಉತ್ಕಟವಾಯಿತು. ಬೆಂಗಳೂರು ಹಾಗೂ ಮೈಸೂರು ನಗರಗಳು ಚಟುವಟಿಕೆಯ ಪ್ರಧಾನ ಕೇಂದ್ರಗಳಾಗಿದ್ದವು. ಬೆಂಗಳೂರು ನಗರದಲ್ಲಿ ಪೇಟೆ ಹಾಗೂ ದಂಡು ಪ್ರದೇಶ ಎರಡು ಕಡೆಯೂ ಗಲಭೆಗಳು ಪ್ರಾರಂಭವಾದವು. ವಿದ್ಯಾರ್ಥಿನಿಯರ ಚಳವಳಿಯ ಕೇಂದ್ರವಾಗಿಯೂ ಬೆಂಗಳೂರು ನಗರ ಕಾಣಿಸಿಕೊಂಡಿತು.

ಇತರ ಜಿಲ್ಲೆಗಳಿಗೂ ಗಲಭೆ ಹರಡಿತು. ಚಳವಳಿಯು ತೀವ್ರವಾಗತೊಡಗಿದಾಗ ಆಳುವವರಿಗೆ ಅದನ್ನು ತಡೆಯುವುದು ಕಷ್ಟವಾಯಿತು. ಕ್ವಿಟ್ ಇಂಡಿಯಾ ಚಳವಳಿಯ ಸಂದರ್ಭದಲ್ಲಿ ಎದ್ದು ಕಾಣುವ ಘಟನೆಗಳಲ್ಲಿ ದಾವಣಗೆರೆ, ಶ್ರವಣಬೆಳಗೊಳ ಹಾಗೂ ಈಸೂರುಗಳಲ್ಲಿ ನಡೆದ ಘಟನೆಗಳು ಗಮನಾರ್ಹವಾಗಿವೆ. ಆದರೆ ಎಲ್ಲಕ್ಕಿಂತ ಹೆಚ್ಚು ಹಿಂಸಾತ್ಮಕವಾಗಿ ಪರಿಣಮಿಸಿದ್ದು ಶಿವಮೊಗ್ಗ ಜಿಲ್ಲೆಯ ಈಸೂರಿನಲ್ಲಿ ನಡೆದ ಚಳವಳಿ. ಚಳವಳಿ ಶಾಂತಯುತವಾಗಿಯೇ ಪ್ರಾರಂಭವಾಯಿತು. ವಿದ್ಯಾರ್ಥಿಗಳು ಹಾಗೂ ಚಿಕ್ಕಮಕ್ಕಳು ಗಾಂಧಿ ಟೋಪಿ ಹಾಗೂ ಖಾದಿ ಉಡುಗೆಯನ್ನು ತೊಟ್ಟು ರಾಷ್ಟ್ರಧ್ವಜವನ್ನು ಹಿಡಿದು ನಡೆದಿದ್ದರು. ಅಮಲ್ದಾರರು ಭೇಟಿ ಕೊಡಬೇಕಾಗಿದ್ದ ದಿನ ಚಳವಳಿ ಹಿಂಸೆ ರೂಪ ತಾಳಿತು. ಅವರು ಹಾಗೂ ಪೋಲೀಸು ಉಪ-ನಿರೀಕ್ಷಕರು ರಾಜೀನಾಮೆ ನೀಡಬೇಕೆಂದು ಜನರು ಆಗ್ರಹಪಡಿಸಿದರು. ಗ್ರಾಮದ ಪ್ರವೇಶದ್ವಾರದಲ್ಲಿ 'ಸ್ವತಂತ್ರ ಹಳ್ಳಿ' ಎಂಬ ನಾಮಫಲಕವನ್ನು ಹಾಕಿದ್ದರು.[೨] ತಮ್ಮ ಟೋಪಿಗಳನ್ನು ತೆಗೆದು ಗಾಂಧಿ ಟೋಪಿಯನ್ನು ಧರಿಸುವಂತೆ ಅಧಿಕಾರಿಗಳಿಗೆ ತಿಳಿಸಲಾಯಿತು. ಕುಪಿತರಾದ ಅಧಿಕಾರಿಗಳು ಜನಸ್ತೋಮದ ಮೇಲೆ ಗುಂಡು ಹಾರಿಸಲು ಆದೇಶಿಸಿದರು. ತತ್‌ಕ್ಷಣವೇ ಈಸೂರಿಗೆ ಪೋಲೀಸು ಮತ್ತು ಸೈನ್ಯವನ್ನು ಕಳುಹಿಸಲು ಏರ್ಪಾಟಾಯಿತು. ಇದರಿಂದ ತಪ್ಪಿಸಿಕೊಳ್ಳಲು ಜನರು ಕಾಡುಗಳಿಗೆ ಓಡಿದರು. ಗಸ್ತು ತಿರುಗುವ ತಂಡದವರು ಜನರನ್ನು ಹಿಡಿದು ಚಿತ್ರಹಿಂಸೆ ಕೊಟ್ಟರು. ಹೆಂಗಸರು ಮತ್ತು ಮಕ್ಕಳನ್ನೂ ಬಿಡಲಿಲ್ಲ. ಮನೆಗಳನ್ನು ಲೂಟಿ ಮಾಡಿ ಅಪ್ರಾಪ್ತ ವಯಸ್ಸಿನ ಹೆಣ್ಣು ಮಕ್ಕಳ ಅತ್ಯಾಚಾರವಾಯಿತು. ಈ ಕ್ರೌರ್ಯದೊಂದಿಗೆ ಅನೇಕರ ದಸ್ತಗಿರಿಯಾಯಿತು. ಜೀವಾವಧಿ ಶಿಕ್ಷೆಯನ್ನು ವಿಧಿಸಿದ ಸಂದರ್ಭದಲ್ಲಿ ಹದಿನಾಲ್ಕು ವರ್ಷ ವಯಸ್ಸಿನ ಹಾಲಮ್ಮ ಮತ್ತು ಪಾರ್ವತಮ್ಮ ಎಂಬ ಇಬ್ಬರು ಹೆಣ್ಣುಮಕ್ಕಳು ಮಾದರಿ ಸರ್ಕಾರದ ಕ್ರೌರ್ಯಕ್ಕೆ ಬಲಿಪಶುಗಳಾದರು.

ಕಾರ್ಮಿಕ ಚಳವಳಿಯಲ್ಲಿಯೂ ಕೂಡ ಮಹಿಳೆಯರು ಪುರುಷರಿಗೆ ಸರಿಸಾಟಿಯಾಗಿ ಹೋರಾಡಿದರು. ಬೆಂಗಳೂರಿನಲ್ಲಿ ದಿನಾಂಕ ೬-೯-೧೯೪೨ರಂದು ಕಾರ್ಮಿಕರು ಸಂಘಟಿಸಿದ ಮೆರವಣಿಗೆಯಲ್ಲಿ 'ಡಿಫೆನ್ಸ್ ಆಫ್ ಇಂಡಿಯಾ ರೂಲ್ಸ್' ಎಂಬ ಪ್ರತಿಮೆಯನ್ನಿಟ್ಟ ಶವಪೆಟ್ಟಿಗೆಯನ್ನು ಹೊತ್ತವರಲ್ಲಿ ಭಾಗೀರತಮ್ಮ ಜಂಗಲಾರಾಧ್ಯರು ಒಬ್ಬರಾಗಿದ್ದರು. ಅವರನ್ನು ದಸ್ತಗಿರಿ ಮಾಡಿ ಶಿಕ್ಷೆಗೆ ಗುರಿಪಡಿಸಲಾಯಿತು. ಕಾರ್ಮಿಕರ ಮುಷ್ಕರಗಳಲ್ಲಿ ಭಾಗವಹಿಸಿದ್ದ ಬಾಲಕಿಯರು ಪೋಲೀಸರ ದಮನಕ್ಕೆ ಬೆಚ್ಚಿದವರಾಗಿದ್ದರು.

ರಾಷ್ಟ್ರೀಯ ಹೋರಾಟದ ಎಲ್ಲ ಹಂತಗಳೂ ಹಾಗೂ ಅಂಗಗಳನ್ನು ಅಧ್ಯಯನ ಮಾಡುವಾಗ ಮಹಿಳೆಯರು ಹೊಂದಿದ್ದ ಧೈರ್ಯ, ಸಾಮರ್ಥ್ಯಗಳ ಅರಿವಾಗದೇ ಇರದು. ಶಾಂತವಾಗಿ, ನಾಚಿಕೆಯಿಂದ ಮುದುಡಿಕೊಳ್ಳುತ್ತಿದ್ದ ಭಾರತೀಯ ಮಹಿಳೆಯರನ್ನು ಗಾಂಧೀಜಿಯವರು ಪರಿವರ್ತಿಸಿ ಸ್ವಾತಂತ್ರ್ಯ ಚಳವಳಿಗೆ ತಕ್ಕನಾದ ಯೋಧರನ್ನಾಗಿಸಿದರು. ಪ್ರದರ್ಶನಗಳು, ಸತ್ಯಾಗ್ರಹ, ಮೆರವಣಿಗೆಗಳು, ಪಿಕೆಟಿಂಗ್ ಇತ್ಯಾದಿಗಳಲ್ಲಿ ಅವರು ತೋರಿದ ದೃಢತೆ ಮತ್ತು ಕೆಚ್ಚನ್ನು ಅರ್ಥಮಾಡಿಕೊಳ್ಳುವುದು ಅಷ್ಟು ಸುಲಭದ ಮಾತಾಗಿರಲಿಲ್ಲ. ವಿವೇಕರಹಿತ ಗೋಲಿಬಾರಿನಲ್ಲಿ ಎಷ್ಟೋ ಮಹಿಳೆಯರು ಪ್ರಾಣ ಕಳೆದುಕೊಂಡರು.

ಕ್ವಿಟ್ ಇಂಡಿಯಾ ಸಂದರ್ಭದ ಈಸೂರಿನ ದುರಂತವನ್ನು ನೆನೆದರೆ–ಭಾರತ ಸ್ವಾತಂತ್ರ್ಯ ಸಮರದಲ್ಲಿ ಎದ್ದು ಕಾಣುವ ಘಟನೆಗಳಲ್ಲಿ ಇದೂ ಒಂದು– ಮಹಿಳೆಯರು ಈ ಚಳವಳಿಯಲ್ಲಿ ಪುರುಷರಿಗೆ ಸರಿಸಮಾನವಾಗಿ ಹೋರಾಡಿದ್ದನ್ನು ಗಮನಿಸಬೇಕಾಗುತ್ತದೆ. ಯಾವುದೇ ಗಲಭೆಯಲ್ಲಿ ಕಂಡುಬರುವಂತೆ ಈ ಚಳವಳಿಯ ಸಂದರ್ಭದಲ್ಲಿಯೂ ಸಹ ಪೋಲೀಸು ಮತ್ತು ಮಿಲಿಟರಿಯ ಕ್ರೌರ್ಯಕ್ಕೆ ಬಲಿಯಾದವರೆಂದರೆ ಮಹಿಳೆಯರೇ. ಅಹಿಂಸಾತ್ಮಕವೂ, ಶಾಂತಿಯುತವೂ ಆದ ವಿಧಾನವನ್ನು ಮಹಿಳೆಯರು ಹೆಂಡ ಮತ್ತು ವಿದೇಶಿವಸ್ತು ಮಾರಾಟ ಮಾಡುವ ಅಂಗಡಿಗಳ ಪಿಕೆಟಿಂಗ್ ಸಂದರ್ಭದಲ್ಲಿ ಅನುಸರಿಸಿದ ಕಾರಣ ಗ್ರಾಹಕರು ಹಾಗೂ ಅಧಿಕಾರಿಗಳಿಗೆ ಏಕಕಾಲದಲ್ಲಿ ನುಂಗಲಾರದ ತುತ್ತಾದರು. ಭಾವನಾತ್ಮಕವಾಗಿ ಅವರು ತೊಡಗಿದ್ದರಿಂದ ಹೆಚ್ಚು ಜನರನ್ನು ಹೋರಾಟಕ್ಕೆ ಆಕರ್ಷಿಸಲು ಸಾಧ್ಯವಾಯಿತು. ಈ ಚಳವಳಿಯನ್ನು ಒಂದು ಜನಾಂದೋಲನವಾಗಿ ಮಾರ್ಪಡಿಸಿದ ಕೀರ್ತಿಯೂ ಮಹಿಳೆಯರಿಗೆ ಸಲ್ಲುತ್ತದೆ.

ತಮ್ಮ ಮನೆಮಠಗಳ ಬೆಚ್ಚನೆಯ ವಾಸವನ್ನು ಬದಿಗೊತ್ತಿ ಸೆರೆಮನೆಯಲ್ಲಿ ಇಲ್ಲವೇ ರಾಜಕೀಯ ಚಟುವಟಿಕೆಗಳನ್ನು ಸಂಘಟಿಸುವುದರಲ್ಲಿ ಮಹಿಳೆಯರು ಮಗ್ನರಾಗಿದ್ದರು. ಹಸುಗೂಸುಗಳನ್ನು, ವೃದ್ಧರು ಹಾಗೂ ಕಾಯಿಲೆ ವ್ಯಕ್ತಿಗಳನ್ನು ಮನೆಯಲ್ಲಿ ಬಿಟ್ಟು ಅವರು ದಸ್ತಗಿರಿಯಾಗಲು ಮುಂದೆ ಬಂದಿದ್ದರು. ಅವರಲ್ಲನೇಕರು ತಮ್ಮ ಕಂದಮ್ಮಗಳನ್ನು ಕಂಕುಳಲ್ಲಿ ಹೊತ್ತು ಸೆರೆಮನೆಗಳಿಗೆ ಹೋಗುವ ದೃಶ್ಯ ಸರ್ವೇಸಾಮಾನ್ಯವಾಗಿತ್ತು. ತಮ್ಮ ಗಂಡಂದಿರು ಹಾಗೂ ಬಂಧುಗಳನ್ನು ಕಳೆದುಕೊಂಡಿದ್ದ ಅನೇಕ ಮಹಿಳೆಯರು ಚಳವಳಿಗೆ ತಮ್ಮನ್ನು ಪುನರ್‌ಅರ್ಪಣ ಮಾಡಿಕೊಳ್ಳುವುದರ ಮೂಲಕ ಮಾತ್ರ ಸತ್ತವರಿಗೆ ಶಾಂತಿ ದೊರಕುವುದೆಂದು ಭಾವಿಸಿದ್ದರು. ಈ ಚಳವಳಿಯನ್ನು ಯಶಸ್ಸುಗೊಳಿಸಿದ ಕೀರ್ತಿ ಮಹಿಳೆಯರ ಮೌನ ಜನಸ್ತೋಮಕ್ಕೆ ಸಲ್ಲುತ್ತದೆ. ಅವರ ತ್ಯಾಗದಿಂದ ಹೋರಾಟಕ್ಕೆ ಒಂದು ಆಧ್ಯಾತ್ಮಿಕವಾದ ಅರ್ಥ ಪ್ರಾಪ್ತಿಯಾಯಿತೆಂಬುದು ಉತ್ಪ್ರೇಕ್ಷೆಯ ಮಾತಲ್ಲ.

**ಡಾ. ಎಂ. ಜಮುನ**

## ಟಿಪ್ಪಣಿಗಳು

೧ ತೆಂಡೂಲ್ಕರ್ ಡಿ.ಜಿ.: ಮಹಾತ್ಮಾ ಲೈಫ್ ಆಫ್ ಮೋಹನದಾಸ್ ಕರಮ್‌ಚಂದ್ ಗಾಂಧಿ ೧೮೬೯–೧೯೨೦, ಸಂ. ೧, ದೆಹಲಿ, ೧೯೬೯, ಪು. ೧೩೩

೨ ಹರಿಜನ್, ೨ ಡಿಸೆಂಬರ್ ೧೯೩೯

೩ ಗಾಂಧಿ, ಎಂ.ಕೆ.: ವಿಮೆನ್ ಅಂಡ್ ಸೋಷಿಯಲ್ ಇಂಜಸ್ಟೀಸ್, ಅಹ್ಮದಾಬಾದ್, ೧೯೪೭, ಪು. ೧೭೫

೪ ಚಟ್ಟೋಪಾಧ್ಯಾಯ ಕಮಲಾದೇವಿ: ಇನ್ನರ್ ರಿಸೆಸಸ್ ಔಟರ್ ಸ್ಪೇಸಸ್. ಮೆಮೈರ್ಸ್, ನವದೆಹಲಿ, ೧೯೮೬, ಪು. ೧೫೦

೫ ವಿವರಗಳಿಗಾಗಿ ನೋಡಿ. ಕಾಮತ್, ಎಸ್.ಯು(ಸಂ): ಡಾಕ್ಯುಮೆಂಟ್ಸ್ ಆನ್ ನೋ ಟ್ಯಾಕ್ಸ್ ಕ್ಯಾಂಪೇಯ್ನ್ ಇನ್ ಉತ್ತರ ಕನ್ನಡ, ೧೯೩೦-೩೪

೬ ಸ್ವದೇಶಾಭಿಮಾನಿ, ಮಂಗಳೂರು, ೨೬ ಡಿಸೆಂಬರ್ ೧೯೩೦

೭ ಸೌತ್ ಕೆನರಾ ಡಿಸ್ಟ್ರಿಕ್ ಡಿ.ಎಸ್.ಪಿ.ಯವರ ಟಿಪ್ಪಣಿ. ದ ಸಿವಿಲ್ ಡಿಸೋಬೀಡಿಯಸ್ ಮೂವ್‌ಮೆಂಟ್. ೧೯೩೦-೩೧

೮ ಸೀಕ್ರೆಟ್, ಸ್ಪೆಷಲ್ ಬ್ರ್ಯಾಂಚ್ ಆಬ್‌ಸ್ಟ್ರ್ಯಾಕ್ಟ್. ೧೫/೩೯, ೨೨ ಏಪ್ರಿಲ್ ೧೯೩೯ ಕಾಂಗ್ರೆಸ್ ಕನ್ವೆನ್ಷನ್ ವಿಧುರಾಶ್ವತ್ಥ, ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯರ ಮೇಲಿನ ಟಿಪ್ಪಣಿ.

೯ ಕಾಂಗ್ರೆಸ್ ಕನ್ವೆನ್ಷನ್, ಶಿವಪುರ ೧೯೩೮, ಇನ್ ದಿ ಕೋರ್ಟ್ ಆಫ್ ದಿ ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟ್, ಮೈಸೂರು ಡಿಸ್ಟ್ರಿಕ್ಟ್, ದಿನಾಂಕ: ೯ ಏಪ್ರಿಲ್ ೧೯೩೮

೧೦ ಕಾಂಗ್ರೆಸ್ ಕನ್ವೆನ್ಷನ್, ಶಿವಪುರ ೧೯೩೮, ಇನ್ ದಿ ಕೋರ್ಟ್ ಆಫ್ ದಿ ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟ್, ಮೈಸೂರು ಡಿಸ್ಟ್ರಿಕ್ಟ್, ದಿನಾಂಕ: ೯ ಏಪ್ರಿಲ್ ೧೯೩೮. ಪು. ೨೯೬

೧೧ ಕಾಂಗ್ರೆಸ್ ಕನ್ವೆನ್ಷನ್, ವಿಧುರಾಶ್ವತ್ಥ.

೧೨ ಶ್ರೀ.ಕೆ. ಶ್ರೀನಿವಾಸಮೂರ್ತಿಯವರು ಪ್ರಕಟಿಸಿರುವ ಈಸೂರು ದುರಂತ, ಹುಬ್ಬಳ್ಳಿ, ೧೯೪೬, ಎಂಬ ಪುಸ್ತಿಕೆಯಲ್ಲಿ ಲಕ್ಷ್ಮೀದೇವಿ ಕಡಿದಾಳ್ ಅವರು.

## ಅಧ್ಯಾಯ : ಹನ್ನೆರಡು

# ಸ್ವಾತಂತ್ರ್ಯ ಚಳವಳಿಯಲ್ಲಿ ವಿದ್ಯಾರ್ಥಿಗಳು

ನಮ್ಮ ರಾಷ್ಟ್ರದ ಸ್ವಾತಂತ್ರ ಚಳವಳಿಯಲ್ಲಿ ವಿದ್ಯಾರ್ಥಿಗಳು ವಹಿಸಿದ್ದ ಪಾತ್ರದ ಮಹತ್ವವನ್ನು ಕಡೆಗಣಿಸಲಾಗಿದೆ. ವಿದ್ಯಾರ್ಥಿಗಳಲ್ಲಿ ರಾಜಕೀಯ ಪ್ರಜ್ಞೆ ಮೂಡಿದುದು ಸ್ವಾತಂತ್ರ್ಯ ಚಳವಳಿಯ ಒಂದು ಮುಖ್ಯವಾದ ಅಂಗವಾಗಿದೆ. ಈ ಚಳವಳಿಯಲ್ಲಿ ಅವರು ವಹಿಸಿದ ಪಾತ್ರವು ಗಣನೀಯವಲ್ಲವೆಂದು ಅಲಕ್ಷಿಸಿರುವುದು ವಿಷಾದದ ಸಂಗತಿಯಾಗಿದೆ. ಶಾಲಾ-ಕಾಲೇಜುಗಳ ಹೆಣ್ಣು ಮಕ್ಕಳು ಹಾಗೂ ಹುಡುಗರು ಅತ್ಯಂತ ಉತ್ಸಾಹದಿಂದ ರಾಷ್ಟ್ರದ ಕರೆಗೆ ಓಗೊಟ್ಟರು. ಅವರು ಅನೇಕ ಸಂಘ ಸಂಸ್ಥೆಗಳನ್ನು ಕಟ್ಟಿದರು. ವಿದ್ಯಾರ್ಥಿಗಳ ಭಾಗವಹಿಸುವಿಕೆ ಹಾಗೂ ರಾಜಕೀಯ ಪ್ರವೇಶವನ್ನು ೧೯ನೇ ಶತಮಾನದಲ್ಲೇ ನಾವು ಕಾಣಬಹುದು. ಆದರೆ ಸಂಘಟಿತವಾದ ಹೋರಾಟವನ್ನು ನಾವು ೨೦ನೇ ಶತಮಾನದಲ್ಲಿ ಮಾತ್ರ ಗುರುತಿಸುತ್ತೇವೆ.

ವಿದ್ಯಾರ್ಥಿಗಳಲ್ಲಿ ರಾಜಕೀಯ ಪ್ರಜ್ಞೆ ಹಾಗೂ ರಾಷ್ಟ್ರವಾದಿ ಭಾವನೆಗಳು ಬೆಳೆಯಲು ಒಂದು ರೀತಿಯಲ್ಲಿ ಬ್ರಿಟಿಷ್ ಮಾದರಿಯ ಶಿಕ್ಷಣ ಹಾಗೂ ಆಡಳಿತವೇ ಕಾರಣವೆನ್ನಬಹುದು. ಇಂಗ್ಲಿಷ್ ಶಿಕ್ಷಣ ವ್ಯಾಪಕವಾಗಿ ಹರಡಿದ್ದ ಕಾರಣ ಜನರಲ್ಲಿ ಒಂದು ಬಗೆಯ ಅತೃಪ್ತಿ ಉಂಟಾಗಿತ್ತು. ಮೂಲಸಾಕ್ಷರತೆ ಈ ಶಿಕ್ಷಣ ಕ್ರಮದ ಗುರಿಯಾಗಿರಲಿಲ್ಲ. ವಿದ್ಯಾರ್ಥಿಗಳಿಗೆ ನೀಡಿದ ಶಿಕ್ಷಣದಿಂದ ಯಾವ ವೃತ್ತಿಗೂ ಅವರಿಗೆ ಅರ್ಹತೆ ದೊರೆಯುವಂತಿರಲಿಲ್ಲ. ಶಾಲೆಗಳಲ್ಲಿ ಅಳವಡಿಸಲಾಗಿದ್ದ ಪಠ್ಯ ವಿಷಯವು ಯೂರೋಪಿಯನ್ ಹಾಗೂ ಆಂಗ್ಲೋ-ಇಂಡಿಯನ್ ಮಕ್ಕಳಿಗೆ ಪ್ರತ್ಯೇಕವಾಗಿ ತೆರೆಯಲಾಗಿದ್ದ ಶಾಲೆಗಳ ಪಠ್ಯಕ್ಕಿಂತ ಗುಣಮಟ್ಟದಲ್ಲಿ ಕಡಿಮೆ ಇದ್ದಿತು. ಬ್ರಿಟಿಷರ ಈ ಪಕ್ಷಪಾತ ನೀತಿಯಿಂದ ವಿದ್ಯಾರ್ಥಿ ಸಮುದಾಯವು ಕ್ರೋಧಗೊಂಡಿತ್ತು. ಜೊತೆಗೆ, ಭಾರತೀಯ ಸಮುದಾಯದ ಸಾಂಸ್ಕೃತಿಕ ಹಾಗೂ ಭಾವನಾತ್ಮಕ ಹಿನ್ನೆಲೆಗೆ ಪಠ್ಯ ವಿಷಯಗಳು ಹೊಂದಿಕೊಳ್ಳುತ್ತಿರಲಿಲ್ಲ. ಅವರು ವಿನ್ಯಾಸಗೊಳಿಸಿದ್ದ ಶೈಕ್ಷಣಿಕ ಪದ್ಧತಿಯಲ್ಲಿ ವ್ಯಕ್ತಿತ್ವದ ಸಮಗ್ರ ಬೆಳವಣಿಗೆಗೆ ಹೆಚ್ಚು ಅವಕಾಶ ಇರಲಿಲ್ಲ. ಆಡಳಿತಕ್ಕೆ ಸಹಾಯವಾಗುವ ದಿಶೆಯಲ್ಲಿ ಗುಮಾಸ್ತರ ಪಡೆಯನ್ನು ನಿರ್ಮಾಣ ಮಾಡಲು ಶಿಕ್ಷಣ ಪದ್ಧತಿ ಅನುಕೂಲಕರವಾಗಿತ್ತು. ಈ ಪದ್ಧತಿಯ ಸಹಾಯದಿಂದ ಮಿಷನರಿಗಳೂ ಕೂಡ ತಮ್ಮ ಮತಾಂತರ ಕಾರ್ಯವನ್ನು ಹೆಚ್ಚಿಸಿಕೊಳ್ಳುವಂತಾಯಿತು.

ಬಹಳ ಕಾಲದವರೆಗೆ ಶಿಕ್ಷಣವು ಮೇಲುವರ್ಗದವರ ಪ್ರತಿಷ್ಠೆಯಾಗಿದ್ದುದ್ದು ನಿಜ. ೧೮೫೪ರಲ್ಲಿ ಹೊರಡಿಸಿದ ಶಿಕ್ಷಣ ನೀತಿಯ ಮೂಲಕ ಸಮಾಜದ ಕೆಳವರ್ಗದವರಿಗೂ ಶಿಕ್ಷಣವನ್ನು ವಿಸ್ತರಿಸಲು ಅವಕಾಶ ನೀಡಲಾಯಿತು. ಆದರೆ ದುಬಾರಿಯಾದ ಶುಲ್ಕದಿಂದಾಗಿ ಬಹಳ ಮಂದಿ ವಿದ್ಯಾರ್ಥಿಗಳು ಹೊಸ ಅವಕಾಶದ ಸದುಪಯೋಗ ಪಡೆದುಕೊಳ್ಳುವಂತಾಗಲಿಲ್ಲ. ಇಂಥ ನೀತಿಯಿಂದ ವಿದ್ಯಾರ್ಥಿಗಳು

ಸಹಜವಾಗಿಯೇ ಕುಪಿತರಾದರು. ಬ್ರಿಟಿಷ್ ನೀತಿಯ ಟೊಳ್ಳುತನವನ್ನು ಜನರು ಹೆಚ್ಚು ಹೆಚ್ಚು ಅರಿಯುವಂತಾದರು. ಇಂಡಿಯನ್ ಸಿವಿಲ್ ಸರ್ವೀಸುಗಳು ಬ್ರಿಟಿಷರ ಏಕಸ್ವಾಮ್ಯವಾಗಿತ್ತಲ್ಲದೆ, ಭಾರತೀಯ ವಿದ್ಯಾರ್ಥಿಗಳು ಈ ಪರೀಕ್ಷೆಗಳಿಗೆ ಕೂರುವ ವಯಸ್ಸಿನಲ್ಲಿ ಇಳಿತಗೊಳಿಸಿದುದು ಭಾರತೀಯರಿಗೆ ಒಂದು ದೊಡ್ಡ ಹೊಡೆತವಾಗಿ ಪರಿಣಮಿಸಿತು. ಭಾರತೀಯ ಯುವಕರನ್ನು ಈ ಸೇವೆಗಳಿಂದ ಹೊರಗಿಡುವುದು ಈ ನೀತಿಯ ಉದ್ದೇಶವಾಗಿದ್ದಿತು.

ಎಲ್ಲಕ್ಕಿಂತ ಮಿಗಿಲಾಗಿ ಭಾರತೀಯ ವಿದ್ಯಾರ್ಥಿ ಸಮುದಾಯದೊಡನೆ ಶಿಕ್ಷಣ ಸಂಸ್ಥೆಗಳಲ್ಲಿ ಹೆಚ್ಚು ಮಂದಿ ಬ್ರಿಟಿಷ್ ಅಧ್ಯಾಪಕರು ಸ್ನೇಹ ಸೌಹಾರ್ದವನ್ನು ಬೆಳೆಸಿರಲಿಲ್ಲ. ಈ ಸೌಹಾರ್ದಯುತ ಬಾಂಧವ್ಯವನ್ನು ಪ್ರೋತ್ಸಾಹಿಸಿದ ಅಧ್ಯಾಪಕರನ್ನು ವಿದ್ಯಾರ್ಥಿಗಳು ಅತ್ಯಂತ ಗೌರವವಾಗಿ ಕಾಣುತ್ತಿದ್ದರು. ಆದರೆ ಬಹುತೇಕ ಅಧ್ಯಾಪಕರು ಭಾರತೀಯ ವಿದ್ಯಾರ್ಥಿಗಳು ಬೌದ್ಧಿಕವಾಗಿ ಕೆಳಮಟ್ಟದವರೆಂದು ಬಗೆದರಲ್ಲದೆ ಅವರ ಪೂರ್ವಾಗ್ರಹವನ್ನು ಬಹಿರಂಗವಾಗಿ ಪ್ರಕಟಿಸುತ್ತಿದ್ದರೂ ಕೂಡ. ಒರಟುತನ ಹಾಗೂ ಸೇಡಿನ ಮನೋಭಾವದ ಅಂಥ ಅಧ್ಯಾಪಕರನ್ನು ವಿದ್ಯಾರ್ಥಿಗಳು ತಿರಸ್ಕಾರದಿಂದ ಕಾಣತೊಡಗಿದರು. ವಿದ್ಯಾರ್ಥಿಗಳನ್ನೊಳಗೊಂಡ ಕೆಲವು ಘಟನೆಗಳನ್ನು ತಪ್ಪಾಗಿ ವ್ಯಾಖ್ಯಾನಿಸಿದ ಕಾರಣದಿಂದ ವಿದ್ಯಾರ್ಥಿಗಳಲ್ಲಿ ಮನೆಮಾಡಿಕೊಂಡಿದ್ದ ದ್ವೇಷ ಇನ್ನಷ್ಟು ಹೆಚ್ಚಾಯಿತು. ಹಾಗಾಗಿ ಸಹಜವಾಗಿಯೇ ಬ್ರಿಟಿಷ್ ಧೋರಣೆಯ ವಿರುದ್ಧ ವಿದ್ಯಾರ್ಥಿಗಳು ಚಳವಳಿ ಹಾಗೂ ಪ್ರತಿಭಟನೆಯ ಮಾರ್ಗವನ್ನು ಅನುಸರಿಸಿದರು.

ಶೈಕ್ಷಣಿಕವಾಗಿ ಯಾವುದೇ ಸಂಬಂಧ ಹೊಂದಿರದ ಆದರೆ ರಾಷ್ಟ್ರೀಯವಾದಿಯಾದ ಸಂಘಗಳು ಹಾಗೂ ಸಂಸ್ಥೆಗಳೊಡನೆ ವಿದ್ಯಾರ್ಥಿಗಳು ಹೆಚ್ಚು ಹೆಚ್ಚು ಸಂಪರ್ಕವಿಟ್ಟುಕೊಳ್ಳತೊಡಗಿದರು. ಇಂಥ ಸಂಘಗಳು ಕಾನೂನುಬಾಹಿರವೆಂದು ಆ ವೇಳೆಗಾಗಲೇ ಘೋಷಿಸಿದ್ದರು. ಈ ಶತಮಾನದ ಆರಂಭ ಕಾಲದ ವೇಳೆಗೆ ಈ ಸಂಘಗಳ ಚಟುವಟಿಕೆಗಳು ಹೆಚ್ಚು ತೀವ್ರಗತಿಯನ್ನು ಪಡೆದುವಲ್ಲದೆ ವಿದೇಶೀಯರ ಆಡಳಿತಕ್ಕೆ ಹೆಚ್ಚು ಹೆಚ್ಚು ಪ್ರತಿರೋಧವನ್ನು ಒಡ್ಡತೊಡಗಿದವು. ಆ ಕಲ್ಲೋಲದ ಆರಂಭವನ್ನು ರಾಷ್ಟ್ರದ ವಿದ್ಯಾರ್ಥಿ ಚಳವಳಿಯ ಮೊದಲನೇ ಹಂತವೆಂದು ಪರಿಗಣಿಸಬಹುದಾಗಿದೆ. ಎಲ್ಲಾ ಬ್ರಿಟ್ರಿಷ್ ಭಾರತ ಪ್ರಾಂತ್ಯಗಳಲ್ಲಿ ಇದು ಸಾಮಾನ್ಯವಾಗಿ ಕಂಡುಬರುವ ಲಕ್ಷಣವಾಗಿತ್ತು.

ತಿಲಕರ ಪ್ರಭಾವದಿಂದಾಗಿ ಚಳವಳಿಯು ಬೇರೆಯ ರೀತಿಯ ತಿರುವನ್ನು ಪಡೆದುಕೊಂಡಿತು. ಸ್ವದೇಶಿ ಚಳವಳಿ ಹಾಗೂ ವಿದೇಶಿ ವಸ್ತುಗಳ ನಿಷೇಧಕ್ಕೆ ಹೆಚ್ಚಿನ ರೀತಿಯ ಪ್ರತಿಸ್ಪಂದನ ದೊರೆಯಿತು. ಬೊಂಬಾಯಿ ಪ್ರೆಸಿಡೆನ್ಸಿಯ ಪ್ರಾಂತ್ಯಗಳಲ್ಲಿ ದೊರೆತ ಪ್ರತಿಸ್ಪಂದನದ ರೀತಿಯಲ್ಲೇ ಬ್ರಿಟಿಷ್ ಕರ್ನಾಟಕದಲ್ಲೂ ಜನರು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದರು. ಕರ್ನಾಟಕದ ಪ್ರಾಂತ್ಯಗಳಲ್ಲಿ ತಿಲಕರ 'ಕೇಸರಿ' ಪತ್ರಿಕೆಯು ಹೆಚ್ಚು ಜನರನ್ನು ತಲುಪುವಂತಾಯಿತು. ರಾಷ್ಟ್ರದ ಗತಕಾಲದ ವೈಭವವನ್ನು ಮರಳಿ ಪಡೆಯಬೇಕಾದ ಅಗತ್ಯವನ್ನವರು ಒತ್ತಿ ಹೇಳಿದ ಕಾರಣ ವಿದ್ಯಾರ್ಥಿಗಳು ಅದಕ್ಕೆ ಆಕರ್ಷಿತರಾದರು. ಈ ಕಾಲದಲ್ಲೇ ಭಯೋತ್ಪಾದನೆಯ ಕಡೆ ಅವರು ಜಾರಿದುದು ಎಂಬುದನ್ನು ನೆನಪಿಡಬೇಕು. ತಿಲಕರು ಹಾಗೂ ಬಿಪಿನ್ ಚಂದ್ರಪಾಲರ ನಿಕಟವರ್ತಿಗಳಾಗಿದ್ದ ಅರವಿಂದ ಘೋಷರು ಮಂದಗಾಮಿಗಳ ಮೃದು ಮಾರ್ಗವನ್ನು ಛೇಡಿಸಿದರು. 'ಜಗತ್ತನ್ನು ಆರ್ಯವನ್ನಾಗಿಸಬೇಕಾದ' ಅವಶ್ಯಕತೆಯನ್ನು ಅರವಿಂದರು ಘೋಷಿಸಿದಾಗ, ಆರ್ಯ ಪರಂಪರೆ ಹಾಗೂ ಹಿಂದೂ ಧರ್ಮದ ಘನತೆಯ ಬಗ್ಗೆ ವಿವೇಕಾನಂದರು ಹೇಳಿದ್ದ, ಅದೇ ಉತ್ಕಟತೆಯು ಅರವಿಂದರ ನುಡಿಯಲ್ಲಿದ್ದುದು ಜನತೆಗೆ ಮನವರಿಕೆಯಾಯಿತು. ಇತರರು ಹೇಳಿದುದಕ್ಕಿಂತ ಭಿನ್ನವಾಗಿ ವಿವೇಕಾನಂದರು ಭಾರತದ ಭೂತಕಾಲದ ಹಿರಿಮೆಯ ಬಗ್ಗೆ ಬರೆದಿದ್ದರು. ಅವರ ಮಾರ್ಗ ಹೆಚ್ಚು ಆಧ್ಯಾತ್ಮಿಕವಾದುದಾಗಿತ್ತು. ಇದರಿಂದ ಹೊಸ ಅರಿವಿನ ಆಸೆ ಮೂಡುವಂತಾಯಿತು. ಭಾರತದ ಆಧ್ಯಾತ್ಮಿಕತೆಯಿಂದ ಪಶ್ಚಿಮವನ್ನು

ಗೆಲ್ಲಬೇಕೆಂದು ವಿವೇಕಾನಂದರೂ ಕರೆಕೊಟ್ಟಿದ್ದರು. ಕುತೂಹಲಕರವಾದ ಸಂಗತಿಯೆಂದರೆ ವಿವೇಕಾನಂದರ ಕರೆಗೆ ರಾಜಕೀಯವಾದ ಬಣ್ಣವನ್ನು ನೀಡಿ ಉಪಯೋಗಿಸಿಕೊಳ್ಳಲಾಯಿತು.

ಹಿಂದೂ ಧರ್ಮಗ್ರಂಥಗಳಿಂದ ಮೂಲದ್ರವ್ಯವನ್ನು ಪಡೆದುಕೊಂಡಿದ್ದ ತಿಲಕ್‌ವಾದವೂ ಕೂಡ ಹಿಂದೂಗಳ ಧಾರ್ಮಿಕ ಪುನಶ್ಚೇತನವನ್ನು ದೃಷ್ಟಿಯಲ್ಲಿಟ್ಟುಕೊಂಡಿತ್ತು. ಆರ್ಯನ್ ಜನಾಂಗದ ಶ್ರೇಷ್ಠತೆಯ ಪರಿಕಲ್ಪನೆ ಧಾರ್ಮಿಕ ಲಾಂಛನಗಳ ಸ್ವೀಕರಣೆ ಇವುಗಳಿಂದಾಗಿ ವಿದ್ಯಾರ್ಥಿಗಳ ಉತ್ಸಾಹ ಇಮ್ಮಡಿಯಾಗಿತ್ತು. ಆಯವ್ಯಯವನ್ನು ಸರಿದೂಗಿಸಲು ಬ್ರಿಟಿಷ್ ಸರ್ಕಾರವು ಅನೇಕರನ್ನು ಕೆಲಸದಿಂದ ತೆಗೆಯುವ ಮಾರ್ಗವನ್ನು ಕೈಕೊಂಡಾಗ ಸಂಕಷ್ಟಕ್ಕೀಡಾದವರು ಸಹಜವಾಗಿಯೇ ಪುನಶ್ಚೇತನವಾದದ ಕಡೆ ಆಕರ್ಷಿತರಾದರು. ಏಕೆಂದರೆ ಸುಶಿಕ್ಷಿತರ ಹಿತಕ್ಕೆ ಬ್ರಿಟಿಷರ ನೀತಿಯಿಂದ ಧಕ್ಕೆಯಾಗಿತ್ತು. ವಿದ್ಯಾರ್ಥಿ ಸಮುದಾಯದಲ್ಲಿ, ಈಗಾಗಲೇ ಸೂಚಿಸಿರುವಂತೆ, ಬಹುಪಾಲು ಮೇಲು ಜಾತಿಗೆ, ವಿಶೇಷವಾಗಿ, ಬ್ರಾಹ್ಮಣವರ್ಗಕ್ಕೆ ಸೇರಿದವರ ಸಂಖ್ಯೆಯೇ ಅಧಿಕವಾಗಿತ್ತು. ಮುಸ್ಲಿಮರು ಹಾಗೂ ಇತರ ಹಿಂದುಳಿದ ವರ್ಗದವರಿಗೆ ನೀಡಿದ ಆದ್ಯತೆ ಉಪಚಾರದಿಂದ ವಿದ್ಯಾರ್ಥಿಗಳಲ್ಲಿ ಸರ್ಕಾರ–ವಿರೋಧಿ ಭಾವನೆ ಬಲವಾಗಿ ಬೇರು ಬಿಡುವಂತಾಗಿತ್ತು. ನಿರುದ್ಯೋಗ ಹಾಗೂ ಅರೆ ಉದ್ಯೋಗದ ಸಮಸ್ಯೆ ಈ ಪರಿಸ್ಥಿತಿಗೆ ಮತ್ತಷ್ಟು ತುಪ್ಪ ಹುಯ್ಯಿತು.

'ಗೋವು' ಮತ್ತು 'ಗಣಪತಿ' ಯನ್ನು ತಿಲಕ್‌ವಾದವು ರಾಜಕೀಯ ಚಿನ್ಹೆಗಳಾಗಿ ಉಪಯೋಗಿಸಿ ಕೊಂಡಿತು. ಜೊತೆಗೆ, ಹಿಂದೂಧರ್ಮ ಹಾಗೂ ಹಿಂದೂ ಜನಾಂಗದ ರಕ್ಷಕನಾಗಿ 'ಶಿವಾಜಿ' ಯನ್ನು ವೈಭವೀಕರಿಸತೊಡಗಿದರು. ಪಾಶ್ಚಿಮಾತ್ಯ ಶಿಕ್ಷಣ ಕ್ರಮದಿಂದ ಪಳಗಿದ್ದ ವಿದ್ಯಾರ್ಥಿಗಳು ಇಂಥ ಉಪಕರಣಗಳ ಮೂಲಕ ಪುನಶ್ಚೇತನವನ್ನು ಸ್ಥಾಪಿಸಬಹುದೆಂದು ಬಗೆದರು. ತಮ್ಮ ಮೂಲಕ್ಕೆ ಹೋಗುವ ಆಶಯವನ್ನು ಅವರು ಪ್ರಕಟಿಸಿದರು. ಇದರ ಪರಿಣಾಮವಾಗಿ ಹಿಂದೂಗಳು ಹಾಗೂ ಮುಸ್ಲಿಮರ ನಡುವೆ ಒಂದು ಕಂದಕವೇರ್ಪಟ್ಟಿತು. ಕೋಮುವಾದದ ಬೇರುಗಳನ್ನು ನಾವು ಇಲ್ಲಿ ಗುರುತಿಸಬಹುದಾಗಿದೆ. ಗಣಪತಿ ಹಾಗೂ ಶಿವಾಜಿ ಮಹೋತ್ಸವಗಳು ಹಲವಾರು ಬಾರಿ ಕೋಮುಗಲಭೆಗಳಲ್ಲಿ ಮುಕ್ತಾಯವಾಗುವಂತಾಯಿತು.

ಬಿಪಿನ್ ಚಂದ್ರಪಾಲರು ಉಗ್ರಗಾಮಿತ್ವವನ್ನು ಹೆಚ್ಚು ಪ್ರಚಾರಗೊಳಿಸಿದರು. ರಾಷ್ಟ್ರೀಯ ಕಾಲೇಜುಗಳ ಸ್ಥಾಪನೆಯ ಅಗತ್ಯವನ್ನು ಅವರು ಒತ್ತಿ ಹೇಳಿದರು. ವಿದ್ಯಾರ್ಥಿಗಳಿಗೆ ರಾಷ್ಟ್ರೀಯ ಗುರಿ ಹಾಗೂ ರಾಷ್ಟ್ರೀಯ ವಿಚಾರಗಳನ್ನೊಳಗೊಂಡ ರಾಷ್ಟ್ರೀಯ ಶಿಕ್ಷಣವನ್ನು ನೀಡಬೇಕೆಂದು ಅವರು ತಿಳಿಸಿದರು.[೧] ಇಂಗ್ಲಿಷ್ ಶಿಕ್ಷಣದಲ್ಲಿನ ಅರಾಷ್ಟ್ರೀಯ ವರ್ತನೆಗಳ ಬಗ್ಗೆ ಹೆಚ್ಚು ಹೆಚ್ಚು ಪ್ರಚಾರ ನೀಡಲಾಯಿತು.

ಆ ವೇಳೆ ಕನ್ನಡಿಗರಲ್ಲಿ ಸಾಕಷ್ಟು ಅರಿವು ಮೂಡಿತ್ತು. ವಿದೇಶಿ ವಸ್ತುಗಳ ಬಹಿಷ್ಕಾರ ಹಾಗೂ ಸ್ವದೇಶಿ ವಸ್ತುಗಳ ಉತ್ಪಾದನೆಗೆ ಉತ್ತೇಜನ ಹೆಚ್ಚಾದಾಗ ಕಿತ್ತೂರು, ಬಾದಾಮಿ ಮತ್ತಿತರ ಕಡೆಗಳಲ್ಲಿ ಕೈಮಗ್ಗ ಪ್ರಾರಂಭವಾದುವು. ಧಾರವಾಡ, ಲಕ್ಷ್ಮೇಶ್ವರ, ನರಗುಂದ ಹಾಗೂ ಇತರ ಕೇಂದ್ರಗಳಲ್ಲಿ ದೇಶೀಯ ಕೈಗಾರಿಕೆಯನ್ನು ಸ್ಥಾಪಿಸಿದರು. ಕೆಲವು ಪ್ರದೇಶಗಳಲ್ಲಿ ವಿದೇಶಿ ವಸ್ತುಗಳನ್ನು ಸುಟ್ಟರು. ಪಾನನಿರೋಧದ ಪ್ರತಿಜ್ಞೆಯನ್ನು ಇನ್ನು ಕೆಲವು ಕಡೆ ಸ್ವೀಕರಿಸಿದರು. ಬೆಳಗಾವಿ ಹಾಗೂ ಧಾರವಾಡದಲ್ಲಿ ಅಂಥ ಸರ್ಕಾರೀ ವಿರೋಧಿ ಚಟುವಟಿಕೆಗಳು ಹೆಚ್ಚಾದುವು. ಜನರಲ್ಲಿ ಸ್ವದೇಶಿ ಚಳವಳಿಯ ಮಹತ್ವವನ್ನು ತಿಳಿಸಲು ಗದಗಿನಲ್ಲಿ ಒಂದು ಸಭೆ ನಡೆಸಲಾಯಿತು. ಬಾಗಲಕೋಟೆಯಲ್ಲೂ ಸಹ ಅಂಥ ಒಂದು ಸಭೆ ನಡೆಸಲಾಯಿತು. ೧೯೦೭ರಲ್ಲಿ ಧಾರವಾಡದಲ್ಲಿ ಮೊಟ್ಟಮೊದಲ ಕೈಗಾರಿಕಾ ಸಮಾವೇಶವನ್ನು ಏರ್ಪಡಿಸಲಾಯಿತು. ೧೯೦೮ರಲ್ಲಿ ಬೆಳಗಾವಿಯಲ್ಲಿ ಪಿಕೆಟಿಂಗ್ ನಡೆಸುತ್ತಿದ್ದ ಕೆಲವು ಯುವಕರನ್ನು ದಸ್ತಗಿರಿ ಮಾಡಲಾಯಿತು; ಭಾರಿ ಮೊತ್ತದ

ದಂಡ ವಿಧಿಸಲಾಯಿತು. ದಂಡ ತೆತ್ತು ಅವರನ್ನು ಬಿಡುಗಡೆ ಮಾಡಿಸಿಕೊಳ್ಳಲು ವ್ಯಕ್ತಿಯೊಬ್ಬರು ಮುಂದೆ ಬಂದಾಗ ಯುವಕರು ಅವರ ಸಹಾಯವನ್ನು ನಿರಾಕರಿಸಿದರು.[೨]

೧೯೧೧ರಲ್ಲಿ ತಮ್ಮ ಬಿಡುಗಡೆಯ ನಂತರ ಬೆಳಗಾವಿಯಲ್ಲಿ ನಡೆದ ರಾಜಕೀಯ ಸಮಾವೇಶದಲ್ಲಿ ತಿಲಕರು ತಮ ಚಟುವಟಿಕೆಗಳನ್ನು ತೀವ್ರಗೊಳಿಸಬೇಕೆಂದು ಯುವಕರಿಗೆ ಕರೆನೀಡಿದರು. ಹೋಂ ರೂಲ್ ಲೀಗ್ ಸ್ವರಾಜ್ಯಕ್ಕಾಗಿ ತಮ್ಮ ಬೇಡಿಕೆಯನ್ನು ಪುನರ್ಸ್ವೀಕರಿಸಿದಾಗ ಹೊಸ ಮರುಪು ಎಲ್ಲರಲ್ಲಿ ಕಾಣಿಸಿಕೊಂಡಿತು. ಬೇರೆ ಕನ್ನಡ ಪ್ರಾಂತ್ಯಗಳಲ್ಲೂ ಸಹ ಆ ಉತ್ಸಾಹ ಮರುಕಳಿಸಿತ್ತು. ದಕ್ಷಿಣ ಕನ್ನಡ ಹಾಗೂ ಬಳ್ಳಾರಿ ಪ್ರಾಂತ್ಯಗಳೂ ಸಹ ತಿಲಕರ ಪ್ರಭಾವಕ್ಕೊಳಗಾಗಿದ್ದವು. ವಿದೇಶಿ ವಸ್ತುಗಳ ನಿಷೇಧ ಹಾಗೂ ಸ್ವದೇಶಿ ವಿಚಾರಗಳು ಹೆಚ್ಚು ಹೆಚ್ಚು ಜನಪ್ರಿಯವಾದವು. ಮೈಸೂರು ಸಂಸ್ಥಾನದಲ್ಲಿ ಕೂಡ ತಿಲಕರ ವಿಚಾರಗಳು ಹೆಚ್ಚು ಮೆಚ್ಚುಗೆಗೆ ಪಾತ್ರವಾದವು. ವೃತ್ತಪತ್ರಿಕೆಗಳ ಮೂಲಕ ಸ್ವದೇಶಿ ಮತ್ತು ಸ್ವರಾಜ್ಯ ಹೆಚ್ಚು ಜನರ ಗಮನ ಸೆಳೆದವು. ಬ್ರಿಟಿಷ್ ಭಾರತದ ಬಗೆಗೆ ಮೈಸೂರಿಗರಲ್ಲೂ ಹೆಚ್ಚು ಅರಿವು ಮೂಡಿತು. ರಾಷ್ಟ್ರವಾದಿ ಕಲ್ಲೋಲ ಕಾಣಿಸಿಕೊಂಡಿತ್ತಾದರೂ ಬ್ರಿಟಿಷ್ ಭಾರತದಲ್ಲಿ ಸಂಭವಿಸಿದ ರೀತಿಯಲ್ಲಿ ಒಂದು ಚಳವಳಿಯ ತೀವ್ರತೆಯನ್ನು ಪಡೆದುಕೊಂಡಿರಲಿಲ್ಲ.

ತಿಲಕರ ಸಾವಿನಿಂದ ಅವರ ಸ್ಥಾನವನ್ನು ಬೇರಾರೂ ತುಂಬಲಾರದಂತಾಯಿತು. ಕಾಂಗ್ರೆಸ್ ಪಕ್ಷ ಸಂದಿಗ್ಧ ಸನ್ನಿವೇಶದಲ್ಲಿ ಸಿಲುಕಿಕೊಂಡಿತ್ತು. ಆ ಘಟ್ಟದಲ್ಲೇ ಗಾಂಧೀಜಿಯವರು ಕಾಂಗ್ರೆಸ್ಸಿನ ಸೂತ್ರ ಹಿಡಿದದ್ದು. ಚಂಪಾರಣ್ಯ, ಖೈರಾ ಮತ್ತು ಅಹಮದಾಬಾದಿನ ಸತ್ಯಾಗ್ರಹ, ದಕ್ಷಿಣ ಆಫ್ರಿಕಾದಲ್ಲಿನ ತಮ್ಮ ಚಟುವಟಿಕೆಗಳಿಂದಾಗಿ ಗಾಂಧೀಜಿಯವರು ಆಗಲೇ ಪ್ರಸಿದ್ಧರಾಗಿದ್ದರು. ರೌಲತ್ ಮಸೂದೆಗಳ ವಿರುದ್ಧ ಅವರು ಪ್ರಸ್ತಾಪಿಸಿದ ಜನಾಂದೋಲನವು ತುಂಬಾ ಆಕರ್ಷಣೀಯವಾಗಿ ಕಂಡಿತು. ರೌಲತ್ ಮಸೂದೆಗಳು ವಸಾಹತು-ವಿರೋಧಿ ಭಾವನೆಗಳನ್ನು ಕೆರಳಿಸಿದವು. ಎಲ್ಲ ಕಡೆ, ಹರತಾಳ, ಮೆರವಣಿಗೆಗಳು ಹಾಗೂ ಪ್ರದರ್ಶನಗಳು ನಡೆದವು. ಅದಾದ ಬಳಿಕ ಜರುಗಿದ ಜಲಿಯನ್‌ವಾಲಾಬಾಗ್ ದುರಂತ ದೇಶದಾದ್ಯಂತ ದಿಗ್ಭ್ರಮೆ ಹುಟ್ಟಿಸಿದವು. ಬ್ರಿಟಿಷ್ ಸರ್ಕಾರದ ಬಗ್ಗೆ ಭ್ರಮನಿರಸನಗೊಂಡ ಗಾಂಧೀಜಿಯವರು ಸತ್ಯಾಗ್ರಹವನ್ನು ವಾಪಸ್ಸು ತೆಗೆದುಕೊಂಡು ಸ್ವದೇಶಿ ಹಾಗೂ ಅಸಹಕಾರ ಚಳವಳಿಯನ್ನು ತೀವ್ರಗೊಳಿಸಲು ಕರೆ ನೀಡಿದರು. ಅಸಹಕಾರ ಚಳವಳಿಯನ್ನು ಬೋಧಿಸುತ್ತ ದೇಶದಲ್ಲಿ ಬ್ರಿಟಿಷರ ಆಡಳಿತವನ್ನು ಸಂಪೂರ್ಣವಾಗಿ ನಿಷ್ಕ್ರಿಯಗೊಳಿಸುವ ಏಕೈಕ ಮಾಧ್ಯಮ ಇದೊಂದೇ ಎಂದು ತಿಳಿಸಿದರು.

ಆ ಮುಂಚಿನ ನಾಯಕರು ಬೋಧಿಸಿದ್ದ ಹೋರಾಟದ ವಿಧಾನಕ್ಕೂ ಗಾಂಧೀಜಿಯವರು ತಿಳಿಸಿದ್ದ ವಿಧಾನಕ್ಕೂ ಭಿನ್ನತೆಯಿತ್ತು. ಗಾಂಧೀಜಿಯವರು ತಿಳಿಸಿದ್ದ ಅಹಿಂಸಾತ್ಮಕ ಹೋರಾಟ ಹೊಸದಾಗಿತ್ತು. ಹಿಂಸಾತ್ಮಕ ಮಾರ್ಗವನ್ನನುಸರಿಸದೆ ಕಾಂಗ್ರೆಸ್ ಕಾರ್ಯಕ್ರಮಗಳನ್ನು ಜನಪ್ರಿಯಗೊಳಿಸಲು, ಅದರಲ್ಲೂ ವಿಶೇಷವಾಗಿ ರಚನಾತ್ಮಕ ಕಾರ್ಯಕ್ರಮಗಳಲ್ಲಿನ ಅನೇಕ ಅಂಶಗಳನ್ನು ಕೈಗೆತ್ತಿಕೊಳ್ಳುವಂತೆ ಗಾಂಧೀಜಿಯವರು ವಿದ್ಯಾರ್ಥಿಗಳಿಗೆ ತಿಳಿಸಿದರು. ಆರಂಭದಲ್ಲಿ ಅವರ ಸಂದೇಶವನ್ನು ಸ್ವೀಕರಿಸಿ ಅನುಷ್ಠಾನಗೊಳಿಸಲು ವಿದ್ಯಾರ್ಥಿಗಳು ಹಿಂಜರಿದರಾದರೂ, ಕ್ರಮೇಣ ಆ ಕಾರ್ಯಕ್ರಮಗಳು ವಿದ್ಯಾರ್ಥಿಗಳಿಗೆ ತುಂಬಾ ಹಿತಕರವಾಗಿ ಕಂಡವು. ಖಾದಿ ಹಾಗೂ ರಚನಾತ್ಮಕ ಕಾರ್ಯಕ್ರಮಗಳಲ್ಲೊಂದಾದ ಪಾನನಿರೋಧದ ಸಂದೇಶವನ್ನು ವಿದ್ಯಾರ್ಥಿಗಳು ಗ್ರಾಮಗಳು ಹಾಗೂ ಪಟ್ಟಣಗಳಿಗೆ ಕೊಂಡೊಯ್ದರು. ವಿದ್ಯಾರ್ಥಿ ಚಳವಳಿ ತೆಗೆದುಕೊಂಡ ಹೊಸ ತಿರುವು ಮೂರನೇ ಹಂತವನ್ನು ಸೂಚಿಸುತ್ತದೆ.

ಹೆಚ್ಚು ರಾಷ್ಟ್ರೀಯ ಶಾಲೆಗಳನ್ನು ತೆರೆಯಬೇಕಾದ ಅಗತ್ಯವನ್ನು ಗಾಂಧೀಜಿಯವರು ಹೇಳಿದರು. ಸರ್ಕಾರದ ಅನುದಾನದಲ್ಲಿ ಅಥವಾ ಸರ್ಕಾರವೇ ನಡೆಸುವಂಥ ಶಾಲೆಗಳಿಂದ ಮಕ್ಕಳನ್ನು ಬಿಡಿಸುವಂತೆ ಅವರು ತಂದೆತಾಯಿಗಳಿಗೆ ಕರೆಕೊಟ್ಟರು. ವಿದ್ಯಾರ್ಥಿ ಸಮುದಾಯದ ಹಿತಕ್ಕೆ ಅಂಥ ಶಾಲೆಗಳಿಂದ ಏನೂ ಧಕ್ಕೆಯಾಗುವುದೆಂದು ಅವರು ಸ್ಪಷ್ಟವಾಗಿ ತಿಳಿಸಿದರು.

ಶಾಲಾ ಕಾಲೇಜುಗಳನ್ನು ಬಿಡಬೇಕೆಂದು ಗಾಂಧೀಜಿ ನೀಡಿದ ಕರೆಗೆ ಮಿಶ್ರ ಪ್ರತಿಕ್ರಿಯೆ ಬಂದಿತು. ಕೆಲವು ನಾಯಕರು ಇದಕ್ಕೆ ತಕರಾರು ಒಡ್ಡಿದರಾದರೂ ಕಾಂಗ್ರೆಸ್ ನಾಯಕತ್ವವಾಗಲಿ ಅಥವಾ ವಿದ್ಯಾರ್ಥಿಗಳಾಗಲಿ ಸೊಪ್ಪು ಹಾಕಲಿಲ್ಲ. ೧೯೨೦ರಲ್ಲಿ ಧಾರವಾಡದ ವಿದ್ಯಾರ್ಥಿಗಳು ದತ್ತಾತ್ರೇಯ ದೇವಸ್ಥಾನದ ಪ್ರಾಂಗಣದಲ್ಲಿ ಸೇರಿ ಖಾದಿಯನ್ನು ಮಾತ್ರ ತೊಡುವುದಾಗಿ ಪ್ರತಿಜ್ಞೆ ಮಾಡಿದರು. ವಿದ್ಯಾರ್ಥಿ ನಾಯಕರಾದ ಕರ್‌ಮರ್‌ಕರ್, ಬುರ್ಲಿ ಬಿಂದುಮಾಧವ, ರಾಮ ಭಾವುಕ್ ಹಾಗೂ ಹುಕ್ಕೇರಿ ರಾಮರಾವ್‌ರವರು ಆಗ ಉಪಸ್ಥಿತರಿದ್ದರು.[೩] ಗಾಂಧೀಜಿಯವರ ಖಾದಿ ಕಾರ್ಯಕ್ರಮದಿಂದ ಉತ್ತೇಜಿತರಾದ ವಿದ್ಯಾರ್ಥಿಗಳು ಸ್ವದೇಶಿ ಖಾತೆಯನ್ನು ಮೂರು ವಿಧವಾಗಿ ವಿಂಗಡಿಸಲು ತೀರ್ಮಾನಿಸಿದರು:

೧. ಸ್ವದೇಶಿ ಬಟ್ಟೆಯಲ್ಲಿ ಕೈಯಲ್ಲಿ ನೂತು ನೇಯ್ದ ಬಟ್ಟೆಯನ್ನು ಮೊದಲನೆ ಮಾದರಿಯನ್ನಾಗಿ ವಿಂಗಡಿಸಿದರು.
೨. ಎರಡನೇ ಮಾದರಿಯ ಬಟ್ಟೆಗಳು ಗಿರಣಿಯಲ್ಲಿ ನೂತವು ಮತ್ತು ಕೈಯಲ್ಲಿ ನೇಯ್ದುವಾಗಿದ್ದವು.
೩. ಮೂರನೇ ಮಾದರಿಯವು ದೇಶೀಯ ಗಿರಣಿಗಳಲ್ಲಿ ನೂತು ನೇಯ್ದುವಾಗಿದ್ದವು.[೪]

ಮಹಾತ್ಮರ ಕರೆಗೆ ಉತ್ತರವಾಗಿ ಕರ್ನಾಟಕದ ವಿದ್ಯಾರ್ಥಿಗಳು, ರಾಷ್ಟ್ರದ ಹಿತಕ್ಕಾಗಿ ಹೋರಾಟ ಮಾಡುವ ಒಂದು ಶಿಸ್ತಿನ ಗುಂಪನ್ನು ಸಂಘಟಿಸಲು ಹೊರಟರು. ಬೆಳಗಾವಿಯಲ್ಲಿ ಕಾಂಗ್ರೆಸ್ ಅಧಿವೇಶನವನ್ನು ನಡೆಸಲು ತೀರ್ಮಾನವಾದ ಬಳಿಕ ಎನ್.ಎಸ್.ಹರ್ಡೀಕರರು ಎಲ್ಲಾ ಸ್ವಯಂಸೇವಕರನ್ನು ಸಂಘಟಿಸಿದಾಗ ೧೯೨೩ರಲ್ಲಿ ಭಾರತ ಸೇವಾದಳ ಹುಟ್ಟಿಕೊಂಡಿತು. ಸ್ವಯಂಸೇವಕ ದಳಕ್ಕೆ ಒಂದು ಸಮವಸ್ತ್ರವನ್ನು ನೀಡಲಾಯಿತು. ನೀಲಿ ಬಣ್ಣದ ಚಡ್ಡಿ, ಬಿಳಿ ಅಂಗಿ, ಗಾಂಧಿ ಟೋಪಿ ಮತ್ತು ಪಾದರಕ್ಷೆ ತೊಡುವುದೆಂದು ತೀರ್ಮಾನವಾಯಿತು.

ಎನ್.ಎಸ್.ಹರ್ಡೀಕರರು ಲಾಲ್ ಬಾಲ್ ಪಾಲ್ ಎಂಬ ತ್ರಿಮೂರ್ತಿಗಳ ಕಟ್ಟಾ ಅಭಿಮಾನಿಯಾಗಿದ್ದರು.[೫] ಬಹಳ ಚಿಕ್ಕವಯಸ್ಸಿನಲ್ಲಿಯೇ ಹರ್ಡೀಕರರು ತಿಲಕರ ಕ್ರಾಂತಿಕಾರಿ ವಿಚಾರಗಳ ಪ್ರಭಾವಕ್ಕೆ ಒಳಗಾಗಿದ್ದರು. ಆದಾದ ಬಳಿಕ ಅವರು ಕಲ್ಕತ್ತಾದ ರಾಷ್ಟ್ರೀಯ ವೈದ್ಯಕೀಯ ಕಾಲೇಜಿನಲ್ಲಿದ್ದ ಕಾಲಕ್ಕೆ ತಮ್ಮ ತಾರುಣ್ಯದಲ್ಲಿ ಬಹಳವಾಗಿ ಪ್ರಭಾವಿಸಿದ ಬಿಪಿನ್ ಚಂದ್ರಪಾಲರ ಸಂಪರ್ಕವಿಟ್ಟುಕೊಂಡರು. ಪದವಿ ಗಳಿಸಿದ ನಂತರ ಹೆಚ್ಚಿನ ವ್ಯಾಸಂಗಕ್ಕಾಗಿ ಅಮೆರಿಕಾಕ್ಕೆ ಹೋದಾಗ ಅಲ್ಲಿ ಲಾಲಾಲಜಪತ್ ರಾಯ್ ಅವರನ್ನು ಭೇಟಿ ಮಾಡಿದರು. ಲಾಲಾಲಜಪತ್ ರಾಯ್‌ರವರು ಸ್ಥಾಪಿಸಿದ ಹೋಂ ರೂಲ್ ಲೀಗ್‌ನ ಕಾರ್ಯದರ್ಶಿಯಾದರು. ಭಾರತದ ಹಿತವನ್ನು ಜನಪ್ರಿಯಗೊಳಿಸುವ ದೃಷ್ಟಿಯಿಂದ ಅವರು ಅಮೆರಿಕದ ಅನೇಕ ಭಾಗಗಳಲ್ಲಿ ಸಂಚರಿಸಿ ಉಪನ್ಯಾಸಗಳನ್ನು ಮಾಡಿದರು, ಪುಸ್ತಕಗಳನ್ನು ಮಾರಿದರು. 'ಯಂಗ್ ಇಂಡಿಯಾ' ದ ಸಂಪಾದಕರಾಗಿ ಅನೇಕ ಚಂದಾದಾರರನ್ನು ಗಳಿಸಿದರು. ಭಾರತಕ್ಕೆ ಅವರು ವಾಪಸ್ಸಾಗುತ್ತಿದ್ದಂತೆಯೇ 'ಕರ್ನಾಟಕದ ಹುಲಿ' ಎಂದೇ ಖ್ಯಾತರಾಗಿದ್ದ ಶ್ರೀನಿವಾಸರಾವ್ ಕೌಜಲಗಿಯವರ ರಾಜಕೀಯ ಚಟುವಟಿಕೆಗಳಿಂದ ಆಕರ್ಷಿತರಾದರು. ಸೇವಾದಳದ ಬೆಳವಣಿಗೆಗಾಗಿ ನಾರಾಯಣ ಸುಬ್ಬರಾವ್ ಹರ್ಡೀಕರ್‌ರವರು ಅಹರ್ನಿಶಿ ಹೋರಾಡಿದರು. ಯುವಕರಿಗೆ ಶಿಸ್ತು, ವ್ಯಾಯಾಮ ಮತ್ತಿತರ ಅಭ್ಯಾಸಗಳಲ್ಲಿ ತರಬೇತಿ ನೀಡುಲೋಸುಗ ನಿಯತವಾಗಿ ತರಗತಿಗಳನ್ನು ನಡೆಸಿದರು. 'ವಾಲಂಟಿಯರ್' (ಸ್ವಯಂಸೇವಕ) ಎಂಬ ಒಂದು ಇಂಗ್ಲಿಷ್ ಭಾಷೆಯ ಮಾಸಿಕವನ್ನೂ ಸಹ ಪ್ರಕಟಿಸಲು ಪ್ರಾರಂಭಿಸಿದರು.

ಹುಬ್ಬಳ್ಳಿ ಯುವಕರಿಗೆ ಶಾರೀರಿಕ ತರಬೇತು ನೀಡುವ ಕೇಂದ್ರವಾಯಿತು. ಬಾಗಲಕೋಟೆಯಲ್ಲೂ ಸಹ ಶಾರೀರಿಕ ತರಬೇತಿ ಸಂಸ್ಥೆಯೊಂದು ಸ್ಥಾಪನೆಯಾಯಿತು. ಸೇವಾದಳವು ಕಾಂಗ್ರೆಸ್ಸಿನ ಒಂದು ಅಂಗವಾಯಿತು. ಸೇವಾದಳ ಮಾಡಿದ ಸೇವೆ ಹೆಚ್ಚು ಶ್ಲಾಘನೆಗೊಳಗಾಯಿತು. ೧೯೩೧ರಲ್ಲಿ ಸೇವಾದಳವನ್ನು ಕಾಂಗ್ರೆಸ್ಸಿನ ತೆಕ್ಕೆಗೆ ತರಲಾಯಿತು. ಡಾ.ಹರ್ಡೀಕರ್ ಹಾಗೂ ಪಂಡಿತ್ ನೆಹರೂರವರ ಉಸ್ತುವಾರಿಗೆ ಅದನ್ನು ವಹಿಸಿತಾದರೂ ಹುಬ್ಬಳ್ಳಿ ಮಾತ್ರ ಅದರ ಕೇಂದ್ರವಾಗಿ ಮುಂದುವರಿಯಿತು.

ಸೇವಾದಳವು ಒಂದು ಸ್ವಯಂಸೇವಕ ಸಂಘಟನೆಯಾಯಿತು. ಸ್ವಯಂ ಸೇವಕ ದಳ ಒಂದು ಶಾಂತಿಯುತ ಕಾರ್ಯಕರ್ತರ ತಂಡವಾಗಿತ್ತು. ಗಾಂಧೀಜಿಯವರ ಅಹಿಂಸಾ ಹೋರಾಟವನ್ನು ಅವರು ಸಂಪೂರ್ಣವಾಗಿ ಎತ್ತಿ ಹಿಡಿದಿದ್ದರು. ಸೇವಾದಳದ ಮುಖ್ಯ ಗುರಿಯೆಂದರೆ ಯುವಕರಲ್ಲಿ ಶಿಸ್ತನ್ನು ಮೂಡಿಸುವುದು. ಶಾರೀರಿಕ ತರಬೇತಿಯ ಅಗತ್ಯವನ್ನು ಈ ಸಂಘಟನೆಯನ್ನು ಒತ್ತು ನೀಡಿ ಪ್ರತಿಪಾದಿಸಿತು. ಕರ್ನಾಟಕದ ಇತರ ಭಾಗಗಳ ಯುವಕರು ತರಬೇತಿಗಾಗಿ ಸೇವಾದಳ ಕೇಂದ್ರಕ್ಕೆ ಬಂದರು. ಕರ್ನಾಟಕದಾದ್ಯಂತ ಶಾರೀರಿಕ ತರಬೇತು ಶಿಬಿರಗಳು ಸ್ಥಾಪನೆಗೊಂಡವು. ದೇಶದ ಯುವಕರಲ್ಲಿ ಸೇವಾದಳವು ರಾಷ್ಟ್ರಪ್ರೇಮವನ್ನು ಮೂಡಿಸಿತ್ತು.

ಬೆಳಗಾವಿ ಅಧಿವೇಶನದಲ್ಲಿ ಸ್ವಯಂಸೇವಕ ದಳದವರು ಸಲ್ಲಿಸಿದ ಸೇವೆಯನ್ನು ರಾಷ್ಟ್ರೀಯ ನಾಯಕರು ಮುಕ್ತಕಂಠದಿಂದ ಹೊಗಳಿದರು. ಕಾಂಗ್ರೆಸ್ ಅಧಿವೇಶನ ಹಾಗೂ ವೀಕ್ಷಕರಿಗೆ ಎಲ್ಲಾ ರೀತಿಯ ಏರ್ಪಾಟುಗಳನ್ನು ಸ್ವಯಂಸೇವಕರೇ ಮಾಡಿದ್ದರು. ಅನೇಕ ಸ್ಥಳಗಳಿಂದ ಸ್ವಯಂಸೇವಕ ದಳದವರು ಬಂದಿದ್ದರು. ಬೆಂಗಳೂರಿನಿಂದ ಸುಮಾರು ೫೦ ಮಂದಿ ಸ್ವಯಂಸೇವಕರು ಹೋಗಿದ್ದರು. ಯುವಕರು ಪ್ರದರ್ಶಿಸಿದ ದಕ್ಷತೆಯಿಂದ ಸರಿಯಾದ ರೀತಿಯಲ್ಲಿ ತರಬೇತಿ ನೀಡಿ ಮಾರ್ಗದರ್ಶನ ನೀಡಿದ್ದೇ ಆದರೆ ಭಾರತದ ಯುವಜನರು ಯಾವುದೇ ಬಗೆಯ ರಾಷ್ಟ್ರೀಯ ಸೇವೆಗೆ ಸಿದ್ಧರು ಎಂಬುದು ಸಾಬೀತಾಯಿತು.[೬] ಕರ್ನಾಟಕದಲ್ಲಿ ಉದಯಿಸಿದ ಸೇವಾದಳ ತಾಯ್ನಾಡಿನ ಸೇವೆಯ ಮೂಲಕ ತನ್ನದೇ ಆದ ಒಂದು ಗೌರವಸ್ಥಾನವನ್ನು ಪಡೆದುಕೊಂಡಿತು.

ಬೆಳಗಾವಿ ಅಧಿವೇಶನ ಹಾಗೂ ಕಾನೂನುಭಂಗ ಚಳವಳಿಗೆ ಕರೆ ನೀಡಿದ ಕಾಲಾವಧಿ ರಾಜಕೀಯ ಚಟುವಟಿಕೆಯ ಒಂದು ಕೊಂಡಿ ಕಂಡುಕೊಂಡಿತು. ಈ ಕಾಲ ವಾಸ್ತವವಾಗಿ ಸಂಕೀರ್ಣವಾದ ರಾಜಕೀಯ ಬೆಳವಣಿಗೆಯನ್ನು ಕಂಡ ಕಾಲ ಎನ್ನಬೇಕು. ಆದರೆ ರಚನಾತ್ಮಕ ಕಾರ್ಯಕ್ರಮದ ಬಗ್ಗೆ ತೀವ್ರವಾದ ಪ್ರಚಾರ ಕೂಡ ಮುಂದುವರಿಯಿತು. ಕರ್ನಾಟಕದ ಗ್ರಾಮಾಂತರ ಪ್ರದೇಶಗಳಲ್ಲಿ ಖಾದಿ ಕಾರ್ಯಕ್ರಮ ಬಹಳ ಜನಪ್ರಿಯವಾಯಿತು. ರಾಷ್ಟ್ರೀಯ ಶಾಲೆಗಳನ್ನು ತೆರೆಯಲಾರಂಭಿಸಿದರು. ಹರಿಜನೋದ್ಧಾರಕ್ಕಾಗಿ ಅಸ್ಪೃಶ್ಯತಾ-ವಿರೋಧಿ ಪ್ರಚಾರ ಪ್ರಾರಂಭವಾಯಿತು. ಈ ನಿಟ್ಟಿನಲ್ಲಿ ಮಹಿಳೆಯರು ಹಾಗೂ ವಿದ್ಯಾರ್ಥಿಗಳು ಹಮ್ಮಿಕೊಂಡ ಕಾರ್ಯಕ್ರಮ ನಿಜಕ್ಕೂ ಶ್ಲಾಘನೀಯವಾದುದು. ಹಿಂದಿಯನ್ನು ಕೂಡ ಹೆಚ್ಚು ಜನಪ್ರಿಯ ಗೊಳಿಸಲಾಯಿತು. ಕರ್ನಾಟಕದಲ್ಲಿ ಈ ಭಾಷೆಯನ್ನು ಜನಪ್ರಿಯಗೊಳಿಸುವ ಜವಾಬ್ದಾರಿಯನ್ನು ಸೇವಾದಳ ಕೈಗೆತ್ತಿಕೊಂಡಿತು. ಇಂಗ್ಲಿಷ್ ಭಾಷೆಯಲ್ಲಿ ಪ್ರಕಟಗೊಳುತ್ತಿದ್ದ 'ವಾಲಂಟಿಯರ್' ಮಾಸಿಕವನ್ನು ಹಿಂದಿಯಲ್ಲೂ ಪ್ರಕಟಿಸಲಾರಂಭಿಸಿದರು. ಸೇವಾದಳ ಶಿಬಿರಗಳಲ್ಲಿ ಹಿಂದಿಯನ್ನು ಬೋಧಿಸಲು ತರಬೇತುದಾರರನ್ನು ನೇಮಿಸಲಾಯಿತು. ಕರ್ನಾಟಕದಲ್ಲಿ ಹಿಂದಿಯನ್ನು ಜನಪ್ರಿಯಗೊಳಿಸಿದ ಕೀರ್ತಿ ಎನ್. ಎಸ್. ಹರ್ಡೀಕರರಿಗೆ ಸಲ್ಲಬೇಕು.

ವಿದೇಶಿ ಬಟ್ಟೆ ಮಾರಾಟದ ಅಂಗಡಿಗಳು ಹಾಗೂ ಮದ್ಯದ ಅಂಗಡಿಗಳ ಮುಂದೆ ವಿದ್ಯಾರ್ಥಿಗಳು ಧರಣಿ ನಡೆಸಿದರು. ದೇಶೀಯ ಕೈಗಾರಿಕೆಗಳ ಪುನಶ್ಚೇತನ ಕಾರ್ಯಕ್ರಮದ ಅಗತ್ಯತೆಯ ಬಗ್ಗೆ ಅವರು ಪ್ರಚಾರ

ಮಾಡಿದರು. ಈ ನಿಟ್ಟಿನಲ್ಲಿ ಮೈಸೂರು ರಾಜ್ಯವು ಹಿಂದೆ ಬೀಳಲಿಲ್ಲ. ಇಲ್ಲಿಯೂ ಕೂಡ ಹಿಂದಿ ತರಗತಿಗಳು ಆರಂಭವಾದವು. ಖಾದಿ ಹಾಗೂ ಹರಿಜನೋದ್ಧಾರ ಕಾರ್ಯಕ್ರಮಗಳು ರಾಜ್ಯದಲ್ಲಿ ಉತ್ತೇಜನ ಪಡೆದವು. ರಚನಾತ್ಮಕ ಕಾರ್ಯಕ್ರಮದ ಕೆಲವು ಅಂಶಗಳತ್ತ ಮಹಾರಾಜರು ವಿಶೇಷ ಗಮನ ಹರಿಸುವುದರ ಮೂಲಕ ರಾಜ್ಯ ಸರ್ಕಾರವು ಹೆಚ್ಚು ಆಸಕ್ತಿಯನ್ನು ಪ್ರಕಟಿಸಿತ್ತು.

ಮಹಾತ್ಮರ ಅಸಹಕಾರ ಚಳವಳಿಗೆ ಕರ್ನಾಟಕದ ವಿದ್ಯಾರ್ಥಿಗಳು ಉತ್ಸಾಹದಿಂದ ಸ್ಪಂದಿಸಿದರು. ಉಪ್ಪಿನ ಕಾನೂನನ್ನು ಮುರಿಯುವುದರ ಮೂಲಕ ಚಳವಳಿಯನ್ನು ತೀವ್ರಗೊಳಿಸಲಾಯಿತು. ತರಬೇತು ಪಡೆದ ಸ್ವಯಂಸೇವಕರು ಯಾತ್ರೆಯನ್ನು ಸೇರಿಕೊಂಡು ಉಪ್ಪಿನ ಕಾನೂನು ಭಂಗದಲ್ಲಿ ಭಾಗವಹಿಸಿದರು. ಹೋದಲ್ಲೆಲ್ಲಾ ವಿದ್ಯಾರ್ಥಿಗಳು ಕಾನೂನು ಭಂಗಕ್ಕೆ ಹೊರಟ ಯಾತ್ರಿಕರನ್ನು ಕೂಡಿಕೊಂಡರು. 'ಮಹಾತ್ಮಾ ಗಾಂಧೀ ಕಿ ಜೈ' ಎಂಬ ಕೂಗು ಮುಗಿಲು ಮುಟ್ಟಿತ್ತು. ವಿದ್ಯಾರ್ಥಿಗಳು ಹಾಗೂ ನಿರುದ್ಯೋಗಿ ಯುವಕರು ಚಳವಳಿಯಲ್ಲಿ ಭಾಗವಹಿಸಿ ಕಾರ್ಯಕರ್ತರ ಸಂಖ್ಯೆಯನ್ನು ಹೆಚ್ಚಿಸಿದರು. ಉಪ್ಪಿನ ಸತ್ಯಾಗ್ರಹ, ಮೆರವಣಿಗೆಗಳು, ಸಭೆಗಳು, ಭಾಷಣಗಳು, ಬಹಿಷ್ಕಾರ, ಪಿಕೆಂಟಿಂಗ್, ಟೆಲಿಗ್ರಾಫ್ ತಂತಿಯನ್ನು ಕತ್ತರಿಸುವಂಥ ಹಲವಾರು ಕಾರ್ಯಕ್ರಮಗಳಲ್ಲಿ ವಿದ್ಯಾರ್ಥಿಗಳು ಭಾಗವಹಿಸಿದ್ದರು. ಪೋಲೀಸರು ಇವರನ್ನು ದಮನ ಮಾಡಲು ನಿಂತರು. ಅಸಹಕಾರ ಚಳವಳಿಯ ಚಟುವಟಿಕೆಗಳನ್ನು ನಿರೋಧಿಸಲು ಉಪ್ಪಿನ ಗಸ್ತುಗಳನ್ನು ಏರ್ಪಡಿಸಲಾಯಿತು. ಗಸ್ತುದಾರರು ನಿಷೇಧಿಸಿದ ಉಪ್ಪಿನ ತಯಾರಿಕೆಯಲ್ಲಿ ಬಳಸಲಾದ ಉಪಕರಣಗಳನ್ನು ವಶಪಡಿಸಿಕೊಂಡರು. ಸ್ವಯಂಸೇವಕರ ಸತ್ಯಾಗ್ರಹ ಶಿಬಿರಗಳನೇಕವನ್ನು ಬಲಾತ್ಕಾರವಾಗಿ ಒಡೆಯಲಾಯಿತು.

ಮಂಗಳೂರಿನ ಬಳಿ ಬುರ್ಲಿ ಶೇಷಣ್ಣನವರ ನೇತೃತ್ವದಲ್ಲಿ ಉಪ್ಪಿನ ತಯಾರಿಕೆಯಲ್ಲಿ ತೊಡಗಿದ್ದ ವಿದ್ಯಾರ್ಥಿಗಳನ್ನು ಪೋಲೀಸಿನವರು ಚೆನ್ನಾಗಿ ಥಳಿಸಿದರು. ಹರತಾಳಗಳಲ್ಲಿ ಭಾಗವಹಿಸುವ ಸಲುವಾಗಿ ವಿದ್ಯಾರ್ಥಿಗಳು ಶಾಲಾ ಕಾಲೇಜುಗಳಿಗೆ ಗೈರುಹಾಜರಾದರು. ಅವರಲ್ಲಿ ಕೆಲವರು ಶಾಶ್ವತವಾಗಿ ಶೈಕ್ಷಣಿಕ ಸಂಸ್ಥೆಗಳಿಂದ ಹೊರಗೆ ಬಂದರು. ವಿದ್ಯಾರ್ಥಿಗಳು ಇಂಥ ಚಟುವಟಿಕೆಗಳಲ್ಲಿ ಭಾಗವಹಿಸದಂತೆ ಅಧಿಕಾರಿಗಳು ತಡೆಯೊಡ್ಡಲು ಪ್ರಯತ್ನಿಸಿದರಾದರೂ ಅವರು ಯಶಸ್ವಿಯಾಗಲಿಲ್ಲ. ಶಾಲಾ ಕಾಲೇಜುಗಳ ವಿದ್ಯಾರ್ಥಿಗಳು ಗಾಂಧೀ ಟೋಪಿಯನ್ನು ಹಾಕುತ್ತಿದ್ದು, ವಿಶೇಷವಾಗಿ ಗಮನ ಸೆಳೆಯುತ್ತಿತ್ತು. ಸ್ವಯಂಸೇವಾ ದಳದವರು ಧ್ವಜಾರೋಹಣ ಹಾಗೂ ರಾಷ್ಟ್ರೀಯ ಗೀತೆಗಳು ಮತ್ತು ಕ್ರಾಂತಿಗೀತೆಗಳನ್ನು ಹಾಡುವುದನ್ನು ಮುಂದುವರಿಸಿದರು. ಅಂಕೋಲಾದಲ್ಲಿ ಸತ್ಯಾಗ್ರಹ ನಡೆಸಲು ಸ್ವಯಂಸೇವಕರು ಬಳ್ಳಾರಿಯಿಂದ ಹುಬ್ಬಳ್ಳಿಗೆ ಹೊರಟರು. ಮಂಗಳೂರಿನಲ್ಲಿ ಉಪ್ಪಿನ ಕಾನೂನನ್ನು ಭಂಗಗೊಳಿಸಿದಂತೆಯೇ ಉಡುಪಿ, ಕುಂದಾಪುರ, ಹೊಸದುರ್ಗ ಹಾಗೂ ಇತರ ಕಡೆಗಳಲ್ಲೂ ಭಂಗಗೊಳಿಸಲು ಏರ್ಪಾಟಾಯಿತು. ಮಂಗಳೂರಿನಲ್ಲಿ ೧೯೩೦ರ ಏಪ್ರಿಲ್‌ನಲ್ಲಿ ಏರ್ಪಡಿಸಿದ ಸಭೆಯಲ್ಲಿ ವಿದ್ಯಾರ್ಥಿಗಳು ಅತಿ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿದ ಕಾರಣ ಅವರನ್ನು ಹತೋಟಿಯಲ್ಲಿಡುವ ಸಲುವಾಗಿ ಶಾಲೆ ಮತ್ತು ಕಾಲೇಜು ವ್ಯವಸ್ಥಾಪಕರ ಸಹಕಾರವನ್ನು ಕೋರಲಾಯಿತು.[೬]

ಕಾನೂನು ಭಂಗ ಚಳವಳಿಯನ್ನು ಕೈಗೆತ್ತಿಕೊಳ್ಳುವಲ್ಲಿ ಬೊಂಬಾಯಿ ಕರ್ನಾಟಕ ಪ್ರಾಂತ್ಯವು ಇತರರಿಗಿಂತ ಮುಂದಿತ್ತು ಎನ್ನಬೇಕು. ವಿದ್ಯಾರ್ಥಿಗಳು ನಿರ್ಭಯವಾಗಿ ಚಳವಳಿಯಲ್ಲಿ ಧುಮುಕುವಂತೆ ಎನ್.ಎಸ್.ಹರ್ಡೀಕರ್ ಅವರನ್ನು ಹುರಿದುಂಬಿಸುವಲ್ಲಿ ಪ್ರಧಾನಪಾತ್ರವಹಿಸಿದರು. ಸತ್ಯಾಗ್ರಹಿಗಳ ಸೇನೆಯನ್ನು ಸೇರಿಕೊಳ್ಳುವಲ್ಲಿ ವಿದ್ಯಾರ್ಥಿಗಳು ಸ್ಪಂದಿಸಿದರೂ ಕೂಡ. ಜನವರಿ ೨೬, ೧೯೩೦ರ ದಿನವನ್ನು ಸ್ವಾತಂತ್ರ್ಯ ದಿನವನ್ನಾಗಿ ಆಚರಿಸುವಂತೆ ಹರ್ಡೀಕರರು ಮೊದಲು ಹೆಜ್ಜೆ ಇಟ್ಟರು. ಬ್ರಿಟಿಷ್ ಕರ್ನಾಟಕ ಪ್ರಾಂತ್ಯದಲ್ಲಿ ಆದ ಬೆಳವಣಿಗೆಗಳಿಂದ ಸ್ಫೂರ್ತಿ ಪಡೆದು ಮೈಸೂರು ಸಂಸ್ಥಾನದ ವಿದ್ಯಾರ್ಥಿಗಳೂ ಕೂಡ ಸ್ವಾತಂತ್ರ್ಯ ದಿನವನ್ನಾಚರಿಸಿದರು.

ರಾಷ್ಟ್ರ ಧ್ವಜಾರೋಹಣ ಮಾಡಲು ಮುಂದಾದರು. ಶಿಕ್ಷಣ ಇಲಾಖೆಯವರು ಮೇಲಿಂದ ಮೇಲೆ ನೀಡಿದ ಎಚ್ಚರಿಕೆಯನ್ನು ಲೆಕ್ಕಿಸದೆ ವಿದ್ಯಾರ್ಥಿಗಳು ಧ್ವಜಾರೋಹಣ ಕಾರ್ಯಕ್ರಮವನ್ನು ನಡೆಸಿಯೇಬಿಟ್ಟರು.

ಉಪ್ಪಿನ ಸತ್ಯಾಗ್ರಹದಲ್ಲಿ ಬಹುಸಂಖ್ಯೆಯಲ್ಲಿ ವಿದ್ಯಾರ್ಥಿಗಳು ಭಾಗವಹಿಸಿದರು. ಹುಬ್ಬಳ್ಳಿ, ಬೆಳಗಾವಿ ಮತ್ತಿತರ ಸ್ಥಳಗಳಿಂದ ಸ್ವಯಂಸೇವಕರು ಅಂಕೋಲಾಕ್ಕೆ ಹೋದರು. ಸಿರ್ಸಿ, ಸಿದ್ದಾಪುರ, ಹೊನ್ನಾವರ ಮತ್ತು ಕುಮಟಾಗಳಿಂದಲೂ ಸ್ವಯಂಸೇವಕರು ಅಂಕೋಲಾಕ್ಕೆ ಹೋದರು. ಮೈಸೂರು ರಾಜ್ಯದಿಂದಲೂ ಸಹ ಹೊರಟ ಒಂದು ತುಕಡಿ ಸ್ವಯಂಸೇವಕರು ಅಂಕೋಲಾದ ಕಡೆ ಪ್ರಯಾಣ ಬೆಳೆಸಿದರು. ಬ್ರಿಟಿಷ್ ಭಾರತ ಪ್ರಾಂತ್ಯದಲ್ಲಿದ್ದವರೊಡನೆ ತಮ್ಮನ್ನು ಗುರ್ತಿಸಿಕೊಳ್ಳಲು ವಿದ್ಯಾರ್ಥಿಗಳು ಪ್ರಾರಂಭಿಸಿದರು. ಉಪ್ಪಿನ ಪ್ರಾಮುಖ್ಯತೆಯನ್ನು ಒತ್ತಿ ಹೇಳುತ್ತಾ ಗಾಂಧೀಜಿಯವರು 'ಉಪ್ಪಿಗೆ ಉಪ್ಪಿನ ಗುಣವಿಲ್ಲದಿದ್ದರೆ ಅದನ್ನು ಬೇರೆಲ್ಲಿಂದ ತರುವುದು? ಟೊಳ್ಳಾದ, ಅರ್ಥವಿಲ್ಲದ ಕೂಗಾಟದಿಂದಲ, ಇದಕ್ಕೆ ಬದಲಾಗಿ ವಿದ್ಯಾರ್ಥಿಗಳಿಗೆ ಶೋಭೆ ನೀಡುವ ರೀತಿಯಲ್ಲಿ ಘನತೆಯಿಂದ ಮತ್ತು ಪಂಥಾಹ್ವಾನವಿಲ್ಲದ ರೀತಿಯ ಕ್ರಿಯೆಯಿಂದ' ಎಂದು ನುಡಿದರು. ಮುಂದುವರಿದು, "ಒಂದು ವೇಳೆ ಕಾನೂನು ಭಂಗ ಚಳವಳಿಯು ಈ ಪರಿಪೂರ್ಣವಾದ ರೀತಿಯಲ್ಲಿ ಬೆಳೆಯಲಾಗದ ಪಕ್ಷದಲ್ಲಿ ಇನ್ನೊಂದು ತಲೆಮಾರಿನವರೆಗೆ ಅದು ವಿಕಸಿಸಲಾರದೇನೊ. ವಿದ್ಯಾರ್ಥಿಗಳ ಮುಂದಿನ ಆಯ್ಕೆ ಸ್ಪಷ್ಟವಾಗಿಯೇ ಇದೆ....." ಗಾಂಧೀಜಿಯವರು ಆಡಿದ ಈ ಛೇಡಿಕೆಯ ಮಾತುಗಳಿಂದ ವಿದ್ಯಾರ್ಥಿಗಳು ಎಷ್ಟು ಎಚ್ಚರಗೊಂಡರೆಂದರೆ ಚಳವಳಿಯಲ್ಲಿ ಭಾಗವಹಿಸದಂತೆ ತಡೆಯುವ ಯಾವುದೇ ಶಕ್ತಿ ಅವರ ಎದುರ ನಿಲ್ಲುವ ಸಂಭವವೇ ಇರಲಿಲ್ಲ.[೮]

ಮೈಸೂರು ರಾಜ್ಯದಲ್ಲೂ ಸಹ ಮೆರವಣಿಗೆಗಳು ಹಾಗೂ ಪ್ರದರ್ಶನಗಳು ನಡೆಯಲಾರಂಭವಾದವು. ಕೇವಲ ಇಂಥ ಚಟುವಟಿಕೆಗಳಲ್ಲಿ ಮಾತ್ರ ಭಾಗವಹಿಸದೆ ರಚನಾತ್ಮಕ ಕಾರ್ಯಕ್ರಮಗಳ ಪ್ರಚಾರ ಕಾರ್ಯದಲ್ಲೂ ಕೂಡ ವಿದ್ಯಾರ್ಥಿಗಳು ಪಾಲ್ಗೊಂಡರು. ಪಿಕೆಟಿಂಗ್ ಮತ್ತು ಬಹಿಷ್ಕಾರಗಳು ರಾಜ್ಯದಲ್ಲಿ ಹೆಚ್ಚು ಜನಪ್ರಿಯವಾದವು. ಮದರಾಸು ಪ್ರೆಸಿಡೆನ್ಸಿಯಲ್ಲಿ ಪ್ರಸಿದ್ಧ ಚಳವಳಿಗಾರರಾದ ವಿ.ಎ.ಸುಂದರಮ್‌ರವರ ನೇತೃತ್ವದಲ್ಲಿ ಬೆಂಗಳೂರಿನಿಂದ ಹೊರಟ ಯುವಕರ ತಂಡವೊಂದು ತಿರುಚಿನಾಪಳ್ಳಿ ತಲುಪಿ ಅಲ್ಲಿ ಮೂರು ಕಾಲೇಜುಗಳ ಮುಂದೆ ಪಿಕೆಟಿಂಗ್ ನಡೆಸಿತು.[೯]

ಇದಕ್ಕೆ ಮೊದಲು ಮೈಸೂರು ಸಂಸ್ಥಾನದ ವಿದ್ಯಾರ್ಥಿಗಳು 'ಸೈಮನ್ ವಾಪಸ್ಸು ಹೋಗಿ' ಕರೆಯಲ್ಲೂ ಭಾಗವಹಿಸಿದ್ದರು. ಸೈಮನ್ ವರದಿಯು ರಾಷ್ಟ್ರೀಯ ಅವಮಾನವಾಗಿ ಗೋಚರಿಸಿದ ಕಾರಣ ವಿದ್ಯಾರ್ಥಿಗಳು ಸಹಜವಾಗಿಯೇ ಇದರಿಂದ ಕುದಿದೆದ್ದರು. ಮೈಸೂರ್ ಸ್ಟಾರ್, ಚಿತ್ರಗುಪ್ತ, ನವಜೀವನ ಮುಂತಾದ ವೃತ್ತ ಪತ್ರಿಕೆಗಳು ಯುವಕರ ಚಳವಳಿಯನ್ನು ಹತ್ತಿಕ್ಕುವ ಸರ್ಕಾರದ ದಮನಕಾರಿ ನೀತಿಯನ್ನು ಕಟುವಾದ ನುಡಿಗಳಲ್ಲಿ ಖಂಡಿಸಿದ್ದವು. ರಾಷ್ಟ್ರದ ಭಾವೀ ಪ್ರಜೆಗಳಾದ ವಿದ್ಯಾರ್ಥಿಗಳು ರಾಜಕೀಯ ಚಳವಳಿಯಲ್ಲಿ ಭಾಗವಹಿಸುವುದು ಅವರ ಕರ್ತವ್ಯವಾಗಿದ್ದು ವರ್ತಮಾನದ ಪರಾವಲಂಬಿ ಸ್ಥಿತಿಯಿಂದ ಭಾರತವನ್ನು ಬಿಡುಗಡೆ ಮಾಡಬೇಕೆಂಬುದನ್ನು ಅವರಿಗೆ ಮನದಟ್ಟು ಮಾಡಲಾಯಿತು.[೧೦]

ಕೊಡಗಿನಲ್ಲೂ ಕಾನೂನು ಭಂಗ ಚಳವಳಿಯ ಕಾವು ಕಾಣಿಸಿಕೊಂಡಿತು. ಖಾದಿ ಮತ್ತಿತರ ದೇಶೀಯ ಕೈಗಾರಿಕೆಗಳು ಜನಪ್ರಿಯಗೊಂಡವು. ಸಾರಾಯಿ ಅಂಗಡಿಗಳ ಮುಂದೆ ಪಿಕೆಟಿಂಗ್ ನಡೆಸುವುದು ಮುಂದುವರಿಯಿತು. ಚಳವಳಿಯ ನಾಯಕತ್ವ ವಹಿಸಿದ್ದ ಪಿ.ಐ.ಬೆಳ್ಳಿಯಪ್ಪನವರು ತಮ್ಮ ದಸ್ತಗಿರಿ ಸಂದರ್ಭದಲ್ಲಿ ವಿದ್ಯಾರ್ಥಿಗಳಿಗೆ ಕರೆ ನೀಡಿ ಮುಷ್ಕರ ಪ್ರಾರಂಭಿಸಿ ಮೆರವಣಿಗೆ ತೆಗೆಯಲು ತಿಳಿಸಿದರು.[೧೧]

ಮೈಸೂರು ಸಂಸ್ಥಾನದ ಸರ್ಕಾರವು ವಿದ್ಯಾರ್ಥಿಗಳು ಕಾನೂನು ಭಂಗ ಚಳವಳಿಯಲ್ಲಿ ಭಾಗವಹಿಸದಂತೆ ಮಾಡಲು ಅನೇಕ ರೀತಿಯಲ್ಲಿ ಪ್ರಯತ್ನಿಸಿತು. ತಿಪಟೂರಿನಲ್ಲಿ ಭಾಷಣ ಮಾಡುತ್ತಿದ್ದ ಸಂದರ್ಭದಲ್ಲಿ ದಿವಾನರಾಗಿದ್ದ ಮಿರ್ಜಾ ಇಸ್ಮಾಯಿಲ್ಲರು ವಿದ್ಯಾರ್ಥಿಗಳು ರಾಜಕೀಯದಲ್ಲಿ ಭಾಗವಹಿಸುವುದರಿಂದ ತಲೆದೋರುವ 'ಕೇಡಿನ' ಬಗ್ಗೆ ಪ್ರಸ್ತಾಪ ಮಾಡಿದರು. ಹಾಗಾಗಿ ಸರ್ಕಾರವು ಅನೇಕ ದಮನಕಾರಿ ಕ್ರಮಗಳನ್ನು ಜಾರಿಗೊಳಿಸಿತು. ಮೈಸೂರು ವಿಶ್ವವಿದ್ಯಾನಿಲಯ ಹಾಗೂ ಮಹಾರಾಜಾ ಕಾಲೇಜಿನ ಆಡಳಿತ ವರ್ಗ ವಿದ್ಯಾರ್ಥಿಗಳು ಚಳವಳಿಯಲ್ಲಿ ಭಾಗವಹಿಸದಂತೆ ಆದೇಶ ಹೊರಡಿಸಿದ್ದವು. ವಿದ್ಯಾರ್ಥಿ ಮುಷ್ಕರಗಳನ್ನು ಬಗ್ಗು ಬಡಿಯಲಾಯಿತಲ್ಲದೆ ಮುಷ್ಕರಗಳನ್ನು ಅನೈತಿಕವೆಂದು ಘೋಷಿಸಲಾಯಿತು. ವಿದ್ಯಾರ್ಥಿ ಸಮುದಾಯ ಹೆಚ್ಚಿನ ಸಂಖ್ಯೆಯಲ್ಲಿ ಈ ಚಳವಳಿಯಲ್ಲಿ ಭಾಗವಹಿಸುವುದನ್ನು ತಪ್ಪಿಸಲಾಗದೆ ಸರ್ಕಾರ ಪರಾಭವಗೊಂಡ ಬಳಿಕ ಬ್ರಿಟಿಷ್ ಭಾರತದ ಅಸಹಾಯಕತೆಯೇ ಸಂಸ್ಥಾನದಲ್ಲೂ ಪ್ರತಿಫಲನವಾಯಿತು.

ದಕ್ಷಿಣ ಕನ್ನಡದಲ್ಲಿ ಪ್ರತಿಭಟನಾ ಮೆರವಣಿಗೆಗಳು ಹಾಗೂ ಪ್ರದರ್ಶನಗಳು ಹೆಚ್ಚು ಹೆಚ್ಚು ಜನಪ್ರಿಯವಾದವು. ಅನೇಕ ಕಡೆ ವಿದ್ಯಾರ್ಥಿಗಳು ಹರತಾಳವನ್ನು ನಡೆಸಿದರು. ಅಂಥ ಕೇಂದ್ರಗಳಲ್ಲಿ ಮುಖ್ಯವಾದವು, ಮಂಗಳೂರು, ಉಡುಪಿ, ಕುಂದಾಪುರ, ಕಾರ್ಕಾಳ, ಕಾಸರಗೋಡು, ಬಂಟ್ವಾಳ, ಗುರ್‌ಪುರ, ಬಜ್ಪೆ, ಕಟೀಲ್, ಕಿನ್ನಿಗೋಲಿ, ಪುತ್ತೂರು ಇತ್ಯಾದಿ. ಮಂಗಳೂರಿನಲ್ಲಿ ವಿದ್ಯಾರ್ಥಿಗಳು ಶೈಕ್ಷಣಿಕ ಸಂಸ್ಥೆಗಳಿಂದ ಹೊರಗುಳಿದರು. ಹರತಾಳ ಮತ್ತಿತರ ಸಂಬಂಧೀ ಚಟುವಟಿಕೆಗಳು ಸರ್ಕಾರಿ ಕಾಲೇಜು ವಿದ್ಯಾರ್ಥಿಗಳಿಂದ ಮಾತ್ರ ನಡೆಯಿತಲ್ಲದೆ ಅನುದಾನಿತ ಶಾಲೆ ಕಾಲೇಜುಗಳ ವಿದ್ಯಾರ್ಥಿಗಳು ಕ್ರೌರ್ಯಕ್ಕೆ ಹೆದರಿ ತಟಸ್ಥರಾಗುಳಿದರು. ವಾಸ್ತವವಾಗಿ ಸೇಂಟ್ ಅಲೋಷಿಯಸ್ ಹಾಗೂ ಬಾಸೆಲ್ ಮಿಷನ್ ಸ್ಕೂಲುಗಳಲ್ಲಿ ಮಿಶ್ರ ಪ್ರತಿಕ್ರಿಯೆ ವ್ಯಕ್ತವಾಯಿತು. ಫೆಬ್ರವರಿ ೨೬, ೧೯೩೨ರಂದು ಹರತಾಳ ಆಚರಿಸಿದ ಸಂದರ್ಭದಲ್ಲಿ ಗಣಪತಿ ಶಾಲೆ ಹಾಗೂ ಕೆನರಾ ಶಾಲೆಗಳಲ್ಲಿ ಬಹುಸಂಖ್ಯೆಯಲ್ಲಿ ವಿದ್ಯಾರ್ಥಿಗಳು ಗೈರುಹಾಜರಾಗಿದ್ದರು. ಆ ದಿನದಂದು ಶಾಲೆಗೆ ಮಕ್ಕಳು ಹಾಜರಾಗದ ಕಾರಣ ಅವರು ರಾಜಕೀಯ ಚಟುವಟಿಕೆಯಲ್ಲಿ ತೊಡಗಿರಲಿ ಇಲ್ಲದಿರಲಿ ಅವರ ತಂದೆ ತಾಯಿಗಳು ತಲಾ ೮ ಆಣೆ ದಂಡ ತೆರುವಂತೆ ಆದೇಶ ನೀಡಲಾಯಿತು.[೧೨] ಸರ್ಕಾರದ ಕ್ರೌರ್ಯ ಆ ಪ್ರಮಾಣದಲ್ಲಿತ್ತು.

ಸರ್ಕಾರಿ ಕಾಲೇಜಿನ ವಿದ್ಯಾರ್ಥಿಗಳ ಚಟುವಟಿಕೆಯಂತೂ ಆಡಳಿತ ವರ್ಗಕ್ಕೆ ಅಹಿತವಾಗಿ ಕಂಡಿತ್ತು. ಸರ್ಕಾರ ನಡೆಸುವ ಶೈಕ್ಷಣಿಕ ಸಂಸ್ಥೆಗಳಲ್ಲಿ ಹೆಚ್ಚಿನ ಶಿಸ್ತು ಇಲ್ಲದಿರುವುದರ ಬಗ್ಗೆ ಅಧಿಕಾರಿಗಳು ಗಮನ ಸೆಳೆದರು. ಪೋಲೀಸರ ದೌರ್ಜನ್ಯವನ್ನು ಪ್ರತಿಭಟಿಸಲು ಸಹ ಹರತಾಳವನ್ನು ನಡೆಸಲಾಯಿತು. ಗಾಂಧೀಜಿಯವರು ೧೯೩೪ನೇ ಫೆಬ್ರವರಿ ೨೪-೨೮ರವರೆಗೆ ದಕ್ಷಿಣ ಕನ್ನಡದಲ್ಲೂ, ಮಾರ್ಚಿ ೨ ರಿಂದ ೩ರ ವರೆಗೆ ಬಳ್ಳಾರಿಯಲ್ಲೂ ಪ್ರವಾಸ ಕೈಗೊಂಡಾಗ ಉತ್ಸಾಹಭರಿತವಾದ ಸ್ವಾಗತವನ್ನು ಜನರು ಕೋರಿದರು.

ಸಮಾಜವಾದಿ ಸಿದ್ಧಾಂತಗಳು ವಿಶೇಷವಾಗಿ ಪ್ರಸಾರವಾಗಿದ್ದ ಕಾರಣ ಮೈಸೂರು ಪ್ರಾಂತ್ಯದ ಯುವಕರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುವುದರಲ್ಲಿ ಮುಂದಾಗಿದ್ದರು. ಬೊಂಬಾಯಿ ಕರ್ನಾಟಕ ಪ್ರದೇಶದಲ್ಲಿ ಸಮಾಜವಾದಿ ಚಿಂತನೆಗಳು ಆ ವೇಳೆಗಾಗಲೇ ಪ್ರಚಲಿತವಿದ್ದವು. ದಕ್ಷಿಣ ಕನ್ನಡ ಪ್ರಾಂತ್ಯದಲ್ಲೂ ಕೂಡ ಹೆಚ್ಚು ಚಾಲ್ತಿಗೆ ಬಂದಿದ್ದವು. ಮೈಸೂರು ರಾಜ್ಯದಲ್ಲಿ ಆ ವೇಳೆಗೆ ಅನೇಕ ಸಂಘಗಳು ಅಸ್ತಿತ್ವಕ್ಕೆ ಬಂದಿದ್ದವು. ಅವುಗಳಲ್ಲಿ ಕೆಲವನ್ನು ಹೆಸರಿಸಬಹುದಾದರೆ, ಭಾರತ ಸೇವಾದಳದ ಆಶ್ರಯದಲ್ಲಿ ರಚಿತವಾಗಿದ್ದ ಆಂಜನೇಯ ಶಿಬಿರ, ಭಾರತೀಯ ಯುವಕ ಸಂಘ, ಮೈಸೂರು ರಾಜ್ಯ ಯುವಕ ಮಂಡಳ – ಈ ಎಲ್ಲ ಸಂಸ್ಥೆಗಳೂ ೧೯೨೯ರಲ್ಲಿ ಸ್ಥಾಪಿತವಾದವು. ರಾಜಕೀಯ, ನೈತಿಕ ಹಾಗೂ ಬೌದ್ಧಿಕ ವಲಯಗಳಲ್ಲಿ ತರಬೇತು ನೀಡುವುದು

ಈ ಸಂಘಗಳ ಮುಖ್ಯ ಗುರಿಯಾಗಿದ್ದಿತು.[೧] ಬೆಂಗಳೂರಿನಲ್ಲಿ ೧೯೩೨ರಲ್ಲಿ 'ಮಹಾತ್ಮಾಗಾಂಧಿ ತರುಣರ ಸಂಘ' ಎಂಬ ಚರ್ಚಾ ಸಂಘವು ಸ್ಥಾಪನೆಯಾಯಿತು. ಈ ಸಂಘವು ತರುವಾಯದಲ್ಲಿ ರಾಷ್ಟ್ರೀಯ ಯುವಕ ಮಂಡಳವೆಂದು ಕರೆಯಲ್ಪಟ್ಟಿತು. ೧೯೩೪ರಲ್ಲಿ ಕಮಲಾದೇವಿ ಚಟ್ಟೋಪಾಧ್ಯಾಯರು ಮೈಸೂರು ನಗರಕ್ಕೆ ಭೇಟಿ ನೀಡಿದ ನಂತರ 'ಯಂಗ್ ಮೈಸೂರ್ ಲೀಗ್' ಅಸ್ತಿತ್ವಕ್ಕೆ ಬಂದಿತು.

ರಾಜ್ಯದ ಯುವಜನಾಂಗವನ್ನು ಒಟ್ಟುಗೂಡಿಸಿ ಅವರಲ್ಲಿ ಪೂರ್ಣ ಸ್ವರಾಜ್ಯದ ಅಗತ್ಯದ ಬಗ್ಗೆ ಮನವರಿಕೆ ಮಾಡಿಕೊಡುವ ಉದ್ದೇಶದಿಂದ ರಾಷ್ಟ್ರೀಯ ಯುವಕ ಮಂಡಳ ಸ್ಥಾಪನೆಗೊಂಡಿತು. ಮಂಡಳದ ಆಶ್ರಯದಲ್ಲಿ ಅನೇಕ ಸಭೆಗಳು ನಡೆದು ರಾಜಕೀಯ ವಿಚಾರಗಳನ್ನು ವ್ಯಾಪಕವಾಗಿ ಚರ್ಚಿಸಲಾಯಿತು. ಮಂಡಳವು ಸಮಾಜವಾದಿ ಸಿದ್ಧಾಂತಗಳನ್ನು ಪ್ರಚಾರ ಪಡಿಸುವ ಗುರಿಯನ್ನು ಕೂಡ ಹೊಂದಿತ್ತು. ಯುವಕ ಮಂಡಳವು ಅನೇಕ ಚಟುವಟಿಕೆಗಳನ್ನು ಹಮ್ಮಿಕೊಂಡಿತು; ಅವುಗಳಲ್ಲಿ ಕೆಲವನ್ನು ಹೆಸರಿಸುವುದಾದರೆ: ತಿಲಕರ ದಿನಾಚರಣೆ, ಗಾಂಧಿ ಜಯಂತಿ, ಮೋತಿಲಾಲರ ದಿನಾಚರಣೆ, ಖಾದಿ ಉತ್ತೇಜನ, ಕೋಮು ಸೌಹಾರ್ದ, ಅಸ್ಪೃಶ್ಯತಾ ವಿರೋಧ ಹಾಗೂ ಎಲ್ಲಕ್ಕಿಂತ ಮಿಗಿಲಾಗಿ ಯುವಕರು ಸ್ವಾವಲಂಬನೆಯನ್ನು ಸಾಧಿಸಲು ಅನುಕೂಲವಾಗುವಂತೆ ಅವರನ್ನು ಒಗ್ಗೂಡಿಸಿ ಅವರಲ್ಲಿ ಸಹಕಾರ ಮನೋಭಾವನೆಯನ್ನು ಬೆಳೆಸುವುದು ಈ ಕಾರ್ಯಕ್ರಮಗಳಲ್ಲಿ ಸೇರಿತ್ತು.

೧೯೩೦ರಲ್ಲಿ ಬೆಂಗಳೂರಿನಲ್ಲಿ ಮಂಡಳಿಯ ಸಮಾವೇಶವು ಜರುಗಿ ಅಖಿಲ ಭಾರತ ಸಮಾಜವಾದಿ ಪಕ್ಷದ ಮಹಾ ಕಾರ್ಯದರ್ಶಿಯವರಾದ ಶ್ರೀ ಮಸಾನಿಯವರನ್ನು ಮಂಡಳಿಯನ್ನುದ್ದೇಶಿಸಿ ಮಾತನಾಡಲು ಆಹ್ವಾನಿಸಿತ್ತು. ಆದರೆ ಅವರು ಆಗಮಿಸುತ್ತಿದ್ದಂತೆಯೇ ಸಭೆಯನ್ನುದ್ದೇಶಿಸಿ ಅವರು ಮಾತನಾಡದಂತೆ ಅವರಿಗೆ ಆದೇಶ ನೀಡಲಾಯಿತು.[೨] ಮಾರನೆಯ ದಿನ ಮಸಾನಿಯವರ ಲಿಖಿತ ಭಾಷಣವನ್ನು ನೆರೆದಿದ್ದವರ ಮುಂದೆ ಓದಲಾಯಿತು. ಸಮಾಜವಾದಿ ಚಿಂತನೆಗಳು ಎಲ್ಲರ ಗಮನ ಸೆಳೆದಾಗ, ಅದರಲ್ಲೂ ವಿಶೇಷವಾಗಿ ಯುವಕರನ್ನು ಆಕರ್ಷಿಸಲು ಪ್ರಾರಂಭಿಸಿದಾಗ ರಾಜ್ಯ ಸರ್ಕಾರವು ದಿಗಿಲುಗೊಂಡಿತು. ೧೯೩೦ರಲ್ಲಿ ಯುವಕರಲ್ಲಿ ಸಮಾಜವಾದಿ ಸಿದ್ಧಾಂತ ಹಾಗೂ ಸಮತಾವಾದದ ತತ್ವವನ್ನು ತಿಳಿಸಲು ರಾಷ್ಟ್ರ ಸೇವಾ ಸಂಘ ಅಸ್ತಿತ್ವಕ್ಕೆ ಬಂದಿತು. ಸರ್ಕಾರವು ಸಂಘದ ಚಟುವಟಿಕೆಗಳನ್ನು ತುಂಬಾ ಸೂಕ್ಷ್ಮವಾಗಿ ಗಮನಿಸತೊಡಗಿತು. ಸಮಾಜವಾದಿ ಚಿಂತನೆಯನ್ನು ಹೊತ್ತ ಭಾಷಣಗಳನ್ನು ಅಚ್ಚು ಹಾಕದಂತೆ 'ತಾಯಿನಾಡು' ಹಾಗೂ 'ವಿಶ್ವಕರ್ನಾಟಕ' ಪತ್ರಿಕೆಗಳ ಸಂಪಾದಕರಿಗೆ ಎಚ್ಚರಿಕೆ ನೀಡುವಂತೆ ಜಿಲ್ಲಾ ಮ್ಯಾಜಿಸ್ಟ್ರೇಟರಿಗೆ ತಿಳಿಸಲಾಯಿತು. ಈ ಸಂಬಂಧದಲ್ಲೇ ಕಮಲಾದೇವಿ ಚಟ್ಟೋಪಾಧ್ಯಾಯರೇ ಮೊದಲಾದ ನಾಯಕರ ಚಟುವಟಿಕೆಗಳನ್ನು ನಿರ್ಬಂಧಿಸಿ ಆಜ್ಞೆ ಹೊರಡಿಸಲಾಯಿತು. ಆದರೆ ಕಮಲಾದೇವಿ ಚಟ್ಟೋಪಾಧ್ಯಾಯ ಅವರು ಈ ಆಜ್ಞೆಗೆ ದಿಗಿಲುಗೊಳ್ಳದೆ ತಮ್ಮ ಚಟುವಟಿಕೆಗಳನ್ನು ಇನ್ನೂ ತೀವ್ರಗೊಳಿಸಿದರು. ೧೯೩೮ರಲ್ಲಿ ವಿದುರನಗರದಲ್ಲಿ ನಡೆದ ಮೈಸೂರು ಕಾಂಗ್ರೆಸ್ಸಿನ ಸಮಾಜವಾದಿ ಸಮಾವೇಶದಲ್ಲಿ ಸಮಾಜವಾದಿ ತತ್ವಗಳನ್ನು ಸ್ಪಷ್ಟವಾಗಿ ತಿಳಿಸಿದರು. ವಿದ್ಯಾರ್ಥಿ ಅಧಿವೇಶನದಲ್ಲಿ ಅವರು ವಿದ್ಯಾರ್ಥಿಗಳು ರಾಜಕಾರಣದಲ್ಲಿ ಭಾಗವಹಿಸುವಂತೆ ಆಗ್ರಹಪಡಿಸಿದರು. ದಕ್ಷಿಣ ಕನ್ನಡದಲ್ಲೂ ಸಹ ಸಮಾಜವಾದಿ ಚಿಂತನೆಗಳು ಜನಪ್ರಿಯಗೊಂಡವು. ಈ ಚಿಂತನೆಗಳಿಗೆ ಆಕರ್ಷಿತರಾದ ಅನೇಕ ವಿದ್ಯಾರ್ಥಿಗಳು ತಲೆಮರೆಸಿಕೊಂಡರು. ದಕ್ಷಿಣ ಕನ್ನಡದಲ್ಲಿ ಸಮಾಜವಾದಿ ಚಟುವಟಿಕೆಗಳಲ್ಲಿ ತೊಡಗಿದ್ದವರ ವಿರುದ್ಧ ದಸ್ತಗಿರಿ ವಾರೆಂಟನ್ನು ನೀಡಲಾಯಿತು. ವಾರೆಂಟ್ ಹೊಂದಿದ್ದ ಇಬ್ಬರು ಪೋಲೀಸು ಸಿಬ್ಬಂದಿಯ ಮೇಲೆ ಜನರ ಗುಂಪು ಹಲ್ಲೆ ನಡೆಸಿ ಒಬ್ಬನನ್ನು ಕೊಂದಿತು.[೩] ಇಂಥ ಬೆಳವಣಿಗೆಯ ಹಿನ್ನೆಲೆಯಲ್ಲಿ ಸರ್ಕಾರ ತನ್ನ ದೌರ್ಜನ್ಯವನ್ನು ಹೆಚ್ಚಿಸಿತಾದರೂ ಸಂದಿಗ್ಧ ಪರಿಸ್ಥಿತಿಯನ್ನು ಸುಲಭವಾಗಿ ಪರಿಹರಿಸುವಂತಿರಲಿಲ್ಲ.

ಗಾಂಧೀಜಿಯವರ ಕ್ವಿಟ್ ಇಂಡಿಯಾ ಘೋಷಣೆಯಿಂದ ವಿದ್ಯಾರ್ಥಿಗಳ ಉತ್ಸಾಹವು ಮೇರೆ ಮೀರಿತ್ತು. ಮಹಾತ್ಮರು ಪ್ರಾರಂಭಿಸಿದ ಆ ಚಳವಳಿಯಲ್ಲಿ ವಿದ್ಯಾರ್ಥಿಗಳು ಹಾಗೂ ಯುವಕರು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿದ್ದರು. 'ಮಾಡು, ಇಲ್ಲವೆ ಮಡಿ' ಎಂಬ ಘೋಷಣೆಯಿಂದ ಅವರ ಕೆಚ್ಚು ಹೆಚ್ಚಾಗಲು ಕಾರಣವಾಯಿತು. ಪೋಲೀಸರು ತಮ್ಮ ದೌರ್ಜನ್ಯವನ್ನು ಹೆಚ್ಚಿಸಿದಷ್ಟೂ ಅದನ್ನು ಸಹಿಸಿಕೊಳ್ಳುವುದನ್ನು ಕಲಿತ ವಿದ್ಯಾರ್ಥಿಗಳು ಇನ್ನಷ್ಟು ಸಾಹಸವನ್ನು ಪ್ರದರ್ಶಿಸಿದರು. ಮಹಾತ್ಮರೂ ಸೇರಿದಂತೆ ಇನ್ನಿತರರು ದಸ್ತಗಿರಿಯಾದ ಸಂದರ್ಭದಲ್ಲಿ ಅವರಿಗೆ ಮಾರ್ಗದರ್ಶನ ಮಾಡುವವರು ಕಾಣಲಿಲ್ಲ. ನಾಯಕರನ್ನು ದಸ್ತಗಿರಿ ಮಾಡಿ ಕಾಂಗ್ರೆಸ್ ಸಂಘಟನೆಯನ್ನು ಬಹಿಷ್ಕರಿಸದ ಹಿನ್ನೆಲೆಯಲ್ಲಿ ವಿದ್ಯಾರ್ಥಿಗಳು ತಮ್ಮ ಹೋರಾಟವನ್ನು ಇನ್ನಷ್ಟು ದೃಢಪಡಿಸಲು ಉತ್ತೇಜಿತರಾದರು. ಆ ವೇಳೆಗೆ ಹೋರಾಟದಲ್ಲಿ ಪಳಗಿದ ವಿದ್ಯಾರ್ಥಿಗಳು ರಾಜಕೀಯವಾಗಿಯೂ ಹೆಚ್ಚು ಪ್ರಜ್ಞಾವಂತರಾಗಿದ್ದರು. ಸೇವಾದಳ, ಕಾಂಗ್ರೆಸ್ ಸಮಾಜವಾದಿಗಳು, ಮತ್ತಿತರ ಸಂಘಟನೆಗಳು ಒಂದು ಬಲವಾದ ವಿದ್ಯಾರ್ಥಿ ಸಮುದಾಯವನ್ನು ಕಟ್ಟುವುದರಲ್ಲಿ ಸಹಾಯಕವಾಗಿದ್ದವು. ನಾಯಕರ ದಸ್ತಗಿರಿಯ ವಿರುದ್ಧ ಅನೇಕ ಪ್ರತಿಭಟನೆಗಳು ಮತ್ತು ಪ್ರದರ್ಶನಗಳು ನಡೆದವು. ಬಹು ಸಂಖ್ಯೆಯಲ್ಲಿ ವಿದ್ಯಾರ್ಥಿಗಳು ಶಾಲೆ ಮತ್ತು ಕಾಲೇಜುಗಳಿಂದ ಹೊರಗುಳಿದರು. ಇತರರು ತರಗತಿಗಳಿಗೆ ಹಾಜರಾಗದಂತೆಯೂ ಕೂಡ ಅವರು ತಡೆದರು. ವಕೀಲರು ಹಾಗೂ ಇತರೆ ಅಧಿಕಾರಿಗಳು ನ್ಯಾಯಾಲಯ ಹಾಗೂ ಕಚೇರಿಗಳನ್ನು ಬಹಿಷ್ಕರಿಸುವಂತೆ ವಿನಂತಿಸಿಕೊಂಡರು. ವಿದ್ಯಾರ್ಥಿಗಳ ಮೇಲೆ ಕೈಗೊಂಡ ಶಿಸ್ತಿನ ಕ್ರಮದಿಂದ ಅವರೇನು ವಿಚಲಿತರಾಗಲಿಲ್ಲ. 'ಕ್ವಿಟ್ ಇಂಡಿಯಾ' ಘೋಷಣೆ ನಭೋಮಂಡಲ ಮುಟ್ಟಿತು. ತಮ್ಮ ಮುಖಂಡರ ಬಿಡುಗಡೆ ಮಾಡಬೇಕೆಂದು ವಿದ್ಯಾರ್ಥಿಗಳು ಘೋಷಣೆ ಕೂಗಿದರು.

ಮುಖಂಡರು ದಸ್ತಗಿರಿಯಾದ ಹಿನ್ನೆಲೆಯಲ್ಲಿ ನಿರ್ದಿಷ್ಟವಾದ ಕ್ರಿಯ ಕಾರ್ಯಕ್ರಮವಿಲ್ಲದೆ ವಿದ್ಯಾರ್ಥಿಗಳು ಗಲಿಬಿಲಿಗೊಂಡರು. ತಾಳ್ಮೆ ಕಳೆದುಕೊಂಡ ವಿದ್ಯಾರ್ಥಿಗಳು ಮೆರವಣಿಗೆ ಹಾಗೂ ಹರತಾಳ ಆಚರಿಸುವುದರಲ್ಲಿ ಮುಂದಾದರು. ಆಗಸ್ಟ್ ೧೧ನೇ ದಿನದಂದು ಬೆಂಗಳೂರು ನ್ಯಾಷನಲ್ ಹೈಸ್ಕೂಲಿನ ವಿದ್ಯಾರ್ಥಿಗಳು ಮೆರವಣಿಗೆ ಹೊರಟು ಅಂಗಡಿ ಮಾಲೀಕರು ತಮ್ಮ ಅಂಗಡಿಗಳ ಬಾಗಿಲು ಮುಚ್ಚಬೇಕೆಂದು ಕೇಳಿಕೊಂಡರು. ಪ್ರತಿಭಟನೆಯ ಕುರುಹಾಗಿ ಮೈಸೂರು ಮಹಾರಾಜಾ ಕಾಲೇಜಿನ ಸಂಘದ ಪದಾಧಿಕಾರಿಗಳು ತಮ್ಮ ಸ್ಥಾನಗಳಿಗೆ ರಾಜೀನಾಮೆ ನೀಡಿದರು. ನಂತರ ಸುಬ್ಬರಾಯನ ಕೆರೆಯಲ್ಲಿ ಸೇರಲು ಹೊರಟ ಮೆರವಣಿಗೆಯಲ್ಲಿ ಅವರು ಸೇರಿಕೊಂಡರು. ವಿದ್ಯಾರ್ಥಿ ಮುಖಂಡರಾದ ಎಂ.ವಿ.ಕೃಷ್ಣಪ್ಪ, ಭೂಪಾಲಂ ವಾಸುದೇವಮೂರ್ತಿ, ಡಿ.ಎಂ.ಸಿದ್ಧಯ್ಯ, ಶಾರದಾ ಪ್ರಸಾದ್ ಮತ್ತಿತರರು ಸಭೆಯನ್ನುದ್ದೇಶಿಸಿ ಮಾತನಾಡಿದರು.[೧೬] ಕರ್ನಾಟಕದ ಎಲ್ಲ ಪಟ್ಟಣ ಹಾಗೂ ನಗರಗಳಲ್ಲಿ ಈ ಬಗೆಯ ಮೆರವಣಿಗೆಗಳು ಸರ್ವೇಸಾಮಾನ್ಯವಾಗಿದ್ದವು.

ಅಧಿಕೃತವಾದ ಕಾರ್ಯಕ್ರಮದ ಬಗ್ಗೆ ತಿಳಿಯದಾದಾಗ ಕಾಂಗ್ರೆಸ್ಸಿನ ಬೆಂಗಳೂರು ಕಚೇರಿಯು ೧೫ ಅಂಶಗಳ ಕಾರ್ಯಕ್ರಮವನ್ನು ಪ್ರಕಟಿಸಿತು; ಆ ಪಟ್ಟಿಯನ್ನು ವಿದ್ಯಾರ್ಥಿ ನಾಯಕ ದೇವ್‌ಪಾಲ್‌ರವರು ಸೆಂಟ್ರಲ್ ಕಾಲೇಜಿನ ಕ್ರಿಕೆಟ್ ಪವಿಲಿಯನ್‌ನಲ್ಲಿ ನೆರೆದಿದ್ದ ವಿದ್ಯಾರ್ಥಿ ಸಮುದಾಯಕ್ಕೆ ಓದಿ ಹೇಳಿದರು.[೧೭] ಮೈಸೂರು ಮತ್ತಿತರ ಕಡೆಗಳಲ್ಲಿ ಸ್ವಯಂಸೇವಕರ ತಂಡವನ್ನು ಸಂಘಟಿಸಲಾಗಿತ್ತು.

ಆ ವೇಳೆಗಾಗಲೇ ಶಾಲಾ ಕಾಲೇಜುಗಳನ್ನು ಬಹಿಷ್ಕರಿಸುವುದು ತೀವ್ರಗೊಂಡಿತ್ತು. ಧಾರವಾಡ, ಹುಬ್ಬಳ್ಳಿ, ಬಳ್ಳಾರಿ, ಬೆಳಗಾವಿ, ಜಮಖಂಡಿ ಮುಂತಾದ ಕಡೆಗಳಲ್ಲಿನ ವಿದ್ಯಾರ್ಥಿಗಳು ಹರತಾಳ ಆಚರಿಸಿ ಶೈಕ್ಷಣಿಕ ಸಂಸ್ಥೆಗಳ ಮುಂದೆ ಪಿಕೆಟಿಂಗ್ ನಡೆಸಿದರು. ಧಾರವಾಡದಲ್ಲಿ ಸೇರಿದ್ದ ವಿದ್ಯಾರ್ಥಿ ಸಮುದಾಯ ವೊಂದನ್ನು ಚದುರಿಸಲು ಪೋಲೀಸರು ಪ್ರಯತ್ನಿಸಿದಾಗ ವಿದ್ಯಾರ್ಥಿಗಳು ಕುಳಿತಲ್ಲಿಂದ ಕದಲದೆ ಪೋಲೀಸು ಶಿಕ್ಷೆಯನ್ನು ತಾಳಿಕೊಂಡರು.

ಪೂನಾದಲ್ಲಿ ವಿದ್ಯಾರ್ಥಿಗಳ ಪ್ರಾಣ ಹಾನಿಯಾಯಿತೆಂಬ ಸುದ್ದಿ ಹರಡಿದ ಕೂಡಲೇ ಚಳವಳಿಯು ಹಿಂಸಾಚಾರಕ್ಕೆ ತಿರುಗಿತು. ನಲವತ್ತು ಮಂದಿ ಹುಡುಗಿಯರು ಹಾಗೂ ಮುನ್ನೂರು ಮಂದಿ ಹುಡುಗರ ಒಂದು ಮೆರವಣಿಗೆಯನ್ನು ತಡೆದು ಗುಂಡಿನಿಂದ ಅವರನ್ನು ಸುಟ್ಟುಬಿಡುವುದಾಗಿ ಸೇನೆಯ ಗಸ್ತುವಿಭಾಗ ಅವರನ್ನು ಹೆದರಿಸಿತು. ಇದಕ್ಕೆ ಜಗ್ಗದೆ ವಿದ್ಯಾರ್ಥಿಗಳು ಮುಂದಡಿಯಿಟ್ಟರಾದರೂ ಅವರನ್ನು ಬಲಾತ್ಕಾರವಾಗಿ ತಡೆಯಲಾಯಿತು. ಬೇರೆಯವರ ಮೇಲೆ ಕೈಮಾಡುವ ಮೊದಲು ತನ್ನನ್ನು ಕೊಲ್ಲಿರೆಂದು ಪುಟ್ಟ ಹುಡುಗನೊಬ್ಬ ಮುನ್ನುಗ್ಗಿದಾಗ ಅವನನ್ನು ಗುಂಡಿಟ್ಟು ಕೊಂದೇಬಿಟ್ಟರು. ಇದರಿಂದ ಕ್ರೋಧಗೊಂಡ ಹೆಣ್ಣು ಮಕ್ಕಳು ಮುಂದೆ ಬಂದಾಗ ಅವರನ್ನು ಕೊಲ್ಲಲಾಯಿತು. ತಂಡ ತಂಡವಾಗಿ ವಿದ್ಯಾರ್ಥಿಗಳು ಮುಂದೆ ಬಂದಂತೆಲ್ಲಾ ನಿರ್ದಯದಿಂದ ಅವರನ್ನು ಕೊಂದರು. ಈ ಭಯಾನಕವಾದ ಘಟನೆಯಿಂದಾಗಿ ತಮ್ಮ ಚಳವಳಿಯನ್ನು ತೀವ್ರಗೊಳಿಸಲು ವಿದ್ಯಾರ್ಥಿಗಳು ತೀರ್ಮಾನಿಸಿದರು. ಬೆಳಗಾವಿ, ಧಾರವಾಡ, ಹುಬ್ಬಳ್ಳಿ, ಗದಗ, ಮಂಗಳೂರು ಮತ್ತು ಕೆನರಾ ಪ್ರಾಂತ್ಯಗಳಲ್ಲಿ ಹಿಂದೆಂದೂ ಕಂಡುಬಾರದ ರೀತಿಯಲ್ಲಿ ವಿದ್ಯಾರ್ಥಿ ಚಳವಳಿ ತೀವ್ರಗೊಂಡಿತ್ತು. ಬಿಜಾಪುರ ಹಾಗೂ ಹೈದರಾಬಾದು ಕರ್ನಾಟಕ ಪ್ರದೇಶಗಳಲ್ಲಿ ಚಳವಳಿ ಅಷ್ಟು ತೀವ್ರತರವಾಗಿರಲಿಲ್ಲ.

ಅಹಿಂಸಾತ್ಮಕವಾಗಿ ಪ್ರಾರಂಭವಾಗಿದ್ದ ಚಳವಳಿ ಕ್ರಮೇಣ ಹಿಂಸಾಮಾರ್ಗವನ್ನು ಹಿಡಿಯಿತು. ಹೆಚ್ಚೂ ಕಡಿಮೆ ಎಲ್ಲಾ ಕಡೆಗಳಿಂದಲೂ ಅಗ್ನಿಸ್ಪರ್ಶ ಹಾಗೂ ಬುಡಮೇಲು ಕೃತ್ಯಗಳು ವರದಿಯಾದವು. ಆಗಸ್ಟ್ ೧೦ನೇ ದಿನದಂದೇ ಬೆಳಗಾವಿಯ ವಿದ್ಯಾರ್ಥಿಗಳು ಪೋಲೀಸರ ಮೇಲೆ ಕಲ್ಲು ತೂರಿ ಟೆಲಿಗ್ರಾಫ್ ತಂತಿಯನ್ನು ಕತ್ತರಿಸಿದ್ದರು. ಪ್ರದರ್ಶನಗಳನ್ನು ಸಂಘಟಿಸುವುದರಲ್ಲಿ ಅವರು ಮುಂಚೂಣಿಯಲ್ಲಿದ್ದರು. ಧಾರವಾಡ ನಗರದಲ್ಲಿ ಆಗಸ್ಟ್ ೧೫ನೇ ತಾರೀಖಿನಂದು ಸುಮಾರು ಸಾವಿರ ವಿದ್ಯಾರ್ಥಿಗಳು ಮೆರವಣಿಗೆ ತೆಗೆದಿದ್ದರು. ನಗರದ ಮಧ್ಯಭಾಗವನ್ನು ಮೆರವಣಿಗೆ ತಲುಪುವ ವೇಳೆಗೆ ನೆರೆದ ಜನರ ಸಂಖ್ಯೆ ಐದು ಸಾವಿರವನ್ನು ತಲುಪಿತ್ತು.[೧೫] ಚದುರುವಂತೆ ಪೋಲೀಸರು ನೀಡಿದ ಆದೇಶವನ್ನು ವಿದ್ಯಾರ್ಥಿಗಳು ಲೆಕ್ಕಿಸದಾಗ ಪೋಲೀಸರು ಗುಂಡು ಹಾರಿಸಿದ ಸಂದರ್ಭದಲ್ಲಿ ಆರು ಮಂದಿಗೆ ಗಾಯವಾಗಿ ಒಬ್ಬನಿಗೆ ಪ್ರಾಣಹಾನಿಯಾಗಿತ್ತು. ಕೆಲವು ವಿದ್ಯಾರ್ಥಿಗಳನ್ನು ದಸ್ತಗಿರಿ ಮಾಡಿದಾಗ ಬೈಲಹೊಂಗಲದಲ್ಲಿ ಗಲಭೆಗೆ ಕಾರಣವಾಯಿತು. ದಸ್ತಗಿರಿ ಮಾಡಿದ್ದ ವಿದ್ಯಾರ್ಥಿಗಳನ್ನು ಬಿಡುಗಡೆ ಮಾಡಬೇಕೆಂದು ಸುಮಾರು ಏಳು ಸಾವಿರ ಮಂದಿಯ ಗುಂಪೊಂದು ಪೋಲೀಸು ಠಾಣೆಗೆ ನಡೆಯಿತು. ಪೋಲೀಸರು ಅವರ ಮಾತಿಗೆ ಸಮ್ಮತಿಸದಾಗ ಅವರ ಮೇಲೆರಗಿದ ವಿದ್ಯಾರ್ಥಿಗಳು ಸುಮಾರು ಎಪ್ಪತ್ತು ಮಂದಿಯನ್ನು ಗಾಯಗೊಳಿಸಿದರು.[೧೬]

ರಾಜಕೀಯ ಚಟುವಟಿಕೆಗಳಲ್ಲಿಯೂ ವಿದ್ಯಾರ್ಥಿಗಳು ಹೆಚ್ಚು ಹೆಚ್ಚು ಭಾಗವಹಿಸತೊಡಗಿದಾಗ ಶಾಲೆಗಳಲ್ಲಿ ಹಾಜರಾತಿ ಕುಂಠಿತವಾಯಿತು. ಕೆಲವು ಶಾಲೆಗಳು ಹಾಗೂ ಕಾಲೇಜುಗಳನ್ನು ಅನಿರ್ದಿಷ್ಟ ಕಾಲದವರೆಗೆ ಮುಚ್ಚಲಾಯಿತು.

ಇಂಥ ಚಳವಳಿಯಲ್ಲಿ ಹುಡುಗಿಯರು ಹಿಂದೆ ಬೀಳಲಿಲ್ಲ; ಅವರೂ ಕೂಡ ಪ್ರಧಾನ ಭೂಮಿಕೆಯನ್ನು ನಿರ್ವಹಿಸಿದರು. ಅಂಥ ಚಟುವಟಿಕೆಗಳಲ್ಲಿ ಭಾಗವಹಿಸಬಾರದೆಂದು ಅವರ ಮೇಲೆ ಎಷ್ಟೇ ಒತ್ತಡ ತಂದಾಗಲೂ ಹೆಣ್ಣುಮಕ್ಕಳು ಅದಕ್ಕೆ ಅಂಜಿ ಚಳವಳಿಯಿಂದ ದೂರ ಸರಿಯಲಿಲ್ಲ. ಅವರು ಲಾಠಿ ಏಟು ತಿಂದರು. ದಸ್ತಗಿರಿಯಾದರು, ಗುಂಡೇಟು ತಿಂದರು, ಜೊತೆಗೆ ಪೋಲೀಸಿನವರ ಚಿತ್ರಹಿಂಸೆಯನ್ನು ಸಹಿಸಿದರು. ವಿದ್ಯಾರ್ಥಿನಿಯರು ಶೈಕ್ಷಣಿಕ ಸಂಸ್ಥೆಗಳ ಮುಂದೆ ಪಿಕೆಟಿಂಗ್ ಮತ್ತೆ ಉಪವಾಸ ಸತ್ಯಾಗ್ರಹವನ್ನು ಆಚರಿಸಲು ಮುಂದಾದರು. ಅವರಲ್ಲನೇಕರು ಶಾಶ್ವತವಾಗಿ ಶಾಲಾ ಕಾಲೇಜುಗಳಿಗೆ ವಿದಾಯ ಹೇಳಿದರು. ಹೇಮಲತಾ ಶೆಣೋಲಿಕರ್ ಹಾಗೂ ಗುಲ್ವಾಡಿ ಎಂಬ ವಿದ್ಯಾರ್ಥಿನಿಯರು ನಿರ್ಭಯವಾಗಿ ಧಾರವಾಡದ ಜಿಲ್ಲಾ

ನ್ಯಾಯಾಲಯವನ್ನು ಪ್ರವೇಶಿಸಿ ನ್ಯಾಯಾಧೀಶರ ಮೇಜಿನ ಮೇಲೆಯೇ ತ್ರಿವರ್ಣ ಧ್ವಜವನ್ನು ಹಾರಿಸಿದರು. ಒಂದು ಹೆಜ್ಜೆ ಮುಂದೆ ಹೋಗಿ ಅವರು ನ್ಯಾಯಾಧೀಶರ ರಾಜೀನಾಮೆ ಕೇಳಿದರಲ್ಲದೆ ನ್ಯಾಯಾಲಯವನ್ನು ಬರ್ಖಾಸ್ತುಗೊಳಿಸುವಂತೆ ಆಗ್ರಹಪಡಿಸಿದರು. ತನ್ನ ಕೈಯಿಂದ ರಾಷ್ಟ್ರಧ್ವಜವನ್ನು ಕಿತ್ತುಕೊಂಡರೆಂಬ ಕಾರಣಕ್ಕೆ ಹೆಣ್ಣು ಮಗಳೊಬ್ಬಳು ಪೋಲೀಸು ಸಿಬ್ಬಂದಿಯ ಕೆನ್ನೆಗೆ ಹೊಡೆದಳು.

ಮೈಸೂರು ರಾಜ್ಯದಲ್ಲಿ ವಿದ್ಯಾರ್ಥಿನಿಯರ ಚಟುವಟಿಕೆಗಳ ಪ್ರಧಾನ ಕೇಂದ್ರಗಳೆಂದರೆ ಬೆಂಗಳೂರು ಹಾಗೂ ಮೈಸೂರು ನಗರಗಳಾಗಿದ್ದವು. ಮೀನಾಕ್ಷಿ, ಪೊನ್ನಮ್ಮ, ಕುಂತಳ ಸೇತೂರಾವ್ ಹಾಗೂ ಕೋಮಲ ಎಂಬುವವರು ಶೈಕ್ಷಣಿಕ ಸಂಸ್ಥೆಗಳಲ್ಲಿ ಪಿಕೆಟಿಂಗ್ ನಡೆಸುವುದರಲ್ಲಿ ತುಂಬಾ ಚಟುವಟಿಕೆಯಿಂದಿದ್ದರು. ಇವರು ರಚನಾತ್ಮಕ ಕಾರ್ಯಕ್ರಮವನ್ನು ಹೆಚ್ಚು ಪ್ರಚಾರಪಡಿಸಿದರು. 'ಹುಡುಗಿಯರು ಸರಿಯಾಗಿ ವರ್ತಿಸುತ್ತಿಲ್ಲ' ವೆಂದು ತಮ್ಮ ತಂದೆ ತಾಯಿಗಳಿಗೆ ಆಡಳಿತ ವರ್ಗದವರು ದೂರು ನೀಡಿದುದರ ವಿರುದ್ಧ ಪ್ರತಿಭಟಿಸಿ ಮಹಾರಾಣಿ ಕಾಲೇಜಿನ ವಿದ್ಯಾರ್ಥಿನಿಯರು ಉಪವಾಸ ಸತ್ಯಾಗ್ರಹ ಕೈಗೊಂಡರು. ಈ ಘಟನೆಯ ನಂತರ ಕಾಲೇಜಿನ ಉಪನ್ಯಾಸಕರಲ್ಲೊಬ್ಬರಾದ ಕೇಸರಿ ಕೇಶವನ್ ಎಂಬುವವರು ರಾಜೀನಾಮೆ ನೀಡಿದರು. ಆ ನಂತರ ಅವರು ತಮ್ಮ ಮುಷ್ಕರವನ್ನು ತೀವ್ರಗೊಳಿಸಿದರು. ಕಾರ್ಮಿಕರು ಮುಷ್ಕರ ಹೂಡಿದಾಗ ವಿದ್ಯಾರ್ಥಿನಿಯರು ಅವರಿಗೆ ಸಹಾಯ ಮಾಡಿದರು.

೧೯೪೬ರ ಜುಲೈ ತಿಂಗಳಿನಲ್ಲಿ ಬೆಂಗಳೂರಿನಲ್ಲಿ ಮೊಟ್ಟ ಮೊದಲ ವಿದ್ಯಾರ್ಥಿ ಅಧಿವೇಶನ ನಡೆಯಿತು. ವಿದ್ಯಾರ್ಥಿಗಳ ಬೇಡಿಕೆಗಳಲ್ಲಿ ಪ್ರಧಾನವಾದುದೆಂದರೆ ರಾಜ್ಯದಲ್ಲಿ ಜವಾಬ್ದಾರಿ ಸರ್ಕಾರವನ್ನು ರಚಿಸಬೇಕೆಂಬುದು. ಇದಾದ ನಂತರ 'ಅಖಿಲ ಮೈಸೂರು ವಿದ್ಯಾರ್ಥಿ ಸಮಾವೇಶ' ಹಾಗೂ 'ರಾಜ್ಯ ವಿದ್ಯಾರ್ಥಿ ಸಮಾವೇಶ' ವೆಂಬ ಎರಡು ಸಮಾವೇಶಗಳು ಜರುಗಿದವು. ಇದಾದ ಬಳಿಕ ನಡೆದ ಮುಖ್ಯ ಘಟನೆಯೆಂದರೆ, 'ಮೈಸೂರು ಚಲೋ' – ಇದರಲ್ಲಿ ವಿದ್ಯಾರ್ಥಿಗಳು ಅತಿ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿದ್ದರು. ವಾಸ್ತವವಾಗಿ ಮೈಸೂರಿನ ದಿವಾನರಾಗಿ ಆರ್ಕಾಟ್ ರಾಮಸ್ವಾಮಿ ಮೊದಲಿಯಾರರ ನೇಮಕವನ್ನು ವಿರೋಧಿಸಿ ವಿದ್ಯಾರ್ಥಿಗಳು ಆ ಮೊದಲು ಪ್ರತಿಭಟಿಸಿದ್ದರು. ವಿದ್ಯಾರ್ಥಿಗಳ ಬೆಂಬಲವನ್ನು ಗೆಲ್ಲುವಲ್ಲಿ ಮೈಸೂರಿನ ವಿದ್ಯಾರ್ಥಿ ಸಮಾವೇಶವು ಪ್ರಮುಖ ಪಾತ್ರ ವಹಿಸಿತು. ವಿದ್ಯಾರ್ಥಿ ಒಕ್ಕೂಟ ಕೂಡ ಸತ್ಯಾಗ್ರಹದಲ್ಲಿ ಭಾಗವಹಿಸಿತು. ನಿಷೇಧಾಜ್ಞೆ ಇದ್ದಾಗ್ಯೂ ಕೂಡ ವಿದ್ಯಾರ್ಥಿನಿಯರು ಕಾಲೇಜುಗಳಲ್ಲಿ ಪಿಕೆಟಿಂಗ್ ನಡೆಸಿದರು. ದಂಡು ಪ್ರದೇಶದಲ್ಲಿಯೂ ಸಹ ಪ್ರತಿಬಂಧಕಾಜ್ಞೆಯನ್ನು ವಿದ್ಯಾರ್ಥಿಗಳು ಉಲ್ಲಂಘಿಸಿದರು. ಸುಮಾರು ಹದಿನಾರು ಮಂದಿ ವಿದ್ಯಾರ್ಥಿಗಳನ್ನು ದಸ್ತಗಿರಿ ಮಾಡಿದರು, ಅವರ ಪೈಕಿ ಇಬ್ಬರು ವಿದ್ಯಾರ್ಥಿನಿಯರು.

ವಿದ್ಯಾರ್ಥಿಗಳು ಮೊದಲು ಸೇಂಟ್ ಜೋಸೆಫ್ ಕಾಲೇಜಿನ ಬಳಿ ಕಲೆತು, ತರುವಾಯ ಕಸಪೊರಕೆ ಬಕೆಟ್ಟುಗಳನ್ನು ಹಿಡಿದುಕೊಂಡು ರಸೆಲ್ ಮಾರ್ಕೆಟಿನ ಕಡೆ ನಡೆದರು; ಪ್ರತಿಬಂಧಕಾಜ್ಞೆಯನ್ನು ಧಿಕ್ಕರಿಸಿ ರಸ್ತೆಯನ್ನು ಸ್ವಚ್ಛಗೊಳಿಸುವಲ್ಲಿ ತೊಡಗಿದರು.[೨೨] ವಕೀಲರ ಸಂಘದ ಮುಂದೆ ಹುಡುಗಿಯರು ಉಪವಾಸ ಸತ್ಯಾಗ್ರಹ ಪ್ರಾರಂಭಿಸಿದರು. ಬೆಂಗಳೂರು ನಗರದಲ್ಲಿ ಜಿಲ್ಲಾ ನ್ಯಾಯಾಲಯದ ಮುಂದೆ ಪಿಕೆಟಿಂಗ್ ನಡೆಸಿದುದಕ್ಕಾಗಿ ಸುಮಾರು ಹನ್ನೆರಡು ಮಂದಿ ಹುಡುಗಿಯರನ್ನು ದಸ್ತಗಿರಿ ಮಾಡಲಾಯಿತು. ಜಿಲ್ಲಾ ಕಚೇರಿ ಕಾಂಪೌಂಡಿನಲ್ಲಿ ನ್ಯಾಯಾಲಯದ ಮುಂದೆ ಪಿಕೆಟಿಂಗ್ ಮಾಡಿದ್ದಕ್ಕಾಗಿ ಸುಮಾರು ಮೂವತ್ತು ಹುಡುಗಿಯರ ದಸ್ತಗಿರಿಯಾಯಿತು.

ರಾಷ್ಟ್ರೀಯ ಚಳವಳಿಯ ಸಂದರ್ಭದಲ್ಲಿ ರಾಜಕೀಯ ಪ್ರಜ್ಞೆ ವಿದ್ಯಾರ್ಥಿಗಳಲ್ಲಿ ಹೇಗೆ ಮೊಳೆಯಿತು ಎಂಬುದನ್ನು ಅಧ್ಯಯನವೊಂದರಿಂದ ತಿಳಿಯಬಹುದಾಗಿದೆ. ಸ್ವಾತಂತ್ರ್ಯ ಚಳವಳಿ ಸ್ಪಷ್ಟವಾದ ರೂಪು

ಪಡೆಯುವುದಕ್ಕೆ ಮೊದಲೂ ವಿದ್ಯಾರ್ಥಿ ಸಮುದಾಯದಲ್ಲಿ ಪರಕೀಯರ ಆಡಳಿತದ ವಿರುದ್ಧ ಜಿಗುಪ್ಸೆ ಮಾಡಿದ್ದುದು ಎದ್ದೂ ಕಾಣುತ್ತದೆ. ತಾವು ಹಾಕಿಕೊಂಡಿದ್ದ ಗುರಿಗಳಿಂದ ವಿದ್ಯಾರ್ಥಿಗಳನ್ನು ದೂರ ಮಾಡಿದುದು ಒಂದು ವಿಷಾದನೀಯ ಬೆಳವಣಿಗೆಯೇ ಸರಿ. ವಿದ್ಯಾರ್ಥಿಗಳ ಮನಸ್ಸಿನ ಜಿಗುಪ್ಸೆಯನ್ನು ಉಲ್ಬಣಗೊಳಿಸಲು ಸಾಮ್ರಾಜ್ಯಶಾಹಿ ತತ್ವವೇ ಕಾರಣವಾಯಿತು. ಅದೇ ಕಾಲದಲ್ಲಿ ಬದಲಾಗುತ್ತಿದ್ದ ಪರಿಸ್ಥಿತಿಯನ್ನು ವಿದ್ಯಾರ್ಥಿಗಳು ಸೂಕ್ಷ್ಮವಾಗಿ ಗಮನಿಸುತ್ತಿದ್ದರು. ಶೈಕ್ಷಣಿಕ ವ್ಯವಸ್ಥೆಯಲ್ಲಿ ತಲೆದೋರಿದ್ದ ಅವನತಿಯಿಂದ ನಿರಾಶೆಗೊಂಡು ವಿದ್ಯಾರ್ಥಿಗಳು ರಾಜಕೀಯ ಬೆಳವಣಿಗೆಗಳತ್ತ ಹೆಚ್ಚು ಆಕರ್ಷಿತರಾದರು. ಸರ್ಕಾರ ಹಾಕಿಕೊಂಡ ಕಾರ್ಯಕ್ರಮಗಳು ಹಾಗೂ ವಿದ್ಯಾರ್ಥಿಗಳ ನಾಡಿಮಿಡಿತವನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸದುದರಿಂದ ವಿದ್ಯಾರ್ಥಿಗಳಲ್ಲಿ ರಾಜಕೀಯ ಪ್ರಜ್ಞೆ ಹೆಚ್ಚು ಉತ್ಕಟವಾಗಲು ಕಾರಣವಾಯಿತು. ಮುಗ್ಧವಾದ ಮನಸ್ಸುಗಳ ಮೇಲೆ ಆದ ಈ ಹೊಡೆತದ ಪರಿಣಾಮವಾಗಿ ಯುವಕರು ರಾಷ್ಟ್ರವಾದಿ ಚಿಂತನೆಯ ಕಡೆಗೆ ಹೆಚ್ಚು ಹೆಚ್ಚು ವಾಲುವಂತಾಯಿತು. ನಾಯಕರು ತಮ್ಮ ಭಾಷಣಗಳ ಮೂಲಕ ವಿದ್ಯಾರ್ಥಿಗಳ ಹೃದಯದಲ್ಲಿ ಹೊತ್ತಿಸಿದ ಕಿಚ್ಚಿನ ಕಾರಣ ಅವರು ತಾಯಿನಾಡಿಗಾಗಿ ಹೋರಾಡಬೇಕಾದುದು ತಮ್ಮ ಆದ್ಯ ಕರ್ತವ್ಯವೆಂದು ಬಗೆದರು.

ಬೇರೆ ಬೇರೆ ರಾಜಕೀಯ ಸಂಘಟನೆಗಳೊಡನೆ ಅವರು ಹೊಂದಿದ್ದ ನಿಕಟ ಸಂಪರ್ಕದಿಂದಾಗಿ ಹುಟ್ಟಿಕೊಂಡ ವಸಾಹತು-ವಿರೋಧಿ ಚಟುವಟಿಕೆಯು ಗಾಂಧೀಜಿಯವರ ಆಗಮನದಿಂದ ಪರಾಕಾಷ್ಠೆ ಮುಟ್ಟುವಂತಾಯಿತು. ನಾಯಕತ್ವದಲ್ಲಿ ಆದ ಬದಲಾವಣೆಯಿಂದ ಹಾಗೂ ರಾಜಕೀಯ ತಂತ್ರಗಳಲ್ಲಿ ಆದ ವ್ಯತ್ಯಾಸಗಳಿಂದ ಕೆಲವು ವೇಳೆ ವಿದ್ಯಾರ್ಥಿಗಳಲ್ಲಿ ಗಲಿಬಿಲಿವುಂಟಾದದ್ದು ನಿಜ; ಆದರೆ ಬದಲಾದ ಪರಿಸ್ಥಿತಿಗೆ ಹಾಗೂ ಹೊಸ ವಿಚಾರಗಳಿಗೆ ಆ ಕೋಮಲ ಮನಸ್ಸುಗಳು ತೆರೆದುಕೊಂಡು ಸ್ವಾಗತಿಸಿದ್ದು ಅಷ್ಟೇ ಸತ್ಯವಾಗಿದೆ.

ಸ್ವದೇಶಿ ಚಳವಳಿ, ವಿದೇಶಿ ವಸ್ತುಗಳ ಬಹಿಷ್ಕಾರ ಮತ್ತಿತರ ಕಾರ್ಯಕ್ರಮಗಳಿಗೆ ವಿದ್ಯಾರ್ಥಿಗಳು ಸ್ವಯಂ ಸ್ಫೂರ್ತಿಯಿಂದ ಸ್ಪಂದಿಸಿದರು. ರಾಷ್ಟ್ರದ ಮೂಲೆ ಮೂಲೆಗೆ ರಚನಾತ್ಮಕ ಕಾರ್ಯಕ್ರಮವನ್ನು ತೆಗೆದುಕೊಂಡು ಹೋಗಬೇಕೆಂದು ಗಾಂಧೀಜಿ ಅವರಿಗೆ ಕರೆ ನೀಡಿದರು. ಬಹಳ ಹೆಮ್ಮೆಯಿಂದ ಅವರು ದೇಶೀಯ ಉಡುಗೆಗಳನ್ನು ತೊಡಲು ಮುಂದಾದರು. ಶಾಲಾ ಕಾಲೇಜುಗಳನ್ನು ಬಹಿಷ್ಕರಿಸಲು ನೀಡಿದ ಕರೆಗೂ ಅವರು ಸಂತೋಷವಾಗಿಯೇ ಓಗೊಟ್ಟರಾದರೂ ಟೀಕಾಕಾರರ ಕುಹಕವನ್ನು ಅವರು ಸಹಿಸಬೇಕಾಯಿತು. ಅಧಿಕಾರಿಗಳ ಅಥವಾ ತಂದೆತಾಯಿಗಳ ಮಾತುಗಳಿಗೆ ಕಿವಿ ಕೊಡದೆ ಅನೇಕರು ತಾಯಿನಾಡಿಗಾಗಿ ತಮ್ಮ ಭವಿಷ್ಯವನ್ನು ಬಲಿಕೊಟ್ಟರು. ಅಸ್ತಿತ್ವದಲ್ಲಿದ್ದ ಕೆಲವೇ ರಾಷ್ಟ್ರೀಯ ಶಾಲೆಗಳಲ್ಲಿ ಶೈಕ್ಷಣಿಕ ಸಂಸ್ಥೆಗಳನ್ನು ತೊರೆದವರಿಗೆ ಸ್ಥಳಾವಕಾಶ ದೊರೆಯಲಿಲ್ಲ. ಸರ್ಕಾರಿ ಸಂಸ್ಥೆಗಳಲ್ಲೂ ಸಹ ಅವರಿಗೆ ಎಡೆ ಇಲ್ಲದಾಯಿತು.

ಕ್ವಿಟ್-ಇಂಡಿಯಾ ಚಳವಳಿ ಪ್ರಾರಂಭವಾದ ಹಿನ್ನೆಲೆಯಲ್ಲಿ ಅವರ ಚಟುವಟಿಕೆಯಲ್ಲಿ ತೀವ್ರತರವಾದ ಬದಲಾವಣೆ ಕಾಣಿಸಿಕೊಂಡಿತು. ಬಂಡಾಯ ಪ್ರವೃತ್ತಿಯ ಅವರ ಮನಸ್ಸು ಅಹಿಂಸಾ ಮಾರ್ಗವನ್ನು ಬಿಟ್ಟು ಅನ್ಯಕ್ರಮಗಳನ್ನು ಅನುಸರಿಸಲು ಪ್ರೇರೇಪಿತವಾಯಿತು. ಅನೇಕರು ಭೂಗತರಾದರು. ಬಂಗಾಳದ ಯುವಕರು, ವಿಶೇಷವಾಗಿ ಭಯೋತ್ಪಾದನೆಯ ಮಾರ್ಗವನ್ನು ಹಿಡಿದರು; ಕರ್ನಾಟಕದ ಯುವ ಜನರು ಆ ಕ್ರಮ ಅನುಸರಿಸಿದ ಉದಾಹರಣೆಯನ್ನು ನಾವು ಕಾಣಲಾರೆವು. ಎಲ್ಲ ಅಪಾಯಗಳನ್ನು ಎದುರಿಸಲು ಯುವಕರು ಸಿದ್ಧರಾದ ಹಿನ್ನೆಲೆಯಲ್ಲಿಯೂ ಪೋಲೀಸರ ದೌರ್ಜನ್ಯಕ್ಕೆ ಹೆಚ್ಚು ಗುರಿಯಾದರು. ಆದರೆ ಅದ್ಯಾವುದಕ್ಕೂ ಅವರು ಎದೆಗುಂದಲಿಲ್ಲ. ಸ್ವಾತಂತ್ರ್ಯಗಳಿಕೆಯನ್ನೇ ಗುರಿಯಾಗಿ ಹೊಂದಿದ್ದ ಜನಸ್ತೋಮ ಅದನ್ನು ಸಾಕ್ಷಾತ್ಕಾರಿಸಿಕೊಳ್ಳುವ ದಾರಿಯಲ್ಲಿ ಎದುರಾಗುವ ಕಷ್ಟಗಳಿಗೆ ಮಾನಸಿಕವಾಗಿ ಸಿದ್ಧರಾಗಿದ್ದರು. ತಾಯಿನಾಡಿಗೋಸ್ಕರ

ಘನತೆಯಿಂದ ಪ್ರಾಣಾರ್ಪಣೆ ಮಾಡುವ ವಿಧಾನವನ್ನು ಜಗತ್ತಿಗೆ ತೋರಿಸಿಕೊಟ್ಟ ಅಂಥ ಧೀರ ಸೇನಾನಿಗಳ ತ್ಯಾಗ ಮತ್ತು ಬಲಿದಾನಗಳನ್ನು ನಾವು ನೆನೆದು ಅವರಿಗೆ ಶಿರಬಾಗಿ ನಮನ ಸಲ್ಲಿಸಬೇಕು.

**ಡಾ. ಎಂ. ಜಮುನ**

## ಟಿಪ್ಪಣಿಗಳು

೧ ನಾಯಕ್ ಶಂಕರನ್, ವಿ.: ರೋಲ್ ಆಫ್ ಸ್ಟೂಡೆಂಟ್ಸ್ ಇನ್ ಫ್ರೀಡಂ ಮೂವ್‌ಮೆಂಟ್ ವಿಥ್ ಸ್ಪೆಷಲ್ ರೆಫರೆನ್ಸ್ ಟು ಮದ್ರಾಸ್ ಪ್ರೆಸಿಡೆನ್ಸಿ, ನವದೆಹಲಿ, ೧೯೯೦, ಪು. ೩೬

೨ ಹಾಲಪ್ಪ. ಜಿ.ಎಸ್.: ಹಿಸ್ಟರಿ ಆಫ್ ಫ್ರೀಡಂ ಮೂವ್‌ಮೆಂಟ್ ಇನ್ ಕರ್ನಾಟಕ, ಸಂಪುಟ ೨, ಬೆಂಗಳೂರು, ೧೯೯೪, ಪು. ೧೦೮

೩ ದೇಸಾಯ್, ಮುತಾಲಿಕಾ: ಎ ಬಯಾಗ್ರಫಿ ಆಫ್ ಹುಕ್ಕೇರಿಕರ್ ರಾಮರಾವ್, ಶ್ರೀ ನರಸಿಂಗ್ ನಾರಾಯಣ ಭಿಸೆ ಕಲೆಕ್ಷನ್ ಸಂಖ್ಯೆ. ೪೨

೪ ಅದೇ.

೫ ವಿವರಗಳಿಗಾಗಿ ನೋಡಿ: ಶ್ರೀನಿವಾಸಯ್ಯ, ಎಚ್.: ಎನ್.ಎಸ್.ಹರ್ಡೀಕರ್, ಬೆಂಗಳೂರು, ೧೯೮೨

೬ ಹಾಲಪ್ಪ ಜಿ.ಎಸ್.: ಪುಟ. ೪೪೯

೭ ಸ್ಟ್ರಿಕ್ಟ್‌ಲಿ ಕಾನ್ಫಿಡೆನ್ಷಿಯಲ್: ದಿ ಸಿವಿಲ್ ಡಿಸೊಬೀಡಿಯನ್ಸ್ ಮೂವ್‌ಮೆಂಟ್ ೧೯೩೦-೩೧. ಸೌತ್ ಕೆನರಾ ಡಿಸ್ಟ್ರಿಕ್ಟ್, ನೋಟ್ ಆಫ್ ದಿ ಡಿಸ್ಟ್ರಿಕ್ಟ್ ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ಪು. ೧೨೨-೨೩

೮ ಸ್ಟ್ರಿಕ್ಟ್‌ಲಿ ಕಾನ್ಫಿಡೆನ್ಷಿಯಲ್: G.O. ಸಂ. ೧೧೮೮. ದಿನಾಂಕ: ೧೦.೯.೧೯೩೦ ಫ್ರಂಮ್ ಸ್ಪೆಷಲ್ ಬ್ರಾಂಚ್, ಕ್ರಿಮಿನಲ್ ಇನ್ವೆಸ್ಟಿಗೇಷನ್ ಡಿಪಾರ್ಟ್‌ಮೆಂಟ್, ೯ ಸೆಪ್ಟೆಂಬರ್ ೧೯೩

೯ D.O. ಆಕ್ಟಿಂಗ್ ಚೀಫ್ ಸೆಕ್ರೆಟರಿ ಟು ದಿ ಗೌರ್ನಮೆಂಟ್ ಆಫ್ ಮದ್ರಾಸ್ ಟು ದಿ ಸೆಕ್ರೆಟರಿ ಗೌರ್ನಮೆಂಟ್ ಆಫ್ ಇಂಡಿಯಾ ಹೋಂ ಡಿಪಾರ್ಟ್‌ಮೆಂಟ್. ಫೋರ್ಟ್ ನೈಟ್ಲಿ ರಿಪೋರ್ಟ್ ಫಾರ್ ದಿ ಫಸ್ಟ್ ಹಾಫ್ ಆಫ್ ಸೆಪ್ಟಂಬರ್, ೧೭ ಸೆಪ್ಟೆಂಬರ್, ೧೯೩೦ರ ಸೆಪ್ಟೆಂಬರ್ ತಿಂಗಳ ಮೊದಲ ಪಾಕ್ಷಿಕ ವರದಿ.

೧೦ ದ ನವಜೀವನ, ಬೆಂಗಳೂರು, ೧ ಮಾರ್ಚ್, ೧೯೨೯

೧೧ ಲೋಕಪಾವನ, ಮಡಿಕೇರಿ, ೨೩ ಸೆಪ್ಟಂಬರ್ ೧೯೩೦

೧೨ G.O. ಸಂಖ್ಯೆ ೧೨೫೪. ದಿನಾಂಕದ ೧೯೩೨. ಎಜುಕೇಶನ್ ಡಿಪಾರ್ಟ್‌ಮೆಂಟ್ (೧೯೩೨) ಎಂ.ಎಸ್. ಸೀರೀಸ್, ಕಾನ್ಫಿಡೆನ್ಷಿಯಲ್

೧೩ ಪೋಲೀಸ್ ಫೈಲ್ಸ್, ನೋಟ್ಸ್ ಆನ್ ವೇರಿಯಸ್ ಪೊಲಿಟಿಕಲ್ ಅಸೋಸಿಯೇಶನ್ಸ್ ಇನ್ ದ ಸ್ಟೇಟ್, ಮಾಸ್ ಅವೇಕನರ್ಸ್ ಯೂನಿಯನ್ ೨೦.೭.೧೯೩೭ - ೧೪.೭.೧೯೩೯

೧೪ ಕಾನ್ಫಿಡೆನ್ಷಿಯಲ್ ಕಲೆಕ್ಷನ್, ೧೦೪/೩೯-೩೭ ದಿನಾಂಕ. ೨೪.೭.೧೯೩೭ - ಕಾಂಗ್ರೆಸ್ ಸೋಷಿಯಲಿಸ್ಟ್ ಪಾರ್ಟಿ.

೧೫ ಸ್ಟ್ರಿಕ್ಟ್‌ಲಿ ಕಾನ್ಫಿಡೆನ್ಷಿಯಲ್, ಫೋರ್ಟ್ ನೈಟ್ಲಿ ರಿಪೋರ್ಟ್ ಫಾರ್ ದಿ ಫಸ್ಟ್ ಹಾಫ್ ಮಾರ್ಚ್ ೧೯೪೧, D.O. ಸಂಖ್ಯೆ. ೧೩.೪.೭ - ಗೌರ್ನಮೆಂಟ್ ಆಫ್ ಮದರಾಸ್

೧೬ ಕಾಮತ್, ಎಸ್.ಯು.: ಕ್ವಿಟ್ ಇಂಡಿಯಾ ಮೂವ್‌ಮೆಂಟ್ ಇನ್ ಕರ್ನಾಟಕ, ಬೆಂಗಳೂರು, ೧೯೮೫, ಪು. ೧೮

೧೭ ಅದೇ, ಪು. ೧೯

೧೮ ದೇಸಾಯ್, ಸಂಜೀವ್. ಪು(ಸಂ): ಕ್ಯಾಲೆಂಡರ್ ಆಫ್ ಕ್ವಿಟ್ ಇಂಡಿಯಾ ಮೂವ್‌ಮೆಂಟ್ ಇನ್ ದಿ ಬಾಂಬೆ ಪ್ರೆಸಿಡೆನ್ಸಿ, ಮಹಾರಾಷ್ಟ್ರ ಆರ್ಕೈವ್ಸ್ ಬುಲೆಟಿನ್ ಸಂ. ೧೫ ಮತ್ತು ೧೯ ಬೊಂಬಾಯಿ, ೧೯೮೫, ಪು. ೨೧

೧೯ ಅದೇ, ಪು. ೨೭

೨೦ ದ ಹಿಂದು, ೨೫ ಸೆಪ್ಟಂಬರ್ ೧೯೪೭

ಅಧ್ಯಾಯ : ಹದಿಮೂರು

# ದಲಿತ ವರ್ಗಗಳು ಹಾಗೂ ಸ್ವಾತಂತ್ರ್ಯ ಹೋರಾಟ

ದಲಿತ ವರ್ಗಗಳು ರಾಷ್ಟ್ರೀಯ ಮುಖ್ಯ ಪ್ರವಾಹವನ್ನು ಪ್ರವೇಶಿಸಿ ತನ್ಮೂಲಕ ಸ್ವಾತಂತ್ರ್ಯ ಸಮರಕ್ಕೆ ಧುಮುಕಿದ ಕ್ರಮವನ್ನು ವಿವರಿಸಲು ಪ್ರಸ್ತುತ ಪ್ರಬಂಧವು ಪ್ರಯತ್ನಿಸುತ್ತದೆ. ಹೋರಾಟದ ಬೇರೆ ಬೇರೆ ಘಟ್ಟದಲ್ಲಿ ಈ ವರ್ಗಗಳು ಹೇಗೆ ರಾಷ್ಟ್ರೀಯತೆಯ ಕಡೆ ಆಕರ್ಷಿತವಾದವು ಎಂಬುದನ್ನೂ ಸಹ ವಿಶ್ಲೇಷಿಸಲು ಇಲ್ಲಿ ಪ್ರಯತ್ನಿಸಲಾಗಿದೆ.

ಕರ್ನಾಟಕದ ದಲಿತವರ್ಗದವರು ಮೇಲ್ವರ್ಗದವರ ಸೇವೆ ಹಾಗೂ ಕೃಷಿ ದುಡಿಮೆಯಲ್ಲಿ ನಿರತರಾದ ಜಾತಿಗಳಿಗೆ ಸೇರಿದವರಾಗಿದ್ದರು. ಪಾರಂಪರಿಕವಾಗಿ ಚರ್ಮ ಹೊಲೆಯುವ, ಗ್ರಾಮ ನೈರ್ಮಲ್ಯವನ್ನು ನೋಡಿಕೊಳ್ಳುವ, ಸತ್ತ ಜಾನುವಾರುಗಳನ್ನು ಹೊರಗೆ ಹಾಕುವ ಕೆಲಸಗಳಲ್ಲಿ ಅವರು ನಿರತರಾಗಿದ್ದರು. ಗ್ರಾಮಕ್ಕೆ ಹಾಗೂ ಸರ್ಕಾರದ ಇತರ ಅಧಿಕಾರಿಗಳಿಗೆ ಅವರು ಇತರ ಕೆಲಸಗಳನ್ನೂ ಮಾಡಿಕೊಡಬೇಕಾಗಿತ್ತು. ವಸಾಹತು ಕಾಲದಲ್ಲಿ ಭೂಮಿಯ ಖಾಸಗೀಕರಣ ಹಾಗೂ ವಾಣಿಜ್ಯೀಕರಣದ ಹೆಚ್ಚಳದಿಂದಾಗಿ ಅವರು ಅತ್ಯಂತ ದಯನೀಯ ಸ್ಥಿತಿಗೆ ದೂಡಲ್ಪಟ್ಟರು. ಆದರೆ ಕರ್ನಾಟಕದ ಕುಷ್ಕಿ ಪ್ರದೇಶಗಳಲ್ಲಿ ಮಾತ್ರ ಅವರು ಸ್ವಲ್ಪ ಭೂಮಿ ಕಾಣಿ ಹೊಂದಿದ್ದರು. ಖಾಸಗೀಕರಣದಿಂದಾಗಿ ಗ್ರಾಮಾಂತರ ಪ್ರದೇಶಗಳಲ್ಲಿ ಭೂಮಾಲೀಕರು ಹೆಚ್ಚು ಬಲವಾಗತೊಡಗಿದಂತೆಯೇ ಅಸ್ಪೃಶ್ಯರು ಇತರ ಕುಲಕಸುಬುದಾರರಂತೆಯೇ ಭೂಮಿಯ ಮೇಲಿನ ತಮ್ಮ ಪಾರಂಪರಿಕವಾದ ಹಕ್ಕನ್ನು ಕಳೆದುಕೊಂಡರು. ಕಾನೂನಿನ ದೃಷ್ಟಿಯಲ್ಲಿ ಜಾತಿ ಜಾತಿಗಳ ನಡುವೆ ಯಾವ ಅಂತರವಿಲ್ಲದಿದ್ದರೂ ಸಾಮಾಜಿಕ ಧಾರ್ಮಿಕ ವಲಯದ ಆಚರಣೆಗಳ ವಿಷಯದಲ್ಲಿ ಮಧ್ಯೆ ಪ್ರವೇಶಿಸಬಾರದೆಂಬ ಸರ್ಕಾರದ ನೀತಿಯಿಂದಾಗಿ ಕಾನೂನು ನಿಷ್ಪ್ರಯೋಜಕವಾಗಿತ್ತು.

ಹಾಗಾಗಿ, ಜಾತಿ ಶ್ರೇಣೀಕರಣ ಹಾಗೂ ಸಂಪ್ರದಾಯಗಳು ಮುಂದುವರಿದವು. ಜನಾಂಗೀಯ ಶ್ರೇಷ್ಠತೆಯನ್ನು ಮುಂದು ಮಾಡಿಕೊಂಡು ಆರ್ಯರು ಮೇಲಿನವರೆಂದು ಹಲವಾರ ರಾಷ್ಟ್ರವಾದಿಗಳೇ ವಾದ ಮಾಡಿದ ಕಾರಣ ತಟಸ್ಥ ನೀತಿ ಮುಂದುವರಿದು ಸಾಂಪ್ರದಾಯಿಕ ಧೋರಣೆ ಇನ್ನಷ್ಟು ದೃಢವಾಗುವಂತಾಯಿತು. ಈ ರೀತಿಯ ಚಿಂತನಾಕ್ರಮದಿಂದ ವಸಾಹತುವಾದಿಗಳು ಹಾಗೂ ಮೇಲ್ಜಾತಿಯವರು ಕೆಳಜಾತಿಯವರ ಮೇಲೆ ತಮ್ಮ ಬಿಗಿಮುಷ್ಟಿಯನ್ನು ಮುಂದುವರಿಸುವಂತಾಯಿತು. ಆ ಮೊದಲೇ ವಿದ್ಯೆಯನ್ನು ದಕ್ಕಿಸಿಕೊಂಡಿದ್ದ ಕಾರಣ ವಸಾಹತುಶಾಹಿ ಕಾಲದಲ್ಲಿ ಲಭ್ಯವಾದ ಅವಕಾಶಗಳನ್ನೆಲ್ಲಾ ಮೇಲುಜಾತಿಯವರು ಉಪಯೋಗಿಸಿ ಕೊಂಡದರಲ್ಲದೆ ಆಧುನಿಕ ರಾಜಕೀಯ ಸಂಘಟನೆಗಳೂ ಸೇರಿದಂತೆ ಉಳಿದ ಎಲ್ಲ ಉದಾರವಾದಿ ವೃತ್ತಿಗಳನ್ನು ಅವರು ತಮ್ಮದಾಗಿಸಿಕೊಂಡರು.

ವಸಾಹತುವಾದ ಹಾಗೂ ರಾಷ್ಟ್ರವಾದದ ಸಂದರ್ಭದಲ್ಲಿ ಜನಸಂಖ್ಯೆಯಲ್ಲಿ ಸುಮಾರು ಐದನೇ ಒಂದು ಭಾಗದಷ್ಟಿದ್ದ ನಿಮ್ನವರ್ಗದವರು ವಾಸ್ತವವಾಗಿ ಗಣನೀಯ ಪ್ರಮಾಣದ ಅಂಗವೆಂದು ಹೇಳಬೇಕು. ನಿಮ್ನ ವರ್ಗದವರ ದೃಷ್ಟಿಯಿಂದಲೇ ಹೇಳುವುದಾದರೆ ರಾಷ್ಟ್ರೀಯ ಚಳವಳಿಯು ಅವರ ಅಂತರಂಗದಲ್ಲಿ ಹುದುಗಿದ್ದ ಅಗಾಧವಾದ ಚೈತನ್ಯವನ್ನು ಹೊರಗೆ ತರಲು ಒಂದು ಅವಕಾಶ ಒದಗಿಸಿತು ಎನ್ನಬೇಕು.

ಈಗಾಗಲೇ ಚರ್ಚಿಸಿರುವಂತೆ ೧೯ನೇ ಶತಮಾನದಲ್ಲಿ ನಡೆದ ಸಾಮಾಜಿಕ ರಾಜಕೀಯ ಚಳವಳಿಗಳು ಭಾರತೀಯ ರಾಷ್ಟ್ರೀಯ ಚಳವಳಿಯ ಮಂದ್ರಸ್ವರದಂತೆ ಕಂಡುಬರುತ್ತವೆ. ಹಾಗೂ ಆ ಚಳವಳಿಗಳ ಮೇಲೆ ಮತ್ತು ಆ ಚಳವಳಿಗಳಲ್ಲಿ ನಾಯಕತ್ವ ವಹಿಸಿದವರ ಮೇಲೆ ಮುಂದಿನ ಘಟನೆಗಳ ಸ್ವರೂಪವನ್ನು ನಿರ್ಧರಿಸುವ ಸಲುವಾಗಿ ಭಾರತೀಯ ಸಾಮಾಜಿಕ ಆರ್ಥಿಕತೆಯನ್ನು ಅರ್ಥ ಮಾಡಿಕೊಳ್ಳಬೇಕಾದಂಥ ಗುರುತರ ಹೊಣೆ ಬಿದ್ದಿತು. ಆದರೆ ಜ್ಯೋತಿರಾವ್ ಫುಲೆ ಹಾಗೂ ಸ್ವಾಮಿ ವಿವೇಕಾನಂದರಂಥ ಒಂದೆರಡು ಅಪವಾದನ್ನುಳಿದರೆ ಉಳಿದ ನಾಯಕರುಗಳಲ್ಲಿ ಸಾಮಾನ್ಯವಾಗಿ ಭಾರತೀಯ ಸಮಾಜದ ಮೇಲು ಸ್ತರಕ್ಕೆ ಮತ್ತು ಮೇಲ್ಜಾತಿಗೆ ಸೇರಿದವರಾಗಿದ್ದರು. ಬ್ರಿಟಿಷ್‌ರ ಆಳ್ವಿಕೆಯು ಒಂದು ವರದಾನವೆಂದು ತಿಳಿದಿದ್ದ ಅವರು ತಮ್ಮ ಸಂಘಟನೆಗಳ ಮೂಲಕ ಪಾಶ್ಚಿಮಾತ್ಯ ಉದಾರವಾದಿ ಸಾಮಾಜಿಕ ತತ್ವಗಳಿಗೆ ಹಾಗೂ ಪಾಶ್ಚಾತೀಕರಣಗೊಂಡ ಭಾರತೀಯರ ಮಾದರಿಗೆ ತಮ್ಮ ಕುಟುಂಬಗಳು ಹೊಂದಿಕೊಳ್ಳುವಂಥ ರೀತಿಯಲ್ಲಿ ಸುಧಾರಿಸಿಕೊಳ್ಳಲು ಪ್ರಯತ್ನಿಸಿದರು.[೧] ಅಸ್ಪೃಶ್ಯರು ಹಾಗೂ ಇತರ ನಿಮ್ನವರ್ಗದವರು ಅನುಭವಿಸಿದ ಸಂಕಷ್ಟದ ಬಗೆಗೆ ಅವರು ಯಾರೂ ಗಂಭೀರವಾಗಿ ಚಿಂತಿಸಲಿಲ್ಲ. ಇದು ಅವರು ಇಟ್ಟುಕೊಂಡಿದ್ದ ಸುಧಾರಣಾ ಗುರಿಯ ಹೊರಗೆ ಇದ್ದಿತು. ಈ ಸಮಸ್ಯೆಯನ್ನು ಅವರು ಬಹಿರಂಗವಾಗಿ ಚರ್ಚಿಸಲು ಸಿದ್ಧರಿರಲಿಲ್ಲ - ಭೂ ನಿಯಂತ್ರಣವೂ ಸೇರಿದಂತೆ ರಾಷ್ಟ್ರದ ಸಾಮಾಜಿಕ - ಆರ್ಥಿಕ ವ್ಯವಸ್ಥೆಯೊಡನೆ ಇದು ಸಂಬಂಧ ಹೊಂದಿದೆಯೆಂದು ಅವರಿಗೆ ಮನವರಿಕೆಯಾಗಲಿಲ್ಲ. ಅತ್ಯಂತ ಪ್ರಸಿದ್ಧರಾದ ಸಮಾಜ ಸುಧಾರಕರಾಗಿದ್ದ ಮಹಾದೇವ ರಾನಡೆಯವರು – ಸುಧಾರಣೆಯ ಬಗ್ಗೆ ಗಾಢವಾದ ಕಳಕಳಿ ಹೊಂದಿದ್ದರು – ಆಸ್ತಿಪಾಸ್ತಿ ಹಾಗೂ ಉತ್ಪಾದನಾ ಸಂಬಂಧಗಳಲ್ಲಿ ಯಾವುದೇ ಬದಲಾವಣೆಗೆ ಅವರ ವಿರೋಧವಿದ್ದಿತು. ಅವರು ಬರೆದರು:

"ಎಲ್ಲ ರಾಷ್ಟ್ರಗಳಲ್ಲಿ ಭೂಮಿಯಲ್ಲಾಗಲೀ, ವಸ್ತು ರೂಪದಲ್ಲಾಗಲೀ ಆಸ್ತಿಯು ಹೆಚ್ಚು ಬುದ್ಧಿವಂತರೂ, ಹೆಚ್ಚಿನ ದೂರದೃಷ್ಟಿಯುಳ್ಳವರೂ ಮತ್ತು ಸಂಯಮವನ್ನು ಸಾಧಿಸುವವರೂ ಆದಂಥ ವರ್ಗಗಳ ಕಡೆ ಸೇರಬೇಕೇ ಹೊರತು ಅರಿವಿಲ್ಲದವರು, ದುಂದುಗಾರರೂ ತಮ್ಮ ಸಂಪನ್ಮೂಲಗಳ ಮೇಲೆ ಅವಲಂಬಿಸಲು ಅಸಮರ್ಥರಾದವರ ಕೈ ಸೇರಬಾರದು. ಇದು ದೈವನಿರ್ಮಿತ ನಿಯಮವಾಗಿರಲಾಗಿ ಪ್ರಾಯೋಗಿಕ ಮುತ್ಸದ್ಧಿಗಳು ತಮ್ಮ ಕಾಲ್ಪನಿಕತೆ ಅಥವಾ ಭಾವನಾತ್ಮಕವಾದ ಕಾರಣಗಳಿಂದ ಮೈಮರೆತು ಪ್ರಾಯೋಗಿಕವಾಗಿ ಇದನ್ನು ಕಡೆಗಣಿಸಬಾರದು".[೨] ಹಾಗಾಗಿ, ಉತ್ಪಾದನಾ ವಿಧಾನವನ್ನು ನಿಯಂತ್ರಿಸುವ ಅಂಶಗಳಿಗೂ ಸಾಮಾಜಿಕ ಸುಧಾರಣೆ ಹಾಗೂ ಬದಲಾವಣೆಗೂ ಇರುವ ಆಂತರಿಕ ಸಂಬಂಧವನ್ನು ಈ ಸುಧಾರಕರು ಅರಿಯಲಾರ ದವರಾದರು. ಸಾಮಾಜಿಕ ಸುಧಾರಣೆಗೂ ಭೌತಿಕ ಪ್ರಪಂಚಕ್ಕೂ ನಡುವಿನ ಸಂಬಂಧವನ್ನು ಕಲ್ಪಿಸಿಕೊಳ್ಳಲಾರದ ಸ್ಥಿತಿಯಲ್ಲಿ ಸಾಮಾಜಿಕ ಆರ್ಥಿಕ ವ್ಯವಸ್ಥೆಯಲ್ಲಿ ಏನೂ ಬದಲಾವಣೆಯುಂಟುಮಾಡದಂಥ ಮೇಲು ಮೇಲಿನ ಸುಧಾರಣೆ ಅವರದಾಯಿತು ಎನ್ನಬೇಕು. ತಮ್ಮ ಸಾಮಾಜಿಕ ತತ್ವದಲ್ಲಿ ತಲೆದೋರಿದ ಈ ಬಗೆಯ ಕಂದಕದ ಪರಿಣಾಮವಾಗಿ ಜನಸ್ತೋಮದ ಬೆಂಬಲ ಮತ್ತು ಆಧಾರವನ್ನು ಪಡೆಯುವಲ್ಲಿ ಅವರು ಸೋಲುವಂತಾಯಿತು. ಆದಾಗ್ಯೂ ನಮ್ಮ ಪ್ರಸ್ತುತ ಉದ್ದೇಶಕ್ಕಾಗಿ ಬ್ರಿಟಿಷ್ ವಸಾಹತುಶಾಹಿಯ ವಿಷಯವಾಗಿ ಈ ಸುಧಾರಕರಿಗಿದ್ದ ಧೋರಣೆ ಯಾವುದು ಎಂದು ತಿಳಿಯುವುದು ಅವಶ್ಯಕವಾಗಿದೆ. ವಸಾಹತುಶಾಹಿ ಹಾಗೂ ವಸಾಹತು ಶೋಷಣೆಯನ್ನು ಅವರು ವಿರೋಧಿಸಿದರೆಂಬುದು ನಿರ್ವಿವಾದವಾದರೂ

ಉತ್ಪಾದನಾ ಸಲಕರಣೆಯು ಪ್ರತಿಷ್ಠಿತರಾದ ಅಲ್ಪಸಂಖ್ಯಾತರ ಕೈಯಲ್ಲಿರಬೇಕೆಂದು ಹಾತೊರೆದರು. ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಸೇರಿದಂತೆ ಉಳಿದ ಮುಖ್ಯ ಸಂಘಟನೆಗಳ ಮುಂಚೂಣಿಯಲ್ಲಿದ್ದ ಮತ್ತು ಅವುಗಳನ್ನು ನಿಯಂತ್ರಿಸಿದ್ದಂಥ ರಾಜಕೀಯ ವಿಚಾರವಂತರ ವಿಷಯದಲ್ಲೂ ಈ ಮಾತು ನಿಜವಾಗಿದೆ. ಅವರಿಬ್ಬರ ನಡುವೆ ಇದ್ದ ವ್ಯತ್ಯಾಸವನ್ನು ಹೀಗೆ ಗುರ್ತಿಸಬಹುದು; ರಾಜಕೀಯ ವಿಚಾರವಂತರು ಶಾಸನ ಸಭೆಗಳಲ್ಲಿ ಹೆಚ್ಚಿನ ಸ್ಥಾನಗಳು ಹಾಗೂ ಹೆಚ್ಚಿನ ಸಂಖ್ಯೆಯ ಉದ್ಯೋಗಗಳಿಗಾಗಿ ಹೋರಾಟ ಮಾಡಿದರೆ, ಸುಧಾರಣಾವಾದಿಗಳು ಈ ಎರಡು ಬೇಡಿಕೆಗಳ ಜೊತೆಗೆ ಕೌಟುಂಬಿಕ ವ್ಯವಸ್ಥೆಯ ಸುಧಾರಣೆಗೂ ಶಾಸನ ತರಬೇಕೆಂದು ಬಯಸಿದ್ದರು.

೧೯೮೦ರ ದಶಕದಲ್ಲಿ ಸಾಮಾಜಿಕ ಸುಧಾರಣೆಗೆ ಆದ್ಯತೆಯನ್ನು ನೀಡಬೇಕೆನ್ನುವ ವಿಷಯಕ್ಕೆ ಸಂಬಂಧಿಸಿದಂತೆ ವಿವಾದವುಂಟಾದಾಗ – ತಿಲಕರ ನೇತೃತ್ವದಲ್ಲಿ ರಾಜಕೀಯ ತೀವ್ರಗಾಮಿಗಳು ತಮ್ಮ ಪಟ್ಟು ಬಿಗಿಗೊಳಿಸದ ಹಿನ್ನೆಲೆಯಲ್ಲಿ – ವಸಾಹತುವಾದ ಹಾಗೂ ರಾಷ್ಟ್ರೀಯವಾದದ ಬಗೆಗೆ ಈ ಗುಂಪುಗಳ ಧೋರಣೆಯೇನೆಂದು ಹೆಚ್ಚು ಕಡಿಮೆ ತೀರ್ಮಾನವಾಗಿತ್ತು. ಅರೆಬರೆ ಮನಸ್ಸಿನಿಂದ ಕೆಲವು ಸಾಮಾಜಿಕ ಶಾಸನಗಳನ್ನು ಹೊರಡಿಸುವುದರ ಮೂಲಕ ವಸಾಹತು ಸರ್ಕಾರವು ಸುಧಾರಣಾವಾದಿಗಳ ಮನಸ್ಸನ್ನು ಕೊಂಚಮಟ್ಟಿಗೆ ಗೆದ್ದಿದ್ದರೆನ್ನಬೇಕು. ಕಾಂಗ್ರೆಸ್ ತೀವ್ರಗಾಮಿಗಳಿಂದ ಒತ್ತಡಕ್ಕೆ ಒಳಗಾಗಿ, ವಸಾಹತುಶಾಹಿಗಳ ಲೆಕ್ಕಾಚಾರದ ಸಹಾನುಭೂತಿಯಿಂದ ಬೆಂಬಲಿತರಾಗಿ ತಮ್ಮ ಸೈದ್ಧಾಂತಿಕ ಪರಿಮಿತಿಗಳಿಂದಾಗಿ ಸುಧಾರಣಾವಾದಿಗಳು ಕಾಂಗ್ರೆಸ್ ಪ್ರತಿನಿಧಿಸುವ ರಾಜಕೀಯ ತೀವ್ರಗಾಮಿಗಳು ಹಾಗೂ ಬ್ರಿಟಿಷ್ ವಸಾಹತುಶಾಹಿಗಳ ನಡುವೆ ಸಮಾನ ಅಂತರವನ್ನು ಕಾಪಾಡಿಕೊಂಡರು.[೨]

ನಿಮ್ನವರ್ಗಕ್ಕೆ ಸೇರಿದ ಬೆರಳೆಣಿಕೆಯ ಸುಶಿಕ್ಷಿತ ಮಂದಿ ಸಾಮಾಜಿಕ ಧಾರ್ಮಿಕ ಸುಧಾರಣೆಯ ಪರವಾಗಿದ್ದರು. ಹಾಗಾಗಿ ಕರ್ನಾಟಕದ ರಾಷ್ಟ್ರೀಯತಾವಾದಿಗಳ ಬಗೆಗೆ ಅವರಲ್ಲಿ ವಿರೋಧವಿದ್ದಿತು; ಕರ್ನಾಟಕದ ರಾಷ್ಟ್ರೀಯತಾವಾದಿಗಳು ತಿಲಕ್ ಪ್ರಣೀತ ರಾಷ್ಟ್ರವಾದದಲ್ಲಿ ಹೆಚ್ಚು ನಂಬಿಕೆಯುಳ್ಳವರಾಗಿದ್ದ ಕಾರಣ ನಿಮ್ನವರ್ಗದವರ ಮನಸ್ಸಿನಲ್ಲಿದ್ದ ಸುಧಾರಣೆಗೆ ಅವಕಾಶವಿರಲಿಲ್ಲ. ಕರ್ನಾಟಕದಲ್ಲಿ ರಾನಡೆಯವರ ಸುಧಾರಣಾ ವಿಧಾನದಿಂದ ಪ್ರಭಾವಿತರಾಗಿದ್ದವರು ಅನೇಕರಿದ್ದರು – ಕುದುಮಲ್ ರಂಗರಾವ್‌ರವರನ್ನು ಹೊರತು ಪಡಿಸಿ – ಅವರೂ ಸಹ ನಿಮ್ನವರ್ಗದವರ ಪರವಾಗಿ ದನಿಯೆತ್ತಲಿಲ್ಲ.

ಸಾಮಾಜಿಕ ಹಾಗೂ ಧಾರ್ಮಿಕ ಸಮಸ್ಯೆಗಳನ್ನು ರಾಷ್ಟ್ರೀಯ ಕಾಂಗ್ರೆಸ್ ಎತ್ತಿಕೊಳ್ಳಲು ದಿಗಿಲು ಗೊಂಡದ್ದಕ್ಕೆ ಕಾರಣ ಆ ವಿಷಯವಾಗಿ ಆಗಲೇ ತೀವ್ರತರವಾದ ವಿರೋಧವುಂಟಾಗಿತ್ತು. ವಸಾಹತು ವಿರೋಧಿ ಹೋರಾಟದ ಮುಂಚೂಣಿಯಲ್ಲಿರುವುದಾಗಿ ಹೇಳಿಕೊಂಡಿದ್ದ ರಾಷ್ಟ್ರೀಯ ಕಾಂಗ್ರೆಸ್ಸು ಮಹಾತ್ಮಾ ಗಾಂಧಿಯವರು ಆಗಮಿಸುವವರೆಗೆ ಸಾಮಾಜಿಕ ಸಮಸ್ಯೆಯನ್ನು ಕುರಿತಾದ ಯಾವ ವಿಷಯವನ್ನು ಕೈಗೆತ್ತಿಕೊಂಡಿರಲಿಲ್ಲ. ದಾನಶೀಲರಾದ ವ್ಯಕ್ತಿಗಳಿಂದ ಅಲ್ಲೊಂದು ಇಲ್ಲೊಂದು ಸಾಮಾಜಿಕ ಕಾರ್ಯ ನಡೆಯಿತು. ೧೯೧೭ರ ಕಲ್ಕತ್ತಾ ಅಧಿವೇಶನದಲ್ಲಿ ಅಸ್ಪೃಶ್ಯರ ಏಳಿಗೆಯನ್ನು ತನ್ನ ಕಾರ್ಯಕ್ರಮದಲ್ಲಿ ಕಾಂಗ್ರೆಸ್ಸು ಸೇರಿಸಿಕೊಂಡಿತು; ಬ್ರಾಹ್ಮಣೇತರರು ಹೆಚ್ಚು ಹೆಚ್ಚು ತಮ್ಮ ಹಕ್ಕುಗಳಿಗಾಗಿ ಒತ್ತಾಯಿಸುವುದನ್ನು ಕಲಿತ ಹಿನ್ನೆಲೆಯಲ್ಲಿ ವಸಾಹತುಶಾಹಿ ಅವರನ್ನು ತನ್ನ ವಿರುದ್ಧ ಬಳಸಬಹುದೆಂಬ ದಿಗಿಲು ಕಾಂಗ್ರೆಸ್ ಪಕ್ಷಕ್ಕೆ ಉಂಟಾಯಿತು. ೧೯೦೬ರ ವೇಳೆಗೆ 'ಡಿಪ್ರೆಸ್ಡ್ ಕಾಸಸ್ ಮಿಷನ್ ಸೊಸೈಟಿ' ಯ ಸ್ಥಾಪನೆಯಾಯಿತು. ಕುದುಮಲ್ ರಂಗರಾಯರ ಜೊತೆಗೆ ವಿ.ಆರ್.ಶಿಂಧೆ, ನಾರಾಯಣ ಚಂದಾವರ್ಕರ್‌ರಂಥ ನಾಯಕರು ಆ ಸಂಘಟನೆಯಲ್ಲಿ ತುಂಬಾ ಕ್ರಿಯಾಶಾಲಿಗಳಾಗಿದ್ದರು. ನಾರಾಯಣ ಚಂದಾವರ್ಕರ್ ಹಾಗೂ ರಂಗರಾವ್ ಅವರು ಕರ್ನಾಟಕದವರು. ಆದರೆ ಸಮಸ್ಯೆ ಮಾತ್ರ ಮೊದಲಿನಂತೆಯೇ ಉಳಿಯಿತು. ಉದಾಹರಣೆಗೆ ಬಿಜಾಪುರದಲ್ಲಿ ೧೯೧೮ರಲ್ಲಿ ಕರ್ನಾಟಕ ಪ್ರಾದೇಶಿಕ ಸಮಾವೇಶ ಜರುಗಿದ

ಸಂದರ್ಭದಲ್ಲಿ ಹಾಜರಿದ್ದ ಗಾಂಧೀಜಿಯವರನ್ನು ಅಸ್ಪೃಶ್ಯತೆಗೆ ಸಂಬಂಧಿಸಿದ ಗೊತ್ತುವಳಿಯ ಬಗೆಗೆ ಮಾತನಾಡಬೇಕೆಂದು ಕೇಳಲಾಯಿತು. ಅಸ್ಪೃಶ್ಯ ವರ್ಗದವರ್‍ಯಾರಾದರೂ ಪ್ರೇಕ್ಷಕ ವೃಂದದಲ್ಲಿ ಇರುವರೆ ಎಂದು ಗಾಂಧೀಜಿಯವರು ಕೇಳಿದರು. ಆ ವರ್ಗದವರು ಯಾರೂ ಇರಲಿಲ್ಲ. ಗಾಂಧಿ ಜಿಗುಪ್ಸೆಯಿಂದ ಮೌನವಾಗಿ ಕುಸಿದು ಕುಳಿತುಕೊಂಡರು. ರಾಷ್ಟ್ರನಾಯಕರ ಪೈಕಿ ಗಾಂಧೀಜಿಯವರ ಜೊತೆಗೆ ಅಸ್ಪೃಶ್ಯರ ವಿಷಯವಾಗಿ ಅಂಬೇಡ್ಕರ್‌ರವರು ನಿರಂತರವಾದ ಸಮರವನ್ನು ನಡೆಸಿದರು. 'ದೇವಾಲಯ ಪ್ರವೇಶ' ಅವರನ್ನು ಬಹಳವಾಗಿ ಕಾಡಿದ್ದ ವಿಷಯ; ಹಾಗೆಯೇ ಅಸ್ಪೃಶ್ಯರನ್ನು ಕಾಡುವ ಇತರ ಸಾಮಾಜಿಕ ಹಾಗೂ ಧಾರ್ಮಿಕ ಹಿಂಸೆಗಳ ನಿವಾರಣೆಗೆ ಅವರು ಚಿಂತಿಸಿದರು. ಆದರೆ ಅವರು ಅಂಬೇಡ್ಕರರೊಡನೆ ಮುಖಾಮುಖಿಯಾಗುವ ತನಕ ಸಮಸ್ಯೆಯ ಅಗಾಧತೆ ಹಾಗೂ ಆ ಸಮಸ್ಯೆಯು ಹುಟ್ಟಿ ಹಾಕುವ ಸಾಮಾಜಿಕ ಹಾಗೂ ರಾಜಕೀಯ ಶಕ್ತಿಯ ಬಗ್ಗೆ ಯಾರಿಗೂ ಅರಿವಾಗಿರಲಿಲ್ಲ. 'ಪೂನಾ ಒಪ್ಪಂದ' ದ ನಂತರ ಗಾಂಧೀಜಿಯವರು ಹರಿಜನರ ಪ್ರಶ್ನೆಯನ್ನು ಗಂಭೀರವಾಗಿ ಕೈಗೆತ್ತಿಕೊಂಡರು, ಕಾರಣ ಸ್ವಾತಂತ್ರ್ಯ ಹೋರಾಟದೊಡನೆ ಇದು ಬಿಡಿಸಲಾಗದ ಸಂಬಂಧ ಹೊಂದಿದ್ದಿತು.

ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ಹಾಗೂ ಕರ್ನಾಟಕದ ಕೆಲವು ಮುಖ್ಯವಾದ ಪಟ್ಟಣಗಳಲ್ಲಿ ಹರಿಜನ ಸೇವಕ ಸಂಘಗಳ ಶಾಖೆಗಳನ್ನು ತೆರೆಯಲಾಯಿತು. ಗಾಂಧೀಜಿಯವರು 'ಹರಿಜನ' ಪ್ರವಾಸವನ್ನು ಕೈಕೊಂಡಾಗ ಜನರಲ್ಲಿ ಅತ್ಯುತ್ಸಾಹ ಕಂಡುಬಂದಿತು. ವೀರಣ್ಣಗೌಡ ಪಾಟೀಲರು ಹಾಗೂ ಅವರ ಹೆಂಡತಿ ಹರಿಜನೋದ್ಧಾರದ ಪ್ರತಿಪಾದಕರಾದರು. ಗಾಂಧೀಜಿಯವರ ಹರಿಜನ್ ಪರ್ಯಟನೆಯ ಸಂದರ್ಭದಲ್ಲಿ ಅವರು ೧೯೩೪ರಲ್ಲಿ ಹುಬ್ಬಳ್ಳಿಯಲ್ಲಿ ಒಂದು ಹರಿಜನ ಬಾಲಿಕಾಶ್ರಮವನ್ನು ತೆರೆದರು. ಅಂಥ ಸಂಸ್ಥೆಗಳ ಪೈಕಿ ಇದೊಂದೇ ಆಗಿದ್ದುದನ್ನೂ ನಾವು ನೆನೆಯಬೇಕು. ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮವು ರಾಷ್ಟ್ರವಾದಿಗಳಿಗೆ ತಿಳಿದಿತ್ತಾದರೂ ಕರ್ನಾಟಕದಲ್ಲಿ ಅದಕ್ಕಾಗಿ ಬಹಳ ಜನರು ಕೆಲಸ ಮಾಡಲು ಸಿದ್ಧರಿರಲಿಲ್ಲವೆಂಬುದೂ ನಿಜವಾಗಿದೆ. ಈ ಸಮಸ್ಯೆಯ ಬಗೆಗೆ ಹರ್ಡೀಕರ್ ಮಂಜಪ್ಪ ಹಾಗೂ ಕೆ.ಎಫ್. ಪಾಟೀಲರು ಪುಸ್ತಕಗಳನ್ನು ರಚಿಸಿದರು. ಹರ್ಡೀಕರ್ ಮಂಜಪ್ಪನವರು 'ಆದಿಜನರ ಸುಧಾರಣೆ' ಎಂಬ ಗ್ರಂಥವನ್ನು ರಚಿಸಿದರೆ, ಕೆ.ಎಫ್.ಪಾಟೀಲರು 'ಅಸ್ಪೃಶ್ಯತಾ ನಿವಾರಣೆ' ಎಂಬ ಕೃತಿಯನ್ನು ರಚಿಸಿದರು.

ಬ್ರಿಟಿಷ್ ಭಾಗದ ಕರ್ನಾಟಕದ ಕಥೆ ಇದಾದರೆ, ಮೈಸೂರು ಪ್ರಾಂತ್ಯದ ಕಥೆ ಇದಕ್ಕಿಂತ ಕೊಂಚ ಭಿನ್ನವಾದುದಾಗಿದೆ. ಸ್ಥಳೀಯ ಕಾಂಗ್ರೆಸ್ಸಿಗರು ಹಾಗೂ ರಾಷ್ಟ್ರವಾದಿಗಳು ಅರ್ಥಮಾಡಿಕೊಂಡಂತೆ ನಾವು ಇಲ್ಲಿ ಸಮಸ್ಯೆಯನ್ನು ಚರ್ಚಿಸುತ್ತೇವೆ; ಹಾಗೆಯೇ ದೇಶೀಯ ಸರ್ಕಾರ ಮತ್ತು ಬ್ರಾಹ್ಮಣೇತರ ಪಕ್ಷಗಳಂಥ ಬೇರೆ ಬೇರೆ ಘಟಕಗಳಿಗೆ ರಾಷ್ಟ್ರವಾದಿ ಚಳವಳಿಯು ಅತ್ಯಂತ ಪ್ರಮುಖವಾದುದಾಗಿತ್ತು.

೧೯೧೫ರ ತನಕ ಮೈಸೂರಿನ ರಾಜಕಾರಣವು ಮೈಸೂರಿನ ಅರಮನೆ ಹಾಗೂ ಬೆಂಗಳೂರಿನ ಸಚಿವಾಲಯದಲ್ಲಿ ಕೇಂದ್ರೀಕೃತವಾಗಿತ್ತು. ಅತ್ಯಂತ ಶಕ್ತಿಯುತವಾದ ಮೈಸೂರು ಅಧಿಕಾರಶಾಹಿಯಲ್ಲಿ ಹೆಚ್ಚು ಪ್ರಧಾನ ಹಾಗೂ ಸ್ಥಾನಗಳನ್ನು ಗಳಿಸಿಕೊಳ್ಳಲು ಈ ಚಟುವಟಿಕೆ ನಡೆದಿತ್ತು. ಅಧಿಕಾರಕ್ಕಾಗಿ ಪೈಪೋಟಿ ಮೂಲತಃ ಮುಖ್ಯವಾಗಿ ಎರಡು ಬ್ರಾಹ್ಮಣ ಸಮುದಾಯಗಳ ನಡುವೆ – ಅಂದರೆ ಮದ್ರಾಸಿಗಳು ಹಾಗೂ ಮೈಸೂರಿಗರು – ನಡೆದಿತ್ತಾದರೂ ಸನ್ನಿವೇಶದ ವಾಸ್ತವಕ್ಕೆ ಇತರ ಸುಶಿಕ್ಷಿತ ಜನರೂ ಕಣ್ಣು ತೆರೆಯುವಂತೆ ಪ್ರೇರೇಪಿಸಿತು.[೪]

೨೦ನೆಯ ಶತಮಾನದ ಆರಂಭಿಕ ವರ್ಷಗಳಲ್ಲಿ ಇತರ ಬಹುಸಂಖ್ಯಾತ ಸಾಮಾಜಿಕ ವರ್ಗಗಳು ನಿಧಾನವಾಗಿ ಮೇಲೆ ಕಾಣಿಸಿಕೊಂಡವಲ್ಲದೆ ತಾವು ಓಟದಲ್ಲಿ ಹಿಂದೆ ಬಿದ್ದಿರುವ ಸತ್ಯವನ್ನು ಅರಿತುಕೊಂಡವು.

ಮೈಸೂರಿನ ಜನಸಂಖ್ಯೆಯಲ್ಲಿ ಶೇಕಡಾ ೨೦ ಭಾಗದಷ್ಟಿದ್ದ ಅಸ್ಪೃಶ್ಯರು ಅತ್ಯಂತ ಕಡೆಗಣಿಸಲ್ಪಟ್ಟ ಜನಸಮುದಾಯವಾಗಿದ್ದರು. ಉಳಿದ ಜಾತಿ ಜನಗಳಿಗೆ ನಿಲುಕುವಂಥ ಉದ್ಯೋಗಗಳು ಅಸ್ಪೃಶ್ಯರಿಗೆ ಅವರ ಜಾತಿ ಕಾರಣದಿಂದಲೇ ದಕ್ಕದಂತಾಯಿತು. ಕ್ರಿಶ್ಚಿಯನ್ ಮಿಷನರಿಗಳು ಅವರಿಗೆ ಶಿಕ್ಷಣ ಸೌಲಭ್ಯವನ್ನು ನೀಡಲು ಪ್ರಯತ್ನಿಸಿದರಾದರೂ ಅವರು ಗ್ರಾಮಾಂತರ ಪ್ರದೇಶಗಳಲ್ಲಿ ಹೆಚ್ಚು ಕೇಂದ್ರೀಕೃತರಾದ್ದರಿಂದ ಅದರ ಪ್ರಯೋಜನವನ್ನು ಪಡೆದುಕೊಳ್ಳಲಾಗಲಿಲ್ಲ. ಜೊತೆಗೆ ಮಿಷನರಿಗಳು ಧಾರ್ಮಿಕ ಇಂಗಿತವನ್ನು ಹೊಂದಿ ಕೆಲಸ ಮಾಡುತ್ತಿದ್ದ ಕಾರಣ ಸಾಂಪ್ರದಾಯಿಕ ಅಸ್ಪೃಶ್ಯರಿಗೆ ಮಾತಾಂತರದಿಂದ ಆಗುವ ಲಾಭಕ್ಕಿಂತ ತಮ್ಮ ಧರ್ಮ ಮತ್ತು ಪದ್ಧತಿಗಳು ಬಹಳ ಮುಖ್ಯವಾಗಿದ್ದವು.

ಸ್ವಾಮಿ ವಿವೇಕಾನಂದರಿಂದ ವಿಶೇಷವಾಗಿ ಪ್ರಭಾವಗೊಂಡ ಹಿಂದು ಪುನಶ್ಚೇತನ ಚಳವಳಿಗಳು ಮೈಸೂರು ಸಂಸ್ಥಾನಕ್ಕೆ ಪ್ರೇರಣೆ ನೀಡಿದ ಫಲವಾಗಿ ೧೮೯೦ರ ದಶಕದಲ್ಲಿಯೇ ಅಸ್ಪೃಶ್ಯರಿಗೆ ವಿಶೇಷವಾದ ಶಾಲೆಗಳನ್ನು ತೆರೆಯುವುದರ ಮೂಲಕ ಶೈಕ್ಷಣಿಕ ಸೌಲಭ್ಯವನ್ನು ದೊರಕಿಸಿಕೊಳ್ಳುವಂತಾಯಿತು.[೫] ಸರ್ಕಾರ ಬ್ರಾಹ್ಮಣೇತರರನ್ನು ತೃಪ್ತಿಪಡಿಸಲು ೧೯೧೬ರಲ್ಲಿ ಹಿಂದುಳಿದ ವರ್ಗದವರಿಗೆ ೧ ಲಕ್ಷ ರೂಪಾಯಿಗಳು ವಿದ್ಯಾರ್ಥಿವೇತನವನ್ನು ಮಂಜೂರು ಮಾಡಿತು; ಅದರಲ್ಲಿ ಅಸ್ಪೃಶ್ಯರಿಗೆ ೧೫,೦೦೦ ರೂಪಾಯಿಗಳನ್ನು ಹಂಚಲಾಯಿತು. ಮಿಲ್ಲರ್ ಸಮಿತಿಯು ಹಿಂದುಳಿದ ವರ್ಗಗಳ ವರದಿಯನ್ನು ಹೊರಡಿಸಿದಾಗ ಅಸ್ಪೃಶ್ಯರನ್ನೂ ಅವರಲ್ಲಿ ಸೇರ್ಪಡೆ ಮಾಡಲಾಯಿತು.[೬] ತನ್ನ ನೌಕರಿ ನೀಡಿಕೆಯಲ್ಲಿ ಸಣ್ಣಪುಟ್ಟ ಉದ್ಯೋಗಗಳಿಗಾಗಿ ಅಸ್ಪೃಶ್ಯರನ್ನು ಸೇರಿಸಿಕೊಳ್ಳಲು ತೊಡಗಿದಾಗ ಬ್ರಾಹ್ಮಣರನ್ನುಳಿದು ಬೇರೆಲ್ಲ ಜಾತಿಯ ಗುಂಪೆಂದು ಸಾರಿಕೊಂಡಿದ್ದ ಜನವರ್ಗದವರೂ ಸೇರಿದಂತೆ ಎಲ್ಲರೂ ಸರ್ಕಾರದ ನೀತಿಯನ್ನು ವಿರೋಧಿಸಿದರು.[೭] ಅಸ್ಪೃಶ್ಯರಿಗೆ ಸರ್ಕಾರಿ ಶಾಲೆಗಳನ್ನು ತೆರೆಯುವ ಏರ್ಪಾಟನ್ನು ರಾಷ್ಟ್ರೀಯವಾದಿಗಳು ವಿರೋಧಿಸಿದರು, ಹಾಗೆಯೇ ಮೈಸೂರಿನಲ್ಲಿ ಕಾಂಗ್ರೆಸ್ಸಿನ ಘಟಕವೊಂದನ್ನು ಸ್ಥಾಪಿಸಲು ಪ್ರಯತ್ನಿಸಿದವರೂ ಇವರೇ.[೮] ವ್ಯಂಗ್ಯವೆಂದರೆ ಇದೇ ಜನರು ರಾಷ್ಟ್ರೀಯ ಶಾಲೆಗಳೆಂಬ ಶಿರೋನಾಮೆಯನ್ನು ಹೊತ್ತ ಶಾಲೆಗಳನ್ನು ತೆರೆದರು, ಏಕಕಾಲದಲ್ಲಿ 'ಕೊಳಕು, ನೀಚ' ಮಕ್ಕಳೊಂದಿಗೆ ತಮ್ಮ ಮಕ್ಕಳು ಶಾಲೆಗಳಲ್ಲಿ ಕೂರಬೇಕಾದ ಸನ್ನಿವೇಶವನ್ನು ಪ್ರತಿಭಟಿಸಿದರು.[೯]

ಆದರೆ ಬ್ರಾಹ್ಮಣೇತರರ ಸವಾಲು ಪ್ರಬಲವಾಗಿ ಬೆಳೆಯ ತೊಡಗಿದಾಗ ಕೆಲವರು ಉದಾರವಾದಿ ರಾಷ್ಟ್ರೀಯವಾದಿಗಳು ಹರಿಜನರ ಬಗ್ಗೆ ಹೆಚ್ಚು ಆಸಕ್ತಿ ತೋರಲು ಮುಂದಾದರು. ಉಳಿದ ಬ್ರಾಹ್ಮಣೇತರರಂತೆ ಸಂಘಟಿತರಾಗಲು ಅಸ್ಪೃಶ್ಯರಿಗೆ ಸಾಧ್ಯವಾಗದ ಕಾರಣ ಅಸ್ಪೃಶ್ಯರೊಡನೆ ಬ್ರಾಹ್ಮಣೇತರರು ಸವಲತ್ತುಗಳನ್ನು ಹಂಚಿಕೊಳ್ಳಲು ಹಿಂಜರಿದರು; ಹಾಗಾಗಿ, ಬ್ರಾಹ್ಮಣರು ಅಸ್ಪೃಶ್ಯರ ಬಗ್ಗೆ ಆಸ್ಥೆ ಹೊಂದಲು ಕಾರಣವಾಯಿತು. ಆದಾಗ್ಯೂ ಅಸ್ಪೃಶ್ಯರ ಮೇಲೆ ಅವರು ತೋರಿದ ಆಸಕ್ತಿ ನಿಷ್ಕಪಟವಾದದ್ದಾಗಿರಲಿಲ್ಲ; ಹೆಟ್ನೆಬಿಯವರು ಹೇಳುವಂತೆ ಬ್ರಾಹ್ಮಣೇತರ ಪಕ್ಷದ ವಿರುದ್ಧ 'ಜನರನ್ನು ಕ್ರೋಢೀಕರಿಸುವ ತಂತ್ರ' ವಾಗಿ ಬ್ರಾಹ್ಮಣರು ಅಸ್ಪೃಶ್ಯರನ್ನು ಸಂಘಟಿಸಲು ತೊಡಗಿದರು.[೧೦] ಗಾಂಧೀಜಿಯವರ ಅಸ್ಪೃಶ್ಯತಾ-ವಿರೋಧಿ ಕೆಲಸದಿಂದಾಗಿ ಸಮಸ್ಯೆಯ ಬಗ್ಗೆ ಮಾತನಾಡಲು ಅವರಿಗೆ ಸಾಧ್ಯವಾಯಿತಲ್ಲದೆ ಕಾಂಗ್ರೆಸ್ಸಿನ ಹೆಸರಿನಲ್ಲಿ ಬ್ರಾಹ್ಮಣೇತರರ-ವಿರೋಧಿ ನಿಲುವನ್ನು ಮುಚ್ಚಿಹಾಕಲು ಕೂಡ ಸಾಧ್ಯವಾಯಿತು. ಈ ಸಮಸ್ಯೆಯ ಬಗ್ಗೆ ಮಾತನಾಡುತ್ತಾ ಎರಡು ವಿಧದಲ್ಲಿ ಕರ್ನಾಟದಲ್ಲಿ ರಾಷ್ಟ್ರೀಯವಾದಿಗಳು ಲಾಭಗಳಿಸುವಂತಾಯಿತು. ಅಸ್ಪೃಶ್ಯರ ಉದ್ಧಾರ ಮಾಡುವವರಂತೆ ಅವರು ಹೇಳಿಕೊಳ್ಳಬಹುದಾಗಿತ್ತು. ಮತ್ತು ತಮ್ಮನ್ನು ಕೋಮುವಾದಿಗಳೆಂದು ಕರೆಯುವವರ ಬಾಯಿ ಮುಚ್ಚಿಸಬಹುದಾಗಿತ್ತು. ಹಾಗೆಯೇ ಮುಗ್ಧರಾಗಿದ್ದ ಅಸ್ಪೃಶ್ಯರು ಯಾವ ವಿಧದಲ್ಲಿಯೂ ಅವರ ಮೇಲೆ ಸ್ಪರ್ಧೆಗಿಳಿಯುವ ಸ್ಥಿತಿಯಲ್ಲಿರಲಿಲ್ಲ. ಸಂಖ್ಯೆಯ ವಿಷಯದಲ್ಲಿ ಬಹಳ ಕಡಿಮೆ ಪ್ರಮಾಣದಲ್ಲಿದ್ದ (ಒಟ್ಟು ಜನಸಂಖ್ಯೆಯ ಶೇಕಡಾ ೪ ಭಾಗ) ಬ್ರಾಹ್ಮಣರು ಅಸ್ಪೃಶ್ಯರನ್ನು ತಮ್ಮ ಕಡೆ ಸೆಳೆದುಕೊಂಡು ಆಗ

ಪ್ರಾಂತೀಯ ರಾಜಕಾರಣದಲ್ಲಿ ತಮಗೆ ವಿರೋಧಿಗಳಾಗಿದ್ದ ಬ್ರಾಹ್ಮಣೇತರರಿಗೆ ಬೆಂಬಲ ದೊರಕದ ಹಾಗೆ ಮಾಡುವುದು ಉದ್ದೇಶವಾಗಿತ್ತು. ಅವರು 'ದ ಡಿಪ್ರೆಸ್ಡ್ ಕ್ಲಾಸಸ್ ಮಿಷನ್ ಸೊಸೈಟಿ' (೧೯೨೦) ಹಾಗೂ 'ದ ಮೈಸೂರ್ ಸಿವಿಲ್ ಅಂಡ್ ಸೋಷಿಯಲ್ ಪ್ರೋಗ್ರೆಸ್ ಅಸೋಸಿಯೇಷನ್' (೧೯೨೦) ಎಂಬ ಎರಡು ಸಂಘಟನೆಗಳನ್ನು ಸ್ಥಾಪಿಸಿದರು.

## ಅಸ್ಪೃಶ್ಯತಾ ಸಮಸ್ಯೆ ಹಾಗೂ ರಾಷ್ಟ್ರವಾದಿಗಳು

ಪೂನಾ ಒಪ್ಪಂದದ ನಂತರ ಅಸ್ಪೃಶ್ಯತೆಯ ಸಮಸ್ಯೆಯನ್ನು ಮೈಸೂರಿನ ಕೆಲವು ರಾಷ್ಟ್ರವಾದಿಗಳು ಕೈಗೆತ್ತಿಕೊಂಡರು. ಆದರೆ ಅದು ಕಾಂಗ್ರೆಸ್ ನಿಶಾನೆಯ ಅಡಿಯಲ್ಲಿಯೇ ಇರಬೇಕೆಂಬ ಅಗತ್ಯವಿರಲಿಲ್ಲ. ಮೈಸೂರಿನಲ್ಲಿ ಎರಡು ರಾಷ್ಟ್ರೀಯವಾದಿ ಗುಂಪುಗಳಿದ್ದುವು. ಒಂದು, ಬ್ರಾಹ್ಮಣೇತರರು ಪ್ರತಿನಿಧಿಸುತ್ತಿದ್ದ ಪ್ರಜಾಪಕ್ಷ – ಪ್ರಜಾಸಂಯುಕ್ತ ಪಕ್ಷ ಮತ್ತು ಇನ್ನೊಂದು: ಬ್ರಾಹ್ಮಣರೇ ಪ್ರಮುಖವಾಗಿದ್ದಂಥ ಕಾಂಗ್ರೆಸ್ ಪಕ್ಷ. ಈ ಎರಡೂ ಗುಂಪುಗಳು ಪರಸ್ಪರರನ್ನು ಶಂಕಿಸುತ್ತಾ ವಿರೋಧಿಸುತ್ತಿದ್ದವು. ಆದರೆ ನಿರಂಕುಶ ಪ್ರಭುತ್ವದ ಸಮಸ್ಯೆಯನ್ನು ಎತ್ತಿಕೊಂಡಾಗ ಮಾತ್ರ ಇಬ್ಬರೂ ಒಟ್ಟಾಗುತ್ತಿದ್ದರು. ಉಳಿದ ಇಂಗಿತಗಳೇನೇ ಇರಲಿ, ಗಾಂಧೀಜಿಯವರು ಮೈಸೂರನ್ನು 'ರಾಮ ರಾಜ್ಯ' ವೆಂದು ಕರೆದಿದ್ದ ಕಾರಣ 'ಹರಿಜನರ ಸಮಸ್ಯೆ' ಯನ್ನು ಮುಂದು ಮಾಡಿಕೊಂಡು ಈ ಎರಡೂ ಗುಂಪಿನವರು ಸರ್ಕಾರಕ್ಕೆ ಮುಜುಗರವುಂಟು ಮಾಡಲು ತೊಡಗಿದರು. ಗಾಂಧಿ ಹಾಗೂ ಅವರ ಹರಿಜನ ಕ್ಷೇಮಾಭಿವೃದ್ಧಿ ಕೆಲಸವನ್ನು ಹೆಚ್ಚಿನ ರೀತಿಯಲ್ಲಿ ಬೆಳಕಿಗೊಡ್ಡಿ ಸರ್ಕಾರವನ್ನು ಒಂದು ಸಂದಿಗ್ಧ ಪರಿಸ್ಥಿತಿಯಲ್ಲಿಡುವುದು ಅವರ ಉದ್ದೇಶವಾಗಿತ್ತು.

ಗಾಂಧೀಜಿಯವ 'ದೀರ್ಘ ಉಪವಾಸದ' ನಂತರ ಬ್ರಾಹ್ಮಣರಿರಲಿ ಬ್ರಾಹ್ಮಣೇತರರಿರಲಿ – ಎಲ್ಲರೂ ಅಸ್ಪೃಶ್ಯತೆ ಹಾಗೂ ದೇವಾಲಯ ಪ್ರವೇಶದ ಬಗ್ಗೆ ಮಾತನಾಡತೊಡಗಿದರು; ಆದರೆ ಬಹಿರಂಗವಾಗಿಯಾಗಲಿ ತಮ್ಮ ನಿಯಂತ್ರಣದಲ್ಲಿದ್ದ ಪತ್ರಿಕೆಗಳಲ್ಲಿಯಾಗಲಿ ಜಾಹೀರುಗೊಳಿಸದೆ ಕೇವಲ ನಾಲ್ಕುಗೋಡೆಯ ಮಧ್ಯೆ ಪಿಸುಗುಟ್ಟಿಕೊಂಡರು.

ಕಾಂಗ್ರೆಸ್ಸಿನವರು ಹಾಗೂ ಪಕ್ಷದ ಅಭಿಮಾನಿಗಳು ಒಂದುಗೂಡಿ 'ಮೈಸೂರು ರಾಜ್ಯ ಅಸ್ಪೃಶ್ಯತಾ – ವಿರೋಧಿ ಒಕ್ಕೂಟ' (Mysore State Anti-Untouchability League)ವನ್ನು ರಚಿಸಿಕೊಂಡರು. ೧೧ ಜನ ಸದಸ್ಯರ ಪೈಕಿ ಒಬ್ಬರು ಅಸ್ಪೃಶ್ಯವರ್ಗದವರು, ಇಬ್ಬರು ಬ್ರಾಹ್ಮಣರು ಹಾಗೂ ಉಳಿದವರು ಬ್ರಾಹ್ಮಣೇತರರಾಗಿದ್ದರು.[೧೮] ಒಕ್ಕೂಟದ ಅನೇಕ ಸದಸ್ಯರು ರಾಜಕೀಯವಾಗಿ ತುಂಬಾ ಪ್ರಭಾವಶಾಲಿಗಳಾಗಿದ್ದಲ್ಲದೆ ಸ್ಥಳೀಯ ಬೋರ್ಡು, ಜಿಲ್ಲಾ ಬೋರ್ಡುಗಳೂ ಸೇರಿದಂತೆ, ಒಂದಲ್ಲಾ ಒಂದು ಬೋರ್ಡಿನ ಅಧ್ಯಕ್ಷರಾಗಿದ್ದರು. ಹಾಗಾಗಿ ತಮ್ಮ ನಿಯಂತ್ರಣದಲ್ಲಿ ಬರುವ ಬಾವಿಗಳು ಹಾಗೂ ಕೆರೆಗಳಿಂದ ನೀರನ್ನು ಅವರು ತೆಗೆದುಕೊಳ್ಳಲು ಠರಾವು ಕೂಡ ಜಾರಿಗೊಳಿಸಲಿಲ್ಲ; ಬ್ರಿಟಿಷ್ ಪ್ರೆಸಿಡೆನ್ಸಿಗಳಲ್ಲಿ ಅಂಥ ಅಭ್ಯಾಸ ಇದ್ದಿತೆಂಬುದನ್ನು ನಾವು ನೆನೆಯಬೇಕು. ೧೯೨೩ರಷ್ಟು ಹಿಂದೆಯೇ ಬೊಂಬಾಯಿ ಶಾಸನಸಭೆಯಲ್ಲಿ ಅಂಥದೊಂದು ಗೊತ್ತುವಳಿಯನ್ನು ಅಂಗೀಕರಿಸಿದ್ದರು.

ಶಾಲೆಗಳಲ್ಲಿ ಅಸ್ಪೃಶ್ಯ ಮಕ್ಕಳನ್ನು ಸೇರಿಸಿಕೊಳ್ಳಬೇಕೆಂಬ ಸರ್ಕಾರಿ ಆದೇಶದ ಸಂಕ್ಷಿಪ್ತ ಪರಿಚಯದಿಂದ ಮಾದರಿ ರಾಜ್ಯವೆಂದು ಹೆಸರಾಗಿದ್ದ ಮೈಸೂರಿನಲ್ಲಿ ಅಸ್ಪೃಶ್ಯ ವಿದ್ಯಾರ್ಥಿಗಳನ್ನು ಹೇಗೆ ನಡೆಸಿಕೊಂಡರೆಂಬುದು ಸ್ಪಷ್ಟವಾಗಿ ತಿಳಿಯುತ್ತದೆ. ಆ ವರ್ಗದ ಮಕ್ಕಳನ್ನು ಶಾಲೆಗಳಿಗೆ ಸೇರಿಸಕೊಳ್ಳಬೇಕೆಂದು ಆದೇಶ ಹೊರಡಿಸಿ

೧೩. ವರ್ಷಗಳೇ ಕಳೆದಿದ್ದರೂ "ಪಂಚಮರ ಮಕ್ಕಳನ್ನು ಸೇರಿಸಿಕೊಳ್ಳುವಲ್ಲಿ ತುಂಬಾ ತೊಡಕಿದ್ದಿತಲ್ಲದೆ, ಅಸ್ಪೃಶ್ಯತೆಯು ಸಂಪೂರ್ಣವಾಗಿ ಮಾಯವಾಗಿರಲಿಲ್ಲ...... ಬ್ರಾಹ್ಮಣರು ಹಾಗೂ ಇತರ ಜಾತಿಯ ಜನರು ಒಂದು ಬೀದಿಯಲ್ಲಿ ಹೆಚ್ಚಾಗಿ ವಾಸಿಸುತ್ತಿದ್ದ ಆದಿ ಕರ್ನಾಟಕರು ಮುಕ್ತವಾಗಿ ನಡೆಯುವಂತಿರಲಿಲ್ಲ...... ಸಮಾಜದ ಇತರ ಜಾತಿಯವರಂತೆಯೇ ಅಸ್ಪೃಶ್ಯರನ್ನು ಕಾಣಬೇಕೆಂದು ತಿಳಿಸಿದಾಗ ಸಂಪ್ರದಾಯಸ್ಥರು ದಿಗಿಲುಗೊಂಡರು".[೧೨]

ಸರ್ಕಾರವು 'ಮಾಮೂಲು' ಎಂಬ ಹೆಸರಿನಲ್ಲಿ ಅಸ್ಪೃಶ್ಯತೆಯ ಆಚರಣೆಯನ್ನು ಸಮರ್ಥಿಸಿಕೊಳ್ಳುತ್ತಿರುವುದಾಗಿ ಅಸ್ಪೃಶ್ಯತಾ-ವಿರೋಧಿ ಒಕ್ಕೂಟವು ಪ್ರತಿಭಟಿಸಿತು. 'ಅಸ್ಪೃಶ್ಯತಾ ನಿವಾರಣಾ ಮಸೂದೆ' ಎಂಬ ಮಸೂದೆಯ ಕರಡನ್ನು ತಯಾರಿಸಿ ಅಸ್ಪೃಶ್ಯತಾ ಆಚರಣೆಯಲ್ಲಿ ಸರ್ಕಾರವು ಯಾವುದೇ ರೀತಿಯ ಉತ್ತೇಜನವನ್ನು ನೀಡಬಾರದೆಂದು ಒಕ್ಕೂಟವು ಒಂದು ಶಾಸನ ಹೊರಡಿಸಬೇಕೆಂದು ಆಗ್ರಹಪಡಿಸಿತು.[೧೩]

"ಯಾವುದೇ ಸಾಮಾಜಿಕ ಅಥವಾ ಧಾರ್ಮಿಕ ಸಂಸ್ಥೆಯ ವಿಷಯದಲ್ಲಿ ತಲೆ ಹಾಕುವುದು ಈ ಕರಡು ಮಸೂದೆಯ ಉದ್ದೇಶವಲ್ಲ" ವೆಂದು ತಿಳಿಸಿದುದು ಮಾತ್ರ ಈ ಮಸೂದೆಯ ನಕಾರಾತ್ಮಕವಾದ ಅಂಶವೆಂದು ತಿಳಿಯಬಹುದು; ಕಾರಣ ಯಾವ ಉದ್ದೇಶಕ್ಕಾಗಿ ಈ ಮಸೂದೆ ತಯಾರಾಗಿತ್ತೋ ಆ ಉದ್ದೇಶವನ್ನು ಈ ಅಂಶ ಪರಾಭವಗೊಳಿಸಿತೆಂದು ತಿಳಿಯಬಹುದಾಗಿದೆ. ಯಾವುದೇ ಧಾರ್ಮಿಕ ನಂಬಿಕೆಗಳಿಗೆ ಅಡ್ಡಿ ಪಡಿಸುವುದಿಲ್ಲವೆಂದು ಮಸೂದೆಯಲ್ಲಿ ಉಲ್ಲೇಖಿಸಿದ್ದರಿಂದ ಮೇಲುಜಾತಿಯವರ ಸಂಪ್ರದಾಯವನ್ನು ಎತ್ತಿ ಹಿಡಿದ ಹಾಗಾಯಿತು; ಆದ್ದರಿಂದ ಅವರ ಸಂಪ್ರದಾಯವನ್ನು ಪ್ರಶ್ನಿಸದೆ, ಅಸ್ಪೃಶ್ಯತೆಯನ್ನು ಹೋಗಲಾಡಿಸುವ ಕ್ರಮವು ಊಹಾತೀತವಾಗಿದ್ದಿತು.

ಸಾಮಾಜಿಕ ಪೀಡೆಗಳ ನಿವಾರಣೆಯಲ್ಲಿ ಶಾಸನದ ಪ್ರಯೋಜನವನ್ನು ಕುರಿತು ಗಾಂಧೀಜಿಯವರು ಹೇಳಿದ್ದಕ್ಕೂ ಒಕ್ಕೂಟದವರು ಮಸೂದೆಯನ್ನು ಜಾರಿಗೊಳಿಸಲು ಮಾಡಿದ ಪ್ರಯತ್ನಕ್ಕೂ ವ್ಯತ್ಯಾಸವನ್ನು ಕಾಣಬಹುದು. ಕಾನೂನಿನ ಬಲಾತ್ಕಾರ ಮಾರ್ಗದಿಂದ ಅಸ್ಪೃಶ್ಯತೆಯನ್ನು ನಿವಾರಿಸುವುದು ಸಾಧ್ಯವೆಂದು ಗಾಂಧೀಜಿಯವರು ನಂಬಿರಲಿಲ್ಲ ಹಾಗೂ ಅದನ್ನವರು ಬೋಧಿಸಲೂ ಇಲ್ಲ. ಮೈಸೂರಿಗರೂ ಸಹ ಗಾಂಧೀಜಿಯವರ ಮಾರ್ಗದರ್ಶನವನ್ನು ಕೇಳಿದರು. ದೇವಾಲಯ ಪ್ರವೇಶವೂ ಸಹ ಮಸೂದೆಯಲ್ಲಿ ಸೇರ್ಪಡೆಯಾಗಬೇಕೆ ಎಂದು ಪ್ರಶ್ನಿಸಿದರು.[೧೪] ತಮ್ಮ ನಂಬಿಕೆಗೆ ಅನುಗುಣವಾಗಿ ಗಾಂಧೀಜಿಯವರು "ಮಸೂದೆಯನ್ನು ಜಾರಿಗೊಳಿಸಬೇಕೆಂದು ಪಟ್ಟು ಹಿಡಿಯುವುದೇ ಅನಗತ್ಯವೆಂದು" ಹೇಳಿದರು.[೧೫]

ಮಸೂದೆಯನ್ನು ಜಾರಿಗೊಳಿಸಲು ಒತ್ತಡ ತರುವ ವಿಷಯವಾಗಿ ಮಹಾತ್ಮಾ ಗಾಂಧಿಯವರು ಹಿಂದೇಟು ಹೊಡೆದಿದ್ದರಾದರೂ ಮೈಸೂರು ಒಕ್ಕೂಟದವರು ಕರಡು ಮಸೂದೆಯನ್ನು ತಯಾರು ಮಾಡಿದ ನಂತರವೇ ಅವರ ಮಾರ್ಗದರ್ಶನ ಕೇಳಿದ್ದರಿಂದ ತಮ್ಮ ನಿರ್ಧಾರದಂತೆ ಮೈಸೂರಿನವರು ಮುಂದುವರಿಯಬಹುದಾಗಿತ್ತು. ಗಾಂಧೀಜಿಯವರು ಮಾತ್ರ ಒಕ್ಕೂಟದವರಿಗೆ ಎಚ್ಚರಿಕೆಯ ಮಾತೊಂದನ್ನು ಹೇಳಲು ಮರೆಯಲಿಲ್ಲ; ಅದೇನೆಂದರೆ, ಮಸೂದೆಯ ವ್ಯಾಖ್ಯಾನವನ್ನು ಸನಾತನಿಗಳು ಅಂಗೀಕರಿಸಬೇಕು[೧೬] ಎಂಬುದು. ಈ ಅಡ್ಡಿ ಇದ್ದಾಗಿಯೂ ತಮ್ಮ ಮಾರ್ಗದಲ್ಲಿ ಅವರು ಮುಂದುವರಿದರು, ಆದರೆ ದೇವಾಲಯ ಪ್ರವೇಶದ ನಿಬಂಧನೆಯನ್ನು ಬಿಟ್ಟು ಬಿಟ್ಟಿದ್ದರು. "ದೇವಾಲಯ ಪ್ರವೇಶ ಮಸೂದೆಯನ್ನು ಸೇರ್ಪಡೆ ಮಾಡಿ ಸಂಪ್ರದಾಯಸ್ಥರ ನಿಷ್ಠೂರವನ್ನು ನಾವು ಏಕೆ ಕಟ್ಟಿಕೊಳ್ಳಬೇಕು" ಎಂದು ಅವರು ವಿಶದಪಡಿಸಿದಾಗ ಮತ್ತಷ್ಟು ಗೊಂದಲವುಂಟಾಗಿತ್ತು. ಪ್ರಾಂತ್ಯದ ರಾಷ್ಟ್ರೀಯವಾದಿಗಳ ಗಲಿಬಿಲಿ, ಅರೆಮನಸ್ಸಿನ ಧಾಟಿ ಹಾಗೂ ಸೋಗಿಗೆ ಮಸೂದೆಯೇ ಒಂದು

ಸಂಕೇತವಾಗಿತ್ತು. ಉಪಸಂಹಾರದ ರೀತಿಯಲ್ಲಿ ಒಕ್ಕೂಟದ ಮಾತುಗಳನ್ನೇ ಇಲ್ಲಿ ಉಲ್ಲೇಖಿಸಬಹುದು....... "ಈ ಮಸೂದೆಯು ಸಂಪೂರ್ಣವಾಗಿ ನಕಾರಾತ್ಮಕವಾದುದು. ಅಸ್ಪೃಶ್ಯತಾ ಆಚರಣೆ ಶಿಕ್ಷಾರ್ಹವಲ್ಲ" .[೧೭]

ಮಸೂದೆ ನಕಾರಾತ್ಮಕವಾಗಿದ್ದು ದೇವಾಲಯ ಪ್ರವೇಶ ನಿಬಂಧನೆಯನ್ನು ಸೇರ್ಪಡೆ ಮಾಡಲು ಒಕ್ಕೂಟವೇ ಸಿದ್ಧವಿಲ್ಲದ ಸಂದರ್ಭದಲ್ಲಿ ಅಸ್ಪೃಶ್ಯತೆಯನ್ನು ನಿರ್ಮೂಲನ ಮಾಡದುದಕ್ಕಾಗಿ ಸರ್ಕಾರವನ್ನು ದೂಷಿಸುವುದನ್ನು ಅವರು ಮರೆಯಲಿಲ್ಲ. ಈ ವಿಷಯವಾಗಿ ಶಾಸನವನ್ನು ಜಾರಿಗೊಳಿಸಲಿಲ್ಲವೆಂದು ಸರ್ಕಾರವನ್ನು ದೂಷಿಸುವುದು ಗಾಂಧಿಯವರ ಹರಿಜನೋದ್ಧಾರದ ಗುರಿಯಾಗಿರಲಿಲ್ಲ. ಆದರೆ ಮೈಸೂರಿನ ರಾಷ್ಟ್ರವಾದಿಗಳು ಗಾಂಧಿಯವರ ರಚನಾತ್ಮಕ ಕಾರ್ಯಕ್ರಮದ ಹೆಸರಿನಲ್ಲಿ ಇಂಥ ಚಟುವಟಿಕೆಗಳಲ್ಲಿ ತೊಡಗಿದ್ದರು. ಸಹಜವಾಗಿಯೇ ಸರ್ಕಾರವು ರಕ್ಷಣಾತ್ಮಕವಾಗಿ ವರ್ತಿಸಿತ್ತು. ೧೯೩೭ರ ವರೆಗೆ ಒಕ್ಕೂಟಗಾರರು ಮೌನವಾದರು. ಹರಿಜನರು ದೇವಾಲಯವನ್ನು ಪ್ರವೇಶಿಸಲು ಅವಕಾಶ ಕೊಡಬೇಕೆಂದು ತಿರುವಾಂಕೂರಿನ ರಾಜರು ತೀರ್ಮಾನ ಕೈಗೊಂಡಾಗ ಇದರಿಂದ ಉತ್ತೇಜಿತರಾಗಿ ಮೈಸೂರಿನ ರಾಜರೂ ಸಹ ಅಸ್ಪೃಶ್ಯರು ದರ್ಬಾರಿಗೆ ಪ್ರವೇಶಿಸ ಬಹುದೆಂದು ಆದೇಶ ಹೊರಡಿಸಿದರು.[೧೮] ಈ ಬೆಳವಣಿಗೆಗಳು ಮೈಸೂರಿಗರನ್ನು ತೀವ್ರವಾಗಿ ಪ್ರಚೋದಿಸಿ ಮುಜರಾಯಿ ದೇವಾಲಯಗಳನ್ನು ಹರಿಜನರಿಗೆ ತೆರೆಯಬೇಕೆಂದು ಅವರು ಮತ್ತೊಂದು ಗೊತ್ತುವಳಿಯನ್ನು ಕೈಗೊಂಡರು. ತಾತ್ವಿಕವಾಗಿ ಸರ್ಕಾರ ಅದನ್ನು ಒಪ್ಪಿಕೊಂಡ ಬಳಿಕ ಗೊತ್ತುವಳಿಯನ್ನು ವಾಪಸ್ಸು ಪಡೆಯಲಾಯಿತು. "ಮೊದಲು ಹರಿಜನರನ್ನು ನಿಮ್ಮ ಮನೆಗಳಿಗೆ ಪ್ರವೇಶ ಮಾಡಿಸಿ ನಂತರ ನಾವು ಅವರನ್ನು ದೇವಾಲಯಗಳಿಗೆ ಪ್ರವೇಶ ಮಾಡಿಸಬೇಕೇ ಬೇಡವೇ ಎಂಬ ವಿಷಯವಾಗಿ ಚರ್ಚಿಸುತ್ತೇವೆ" ಎಂದು ಗೊತ್ತುವಳಿಯನ್ನು ಮುಂದಿಟ್ಟವರನ್ನು ಕೆಲವು ಸದಸ್ಯರು ಕುಹಕ ಮಾಡಿದರು. "ಈ ರೀತಿ ದೇವಾಲಯಗಳಿಗೆ ಪ್ರವೇಶ ದೊರಕಿಸಬೇಕೆಂದು ಕೇಳಿದರೆ ಪರಸ್ಪರ ಭೋಜನ ಮಾಡುವುದು ಅಥವಾ ವೈವಾಹಿಕ ಸಂಬಂಧ ಮಾಡುವುದು ಎಂದರ್ಥವಲ್ಲ" ಎಂದು ಅವರು ರಕ್ಷಣಾತ್ಮಕ ಉತ್ತರ ಕೊಡಬೇಕಾದ ಪ್ರಮೇಯವುಂಟಾಯಿತು.[೧೯]

ಅಸ್ಪೃಶ್ಯರಿಗಾಗಿ ಸರ್ಕಾರವು ಕಂತಿನ ಪ್ರಕಾರ ಇಷ್ಟಿಷ್ಟೇ ರಿಯಾಯಿತಿಯನ್ನು ನೀಡುವುದನ್ನೂ ಅನೇಕ ರಾಷ್ಟ್ರೀಯವಾದಿಗಳು ವಿರೋಧಿಸಿದುದನ್ನು ನಾವು ಇಲ್ಲಿ ನೆನೆಯಬೇಕು.[೨೦] ಜನನಾಯಕರು ಈ ಸಮಸ್ಯೆ ಕುರಿತು ಮಾತನಾಡುವುದು ಒಂದು ಅಲಂಕಾರದ ದಿನಚರಿಯಾಯಿತಲ್ಲದೆ ಸರ್ಕಾರವನ್ನು ನಿಂದಿಸುವುದು ರೂಢಿಯಾಯಿತು. ವಾಸ್ತವವಾಗಿ ಸರ್ಕಾರ ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮವನ್ನು ಅಳವಡಿಸಿಕೊಂಡಿತ್ತು ಹಾಗೂ ಗಾಂಧೀಜಿಯವರು ಅದನ್ನು ಪರೀಕ್ಷಿಸಿದ್ದರೂ ಕೂಡ.

ನಿಜವಾದ ಕೆಲಸವನ್ನು ಗಮನಿಸಿ ಹೇಳುವುದಾದರೆ ಸಂಸ್ಥಾನದ ಸರ್ಕಾರಕ್ಕೆ ಆ ಕೀರ್ತಿ ಸಲ್ಲಬೇಕು; ಅಸ್ಪೃಶ್ಯರ ಸಮಸ್ಯೆಯನ್ನು ಬಗೆಹರಿಸುವ ದಿಶೆಯಲ್ಲಿ ಅಷ್ಟೋ ಇಷ್ಟೋ ಕ್ರಮಗಳನ್ನು ಕೈಗೊಂಡಿದ್ದನ್ನು ನಾವು ಕಾಣಬಹುದಾಗಿದೆ. ಸರ್ಕಾರದ ವಿರುದ್ಧ ಎಲ್ಲಾ ಬಲಾಢ್ಯ ಜಾತಿಯವರು ನಿಂತ ಸನ್ನಿವೇಶದಲ್ಲಿ ತನ್ನ ಹಿತದೃಷ್ಟಿಯಿಂದಲೇ ಸರ್ಕಾರವು ಕೆಲವು ಕ್ರಮಗಳನ್ನು ಕೈಗೊಂಡು ಅಸ್ಪೃಶ್ಯರ ಬಹುವಿಧದ ಶೋಷಣೆಯಿಂದ ಅವರನ್ನು ಪಾರು ಮಾಡಲು ಪ್ರಯತ್ನಿಸಿತು.

ಸಂಪ್ರದಾಯಸ್ಥರು ಕುಪಿತರಾಗಿದ್ದ ಕಾರಣ ಸರ್ಕಾರವು ದೇವಾಲಯ ಪ್ರವೇಶದ ವಿಷಯವಾಗಿ ಶಾಸನವನ್ನು ಹೊರಡಿಸುವ ಹಂತಕ್ಕೆ ಹೋಗಲಿಲ್ಲ. ಜೊತೆಗೆ ಬೇರೆ ದೊರೆಗಳಿಗಿಂತ ಅಧಿಕವಾಗಿ ಮಹಾರಾಜರು ಸಂಪ್ರದಾಯನಿಷ್ಠರಾಗಿದ್ದರು. ಯೂರೋಪಿಯನ್ನರ ಜೊತೆ ಅವರು ಊಟ ಮಾಡುತ್ತಿರಲಿಲ್ಲ; ಹಾಗೂ ಅವರು ಹೊರಗೆ ಹೋಗುವ ಪ್ರಮೇಯ ಬಂದಾಗಲೆಲ್ಲ ಜೊತೆಯಲ್ಲಿ ತಮ್ಮ ಅಡಿಗೆಯವರನ್ನೂ ಕರೆದುಕೊಂಡು

ಹೋಗುತ್ತಿದ್ದರು; ಹೋಟೆಲ್‌ನಲ್ಲಿ ತಂಗುವಾಗ ಎರಡು ಕೊಠಡಿಗಳನ್ನು ತೆಗೆದುಕೊಳ್ಳುತ್ತಿದ್ದರಲ್ಲದೆ ಒಂದು ಕೊಠಡಿಯನ್ನು ದೇವರ ಮನೆಯಂತಲೂ ಇನ್ನೊಂದು ಕೊಠಡಿಯನ್ನು ಅಡುಗೆ ಮನೆಯಾಗಿಯೂ ಬಳಸಿಕೊಳ್ಳುತ್ತಿದ್ದರು.[೨೧] ಅವರ ದರಬಾರಿಗೆ ಒಂದು ಧಾರ್ಮಿಕವಾದ ಸಂಬಂಧವಿರುತ್ತಿತ್ತು ಹಾಗೂ ಅರಮನೆಯ ಪಂಡಿತರು ಹಾಗೂ ಪುರೋಹಿತರು ಈ ವಿಷಯವಾಗಿ ಅಂತಿಮವಾದ ನಿರ್ಧಾರ ಹೊಂದಿದ್ದರು.[೨೨]

ಬೇರೆಲ್ಲ ವಿಷಯವಾಗಿ ರಿಯಾಯ್ತಿ ತೋರುವುದರಲ್ಲಿ ಉದಾರವಾಗಿದ್ದ ಮಹಾರಾಜರು ಸಾಮಾಜಿಕ ಸಂಗತಿಗಳಲ್ಲಿ ಸಂಪ್ರದಾಯಸ್ಥರಾಗಿದ್ದರು. ಇಂಥ ವಿಷಯಗಳಲ್ಲಿ ಅವರು ಬಹಳ ನಿಖರವಾದ ಅಭಿಪ್ರಾಯ ಹೊಂದಿದ್ದರಲ್ಲದೆ ಚುನಾವಣೆಗಳಲ್ಲಿ ಸ್ತ್ರೀಯರು ಸ್ಪರ್ಧಿಸುವ ಹಕ್ಕನ್ನು ದಿವಾನರು ನೀಡಬಾರದೆಂದು ಒಂದು ಘಟ್ಟದಲ್ಲಿ ಆಜ್ಞೆ ಮಾಡಿದರು. ಮುಸ್ಲಿಮರೊಬ್ಬರನ್ನು ದಿವಾನರಾಗಿ ಪಡೆದಿದ್ದ ಮಟ್ಟಿಗೆ ಅವರು ಉದಾರವಾದಿಗಳೆಂದು ಹೇಳಬಹುದು; ಹಾಗೆಯೇ ರಾಜಕೀಯ ವಿಷಯಗಳಲ್ಲಿ ಹೆಚ್ಚಿನ ಆಸಕ್ತಿ ಅವರಿಗೆ ಇದ್ದಿಲ್ಲ ಮತ್ತು ಪ್ರಮುಖವಾದ ಎಲ್ಲ ಸಂಗತಿಗಳನ್ನೂ ದಿವಾನರೇ ನೋಡಿಕೊಳ್ಳಬೇಕಾಗಿತ್ತು. ಮಿರ್ಜಾ ಇಸ್ಮಾಯಿಲ್ಲರು ದಿವಾನರಾಗಿದ್ದ ಕಾಲದ ಮಟ್ಟಿಗಂತೂ ಈ ಮಾತು ನಿಜವಾಗಿತ್ತು.

ತುಂಬಾ ಗುರುತರವಾದ ಜವಾಬ್ದಾರಿ ಹೊತ್ತಿದ್ದ ದಿವಾನರು ಬಹಳ ಜಾಗರೂಕರಾಗಿದ್ದರು. ಸಹಜವಾಗಿಯೇ ಮುಂದೆ ವಿಪತ್ತು ಕಾದಿರಬಹುದೆಂದು ದಿಗಿಲುಗೊಂಡಿದ್ದರು. ಮೈಸೂರು ಪ್ರಾಂತ್ಯದಲ್ಲಿ ಸಂಪ್ರದಾಯಸ್ಥರು ತುಂಬಾ ಪ್ರಬಲರಾಗಿದ್ದಲ್ಲದೆ ಈ ಕ್ರಮವನ್ನು ಅವರು ಒಪ್ಪುವುದಿಲ್ಲ ಹಾಗೂ ಅವರು ತೊಂದರೆ ಕೊಡಬಹುದೆಂದು ಕೂಡ ನಿರೀಕ್ಷಿಸಲಾಗಿತ್ತು. ಆ ವೇಳೆಗಾಗಲೇ ಅವರಿಗೆ ವಾಸ್ತವವಾಗಿ ಅಂಥ ಅನುಭವವಾಗಿತ್ತು. ಸಂಪ್ರದಾಯಸ್ಥ ಮೈಸೂರಿಗರು ಮುಸ್ಲಿಮರೊಬ್ಬರು ದಿವಾನರಾಗಿ ಬಂದಿದ್ದನ್ನು ಸಹಿಸುವ ಸ್ಥಿತಿಯಲ್ಲಿರಲಿಲ್ಲ ವೆಂಬುದೂ ಕೂಡ ಅವರಿಗೆ ತಿಳಿದಿತ್ತು. ಈ ವರ್ಗದ ಜನರು ಮತ್ತೆ ಮತ್ತೆ ಮಿರ್ಜಾರವರ ಮೇಲೆ ಧಾಳಿ ನಡೆಸತೊಡಗಿದರು.

ಶಾಸನವನ್ನು ಹೊರಡಿಸಬೇಕೆಂದು ರಾಷ್ಟ್ರವಾದಿಗಳೇ ಬಹಿರಂಗವಾಗಿ ಹೇಳುತ್ತಿದ್ದರಾದರೂ ನಕಾರಾತ್ಮಕವಾದ ಅಸ್ಪೃಶ್ಯತಾ-ವಿರೋಧಿ ಮಸೂದೆಯನ್ನು ಸಿದ್ಧಗೊಳಿಸಿದುದರಲ್ಲೇ ಅದು ಕೇವಲ ಅರೆಮನಸ್ಸಿನ ಪ್ರಯತ್ನವೆಂದು ಸ್ಪಷ್ಟವಾಗುತ್ತದೆ. ನಿರ್ಣಯ ಕೈಗೊಳ್ಳುವ ಹಂತದಲ್ಲಿ ಜನರ ಪಾಲ್ಗೊಳ್ಳುವಿಕೆ ಇಲ್ಲದಿದ್ದ ಸನ್ನಿವೇಶದಲ್ಲಿ ಆಡಳಿತಾಧಿಕಾರವನ್ನು ಅಧಿಕಾರಶಾಹಿ ಏಕಸ್ವಾಮ್ಯಗೊಳಿಸಿಕೊಂಡಿತ್ತು – ಹಾಗಾಗಿ, ಅಧಿಕಾರಶಾಹಿಯಲ್ಲಿ ಮೇಲುಜಾತಿಯ ಹಿಂದುಗಳು ಅಧಿಕ ಸಂಖ್ಯೆಯಲ್ಲಿದ್ದು ಸರ್ಕಾರದ ಕ್ಷೇಮಾಭಿವೃದ್ಧಿ ಕಾರ್ಯಕ್ರಮಗಳನ್ನು ತಪ್ಪಿಸಲು ತೊಡಗಿದ್ದರು.

ಅಸಂಘಟಿತರೂ, ನಿರ್ಲಕ್ಷಿತರೂ ಆಗಿದ್ದಂಥ ಅಸ್ಪೃಶ್ಯರು ಈ ವಿಷಯಗಳ ಬಗ್ಗೆ ಆಸಕ್ತಿ ತಾಳಲು ಸಿದ್ಧರಾಗಿರಲಿಲ್ಲ. ಈ ಚಟುವಟಿಕೆಗಳಲ್ಲಿ ಯಾವ ನಿಮ್ನವರ್ಗದ ನಾಯಕರೂ ಭಾಗವಹಿಸಲಿಲ್ಲ. ಅವರ ಪೈಕಿ ಸಮಾಜವಾದಿಯಂತೆ ಮಾತನಾಡುತ್ತಾ ಒಬ್ಬ ನಾಯಕರು "ಸಾಮಾಜಿಕ ಪರಿಸ್ಥಿತಿಯನ್ನು ಉತ್ತಮ ಪಡಿಸಿದರೆ ಆರ್ಥಿಕ ಪರಿಸ್ಥಿತಿ ತಂತಾನೆ ಸುಧಾರಣೆಯಾಗುವುದೆಂದು'' ಹೇಳುತ್ತಿದ್ದರು.[೨೩]

ಆ ಕಾಲಘಟ್ಟದ ನಿಮ್ನವರ್ಗದವರು ಹಾಗೂ ರಾಷ್ಟ್ರೀಯವಾದದಲ್ಲಿ ಎದ್ದು ಕಾಣುವ ಅಂಶವೆಂದರೆ ಒಂದು ಕಡೆ ನಿರಂಕುಶ ಪ್ರಭುತ್ವವನ್ನು ಪ್ರತಿಭಟಿಸಲು ಪ್ರಬಲವರ್ಗದವರು ಒಂದಾದರೆ; ಅಸ್ಪೃಶ್ಯರು ಇನ್ನೊಂದುಕಡೆ ದ್ವಂದ್ವಕ್ಕೊಳಗಾದರು. "ಹರಿಜನರ ಕ್ಷೇಮಾಭಿವೃದ್ಧಿ'' ಯು ಮೈಸೂರಿನಲ್ಲಿ ಕಾಣಿಸಿಕೊಂಡ

ಅರಿವಿನ ಫಲವಾಗಿ ಮೂಡಿಬಂದದ್ದಾಗಿರದೆ ಗಾಂಧೀಜಿಯವರ ಪರಿಕಲ್ಪನೆಯಾಗಿದ್ದಿತು. ಮತ್ತೆ ಈ ಕೆಲಸವು ಗಾಂಧೀವಾದದ ಫಲವಾಗಿರದೆ ಸ್ಥಳೀಯ ರಾಷ್ಟ್ರವಾದಿಗಳಿಂದ ವಿರೂಪಗೊಂಡಿದ್ದಿತು ಹಾಗೂ ಸರ್ಕಾರಕ್ಕೆ ಮುಜುಗರವುಂಟು ಮಾಡುವುದು ಅವರ ಗುರಿಯಾಗಿದ್ದಿತು.

ಕರ್ನಾಟಕದಲ್ಲಿ ಸ್ವಾತಂತ್ರ್ಯ ಚಳವಳಿಯ ಕಾಲದಲ್ಲಿ ದಲಿತವರ್ಗದವರ ವಿಷಯವಾಗಿ ಪ್ರಸ್ತಾಪಿಸುವಾಗ ಕಾಂಗ್ರೆಸ್ಸು ಈ ವರ್ಗದ ಶಕ್ತಿಯನ್ನು ಉಪಯೋಗಿಸಿಕೊಳ್ಳುವಲ್ಲಿ ವಿಫಲವಾಯಿತೆಂದು ಹೇಳಬೇಕಾಗುತ್ತದೆ; ದಲಿತ ವರ್ಗವನ್ನು ಆಂತರಿಕ ಹಾಗೂ ಬಾಹ್ಯ ಶೋಷಣೆಗಳಿಂದ ಬಿಡುಗಡೆ ಮಾಡಬೇಕಾಗಿದ್ದುದು ಆ ಪಕ್ಷದ ಕರ್ತವ್ಯವಾಗಿದ್ದಿತು. ರಾಷ್ಟ್ರೀಯವಾದಿ ಚಳವಳಿಯ ನಾಯಕತ್ವವನ್ನು ವಹಿಸಿದ ಪಕ್ಷವು ತಾನೆ ಆಂತರಿಕ ಶೋಷಣೆಯಲ್ಲಿ ತೊಡಗಿದ್ದ ಕಾರಣ ದಲಿತರನ್ನು ಬಿಡುಗಡೆಗೊಳಿಸುವ ಸಂಗತಿಯನ್ನು ಕೈಗೆತ್ತಿ ಕೊಳ್ಳಲಿಲ್ಲ. ಇಷ್ಟಾಗಿಯೂ ದಲಿತವರ್ಗದ ಜನಸ್ತೋಮ ಗಾಂಧೀಯುಗದ ಎಲ್ಲ ಜನಾಂದೋಲನ ಗಳಲ್ಲಿಯೂ ಭಾಗವಹಿಸಿದ್ದಿತಾದರೂ ಸ್ಥಳೀಯ ನಾಯಕತ್ವದ ಪ್ರೇರಣೆಯಿಂದ ಇದು ಸಾಧ್ಯವಾಯಿತೆಂದು ನಂಬುವುದು ಕಷ್ಟ. ಗಾಂಧೀಜಿಯವರ ಮಾಂತ್ರಿಕ ಶಕ್ತಿಯ ಫಲವಾಗಿ ಅವರು ಒಂದು ಕಡೆ ಸೇರಿದರೇ ವಿನಾ ವ್ಯವಸ್ಥಿತವಾದ ಸಂಘಟನೆ ಹಾಗೂ ರಾಜಕೀಕರಣದಿಂದ ಎಂದು ಹೇಳುವುದಕ್ಕಾಗುವುದಿಲ್ಲ.

ಹರಿಜನರ ಚಳವಳಿಯ ವಿಷಯವಾಗಿ ಲೇಖಕರೊಬ್ಬರು ಹೀಗೆ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ: "ಕರ್ನಾಟದಲ್ಲಿ ಒಟ್ಟಾರೆ, ಹರಿಜನರ ದೇವಾಲಯ ಪ್ರವೇಶದ ವಿಷಯದಲ್ಲಿ ಹೆಚ್ಚಿನದೇನನ್ನೂ ಮಾಡಲಿಲ್ಲ" .[೨೪]

ಪೂನಾ ಒಪ್ಪಂದ, ರಾಷ್ಟ್ರೀಯ ಮಟ್ಟದಲ್ಲಿ ಅಂಬೇಡ್ಕರ್ ಮೇಲೇರಿ ಬಂದದ್ದು, ೧೯೩೫ರ ಭಾರತ ಸರ್ಕಾರದ ಕಾಯಿದೆಯ ಫಲವಾಗಿ ನಿಮ್ನವರ್ಗದವರಿಗೆ ಸ್ಥಳ ಕಾಯ್ದಿರಿಸುವ ಪದ್ಧತಿಯಿಂದಾಗಿ ಸನ್ನಿವೇಶದಲ್ಲಿ ಬದಲಾವಣೆಯಾಯಿತು. ಅಧಿಕಾರ ಲಭಿಸುವ ಸಾಧ್ಯತೆ– ಇದರ ಜೊತೆಗೆ ವಸಾಹತು–ವಿರೋಧಿ ರಾಷ್ಟ್ರೀಯ ಭಾವನೆಗಳ ಸೇರ್ಪಡೆ, ಕೃಷಿ ಕಾರ್ಮಿಕರ ನಡುವೆ ವಾಮಪಂಥೀಯರ ಶ್ರಮ, ಈ ಕೃಷಿ ಕಾರ್ಮಿಕರಲ್ಲಿ ಬಹುಮಂದಿ ದಲಿತವರ್ಗಕ್ಕೆ ಸೇರಿದವರಾಗಿದ್ದರಲ್ಲದೆ ಅವರಲ್ಲಿ ಅರಿವು ಮೂಡಿಸಲು ಅಂಬೇಡ್ಕರ್‌ರವರು ನಿರಂತರವಾಗಿ ದುಡಿದದ್ದು–ಎಲ್ಲ ಸೇರಿ ಸಮಸ್ಯೆಗೆ ಹೊಸ ಆಯಾಮವನ್ನು ಸೇರಿಸಿತು. ಸುಶಿಕ್ಷಿತರೂ, ಕ್ರಿಯಾಶಾಲಿಗಳೂ ಆದ ಮಹಾತ್ವಾಕಾಂಕ್ಷೆ ಹೊತ್ತ ದಲಿತ ವರ್ಗದ ಮಂದಿ ಕಾಂಗ್ರೆಸ್ಸು ಅಥವಾ ಅಂಬೇಡ್ಕರ್‌ರವರ ನಾಯಕತ್ವದ ಯಾವುದಾದರೊಂದು ರಾಷ್ಟ್ರವಾದಿ ರಾಜಕೀಯ ಪಕ್ಷದೊಡನೆ ತಮ್ಮನ್ನು ತಾವು ಗುರುತಿಸಿಕೊಂಡರು. ಅವರಲ್ಲಿ ಹೆಚ್ಚು ತೀವ್ರಗಾಮಿಯಾದವರು ಮೇಲೇರುತ್ತಿದ್ದ ವಾಮ ಪಂಥಕ್ಕೆ ಸೇರಿದರು.

ಆದರೆ ನಿಮ್ನವರ್ಗದ ಬಹುಪಾಲು ಮಂದಿಯನ್ನು ರಾಷ್ಟ್ರೀಯ ಚಳವಳಿಯಲ್ಲಿ ವಿಲೀನ ಮಾಡಿಕೊಳ್ಳಲಾಗಲಿಲ್ಲ. ನಾಯಕತ್ವವೂ ಸಹ ಅರೆ–ಊಳಿಗಮಾನ್ಯ ವ್ಯವಸ್ಥೆಯ ವಿರುದ್ಧ ಹೋರಾಟ ನಡೆಸಬೇಕಾದ ಅಗತ್ಯವನ್ನು ಮುಂಗಾಣಲಿಲ್ಲ. ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮ ಮತ್ತು ಹರಿಜನ ಕ್ಷೇಮಾಭಿವೃದ್ಧಿ ಕೆಲಸಗಳು ತಾತ್ಕಾಲಿಕವಾಗಿಯಾದರೂ ವಸಾಹತುಕಾಲದಲ್ಲಿ ರಾಷ್ಟ್ರವಾದಿ ಚಳವಳಿಯೊಳಗೆ ಅವರನ್ನು ಸೆಳೆದ ರೀತಿಯನ್ನು ನೆನೆಯಬೇಕಾಗಿದೆ. ಆದರೆ ಸುಸಂಘಟಿತವಾದ ಸಮಗ್ರ ರೈತ ಚಳವಳಿ ಹಾಗೂ ಕಾರ್ಮಿಕ ಚಳವಳಿಗಳು ನಡೆದಿದ್ದರೆ ಅವುಗಳಲ್ಲಿ ದಲಿತ ವರ್ಗಗಳು ಒಂದು ಬಹುಮುಖ್ಯವಾದ ಅಂಗವಾಗಿ ಭಾಗವಹಿಸುವ ಅವಕಾಶವಿತ್ತು; ಅಂಥ ಸಂಘಟನೆಗೆ ಎಡೆ ಇರಲಿಲ್ಲವೆಂಬುದು ವಿಷಾದದ ಸಂಗತಿ. ಕರ್ನಾಟಕದ ಕಾಂಗ್ರೆಸ್ ನಾಯಕರು ಜಮೀನುದಾರಿ–ವಿರೋಧಿ ಹಾಗೂ ಬಂಡವಾಳಶಾಹಿ–ವಿರೋಧಿ ಹೋರಾಟವನ್ನು ನಡೆಸಲು

ಹಿಂಜರಿದರು, ಅನೇಕ ವೇಳೆ ಇಂಥ ಬಲಗಳ ಜೊತೆ ಅವರು ಶಾಮೀಲಾಗಿದ್ದ ಪರಿಣಾಮವಾಗಿ ಉಳಿದ ಶೋಷಿತ ವರ್ಗದವರ ಜೊತೆಯಲ್ಲಿ ಅಸ್ಪೃಶ್ಯರಿಗೂ ಅನ್ಯಾಯವಾಗಿತ್ತು. ಕೃಷಿಕ ಕ್ರಾಂತಿಯಿಂದ ಮಾತ್ರ – ಈ ತಂತ್ರವನ್ನು ಕಾಂಗ್ರೆಸ್ ಪಕ್ಷವೂ ಸೇರಿದಂತೆ ಯಾವ ಪಕ್ಷವೂ ರಾಷ್ಟ್ರೀಯ ಮಟ್ಟದಲ್ಲಿ ಆಲೋಚಿಸಲಿಲ್ಲ– ದಲಿತ ವರ್ಗವನ್ನು ಒಟ್ಟುಗೂಡಿಸಬಹುದಾಗಿತ್ತು. ರಾಜಕೀಯ ರಾಷ್ಟ್ರವಾದಿ ನಾಯಕರು ನಿಜವಾದ ಶೋಷಣಾ–ವಿರೋಧಿ, ವಸಾಹತು–ವಿರೋಧಿ ಹೋರಾಟಕ್ಕೆ ಅವರನ್ನು ಅಣಿಗೊಳಿಸುವ ಮನಸ್ಸಿಲ್ಲದವರಾಗಿದ್ದ ಕಾರಣ ದಲಿತ ಸಮೂಹವು ಬಹುತೇಕ ಪ್ರತ್ಯೇಕವಾಗಿ ಉಳಿಯಿತು.

ಆದಾಗ್ಯೂ ರಾಷ್ಟ್ರವಾದಿ ಚಳವಳಿಗೆ ಉಂಟಾದ ಲಾಭವನ್ನು ತೀರಾ ಗೌಣವೆಂದು ಪರಿಗಣಿಸುವ ಹಾಗಿರಲಿಲ್ಲ. ಜಾತಿ ಕ್ರೌರ್ಯದ ವಿರುದ್ಧ ಅವರು ದನಿ ಎತ್ತಿದ ಫಲವಾಗಿ ರಾಷ್ಟ್ರದ ಒಂದು ಭಾಗವಾಗಿ ಅವರನ್ನು ಗುರುತಿಸಲಾಯಿತಲ್ಲದೆ, ಎಲ್ಲರ ಗಮನ ಅವರಿಗೆ ಅಗತ್ಯವಿರುವುದಾಗಿ ತಿಳಿಯಲಾಯಿತು. ಪತ್ರಿಕೆಗಳು ಹಾಗೂ ತಮ್ಮ ಸಂಘಗಳ ಮೂಲಕ ಅವರು ಹೋರಾಟ ಮಾಡಿದ್ದರಿಂದ ಕಾಂಗ್ರೆಸ್ ಪಕ್ಷ ಹಾಗೂ ರಾಷ್ಟ್ರವಾದಿಗಳು ಅಂತಿಮವಾಗಿ ಅವರಿಗೆ ರಿಯಾಯ್ತಿ ನೀಡಲು ಮನಸ್ಸು ಮಾಡಿದರೆಂದು ತಿಳಿಯಬೇಕು. ಅಂತಿಮವಾಗಿ ಅವರ ಹೋರಾಟದ ಕಾರಣದಿಂದಲೇ ಗಾಂಧೀಜಿಯವರೂ ಕೂಡ ಹರಿಜನರ ಕೆಲಸವನ್ನು ಕೈಗೆತ್ತಿಕೊಳ್ಳುವಂಥಾದದ್ದು ಎಂಬುದು ನಾವು ನೆನಪಿಡಬೇಕಾದ ಸಂಗತಿಯಾಗಿದೆ.

**-ಪ್ರೊ. ಎಸ್. ಚಂದ್ರಶೇಖರ್**

## ಟಿಪ್ಪಣಿಗಳು

೧ ವಿವರಗಳಿಗಾಗಿ ನೋಡಿ: ದೇಸಾಯಿ, ಎ.ಆರ್.: ಸೋಷಿಯಲ್ ಬ್ಯಾಕ್‌ಗ್ರೌಂಡ್ ಆಫ್ ಇಂಡಿಯನ್ ನ್ಯಾಷನಲಿಸಂ, ಬೊಂಬಾಯಿ, ೧೯೭೯

೨ ರಾನಡೆ, ಎಂ.ಜಿ.: ಎಸ್ಸೇಸ್ ಆನ್ ಇಂಡಿಯನ್ ಎಕನಾಮಿಕ್ಸ್, ಎನ್.ಡಿ, ಪು. ೩೧೪–೩೧೫

೩ ಇದರ ಬಗೆಗೆ ಒಂದು ವಿವರವಾದ ಚರ್ಚೆಗಾಗಿ ನೋಡಿ: ಹೀಮ್ಸತ್ ಚಾರ್ಲ್ಸ್: ನ್ಯಾಷನಲಿಸಂ ಅಂಡ್ ಹಿಂದು ಸೋಷಿಯಲ್ ರೀಫಾರ್ಮ್, ಪ್ರಿನ್ಸ್‌ಟನ್, ೧೯೬೪

೪ ಗುಂಡಪ್ಪ, ಡಿ.ವಿ.: ಜ್ಞಾಪಕ ಚಿತ್ರಶಾಲೆ, ಮೈಸೂರಿನ ದಿವಾನರುಗಳು–ಸ್ವಾತಂತ್ರ ಪೂರ್ವದ ಆರು ದಶಕಗಳು, ಮೈಸೂರು, ೧೯೭೧, ಪು. ೭೪–೭೭

೫ ಅದೇ, ಪು. ೯೧

೬ ವರದಿಯ ವಿವರಗಳಿಗಾಗಿ ನೋಡಿ: ಚಂದ್ರಶೇಖರ್, ಎಸ್.: ಡೈಮನ್ಷನ್ಸ್ ಆಫ್ ಸೋಷಿಯೋ–ಪೊಲಿಟಿಕಲ್ ಛೇಂಜ್ ಇನ್ ಮೈಸೂರ್, ೧೯೧೮–೧೯೪೦, ನವದೆಹಲಿ, ೧೯೮೫

೭ ಪಿ.ಎಂ.ಆರ್.ಎ. ಜೂನ್ ೧೯೨೪, ಪು. ೨೩೧–೨೩೩

೮ ವೆಂಕಟಕೃಷ್ಣಯ್ಯ, ಎಂ. ತಾತಯ್ಯ ಎಂದೇ ಪ್ರಸಿದ್ಧರು. ಚರಿತ್ರಕಾರರು ಇವರನ್ನು ಕಾಂಗ್ರೆಸ್ಸು ಹಾಗೂ ರಾಷ್ಟ್ರೀಯ ಚಳವಳಿಯ ಪಿತಾಮಹನೆಂದೇ ಕರೆಯುತ್ತಾರೆ. ತಾತಯ್ಯನವರೇ ಈ ಕ್ರಮವನ್ನು ವಿರೋಧಿಸಿದರು. ವಿವರಗಳಿಗಾಗಿ ನೋಡಿ: ಸಂಪದಭ್ಯುದಯದ ಸಂಪಾದಕೀಯದಲ್ಲಿ ವೆಂಕಟಕೃಷ್ಣಯ್ಯನವರು ತೀವ್ರವಾಗಿ ಪ್ರತಿ ಭಟಿಸಿರುವುದನ್ನು ಡುಷ್ಕಿನ್ ಲೀಲಾ ಉಲ್ಲೇಖಿಸಿದ್ದಾರೆ. ನಾನ್ ಬ್ರಾಹ್ಮಿನ್ ಮೂವ್‌ಮೆಂಟ್ ಇನ್ ಪ್ರಿನ್ಸ್ಲಿ ಮೈಸೂರ್, ಪೆನ್ಸಿಲ್ವೇನಿಯಾ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಲಾದ ಅಪ್ರಕಟಿತ ಪಿಎಚ್.ಡಿ. ನಿಬಂಧ, ೧೯೭೪, ಪು. ೧೫೭

೯ ಡುಷ್ಕಿನ್, ಎಲ್: ಅದೇ, ಪು. ೧೧೮

೧೦ ಹೆಟ್ನೆ ಬ್ಯೋ: ಪೊಲಿಟಿಕಲ್ ಎಕಾನಮಿ ಆಫ್ ಇಂಡೈರೆಕ್ಟ್ ರೂಲ್ ಮೈಸೂರ್ ೧೮೮೧-೧೯೪೭, ನವದೆಹಲಿ, ೧೯೭೮, ಪು. ೧೪೨

೧೧ ಮೈಸೂರು ರಾಜ್ಯ ಅಸ್ಪೃಶ್ಯತಾ – ವಿರೋಧಿ ಒಕ್ಕೂಟ. (ಪ್ರ) ದಿ ಪ್ರಾಬ್ಲಮ್ಸ್ ಆಫ್ ಅನ್‌ಟಚ್ಚಬಿಲಿಟಿ ಇನ್ ಮೈಸೂರ್, ಬೆಂಗಳೂರು, ೧೯೩೩, ಪು. ೧-೨೦

೧೨ ಭಾರತದ ಜನಗಣತಿ ಮೈಸೂರು ೧೯೩೧, ಭಾಗ ೧, ವರದಿ ಪು. ೩೨೭-೩೨೮

೧೩ ದಿ ಪ್ರಾಬ್ಲಮ್ಸ್ ಆಫ್ ಅನ್‌ಟಚ್ಚಬಿಲಿಟಿ ಇನ್ ಮೈಸೂರ್, ಎನ್.೧೧, ಪು. ೫

೧೪ ಒಕ್ಕೂಟದ ಕಾರ್ಯದರ್ಶಿ ಗೋಪಾಲಸ್ವಾಮಿ ಅಯ್ಯಂಗಾರ್‌ರಿಂದ ಗಾಂಧೀಜಿಯವರಿಗೆ ಬರೆದ ೨೩ ಫೆಬ್ರವರಿ ೧೯೩೩ರ ಪತ್ರ.

೧೫ ದಿ ಪ್ರಾಬ್ಲಮ್ಸ್ ಆಫ್ ಅನ್‌ಟಚ್ಚಬಿಲಿಟಿ ಇನ್ ಮೈಸೂರ್, ಎನ್.೧೧.,ಪು. ೫

೧೬ ಗಾಂಧೀಜಿ, ಗೋಪಾಲಸ್ವಾಮಿ ಅಯ್ಯಂಗಾರ್‌ರವರಿಗೆ. ೧೦ ಮಾರ್ಚಿ ೧೯೩೩. ಅದೇ.

೧೭ ಅದೇ, ಪು. ೪-೭

೧೮ ನಟೇಶನ್, ಜಿ.ಎ. (ಸಂ): ದ ಇಂಡಿಯನ್ ರಿವ್ಯೂ, ಸಂ. ೩೭, ಮದರಾಸು, ಪು. ೭೨೭ ಹಾಗೂ ಫಾರಿನ್ ಪೊಲಿಟಿಕಲ್ ಕಡತ ಸಂ. ೫೨೭. ಪು. (ರಹಸ್ಯ) ೧೯೩೯. ಭಾರತ ಸರ್ಕಾರದ ಕಲಾಪಗಳು ಸಂಖ್ಯೆ ೧-೫, ಎನ್‌ಎಐ

೧೯ ಪಿ.ಎಮ್.ಆರ್.ಎ. ದಸರಾ ಅಧಿವೇಶನ, ೧೯೩೬, ಪು. ೧೩೯-೧೪೧

೨೦ ಈ ಅಂಶದ ವಿವರವಾದ ಚರ್ಚೆಗಾಗಿ ಗಮನಿಸಿ: ಚಂದ್ರಶೇಖರ್, ಎಸ್. ಸಂ-೬, ವಿಶೇಷವಾಗಿ ಡಿಪ್ರೆಸ್ಡ್ 'ಕ್ಲಾಸಿಸ್ ಇನ್ ಕಂಟಿನ್ಯೂಯಿಟಿ ಅಂಡ್ ಛೇಂಜ್' ಎಂಬ ಅಧ್ಯಾಯ.

೨೧ ಫೋರ್ಬ್ಸ್ ರೊಸಿಟ್ಟ: ಇಂಡಿಯಾ ಆಫ್ ದ ಪ್ರಿನ್ಸಸ್ – ಲಂಡನ್, ೧೯೩೯. ಇಲ್ಲಿ ಚರ್ಚಿತರಾದ ಮಹಾರಾಜರು ನಾಲ್ವಡಿ ಕೃಷರಾಜ ಒಡೆಯರ್‌ರವರು.

೨೨ ದ ಹಿಂದೂಸ್ತಾನ್ ಟೈಮ್ಸ್, ದೆಹಲಿ, ೩ ನವೆಂಬರ್ ೧೯೩೯

೨೩ ಪಂಚಮರು ದಿವಾನ್ ಕಾಂತರಾಜ್ ಅರಸರಿಗೆ ನೀಡಿದ ಮನವಿ. ೨೫ ಅಕ್ಟೋಬರ್ ೧೯೨೦- ಕಾಂತರಾಜ್ ಅರಸ್ ಸ್ಪೀಚಸ್ ಅಂಡ್ ಬಯಾಗ್ರಫಿಯಲ್ಲಿ – (ಸಂ)ಬಸವರಾಜ್ ಅರಸ್, ಕೆ. ಬೆಂಗಳೂರು, ೧೯೫೫.

೨೪ ಹಾಲಪ್ಪ ಜಿ.ಎಸ್.: ಹಿಸ್ಟರಿ ಆಫ್ ಫ್ರೀಡಂ ಮೂವ್‌ಮೆಂಟ್ ಇನ್ ಕರ್ನಾಟಕ, ಸಂ. ೨, ಬೆಂಗಳೂರು, ೧೯೬೪, ಪು. ೪೩೪

## ಅಧ್ಯಾಯ : ಹದಿನಾಲ್ಕು

# ಪ್ರಾಂತೀಯ ಸ್ವಾಯತ್ತತೆಯಿಂದ ಕ್ವಿಟ್ ಇಂಡಿಯಾ ಚಳವಳಿವರೆಗೆ

ಕಾನೂನುಭಂಗ ಚಳವಳಿಯನ್ನು ಹಿಂದಕ್ಕೆ ಪಡೆದ ನಂತರ ಶಾಸನಸಭಾ ಕೆಲಸವನ್ನು ಕೈಗೊಳ್ಳಲು ಕಾಂಗ್ರೆಸ್ಸಿಗೆ ದಾರಿ ಸುಗಮವಾಯಿತು. ಹೆಚ್ಚು ಸದ್ದುಗದ್ದಲವಿಲ್ಲದ ರೀತಿಯಲ್ಲಿ ರಚನಾತ್ಮಕ ಕಾರ್ಯಕ್ರಮಗಳನ್ನು ಮುಂದುವರಿಸಿದರಾದರೂ ಪ್ರಾಂತೀಯ ಶಾಸಕಾಂಗ ಚುನಾವಣೆಗಳ ಕಡೆ ನಾಯಕತ್ವ ಗಮನ ಕೇಂದ್ರೀಕರಿಸಿತು. ಚುನಾವಣೆಗಳಲ್ಲಿ ಭಾಗವಹಿಸುವುದು ಅಗತ್ಯವೆಂದು ತೀರ್ಮಾನವಾಯಿತು. ಒಂದು ವೇಳೆ ಕಾಂಗ್ರೆಸ್ ಚುನಾವಣೆಯಿಂದ ಹೊರಗುಳಿದರೆ ಸರ್ಕಾರದ ನಿಷ್ಠಾವಂತರು, ಕೋಮುವಾದಿಗಳು ಹಾಗು ಅವಕಾಶವಾದಿಗಳು ಸ್ಪರ್ಧಿಸಿ ಜಯಗಳಿಸಿ ಅಧಿಕಾರ ಹಿಡಿಯುವರೆಂಬ ದಿಗಿಲಿದ್ದಿತು. ತನಗೆ ಬೆಂಬಲವಿಲ್ಲದ ಕಾರಣ ತಾನು ಚುನಾವಣೆಯಲ್ಲಿ ಪರಾಭವಗೊಳ್ಳುವುದು ಖಂಡಿತವೆಂದು ಅರಿತು ಕಾಂಗ್ರೆಸ್ ಹಿಂದೇಟು ಹೊಡೆದಿರುವುದಾಗಿ ಸರ್ಕಾರ ಮೂದಲಿಸುವುದನ್ನು ತಪ್ಪಿಸಬೇಕಾಗಿದ್ದಿತು. ಚುನಾವಣೆಯಲ್ಲೂ ಸ್ಪರ್ಧಿಸುವ ಮೂಲಕ ಕಾಂಗ್ರೆಸ್ ಪಕ್ಷ ಗೆಲ್ಲುವ ಭರವಸೆ ಅದಕ್ಕೆ ಇದ್ದೇ ಇತ್ತು-ಭಾರತೀಯ ಪ್ರಜೆಗಳ ನಿಜವಾದ ಪ್ರತಿನಿಧಿ ತಾನೆಂದು ಸಾಬೀತುಪಡಿಸುವುದರ ಜೊತೆಗೆ ಕೋಮುವಾದಿಗಳು ಹಾಗೂ ಸರ್ಕಾರಿ ನಿಷ್ಠರನ್ನು ಅಧಿಕಾರಕ್ಕೆ ಬರದ ಹಾಗೆ ತಡೆಯಬೇಕಾದ ಜವಾಬ್ದಾರಿಯನ್ನು ಹೊತ್ತುಕೊಂಡಿತ್ತು. ಚಳವಳಿ ರಾಜಕಾರಣವನ್ನು ಬಿಟ್ಟು ಸದನದ ಕೆಲಸ ಘಟ್ಟವನ್ನು ಪ್ರಾರಂಭಿಸಲೂ ಕೂಡ ಕೆಲವರು ಬದಲಾವಣೆಗಾಗಿ ಹಾತೊರೆದಿದ್ದರು.

ಕರ್ನಾಟಕದಲ್ಲಿ ಚುನಾವಣಾ ಪ್ರಚಾರ ಶ್ರದ್ಧೆಯಿಂದಲೇ ಪ್ರಾರಂಭವಾಯಿತು ೧೯೩೭ರ ಫೆಬ್ರವರಿಯಲ್ಲಿ ಪ್ರಾಂತೀಯ ನಾಯಕರುಗಳ ಜೊತೆ ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾದ ಜವಹರ್‌ಲಾಲ್ ನೆಹರೂರವರು ಕರ್ನಾಟಕದಾದ್ಯಂತ ಒಂದು ವಾರ ಕಾಲ ಪ್ರವಾಸ ಮಾಡಿದರು. ಅವರು ಹೋದಲೆಲ್ಲ ಸಾವಿರಾರು ಜನರು ಅವರನ್ನು ಸ್ವಾಗತಿಸಿದರು. ಬಡತನ ಮತ್ತು ಶೋಷಣೆಯನ್ನು ನಿವಾರಿಸುವುದರ ವಿಚಾರದಲ್ಲಿ ನೆಹರೂ ತುಂಬಾ ಸ್ಪಷ್ಟವಾಗಿ ಹೇಳಿದರು; ಹಾಗಾಗಿ ಈ ಎರಡು ಗುರಿಗಳನ್ನು ಸಾಕ್ಷಾತ್ಕರಿಸಿಕೊಳ್ಳಲು ಚುನಾವಣೆಗಳು ಆಧಾರವೆಂದು ತಿಳಿಸಿದರು. ರೈತರು ಹಾಗೂ ಕಾರ್ಮಿಕರು ಈ ನಿಟ್ಟಿನಲ್ಲಿ ಕಾಂಗ್ರೆಸ್ಸಿಗೆ ಹೆಚ್ಚಿನ ರೀತಿಯಲ್ಲಿ ಬೆಂಬಲ ನೀಡಬೇಕೆಂದು ಅವರು ಆಗ್ರಹಪಡಿಸಿದರು. ಈ ಪ್ರವಾಸದಲ್ಲಿ ನೆಹರೂರವರು ಕರ್ನಾಟಕದಲ್ಲಿ ಸುಮಾರು ೧೦,೦೦೦ ಮೈಲುಗಳ ದೂರವನ್ನು ಪ್ರಯಾಣ ಮಾಡಿ ಸುಮಾರು ೫೦ ಲಕ್ಷ ಮಂದಿಯನ್ನು ತಮ್ಮ ಭಾಷಣಗಳ ಮೂಲಕ ಸಂಪರ್ಕಿಸಿದರೆಂದು ಒಂದು ಅಂದಾಜಿನ ಪ್ರಕಾರ ತಿಳಿಯುತ್ತದೆ. ಬ್ರಿಟಿಷ್ ಕರ್ನಾಟಕದ ಭಾಗಗಳಲ್ಲಿ ಪ್ರವಾಸ ಮಾಡಿದ ಇನ್ನೊಬ್ಬ ಪ್ರಮುಖ ನಾಯಕರೆಂದರೆ ಬಾಬು ರಾಜೇಂದ್ರ ಪ್ರಸಾದ್ ಅವರು. ಬ್ರಿಟಿಷ್ ಕರ್ನಾಟಕದಲ್ಲಿ ಬರುವ ಎಲ್ಲ ಸ್ಥಾನಗಳನ್ನೂ ಕಾಂಗ್ರೆಸ್ ಪಕ್ಷ ನಿರ್ಣಾಯಕವಾಗಿ ಗೆದ್ದುಕೊಂಡಿತು.

ಗವರ್ನರ್‌ರವರ ವಿಶೇಷ ಅಧಿಕಾರದ ಬಗ್ಗೆ ಇದ್ದ ಶಂಕೆ ಪರಿಹಾರವಾದಾಗ ಕಾಂಗ್ರೆಸ್ ಅಧಿಕಾರ ವಹಿಸಿಕೊಂಡಿತು. ಕಾಂಗ್ರೆಸ್ ಪಕ್ಷ ಅಧಿಕಾರದಲ್ಲಿದ್ದ ಇಪ್ಪತ್ತೆಂಟು ತಿಂಗಳುಗಳ ಅವಧಿಯಲ್ಲಿ ಕೆಲವು ಒಳ್ಳೆಯ ಕೆಲಸಗಳಾದವು. ಪತ್ರಿಕೆಯ ಮೇಲಿನ ನಿರ್ಬಂಧ, ಸೇವಾದಳ, ಯೂತ್ ಲೀಗ್ ಮುಂತಾದ ರಾಷ್ಟ್ರೀಯ ಸಂಘಟನೆಗಳ ಮೇಲಿದ್ದ ಕಟ್ಟಳೆಗಳನ್ನು ತೆಗೆಯಲಾಯಿತು. ಸಾರ್ವಜನಿಕ ರಕ್ಷಣಾ ಕಾಯಿದೆಯಂಥ ಉಗ್ರವಾದ ಕಾನೂನನ್ನು ತೆಗೆಯಲಾಯಿತು. ಪತ್ರಿಕೆಗಳಿಂದ ಸಂಗ್ರಹಿಸಲ್ಪಟ್ಟಿದ್ದ ಭದ್ರತಾ ಠೇವಣಿಗಳನ್ನು ಹಿಂದಿರುಗಿಸಲಾಯಿತು. ಪೋಲೀಸು ಮತ್ತು ಅಧಿಕಾರಶಾಹಿಯನ್ನು ಅಂಕಿತದಲ್ಲಿಡಲಾಯಿತು.

ಪ್ರಪ್ರಥಮ ಬಾರಿಗೆ ಜನರಿಂದ ಆಯ್ಕೆಗೊಂಡ ಪ್ರತಿನಿಧಿಗಳು–ಮತದಾನದ ಹಕ್ಕನ್ನು ಪಡೆದಿದ್ದ ಜನಗಳ ಸಂಖ್ಯೆ ಎಷ್ಟೇ ಇರಲಿ–ಅಧಿಕಾರದಲ್ಲಿದ್ದರು. ಜನರ ನಿರೀಕ್ಷೆ ಬಹಳವಾಗಿತ್ತಾದರೂ ಅವರಲ್ಲಿ ಒಂದು ಬಗೆಯ ನೆಮ್ಮದಿ ಕಂಡಿತು. ಅವರಿಗೆ ಲಭ್ಯವಾಗಿದ್ದ ಅಧಿಕಾರದ ಲಕ್ಷಣವನ್ನು ಗಮನಿಸಿದರೆ ಜನರ ಎಲ್ಲ ಬೇಡಿಕೆಗಳನ್ನು ಈಡೇರಿಸುವ ಸಾಮರ್ಥ್ಯ ಅವರಿಗೆ ಇರಲಿಲ್ಲ. 'ಹಿಂಸೆ ಹಾಗೂ ಅಪರಾಧ' ಗಳಿಗಾಗಿ ಸೆರೆಯಲ್ಲಿದ್ದವರನ್ನು ಬಿಟ್ಟರೆ ಉಳಿದಂತೆ ಎಲ್ಲಾ ಖೈದಿಗಳನ್ನೂ ಬಿಡುಗಡೆ ಮಾಡಲಾಯಿತು. ಕರನಿರಾಕರಣ ಚಳವಳಿಯ ಸಂದರ್ಭದಲ್ಲಿ ಅಂಕೋಲ, ಶಿರಸಿ, ಸಿದ್ದಾಪುರ ತಾಲೂಕುಗಳಲ್ಲಿ ವಶಕ್ಕೆ ತೆಗೆದುಕೊಂಡಿದ್ದ ಭೂಮಿಯನ್ನು ಮರಳಿ ಮಾಲೀಕರಿಗೆ ಕೊಡಿಸುವ ದಿಶೆಯಲ್ಲಿ ಕ್ರಮ ಕೈಗೊಳ್ಳಲಾಯಿತಾದರೂ ಬೊಂಬಾಯಿ ಕಾಂಗ್ರೆಸ್ ಸರ್ಕಾರ ಎಲ್ಲ ಜಮೀನನ್ನು ವಾಪಸ್ಸು ಕೊಡಿಸುವಲ್ಲಿ ಸಫಲವಾಗಲಿಲ್ಲ.

ಬೊಂಬಾಯಿ ಮತ್ತು ಮದರಾಸು ಕಾಂಗ್ರೆಸ್ ಸರ್ಕಾರಗಳು ಕಮ್ಯೂನಿಸ್ಟರು ಅಥವಾ ಕಾಂಗ್ರೆಸ್ ಸಮಾಜವಾದಿಗಳಾಗಿದ್ದಂಥ ವಾಮಪಂಥೀಯರು, ರೈತರು ಹಾಗೂ ಕಾರ್ಮಿಕ ನಾಯಕರನ್ನು ಸಹಿಸಿಕೊಳ್ಳಲಿಲ್ಲ. ರಾಜಗೋಪಾಲಚಾರಿಯವರ ನೇತೃತ್ವದ ಮದ್ರಾಸು ಸರ್ಕಾರವು ಯೂಸುಫ್ ಮೆಹ್ರಲ್ಲಿ ಹಾಗೂ ಎಸ್.ಎಸ್. ಬಾಟ್ಲಿವಾಲಾ ಅವರನ್ನು ದಸ್ತಗಿರಿ ಮಾಡಿ ಶಿಕ್ಷೆಗೆ ಗುರಿಪಡಿಸಿತು.[೧] ಬಾಟ್ಲಿವಾಲಾರವರ ದಸ್ತಗಿರಿ ವಿಷಯವನ್ನು ಪ್ರಸ್ತಾಪಿಸಿ ತಮ್ಮನ್ನೂ ಹಾಗೆ ಮಾಡುವಿರಾ ಎಂದು ನೆಹರೂ ಕೇಳಿದ್ದಕ್ಕೆ ರಾಜಗೋಪಾಲಚಾರಿ ಅವರು "ಖಂಡಿತಾ" ಎಂದು ಉತ್ತರಿಸಿದುದಾಗಿ ವರದಿಯಾಗಿದೆ.[೨]

ಕಾಂಗ್ರೆಸ್ ಪಕ್ಷದಲ್ಲಿದ್ದ ವಾಮಪಂಥೀ ವಿರೋಧಿಗಳು ಕಾಂಗ್ರೆಸ್ ಅಧಿಕಾರಕ್ಕೆ ಬರುತ್ತಿದ್ದ ಹಾಗೆಯೇ ಸಮಾಜವಾದಿಗಳು ಹಾಗೂ ಕಮ್ಯೂನಿಸ್ಟರನ್ನು ಹತ್ತಿಕ್ಕಲು ಪ್ರಯತ್ನಿಸಿದರು. ಬೊಂಬಾಯಿ ಸರ್ಕಾರದ ಗೃಹಸಚಿವರಾಗಿದ್ದ ಕೆ.ಎಮ್.ಮುನ್ಷಿಯವರು ಕಾಂಗ್ರೆಸ್ ಪಕ್ಷದ ವಾಮಪಂಥೀಯರ ಚಟುವಟಿಕೆಗಳನ್ನು ಗಮನಿಸುವ ಸಲುವಾಗಿ ಗೂಢಚಾರ ಇಲಾಖೆಯವರನ್ನು ನೇಮಕ ಮಾಡಿದ್ದರು. ಮದರಾಸಿನಲ್ಲಿ ರಾಜಾಜಿಯವರು ಅದೇ ತರಹದ 'ವ್ಯವಸ್ಥೆ' ಮಾಡಿದ್ದರು, ಸಮಾಜವಾದಿ–ಕಮ್ಯೂನಿಸ್ಟ್ ಒಕ್ಕೂಟದ ನಾಯಕರು ಇವರಿಬ್ಬರ ನಡವಳಿಕೆಯನ್ನು ಖಂಡಿಸಿದ ಸಂದರ್ಭದಲ್ಲಿ ಜವಹರ್‌ಲಾಲ್ ನೆಹರೂರವರು ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾಗಿದ್ದರು.[೩]

ಬೊಂಬಾಯಿ ಸಚಿವ ಸಂಪುಟಕ್ಕೆ ಗೌರವ ತರುವಂಥ ರೀತಿಯಲ್ಲಿ ಸಂಪುಟವು ಗುತ್ತಿಗೆ ಸುಧಾರಣಾ ಮಸೂದೆಯನ್ನು ಜಾರಿಗೊಳಿಸಿತಾದರೂ ಅದನ್ನು ಅನುಷ್ಠಾನಕ್ಕೆ ತರುವ ಮೊದಲೇ ಸಚಿವ ಸಂಪುಟ ರಾಜೀನಾಮೆ ನೀಡಿತು. ಮದರಾಸು ಸರ್ಕಾರದ ಸಚಿವ ಸಂಪುಟ ಮಸೂದೆಯ ಬಗ್ಗೆ ಯೋಜನೆ ಹಾಕಿಕೊಂಡಿತ್ತಾದರೂ ತಯಾರಿಸಲು ಸಾಧ್ಯವಾಗಲಿಲ್ಲ. ಆದರೆ ಕಾರ್ಮಿಕ ನೀತಿ ಹಾಗೂ ಕೈಗಾರಿಕಾ ನೀತಿಯ ವಿಷಯದಲ್ಲಿ ಇದೇ ರೀತಿ ಆಪಾದನೆ ಮಾಡಲಾಗದು. "ವರ್ಗ ಸಹಕಾರ" ದ ಹೆಸರಿನಲ್ಲಿ ಬೊಂಬಾಯಿ ಸರ್ಕಾರವು ಕೈಗಾರಿಕಾ ವಿವಾದ ಕಾಯಿದೆಯನ್ನು ಜಾರಿಗೊಳಿಸಿ ಲಾಕೌಟುಗಳನ್ನು ಬಹಿಷ್ಕರಿಸಿತಾದರೂ,

ಕಾರ್ಮಿಕರು ಕ್ಷಿಪ್ರಮುಷ್ಕರಗಳನ್ನು ನಡೆಸುವುದನ್ನೂ ನಿಷೇಧಿಸಿತು. ಕಾರ್ಮಿಕ ಸಂಘಗಳನ್ನು ಸ್ಥಾಪಿಸುವಲ್ಲಿ ತುಂಬಾ ಕ್ಲಿಷ್ಟಕರವಾದ ವಿಧಿ ವಿಧಾನಗಳನ್ನು ರೂಪಿಸಿ ಸಚಿವ ಸಂಪುಟವು ಕಾರ್ಮಿಕರ ವಿರೋಧಿ ಸಂಪುಟವೆಂಬ ಆಪಾದನೆಗೆ ಗುರಿಯಾಯಿತು. ಡಾ. ಅಂಬೇಡ್ಕರರೂ ಸೇರಿದಂತೆ ಈ ಕಾಯಿದೆಯ ವಿರುದ್ಧ ಅನೇಕ ಕಾರ್ಮಿಕ ಸಂಘಗಳ ನಾಯಕರು ಮುಷ್ಕರ ಹೂಡಿದರು. ಮದರಾಸು ಸರ್ಕಾರವು ಇಂಥದೇ ಒಂದು ಶಾಸನವನ್ನು ಹೊರಡಿಸಿತ್ತು.

ರಾಷ್ಟ್ರೀಯ ಗುರಿಗಳನ್ನು ಹೊಂದಿ ಅವುಗಳನ್ನು ನನಸು ಮಾಡಲು ಕಾಂಗ್ರೆಸ್ ಸರ್ಕಾರ ಮುಡಿಯಿತಾದರೂ, ರೈತ–ವಿರೋಧಿ, ಕಾರ್ಮಿಕ–ವಿರೋಧಿ ಹಾಗೂ ಶ್ರೀಮಂತರ–ಪರ ಮತ್ತು ಬಂಡವಾಳಶಾಹಿಗಳ–ಪರ ಎಂಬ ಕಳಂಕದಿಂದ ಪಾರಾಗಲು ಸಾಧ್ಯವಾಗಲಿಲ್ಲ. ಹಾಗಾಗಿ ಜನಪರ ಚಳವಳಿಗಳು ಮತ್ತು ಸಚಿವ ಸಂಪುಟದ ನಡುವೆ ಸಂಘರ್ಷ ಪ್ರಾರಂಭವಾಯಿತು. ಡಾ. ಅಂಬೇಡ್ಕರ್ ಹಾಗೂ ವಾಮಪಂಥೀಯರು ಬೊಂಬಾಯಿಯಲ್ಲಿ ಕಾರ್ಮಿಕ ಮುಷ್ಕರವನ್ನು ಸಂಘಟಿಸಿದ ಸಂದರ್ಭದಲ್ಲಿ ಕಾರ್ಮಿಕರ ಮೇಲೆ ಗುಂಡು ಹಾರಿಸಿದ ಪರಿಣಾಮವಾಗಿ ಕೆಲವರು ಸತ್ತು ನೂರಾರು ಜನಕ್ಕೆ ಗಾಯವಾಯಿತು; ಅಷ್ಟೇ ಅಲ್ಲದೆ, ಅಪರಾಧ ದಂಡ ಸಂಹಿತೆಯ ೧೪೪ನೇ ಕಲಂಅನ್ನು ಧಾರಾಳವಾಗಿ ಉಪಯೋಗಿಸಲಾಯಿತು.

ಕಾಂಗ್ರೆಸ್ ಪಕ್ಷದಲ್ಲೂ ಭ್ರಷ್ಟಾಚಾರಿಗಳಿದ್ದರು ಎಂಬುದು ಗಾಂಧೀಜಿಯವರು ನೋವಿನಿಂದ ಬರೆದಿರುವ ನುಡಿಯಲ್ಲಿ ವ್ಯಕ್ತವಾಗುತ್ತದೆ; 'ಹೆಚ್ಚಿರುವ ಭ್ರಷ್ಟಾಚಾರವನ್ನು ತಾಳಿಕೊಳ್ಳುವ ಬದಲು ಇಡಿಯಾಗಿ ಕಾಂಗ್ರೆಸ್ ಪಕ್ಷವನ್ನು ಹೂತುಬಿಡಲು ನಾನು ಮುಂದಾಗುತ್ತೇನೆ' . ಸಂಘಟನೆ ದುರ್ಬಲವಾಗುತ್ತಿದ್ದ ಕಾರಣ ನೆಹರೂ ರವರಿಗೆ ನಿರಾಶೆಯಾಗಿತ್ತು. ೧೯೩೯ರ ಅಕ್ಟೋಬರ್ ತಿಂಗಳಿನಲ್ಲಿ ಸಚಿವ ಸಂಪುಟದ ರಾಜೀನಾಮೆ ನೀಡಿತು. ಗಾಂಧೀಜಿ ನಿಟ್ಟುಸಿರು ಬಿಟ್ಟು ಹೀಗೆ ಬರೆದರು: 'ನನಗೆ ಸಂಪೂರ್ಣವಾಗಿ ಸ್ಪಷ್ಟವಾಗಿದೆ. ಈಗ ಆಗಿರುವುದು ನಮ್ಮ ಉದ್ದೇಶಕ್ಕೆ ಖಂಡಿತಾ ಒಳ್ಳೆಯದು........ಇದರ ಅಗತ್ಯವಿತ್ತು....... ತಪ್ಪು ಮಾಡುವ ಪ್ರಮೇಯ ಒದಗಿಬಿಟ್ಟಿತ್ತು, ಇನ್ನು ಮೇಲೆ ಅದನ್ನು ನಿವಾರಿಸಲು ಅವಕಾಶವಾಯಿತು'.[೭]

ಕಾಂಗ್ರೆಸ್ ಅಧಿಕಾರ ವಹಿಸಿಕೊಂಡುದರ ಸಾಧಕ ಬಾಧಕಗಳನ್ನು ಲೆಕ್ಕ ಹಾಕುವಾಗ ದಕ್ಷಿಣದಲ್ಲಿ, ಒಂದೆರಡು ಪ್ರಮಾದಗಳಾಗಿದ್ದಾಗ್ಯೂ ಸಹ, ಕಾಂಗ್ರೆಸ್ಸು ಗೌರವ ತರುವ ರೀತಿಯಲ್ಲಿ ವರ್ತಿಸಿರುವುದು ನೆನಪಾಗುತ್ತದೆ; ಕಾರಣ ಅವರು ಹಾಕಿಕೊಂಡಿದ್ದ ಕಾರ್ಯಕ್ರಮಗಳು ಜನರ ಪುರೋಭಿವೃದ್ಧಿಗಾಗಿ ರೂಪಿತವಾಗಿದ್ದವು; ಕಾಂಗ್ರೆಸ್ಸು ಹಾಗೂ ರಾಷ್ಟ್ರವಾದಿಗಳು – ಇಬ್ಬರೂ ಬೆಳೆಯುವುದಕ್ಕೆ ಇದರಿಂದ ಸಾಧ್ಯವಾಯಿತು; ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮವನ್ನು ಅವರು ತುಂಬಾ ಶ್ರದ್ಧೆಯಿಂದಲೇ ನಡೆಸಿದ್ದರೆನ್ನಬೇಕು; ಅಧಿಕಾರದಲ್ಲಿಲ್ಲದವರಿಗೂ ಸಹ ಸಚಿವರು ಹಾಗೂ ಶಾಸಕರು ಅವರ ಕಾರ್ಯದಲ್ಲಿ ಸಹಾಯ ಹಸ್ತ ನೀಡಿದ್ದರು. ಹಾಗಾಗಿ ಸಚಿವರಿಂದ ರಾಷ್ಟ್ರೀಯ ಚಳವಳಿಗೆ ಪ್ರೋತ್ಸಾಹ ದೊರೆಯಿತು.

ಸಂಸ್ಥಾನಗಳಲ್ಲಿ ೧೯೩೭–೧೯೩೯ರ ಅವಧಿಯಲ್ಲಿ ಗಣನೀಯವಾದ ಬೆಳವಣಿಗೆಯಾಯಿತು. ಸಂಸ್ಥಾನ ಹಾಗೂ ಬ್ರಿಟಿಷ್ ಭಾರತ ಎರಡರಲ್ಲೂ ಸೇರಿಕೊಂಡಿದ್ದ ಕರ್ನಾಟಕ ಪ್ರದೇಶದಲ್ಲಿ ಮಹತ್ವದ ರಾಜಕೀಯ ಬದಲಾವಣೆಯಾಗುವುದಿತ್ತು. ದೇಶೀಯ ಸಂಸ್ಥಾನಗಳ ವಿಷಯದಲ್ಲಿ ಕಾಂಗ್ರೆಸ್ ಪಕ್ಷದ ನೀತಿಯಲ್ಲಿಯೇ ಕ್ರಾಂತಿಕಾರಕವಾದ ಬದಲಾವಣೆಯಾಗಿತ್ತು. ಪ್ರಾಂತೀಯ ಕಾಂಗ್ರೆಸ್ ಸಮಿತಿಗಳಲ್ಲಿ ದೇಶೀಯ ಸಂಸ್ಥಾನಗಳ ಸದಸ್ಯರು ಪ್ರವೇಶಾವಕಾಶಗಳಿಸುತ್ತಿದ್ದಂತೆಯೇ ಕಾಂಗ್ರೆಸ್ಸು ಹಾಗೂ ಬ್ರಿಟಿಷ್ ಭಾರತದಲ್ಲಿ ಆಗುತ್ತಿದ್ದ ಬೆಳವಣಿಗೆಗಳ ಸಂಪರ್ಕ ಲಭಿಸಿತು. ೧೯೨೭ರಲ್ಲಿ ಸ್ಥಾಪನೆಯಾದ ಅಖಿಲ ಭಾರತ ರಾಜ್ಯಗಳ ಜನ ಸಮಾವೇಶಗಳು

(All India States Peoples Conference) ಕಾಂಗ್ರೆಸ್ ಪಕ್ಷದ ಅಂಗ ಸಂಸ್ಥೆಗಳಾಗಿ ಕೆಲಸ ಮಾಡಿದವು. ಆದರೆ ರಾಜ್ಯದ ಜನರು ತಮ್ಮದೇ ಸಂಘಟನೆಗಳನ್ನು ಬೆಳೆಯಿಸಿ ನಿರಂಕುಶ ಪ್ರಭುತ್ವದ ವಿರುದ್ಧ ಸೆಣೆಸಬೇಕಲ್ಲದೆ ಕಾಂಗ್ರೆಸ್ ಪಕ್ಷದ ಮೇಲೆ ಅವಲಂಬಿಸಬಾರದೆಂದು ತಿಳಿಸಲಾಗಿತ್ತು.

ಜವಹರ್‌ಲಾಲ್ ನೆಹರೂರವರು ಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದಾಗ ೧೯೨೯ರಲ್ಲಿ ರಾಜ್ಯಗಳ ವಿಷಯದಲ್ಲಿ ಕಾಂಗ್ರೆಸ್ಸಿನ ನೀತಿಯಲ್ಲಿ ಬದಲಾವಣೆ ಕಂಡಿತು. ರಾಜ್ಯಗಳ ಭವಿಷ್ಯದ ಬಗ್ಗೆ ನಿರ್ಧರಿಸಬೇಕಾದವರು ರಾಜ್ಯಗಳ ಜನತೆಯೇ ಎಂದು ನೆಹರೂ ಸೂಚಿಸಿದ ಹಿನ್ನೆಲೆಯೆಂದರೆ, ಜನರ ಪರಮಾಧಿಕಾರದ ಸ್ಥಾಪನೆಯಾಗಬೇಕು ಮತ್ತು ರಾಜರುಗಳು ರಾಷ್ಟ್ರದ ಕೇವಲ ಪ್ರಜೆಗಳಾಗಿರಬೇಕು ಎಂದು ಸ್ಪಷ್ಟಪಡಿಸಿದಂತಾಯಿತು.

೧೯೨೯-೩೨ರ ಅವಧಿಯಲ್ಲಿ ಪ್ರಾರಂಭವಾದ ಸವಿನಯ ಕಾನೂನುಭಂಗ ಹಾಗೂ ಕರನಿರಾಕರಣಾ ಆಂದೋಲನಗಳು ಹಾಗೂ ಶಿರಸಿ, ಸಿದ್ಧಾಪುರ ಮತ್ತು ಅಂಕೋಲಾ ಪ್ರದೇಶಗಳಿಂದ ರಾಷ್ಟ್ರೀಯ ಕಾರ್ಯಕರ್ತರು ಭಾಗವಹಿಸಿದುದು ಈ ಎಲ್ಲದರ ಪರಿಣಾಮವಾಗಿ ಆಂದೋಲನಕಾರರಲ್ಲಿ ಹೆಚ್ಚಿನ ಉತ್ಸಾಹ ಕಾಣಿಸಿತು. ಇದಕ್ಕಿಂತ ಮೊದಲು ಗಾಂಧೀಜಿಯವರು ಮೈಸೂರು ಸಂಸ್ಥಾನದ ನಂದಿ ಬೆಟ್ಟದಲ್ಲಿ ಸುಮಾರು ನಾಲ್ಕು ತಿಂಗಳ ಕಾಲ ತಂಗಿದ್ದರು. ಅನೇಕ ಕಾರ್ಯಕರ್ತರು ಅವರಿಂದ ಆಕರ್ಷಿತರಾಗಿ ರಚನಾತ್ಮಕ ಕೆಲಸದಲ್ಲಿ ತೊಡಗಿಕೊಂಡರು. ಮೈಸೂರು ಕಾಂಗ್ರೆಸ್ಸಿಗರು ಡಾ. ಎನ್.ಎಸ್ ಹರ್ಡೀಕರ್‌ರವರ ನೇರ ಸಂಪರ್ಕ ಹೊಂದಿದ್ದ ಕಾರಣದಿಂದಾಗಿ ಇಲ್ಲಿ ಸೇವಾದಳ ಕೂಡ ಹೆಚ್ಚು ಕ್ರಿಯಾಶೀಲವಾಗಿತ್ತು.[೪] ಆದಾಗ್ಯೂ ವಿದ್ಯಾರ್ಥಿಗಳು ವಿಶೇಷವಾಗಿ ರಾಷ್ಟ್ರೀಯ ಚಟುವಟಿಕೆಗಳಲ್ಲಿ ಆಕರ್ಷಿತರಾದರು ಎನ್ನಬೇಕು.

ರಾಜ್ಯಗಳ ವಿಷಯದಲ್ಲಿ, ರಾಷ್ಟ್ರಮಟ್ಟದಲ್ಲಿ, ಕಾಂಗ್ರೆಸ್ ಪಕ್ಷ ಒಂದು ಬಗೆಯ ದ್ವಂದ್ವ ನೀತಿಯನ್ನು ಅನುಸರಿಸಿದಂತೆ ಕಾಣುತ್ತದೆ. ಇದರ ಜೊತೆಗೆ ಮೈಸೂರು ಮಹಾರಾಜರು ಹಾಗೂ ದಿವಾನರು ರಾಷ್ಟ್ರೀಯ ನಾಯಕರಾದ ಗಾಂಧೀಜಿ, ರಾಜಾಜಿ ಹಾಗೂ ಸತ್ಯಮೂರ್ತಿಯವರ ಜೊತೆ ವೈಯಕ್ತಿಕ ಸಂಬಂಧವನ್ನು ಬೆಳೆಸಿಕೊಂಡಿದ್ದರು. ಗಾಂಧೀಜಿಯವರು ಮೈಸೂರಿಗೆ ಬಂದಾಗಲೆಲ್ಲ ಅವರು ಸರ್ಕಾರದ ಅತಿಥಿಯಾಗುತ್ತಿದ್ದರು. ತಮ್ಮ ಹೃದಯಕ್ಕೆ ಹತ್ತಿರವಾದ ರಚನಾತ್ಮಕ ಕಾರ್ಯಕ್ರಮವನ್ನು ಮೈಸೂರು ಸರ್ಕಾರ ಅನುಷ್ಠಾನಕ್ಕೆ ತಂದಿರುವ ಸಂಗತಿಯಿಂದ ಗಾಂಧೀಜಿಯವರಿಗೆ ತೃಪ್ತಿಯುಂಟಾಗಿತ್ತು. ಮೈಸೂರು ನನ್ನ ಕನಸಿನ ರಾಮರಾಜ್ಯವಾಗುವ ಹತ್ತಿರ ಹತ್ತಿರಕ್ಕೆ ಹೋಗಿದೆ ಎಂದು ಹೇಳುವ ಮಟ್ಟಕ್ಕೆ ಗಾಂಧೀಜಿ ಹೋದರು.[೫] ಕ್ರಮೇಣ ಸುಶಿಕ್ಷಿತರಾದ ಬ್ರಾಹ್ಮಣೇತರ ಯುವಕರು ಜಾತಿವಾದಿ ರಾಜಕಾರಣವನ್ನು ಇಷ್ಟಪಡುತ್ತಿರಲಿಲ್ಲ; ಬ್ರಾಹ್ಮಣರನ್ನು ರಾಜಕೀಯ ಸಂಘಟನೆಗಳಿಂದ ಹೊರಗಿಡುವಂಥದು ಕೆಟ್ಟ ರಾಜಕಾರಣವೆಂದು ಅವರು ಬಗೆದರು.[೬]

ಸವಿನಯ ಕಾನೂನುಭಂಗ ಚಳವಳಿಯ ಪ್ರಾರಂಭ, ಸರ್ವವ್ಯಾಪಿಯಾದ ರಾಷ್ಟ್ರೀಯ ಚಳವಳಿ ಹಾಗೂ ಗಾಂಧೀಜಿಯವರ ಪ್ರಭಾವ ಬ್ರಾಹ್ಮಣೇತರ ಯುವಕರ ಮೇಲೆ ಪರಿಣಾಮವುಂಟು ಮಾಡದಿರಲಿಲ್ಲ. ಇದರ ಪರಿಣಾಮವಾಗಿ ಪ್ರಜಾಮಿತ್ರ ಮಂಡಲಿಯಲ್ಲಿ ಒಡಕುಂಟಾಯಿತು; ಯುವಕರು ಪ್ರಜಾಪಕ್ಷವೆಂಬ ಪಕ್ಷವನ್ನು ಸ್ಥಾಪಿಸಿದರು, ಅದರಲ್ಲಿ ಬ್ರಾಹ್ಮಣರನ್ನೂ ಸೇರಿಸಿಕೊಂಡರು. ಕ್ರಮೇಣ ತಮ್ಮ ಸಂಘಟನೆಗೆ ವ್ಯಾಪಕತೆಯನ್ನು ಪ್ರಾಪ್ತಿಗೊಳಿಸುವ ಉದ್ದೇಶದಿಂದ ರೈತ ಸಮಾವೇಶಗಳನ್ನು ಸಂಘಟಿಸಿದರು; ಅವರ ಪ್ರಕಾರ ಮಹಾರಾಜರವರ ನೇತೃತ್ವದಲ್ಲಿ ಜವಾಬ್ದಾರಿ ಸರ್ಕಾರವನ್ನು ರೂಪಿಸುವುದು ಅವರ ಪಕ್ಷದ ಉದ್ದೇಶವಾಗಿತ್ತು. ಗ್ರಾಮಾಂತರ ಪ್ರದೇಶಗಳಲ್ಲಿಯೂ ರೈತ ಸಮಾವೇಶಗಳು ನಡೆದು ಆಡಳಿತವನ್ನು ನಿರಂಕುಶವಾದುದೆಂದು ಟೀಕಿಸಲಾಯಿತು. ಈ ಸಮಾವೇಶಗಳನ್ನು ಬಹಿಷ್ಕರಿಸಿ ದಿವಾನರು ಪ್ರಜಾಪಕ್ಷದ ಜನರ ವಿರೋಧ ಕಟ್ಟಿಕೊಂಡರು.[೭] ಹಾಗಾಗಿ

ಮೈಸೂರಿನಲ್ಲಿ ರಾಷ್ಟ್ರೀಯ ಚಿಂತನೆಗಳು ವ್ಯಾಪಕವಾಗಿ ಹರಡತೊಡಗಿದವು; ಪ್ರಜಾಪಕ್ಷವಿರಲಿ, ಕಾಂಗ್ರೆಸ್ ಪಕ್ಷವಿರಲಿ–ಪ್ರತಿಯೊಂದು ರಾಜಕೀಯ ಗುಂಪುಗಳೂ ತಾವೇ ನಿಜವಾದ ಗಾಂಧಿ ಅನುಯಾಯಿಗಳೆಂದು ಘೋಷಿಸಿಕೊಳ್ಳುವುದರಲ್ಲಿ ಪೈಪೋಟಿ ನಡೆಸಿದ್ದರು. ಅಷ್ಟೇ ಅಲ್ಲ ದಿವಾನರೂ ಬಹಿರಂಗವಾಗಿ ಶಾಸನ ಸಭೆಯಲ್ಲಿ, ತಮಗಿಂತ ಉತ್ತಮವಾದ ಕಾಂಗ್ರೆಸ್ಸಿಗ ರಾಜ್ಯದಲ್ಲಿ ಬೇರೊಬ್ಬನಿರಲಾರ ಎಂದು ಘೋಷಿಸಿದ್ದರು.[೯]

ಸರ್ಕಾರವನ್ನು ಹೆಚ್ಚು ಹೆಚ್ಚು ಟೀಕಿಸತೊಡಗಿದಾಗ ದಿವಾನರು ಹೆಚ್ಚು ಉಗ್ರವಾದರಲ್ಲದೆ ಬ್ರಾಹ್ಮಣೇತರ ರಾಜಕಾರಣಿಗಳನ್ನು ಸರ್ಕಾರದಿಂದ ದೂರವಿಡಲಾರಂಭಿಸಿದರು.

೧೯೩೫ರ ಭಾರತ ಸರ್ಕಾರ ಕಾಯಿದೆಯು ರಾಷ್ಟ್ರೀಯ ಕಾಂಗ್ರೆಸ್ಸು ಹಾಗೂ ಬ್ರಾಹ್ಮಣೇತರ ಪಕ್ಷದವರು ಮತ್ತು ಮೈಸೂರು ಕಾಂಗ್ರೆಸ್ಸಿಗರಿಗೆ ತಮ್ಮ ವಿಧಾನವನ್ನು ಸಂಪೂರ್ಣವಾಗಿ ಬದಲಿಸಿಕೊಳ್ಳುವಂಥ ಅನಿವಾರ್ಯ ಸ್ಥಿತಿಯನ್ನುಂಟುಮಾಡಿತು. ಪ್ರಸ್ತಾಪಿತವಾದ ಒಕ್ಕೂಟದ ನಿಯಮದಂತೆ ಒಟ್ಟು ಸದಸ್ಯತ್ವದಲ್ಲಿ ರಾಜ್ಯಗಳಿಗೆ ೧/೩ ಭಾಗ ಪ್ರತಿನಿಧಿತ್ವ ಇರಬೇಕೆಂದೂ ಮತ್ತು ಅವರೆಲ್ಲರೂ ರಾಜರಿಂದ ನೇಮಕವಾಗಿರಬೇಕೆಂದೂ ತಿಳಿಸಲಾಗಿತ್ತು. ಸ್ವಾತಂತ್ರ್ಯ ಹೋರಾಟದಲ್ಲಿ ಈ ನೇಮಕಾತಿ ಸದಸ್ಯರು ಕಾಲ್ತೊಡಕಾಗುವ ಸಾಧ್ಯತೆಯಿತ್ತು. ಇದನ್ನು ನಿವಾರಿಸಬೇಕಾದರೆ ರಾಜ್ಯಗಳು ಜವಾಬ್ದಾರಿ ಸರ್ಕಾರಗಳನ್ನು ಹೊಂದಬೇಕಾಗಿದ್ದಿತು. ರಾಜ್ಯಗಳಲ್ಲಿ ಜವಾಬ್ದಾರಿ ಸರ್ಕಾರಗಳಿರಬೇಕಾದರೆ ಅಲ್ಲಿ ಜನಾಂದೋಲನವನ್ನು ಬಲಪಡಿಸಬೇಕಾಗಿದ್ದಿತು. ಹಾಗಾಗಿ ರಾಷ್ಟ್ರೀಯ ಕಾಂಗ್ರೆಸ್ ಪಕ್ಷವು ರಾಜ್ಯದ ಜನರ ಚಳವಳಿಗಳನ್ನು ಬಲಪಡಿಸಬೇಕಾದ ಜರೂರು ಉಂಟಾಯಿತು; ಇದರಿಂದ ರಾಜ್ಯಗಳ ಬಗ್ಗೆ ಕಾಂಗ್ರೆಸ್ಸಿನ ನೀತಿಯಲ್ಲಿ ಬದಲಾವಣೆಯಾಗಬೇಕಾದದ್ದು ಅನಿವಾರ್ಯವಾಯಿತು.

ಮೈಸೂರಿನ ಪ್ರಜಾಪಕ್ಷದವರಿಗೆ, ಪ್ರಾಂತ್ಯಗಳಲ್ಲಿ ಕಾಂಗ್ರೆಸ್ಸು ಸಚಿವ ಸಂಪುಟವನ್ನು ರಚಿಸಿದುದು ಒಂದು ದೊಡ್ಡ ಪಾಠವಾಯಿತು. ಬ್ರಿಟಿಷ್ ಪ್ರಾಂತ್ಯಗಳ ಹಾಗೂ ಅಲ್ಲಿನ ಸಂವೈಧಾನಿಕ ಪ್ರಗತಿಗೆ ಹೋಲಿಸಿದರೆ ತಾವು ತೀರಾ ಹಿಂದೆ ಉಳಿದಿರುವುದಾಗಿ ಅವರು ಭಾವಿಸಿದರು. ಬ್ರಿಟಿಷ್ ಭಾರತದ ಜನರು ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಹೋರಾಟದ ಮೂಲಕ ಅದನ್ನು ಸಾಧ್ಯವಾಗಿಸಿಕೊಂಡಿದ್ದರು. ಜನರ ಬೆಂಬಲವಿಲ್ಲದೆ –ಪ್ರಜಾಪಕ್ಷದವರ ಬೆಂಬಲವಿಲ್ಲದೆ ಜನರ ಬೆಂಬಲ ದೊರೆಯುವಂತಿರಲಿಲ್ಲ– ನಿರಂಕುಶ ಆಡಳಿತವು ಚುನಾಯಿತ ಪ್ರತಿನಿಧಿಗಳೊಂದಿಗೆ ಅಧಿಕಾರ ಹಂಚಿಕೊಳ್ಳುವಂತೆ ಮಾಡಲು ಸಾಧ್ಯವಿಲ್ಲವೆಂದು ಮೈಸೂರಿನ ಕಾಂಗ್ರೆಸ್ಸಿಗರು ಅರಿತಿದ್ದರು.

೧೯೩೮ರ ಚುನಾವಣೆಗಳ ಸಂದರ್ಭದಲ್ಲಿ ಸರ್ಕಾರದ ಉಗ್ರವಾದ ನೀತಿಯಿಂದಾಗಿ ಮೆರವಣಿಗೆ ಹಾಗೂ ಸಭೆಗಳನ್ನು ನಿಷೇಧಿಸಲಾಯಿತು. ಶಾಸನಸಭೆ, ಮುನಿಸಿಪಲ್ ಕೌನ್ಸಿಲರ್‌ಗಳು ಹಾಗೂ ಜಿಲ್ಲಾ ಮಂಡಳಿಗಳ ಸದಸ್ಯರ ಹಕ್ಕು ಮತ್ತು ಸವಲತ್ತುಗಳನ್ನು ಕಡಿತಗೊಳಿಸಲಾಯಿತು.[೧೦] ಕಾಂಗ್ರೆಸ್ಸು ಹಾಗೂ ಪ್ರಜಾಪಕ್ಷ ಎರಡೂ ಕುಪಿತವಾದವು. ಎಲ್ಲಾ ಆದೇಶಗಳನ್ನು ಉಲ್ಲಂಘಿಸುವುದಾಗಿ ಕಾಂಗ್ರೆಸ್ ಪಕ್ಷ ಘೋಷಿಸಿತು. ರಾಷ್ಟ್ರೀಯ ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾದ ಜವಹರಲಾಲರು, ಕೆ.ಟಿ.ಭಾಷ್ಯಂರವರ 'ಸರ್ವಾಧಿಕಾರತ್ವ' ದಲ್ಲಿ ಒಂದು 'ಕ್ರಿಯಾ ಮಂಡಳಿ' (Council of Action)ಯನ್ನು ರಚಿಸಿದರು. ಸರ್ಕಾರವು ಅನೇಕ ಸದಸ್ಯರನ್ನು ಮುನ್ನೆಚ್ಚರಿಕೆಯ ಕ್ರಮವಾಗಿ ದಸ್ತಗಿರಿ ಮಾಡಿ, ಕಾಂಗ್ರೆಸ್ ಕಚೇರಿಯಲ್ಲಿ ಶೋಧನೆಗಾಗಿ ತಂಡಗಳನ್ನು ಕಳಿಸಿತು. ಶಾಸನಸಭೆಯ ಅಧಿವೇಶನದಲ್ಲಿ ಭಾಗವಹಿಸಲು 'ಸರ್ವಾಧಿಕಾರಿ' ಭಾಷ್ಯಂರವರು ಮೈಸೂರಿನಲ್ಲಿದ್ದ ಸಂದರ್ಭದಲ್ಲಿ ಮಧ್ಯರಾತ್ರಿಯಲ್ಲಿ ಅವರು ತಂಗಿದ್ದ ಹೋಟೆಲಿಂದ ಅವರನ್ನು ದಸ್ತಗಿರಿ ಮಾಡಲಾಯಿತು. ಹೊಸದಾಗಿ ಚುನಾಯಿತರಾಗಿ ಮೈಸೂರಿನಲ್ಲಿದ್ದ ಎಲ್ಲ ಶಾಸಕರೂ ಭಾಷ್ಯಾಂರವರ ದಸ್ತಗಿರಿಯಿಂದ ದಿಗ್ಭ್ರಾಂತರಾದರು.

ಪ್ರಜಾಪಕ್ಷದ ನಾಯಕರು ಸನ್ನಿವೇಶದ ಗಂಭೀರತೆಯನ್ನು ಅರಿತವರಾಗಿ ಅಕ್ಟೋಬರ್ ೧೫ರ ಮುಂಜಾನೆ, ಅಂದರೆ ಭಾಷ್ಯಂರವರ ದಸ್ತಗಿರಿಯಾದ ಮಾರನೇ ದಿನ ಎರಡೂ ಪಕ್ಷಗಳು ವಿಲೀನವಾಗಿವೆಯೆಂದು ಮೈಸೂರಿನಿಂದ ಘೋಷಿಸಿದರು. ಮೈಸೂರು ಕಾಂಗ್ರೆಸ್ಸು ಅಸ್ತಿತ್ವಕ್ಕೆ ಬಂದ ರೀತಿ ಇದು. ಇದಾದ ಬಳಿಕವೇ ನಾರಿಮನ್ ಪ್ರಸಂಗ ಜರುಗಿತು. ಸುಮಾರು ೫೦೦೦ ಜನರು ಈ ಬೊಂಬಾಯಿಯ ಕಾಂಗ್ರೆಸ್ ನಾಯಕರ ಭಾಷಣವನ್ನು ಕೇಳಲು ನೆರೆದಿದ್ದರು; ಆಗ ಅವರ ಮೇಲೆ ಗುಂಡು ಹಾರಿಸಿದಾಗ ಆರು ಮಂದಿ ಸತ್ತು, ಅನೇಕರಿಗೆ ಗಾಯವಾಯಿತು ಮತ್ತು ಭಾಷಣಕಾರರನ್ನು ದಸ್ತಗಿರಿ ಮಾಡಿದರು.[೧೧] ಕಲ್ಕತ್ತೆಯ ಗೊತ್ತುವಳಿಯಲ್ಲಿ ಈ ಘಟನೆಗಳನ್ನು ಎಐಸಿಸಿ ಖಂಡಿಸಿತು. ಗಾಂಧೀಜಿಯವರು ಈ ಗೊತ್ತುವಳಿಯನ್ನು ಅನುಮೋದಿಸುವಂತೆ ಕಂಡುಬರಲಿಲ್ಲ. ಆದಾಗ್ಯೂ ರಾಷ್ಟ್ರೀಯ ಕಾಂಗ್ರೆಸ್ಸು ಸಮಸ್ಯೆಯನ್ನು ಅರ್ಥ ಮಾಡಿಕೊಂಡಿತ್ತು.[೧೨]

ಫೆಬ್ರವರಿ ೧೯೩೮ರಲ್ಲಿ ಜರುಗಿದ ಕಾಂಗ್ರೆಸ್ಸಿನ ಹರಿಪುರ ಅಧಿವೇಶನದಲ್ಲಿ ರಾಜ್ಯಗಳ ಜನಾಂದೋಲನಗಳನ್ನು ಬೆಂಬಲಿಸುತ್ತಲೇ ಯಾವುದೇ ರಾಜಕೀಯ ಹೋರಾಟದಲ್ಲಿ ಸಂಸ್ಥಾನಿ ಕಾಂಗ್ರೆಸ್ಸಿಗರು ಕಾಂಗ್ರೆಸ್ಸು ಪಕ್ಷದ ಹೆಸರನ್ನು ಬಳಸಬಾರದೆಂದು ತಾಕೀತು ಮಾಡಲಾಯಿತು.

ಗಾಂಧೀಜಿಯವರು ಕಲ್ಕತ್ತಾದ ಗೊತ್ತುವಳಿಯನ್ನು ಅಂಗೀಕರಿಸುವ ತನಕ ಮೈಸೂರಿನ ಕಾಂಗ್ರೆಸ್ಸಿಗರು ಕಾಯಲಿಲ್ಲ. ೧೯೩೮ರ ಮಾರ್ಚಿಯಲ್ಲಿ ಅವರು ಮೈಸೂರು ರಾಜ್ಯ ಕಾಂಗ್ರೆಸ್ ಪಕ್ಷವನ್ನು ಉದ್ಘಾಟಿಸಿ ಶಿವಪುರದಲ್ಲಿ ಏಪ್ರಿಲ್ ತಿಂಗಳಿನಲ್ಲಿ ತನ್ನ ಮೊದಲನೇ ಅಧಿವೇಶನವನ್ನು ಏರ್ಪಡಿಸಲು ಸಿದ್ಧತೆ ನಡೆಸಿದರು. ಇಲ್ಲಿಯೂ ಸಹ ರಾಷ್ಟ್ರಧ್ವಜವನ್ನು ಹಾರಿಸಬಾರದೆಂದು ನಿಷೇಧಿಸುವುದರ ಮೂಲಕ ಮೈಸೂರು ಸರ್ಕಾರ ಕಾಂಗ್ರೆಸ್ ಪಕ್ಷದ ವಿರುದ್ಧ ತನಗಿರುವ ದ್ವೇಷವನ್ನು ಸಾಬೀತು ಮಾಡಿತು.

ರಾಷ್ಟ್ರೀಯ ಚಳವಳಿಯ ಜನಪ್ರಿಯತೆಯನ್ನೂ ಸರ್ಕಾರದ ಕ್ರೌರ್ಯವನ್ನೂ ಏಕಕಾಲದಲ್ಲಿ ಸಾಬೀತು ಮಾಡುವಂಥ ಘಟನೆಯೊಂದು ೨೫ನೇ ಏಪ್ರಿಲ್ ೧೯೩೮ರಂದು ವಿದುರಾಶ್ವತ್ಥದಲ್ಲಿ ನಡೆಯಿತು. ಜಾತ್ರೆ ನಡೆಯುತ್ತಿದ್ದ ಗ್ರಾಮವೊಂದು ದುರಂತ ಸನ್ನಿವೇಶದ ಕೇಂದ್ರವಾಯಿತು; ಅಲ್ಲಿ ಜರುಗಿದ್ದ ಕಾಂಗ್ರೆಸ್ ಸಭೆಯ ಮೇಲೆ ಗುಂಡು ಹಾರಿಸಿ ಅನೇಕ ಮುಗ್ಧರನ್ನು ಕೊಲ್ಲಲಾಯಿತು. ಒಂದು ವರದಿಯ ಪ್ರಕಾರ ಕಡೆಯ ಪಕ್ಷ ೩೦ ಮಂದಿ ಆಗ ಪ್ರಾಣ ಕಳೆದುಕೊಂಡರು.[೧೩] ಈ ದುರಂತವನ್ನು ಕರ್ನಾಟಕದ ಜಲಿಯನ್‌ವಾಲಾ ಬಾಗ್ ಎಂದೇ ಕರೆಯಲಾಗಿದೆ. ಸರ್ಕಾರಕ್ಕೆ ದಿಗಿಲಾಗಿದ್ದರೂ ಸಹ ಈ ಘಟನೆಯನ್ನು ಮುಚ್ಚಿ ಹಾಕಿ ದೊಡ್ಡ ಪ್ರಮಾದವಲ್ಲವೆಂದು ನಟಿಸಲು ಮುಂದಾಯಿತು.

ಭಾರತೀಯ ರಾಜ್ಯಗಳಲ್ಲಿನ ವಸ್ತುಸ್ಥಿತಿಯನ್ನು ರಾಷ್ಟ್ರೀಯ ಕಾಂಗ್ರೆಸ್, ವಿಶೇಷವಾಗಿ ಗಾಂಧೀಜಿಯವರು ಅರಿತುಕೊಳ್ಳಲು ಮೈಸೂರಿನ ಈ ಬೆಳವಣಿಗೆಗಳು ಸಹಕಾರಿಯಾದವು. ದೇಶೀಯ ಸಂಸ್ಥಾನಗಳ ವಿಷಯದಲ್ಲಿ ಕಾಂಗ್ರೆಸ್ ನೀತಿಯಲ್ಲಿ ಆಗಬೇಕಾದ ಬದಲಾವಣೆ ಕುರಿತು ಮೈಸೂರು ಘಟನೆಗಳು 'ಕಣ್ಣು ತೆರೆಸಲು' ಸಹಾಯ ಮಾಡಿದವು. ಮೈಸೂರಿನ ಪರಿಸ್ಥಿತಿಯ ಬಗ್ಗೆ ತಮಗೆ ತಿಳಿವಳಿಕೆಯಿರಲಿಲ್ಲವೆಂದೂ ಒಪ್ಪಿಕೊಂಡ ಗಾಂಧೀಜಿಯವರು ತಕ್ಷಣವೇ ದಿವಾನರಿಗೆ ತಂತಿ ಕಳುಹಿಸಿ, 'ಇದಕ್ಕೆ ಇರುವ ಏಕೈಕ ಪರಿಹಾರವೆಂದರೆ ಕೂಡಲೇ ಜನರಿಗೆ ಅಧಿಕಾರವನ್ನು ವರ್ಗಾಯಿಸುವುದು' ಎಂದು ತಿಳಿಸಿದರು. ವಿಳಂಬವು ಅಪಾಯಕರವೆಂದೂ ಸಹ ಅವರು ಎಚ್ಚರಿಸಿದರು.

ದಿವಾನರ ಜೊತೆ ಚರ್ಚಿಸಲು ರಾಷ್ಟ್ರೀಯ ಕಾಂಗ್ರೆಸ್ ಪಟೇಲ್ ಹಾಗೂ ಕೃಪಲಾನಿಯವರನ್ನು ಕಳುಹಿಸಿತು. ಮೈಸೂರಿಗೆ ಬರುವ ಮೊದಲೇ ಪಟೇಲರು ಮಿರ್ಜಾ ಅವರಿಗೆ ತಂತಿ ಕಳುಹಿಸಿ. 'ರಾಜ್ಯದ ಹಿತ ಹಾಗೂ

ಗೌರವವನ್ನು ಗಾಂಧೀಜಿಯವರ ವಿಚಾರಗಳನ್ನು ಸಂಪೂರ್ಣವಾಗಿ ಅಂಗೀಕರಿಸುವುದರ ಮೂಲಕ ಕಾಪಾಡಬಹುದೆಂದು' ತಿಳಿಸಿದರು; ಅದರ ಇಂಗಿತಾರ್ಥ, ಜವಾಬ್ದಾರಿ ಸರ್ಕಾರವನ್ನು ಮಂಜೂರು ಮಾಡುವುದೊಂದೇ ಉಳಿದಿರುವ ಮಾರ್ಗ ಎಂದಾಗಿತ್ತು.[೧೪]

ದಿವಾನರು ಹಾಗೂ ಮೈಸೂರಿನ ಕಾಂಗ್ರೆಸ್ ನಾಯಕರ ಜೊತೆ ಪಟೇಲರು ಹಾಗೂ ಕೃಪಲಾನಿಯವರು ಮಾತುಕತೆ ನಡೆಸಿ ಪಟೇಲ್ ಮಿರ್ಜಾ ಒಪ್ಪಂದವೆಂಬ ಒಂದು ಒಪ್ಪಂದಕ್ಕೆ ಸಹಿ ಹಾಕಿದರು. ಒಪ್ಪಂದದ ರೀತ್ಯಾ ರಾಜ್ಯ ಕಾಂಗ್ರೆಸ್ಸನ್ನು ಸರ್ಕಾರ ಅಂಗೀಕರಿಸುವುದು; ಅಲ್ಲದೆ, ಸಂವೈಧಾನಿಕ ಸುಧಾರಣಾ ಸಮಿತಿಯಲ್ಲಿ ಇನ್ನೂ ಮೂರು ಮಂದಿ ಕಾಂಗ್ರೆಸ್ ಪಕ್ಷದ ಸದಸ್ಯರಿಗೆ ಸ್ಥಾನ ಕೊಡುವುದಾಗಿ ತೀರ್ಮಾನವಾಯಿತು. ಇದಕ್ಕೆ ಪ್ರತಿಯಾಗಿ ತಾನು ಧ್ವಜಸತ್ಯಾಗ್ರಹವನ್ನು ವಾಪಸ್ಸು ಪಡೆಯುವುದಾಗಿ ಕಾಂಗ್ರೆಸ್ ಪಕ್ಷ ಒಪ್ಪಿತು.

ಆದರೆ ಸರ್ಕಾರವು ರಾಜ್ಯದ ಕಾಂಗ್ರೆಸ್ ಪಕ್ಷದ ಚಟುವಟಿಕೆಗಳನ್ನು ಬಗ್ಗು ಬಡಿದು, ಹತ್ತಿಕ್ಕುವುದನ್ನು ಮುಂದುವರಿಸಿಯೇ ಇತ್ತು. ವಿದುರಾಶ್ವತ್ಥದ ವಿಚಾರಣಾ ಸಮಿತಿ, ನಿರೀಕ್ಷಿಸಿದ್ದಂತೆಯೇ, ಸರ್ಕಾರವನ್ನು ನಿರಪರಾಧಿಯೆಂದು ತೀರ್ಮಾನಿಸಿತು. ಸುಧಾರಣಾ ಸಮಿತಿ ಕಾಂಗ್ರೆಸ್ ಪಕ್ಷದ ಯಾವುದೇ ಆಕಾಂಕ್ಷೆಯನ್ನು ಪೂರೈಸದಂತಾಯಿತು. ಜೊತೆಗೆ ರಾಜಕೀಯ ಖೈದಿಗಳಿಗೆ ತಾವು ಜೈಲು ಶಿಕ್ಷೆಯಿಂದ ಬಿಡುಗಡೆಯಾಗಿ ಹೊರಗೆ ಬಂದ ನಂತರವೂ ಚುನಾವಣೆಗಳಲ್ಲಿ ಸ್ಪರ್ಧಿಸುವ ಹಕ್ಕು ದೊರೆಯಲಿಲ್ಲ. ರಾಷ್ಟ್ರೀಯ ಕಾಂಗ್ರೆಸ್ಸಿನಿಂದ ಸಂಪೂರ್ಣವಾಗಿ ಬೆಂಬಲ ಪಡೆದು ಮೈಸೂರು ಕಾಂಗ್ರೆಸ್ ತನ್ನ ಚಳವಳಿಯನ್ನು ಮತ್ತೆ ಪ್ರಾರಂಭಿಸಿತು.[೧೫] ರಾಷ್ಟ್ರೀಯ ಕಾಂಗ್ರೆಸ್ಸಿನ ಬದಲಾದ ಧೋರಣೆಯನ್ನು ಕಂಡು ಗಾಂಧೀಜಿ ಹೀಗೆ ಹೇಳಿದ್ದರು: 'ನನ್ನ ದೃಷ್ಟಿಯಲ್ಲಿ, ರಾಜ್ಯದ ಜನರಲ್ಲಿ ಅರಿವು ಮೂಡುವ ತನಕ ತಾನು ಮಧ್ಯೆ ಪ್ರವೇಶಿಸುವುದಿಲ್ಲವೆಂಬ ಕಾಂಗ್ರೆಸ್ ಪಕ್ಷದ ನೀತಿ ಮುತ್ಸದ್ದಿತನದ ನಡವಳಿಕೆಯಾಗಿದೆ. ರಾಜ್ಯದ ಎಲ್ಲೆಡೆ ಜನರಲ್ಲಿ ಅರಿವು ಮೂಡಿರುವ ಸನ್ನಿವೇಶದಲ್ಲಿ ಈ ನೀತಿಯು ಹೇಡಿಗಳ ಮಾರ್ಗವಾಗುತ್ತದೆ; ತಮ್ಮ ನ್ಯಾಯಯುತ ಹಕ್ಕುಗಳಿಗಾಗಿ ದೀರ್ಘವಾದ ಹೋರಾಟಗಳಿಗೆ ಅವರು ಸಿದ್ಧರಾದ ಬಳಿಕ ನೀತಿಯನ್ನು ಬದಲಿಸಿಕೊಳ್ಳಬೇಕಾದುದು ಸಹಜವೇ ಸರಿ. ಅವರು ತಯಾರಾದ ಕ್ಷಣವೇ ಕಾನೂನು, ಸಂವೈಧಾನಿಕ ಚೌಕಟ್ಟು, ಮತ್ಯಾವುದೇ ಕೃತಕ ಚೌಕಟ್ಟು ತಂತಾನೇ ನಾಶವಾಗುತ್ತದೆ' .[೧೬]

ಈ ಹಿನ್ನೆಲೆಯಲ್ಲಿ, ಮೈಸೂರಿನ ಬೆಳವಣಿಗೆಗಳ ಹಿನ್ನೆಲೆಯಲ್ಲಿ ೧೯೩೯ರ ಮಾರ್ಚಿ ತಿಂಗಳಲ್ಲಿ ಸಮಾವೇಶಗೊಂಡ ತ್ರಿಪುರ ಅಧಿವೇಶನದಲ್ಲಿ ರಾಷ್ಟ್ರೀಯ ಕಾಂಗ್ರೆಸ್ಸು ಸಂಸ್ಥಾನಗಳ ವಿಷಯದಲ್ಲಿ ತನ್ನ ಬದಲಾದ ಧೋರಣೆಯನ್ನು ಪ್ರಕಟಿಸಿತು; ಅದರ ಪ್ರಕಾರ, ನೇರವಾದ ಕ್ರಿಯೆಯೂ (Direct Action) ಸೇರಿದಂತೆ ರಾಜಕೀಯ ಚಟುವಟಿಕೆಗಳಿಗೆ ತನ್ನ ಬೆಂಬಲ ನೀಡುವುದು, ಹಾಗೂ ರಾಜರು ರಾಜ್ಯಗಳಲ್ಲಿ ಜವಾಬ್ದಾರಿ ಸರ್ಕಾರವನ್ನು ಸ್ಥಾಪಿಸುವಂತೆ ಅವರನ್ನು ಕೇಳಿಕೊಳ್ಳುವುದು ಎಂದು ತೀರ್ಮಾನವಾಯಿತು. ಭಾರತದಲ್ಲಿ ಸಾರ್ವತ್ರಿಕವಾಗಿ ಹಾಗೂ ಕರ್ನಾಟಕದಲ್ಲಿ ವಿಶೇಷವಾಗಿ 'ಭಾರತ ಬಿಟ್ಟು ತೊಲಗಿ' ಚಳವಳಿ ವ್ಯಾಪಕವಾಗಿ ಪ್ರಾರಂಭವಾಗಲು ಇದು ಹಿನ್ನೆಲೆಯನ್ನು ಒದಗಿಸಿತೆಂದು ಹೇಳಬಹುದು.

**-ಪ್ರೊ. ಎಸ್. ಚಂದ್ರಶೇಖರ್**

## ಟಿಪ್ಪಣಿಗಳು

೧ ಮಹದೇವ್ ದೇಸಾಯಿ ಜಿ.ಡಿ.ಬಿರ್ಲಾ ಅವರಿಗೆ ಬರೆದದ್ದು: ೬ನೇ ಆಗಸ್ಟ್ ೧೯೩೭, ಬಿರ್ಲಾ, ಜಿ.ಡಿ. ಬಾಪು ಎ ಯುನೀಕ್ ಅಸೋಸಿಯೇಷನ್, ನ್ಯೂಢಿಲ್ಲಿ ೧೯೭೭.

೨ ರಾಜ್ ಮೋಹನ್ ಗಾಂಧಿ: ದ ರಾಜಾಜಿ ಸ್ಟೋರಿ, ಸಂಪುಟ-೨, ೧೯೨-೧೯೪೨, ಬೊಂಬಾಯಿ, ೧೯೮೪, ಪು. ೭

೩ ಬಿಪಿನ್ ಚಂದ್ರ ಇತ್ಯಾದಿ, ೧೯೮೯, ಪು. ೩೨೭

೪ ಅದೇ, ಪು. ೩೩೯-೩೪೦

೫ ದೊರೆಸ್ವಾಮಿ, ಎಚ್.ಎಸ್: ೧೯೭೨, ಪು. ೪

೬ ಜೇಮ್ಸ್ ಮೇನರ್: ಪೊಲಿಟಿಕಲ್ ಎಕಾನಮಿ ಆಫ್ ಇಂಡೈರೆಕ್ಟ್ ರೂಲ್. ಮೈಸೂರು ೧೯೧೭-೧೯೫೫, ನವದೆಹಲಿ, ೧೯೭೭, ಪು. ೮೯

೮ ದ ಹಿಂದು, ೨೪ ಜನವರಿ ೧೯೩೭

೯ ಮಿರ್ಜಾ ಎಂ. ಇಸ್ಮಾಯಿಲ್: ಮೈ ಪಬ್ಲಿಕ್ ಲೈಫ್: ರಿಕಲೆಕ್ಷನ್ಸ್ ಅಂಡ್ ರಿಫ್ಲೆಕ್ಷನ್ಸ್, ಲಂಡನ್, ೧೯೫೪, ಪು. ೨೭

೧೦ ದ ಹಿಂದು, ೨೮, ೩೧ ಜುಲೈ ೧೯೩೭

೧೧ ದ ಹಿಂದು, ೨೬, ಅಕ್ಟೋಬರ್ ೧೯೩೭

೧೨ ಈ ವಿವಾದದ ವಿವರಗಳಿಗಾಗಿ ನೋಡಿ: ದೊರೆಸ್ವಾಮಿ ಎಚ್.ಎಸ್. ೧೯೭೨, ಪು. ೨೬-೨೭

೧೩ ಹೆಚ್ಚಿನ ವಿವರಗಳಿಗಾಗಿ ನೋಡಿ: ಎಫ್.ಆರ್.೧ ಮೇ ೧೯೩೮ ಆರ್/೧/೨೯ ೧೯೭೦ ಎನ್.ಎ.ಐ. ದ ಹಿಂದು, ೨೯ ಏಪ್ರಿಲ್ ೧೯೩೮ ಹಾಗೂ ಡಿಸ್ಟರ್ಬೆನ್ಸ್ ಅಟ್ ವಿದುರಾಶ್ವತ್ಥ ವಿಚಾರಣಾ ಸಮಿತಿಯ ವರದಿ, ಬೆಂಗಳೂರು, ೧೯೩೮

೧೪ ಪತ್ರವ್ಯವಹಾರದ ವಿವರಗಳಿಗಾಗಿ ನೋಡಿ ಎಮ್‌ಎಸ್‌ಎಸ್/ಇವಿಆರ್/ಎಫ್ ೧೨೫/೫. ಪು. ೪೨೬-೪೨೭, ಇಂಡಿಯಾ ಆಫೀಸ್ ಲೈಬ್ರರಿ, ಲಂಡನ್.

೧೫ ಚಂದ್ರಶೇಖರ್, ಎಸ್., ೧೯೮೫

೧೬ ಗಾಂಧಿ, ಕಲೆಕ್ಟೆಡ್ ವರ್ಕ್ಸ್, ಸಂಪುಟ ೬೮, ಪು. ೩೨೬-೩೨೭

ಅಧ್ಯಾಯ : ಹದಿನೈದು

# ಕ್ವಿಟ್ ಇಂಡಿಯಾ

೧೯೩೯ರ ಸೆಪ್ಟೆಂಬರ್ ತಿಂಗಳಿನಲ್ಲಿ ಜಗತ್ತಿನಾದ್ಯಂತ ಯುದ್ಧದ ಕಾರ್ಮೋಡ ಕವಿಯಿತು. ಏಕ ಪಕ್ಷೀಯವಾಗಿ ಬ್ರಿಟನ್ನು ಭಾರತವು ಆ್ಯಕ್ಸಿಸ್ ಶಕ್ತಿಗಳ(Axis Powers) ವಿರುದ್ಧ ಸಮರಕ್ಕಿಳಿದಿದೆಯೆಂದು ಘೋಷಿಸಿದ ಪರಿಣಾಮವಾಗಿ ಭಾರತದ ರಾಷ್ಟ್ರೀಯ ಜನಾಭಿಪ್ರಾಯದಲ್ಲಿ ಕ್ರೋಧ ಪ್ರಕಟವಾಯಿತು. ಯುದ್ಧದ ಉದ್ದೇಶವನ್ನು ವಸಾಹತು ಸರ್ಕಾರವು ಸ್ಪಷ್ಟಪಡಿಸದ ಹಿನ್ನೆಲೆಯಲ್ಲಿ ಪ್ರಾಂತೀಯ ಕಾಂಗ್ರೆಸ್ ಸಚಿವ ಸಂಪುಟಗಳು ರಾಜೀನಾಮೆ ನೀಡಿದವು.

ಸಮರೋತ್ತರ ನೀತಿ–ಉದ್ದೇಶಗಳ ವಿಷಯದಲ್ಲಿ ಭಾರತ ಮತ್ತು ಇತರ ವಸಾಹತು ರಾಷ್ಟ್ರಗಳಿಗೆ ತನ್ನ ಇಂಗಿತವನ್ನು ಬ್ರಿಟನ್ನು ಪ್ರಕಟಪಡಿಸದ ಕಾರಣ ಯುದ್ಧ–ವಿರೋಧಿ ಸಭೆಗಳನ್ನು ನಡೆಸಿ ಬ್ರಿಟನ್ನಿನ ಹಟಮಾರೀತನವನ್ನು ಖಂಡಿಸಲಾಯಿತು. ಫ್ಯಾಸಿಸ್ಟ್ ಬಲಗಳ ವಿರುದ್ಧ ಹಾಗೂ ಪ್ರಜಾತಾಂತ್ರಿಕತೆಯ ಪರವಾಗಿ ಬ್ರಿಟನ್ ಸಮರ ಸಾರಿದ್ದ ಪಕ್ಷದಲ್ಲಿ ತನ್ನ ಅಧೀನದಲ್ಲಿದ್ದ ಎಲ್ಲಾ ವಸಾಹತು ರಾಷ್ಟ್ರಗಳನ್ನು ಮುಕ್ತಗೊಳಿಸಿ ಅವು ಸ್ವ–ಆಡಳಿತವನ್ನು ನಡೆಸಲು ಅನುಕೂಲ ಕಲ್ಪಿಸಿಕೊಡಬೇಕಾದದ್ದು ಅದರ ಕರ್ತವ್ಯವಾಗಿದ್ದಿತು. ಆದರೆ ಬ್ರಿಟನ್ನು ಆ ಸಂಬಂಧವಾಗಿ ಯಾವುದೇ ಬದ್ಧತೆಯನ್ನು ಹೊಂದದ ಕಾರಣ ರಾಷ್ಟ್ರವಾದಿಗಳು ಬ್ರಿಟನ್ನಿನ ಮೌನವು ಅನೇಕ ದುರಾಲೋಚನೆಗಳಿಗೆ ಆಶ್ರಯ ನೀಡಿರುವುದಾಗಿ ಸಾರ್ವಜನಿಕ ಸಭೆಗಳಲ್ಲಿ ಭಾಷಣ ಮಾಡಿದರಲ್ಲದೆ, ಬರಹದಲ್ಲಿ ಕೂಡ ದಾಖಲಿಸಿದರು. ಬ್ರಿಟನ್ ತನ್ನ ಯುದ್ಧೋದ್ದೇಶಗಳನ್ನು ಬಹಿರಂಗಗೊಳಿಸದೇ ಭಾರತ ಅದಕ್ಕೆ ಸಹಕಾರ ನೀಡುವ ಸ್ಥಿತಿಯಲ್ಲಿ ಇರಲಿಲ್ಲ; ಸಹಕಾರವೆಂಬುದು ಎರಡು ಸಮಾನ ಸರ್ಕಾರಗಳ ನಡುವೆ ಮಾತ್ರ ಸಾಧ್ಯ. ಆದರೆ ಭಾರತ ವಸಾಹತು ರಾಷ್ಟ್ರವಾಗಿದ್ದ ಕಾರಣ ಬ್ರಿಟಿಷರಿಗೆ ಸಹಕಾರ ನೀಡುವ ಪ್ರಶ್ನೆಯೇ ಉದ್ಭವಿಸುವ ಹಾಗಿರಲಿಲ್ಲ. ಬ್ರಿಟನ್ನು ಹಿಟ್ಲರ್ ಮತ್ತು ಮುಸೋಲಿನಿ ಪ್ರತಿನಿಧಿಸುವ ಫ್ಯಾಸಿಸ್ಟ್ ಬಲಗಳ ವಿರುದ್ಧ ಮಿತ್ರರಾಷ್ಟ್ರಗಳ ಪರವಾಗಿ ಯುದ್ಧ ಮಾಡುವುದರಿಂದ ಅದಕ್ಕೆ ಸಹಜವಾಗಿಯೇ ತನ್ನ ಸಹಾನುಭೂತಿ ಇರುವುದಾದರೂ ತಮ್ಮ ನಡುವಿನ ಅಸಮಾನತೆಯಿಂದಾಗಿ ಸಂಪೂರ್ಣ ಬೆಂಬಲ ಸಾಧ್ಯವಿಲ್ಲವೆಂಬುದನ್ನು ೧೯೩೯ರ ಸೆಪ್ಟೆಂಬರ್‌ನಲ್ಲಿ ನಡೆದ ಸಭೆಯಲ್ಲಿ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಸ್ಪಷ್ಟವಾಗಿ ತಿಳಿಸಿತು.

ಭಾರತೀಯರಲ್ಲಿರುವ ಭಿನ್ನಾಭಿಪ್ರಾಯಗಳ ಬಗ್ಗೆ ಬ್ರಿಟಿಷ್ ವಸಾಹತುಶಾಹಿಗಳು ಪ್ರಸ್ತಾಪ ಮಾಡುತ್ತ ತಮ್ಮ 'ಒಡೆದು ಆಳುವ ನೀತಿ' ಯನ್ನು ಮುಂದುವರಿಸಿದರು. ಚರ್ಚಿಲ್ಲರು ಸಮರಕಾಲದ ಪ್ರಧಾನ ಮಂತ್ರಿಗಳಾಗಿದ್ದ ಸಂದರ್ಭದಲ್ಲಿ ಅಮೆರಿ ಹಾಗೂ ಲಿನ್‌ಲಿತ್‌ಗೌ ಅವರು ಕ್ರಮವಾಗಿ ಸರ್ಕಾರದ ಕಾರ್ಯದರ್ಶಿ ಹಾಗೂ ಭಾರತದ ವೈಸ್‌ರಾಯ್ ಆಗಿ ನೇಮಕರಾದರು. ೧೯೪೦ರ ಮಾರ್ಚಿಯ ರಾಮ್‌ಗಡದ

ಅಧಿವೇಶನದಲ್ಲಿ ಬಹುತೇಕ ಎಐಸಿಸಿ ಸದಸ್ಯರು ಒತ್ತಾಯಿಸಿದರಾದರೂ ವ್ಯಾಪಕವಾದ ರೀತಿಯಲ್ಲಿ ಕಾನೂನು ಭಂಗ ಚಳವಳಿಯನ್ನು ಹಮ್ಮಿಕ್ಕೊಳ್ಳುವಲ್ಲಿ ಕಾಂಗ್ರೆಸ್ಸಿಗೆ ಮನಸ್ಸಿರಲಿಲ್ಲ. ಈ ವಿಷಯವಾಗಿ ಕಾರ್ಯಕಾರಿ ಸಮಿತಿ ಸದಸ್ಯರಲ್ಲಿ ತೀವ್ರತರವಾದ ಭಿನ್ನಾಭಿಪ್ರಾಯವುಂಟಾಗಿತ್ತು.[೧]

ಈ ನಡುವೆ ಸರ್ಕಾರ ವಿರೋಧಿ ಚಟುವಟಿಕೆಗಳನ್ನು ಹತ್ತಿಕ್ಕುವ ದಮನಕಾರಿ ನೀತಿಯನ್ನು ಚೆನ್ನಾಗಿ ರೂಢಿಸಿಕೊಂಡಿದ್ದ ಬ್ರಿಟಿಷ್ ಸರ್ಕಾರ ಸತ್ಯಾಗ್ರಹಿಗಳನ್ನೆಲ್ಲಾ ಸೆರೆಮನೆಯಲ್ಲಿಡುವ ಕಾರ್ಯವನ್ನು ಅವ್ಯಾಹತವಾಗಿ ನಡೆಸಿತು; ಇದರ ಪರಿಣಾಮವಾಗಿ ೧೯೪೧ರ ಮೇ ತಿಂಗಳ ವೇಳೆಗೆ ಸುಮಾರು ೩೦,೦೦೦ ಸತ್ಯಾಗ್ರಹಿಗಳನ್ನು ಸೆರೆಮನೆಯಲ್ಲಿಡಲಾಯಿತು. ಬ್ರಿಟಿಷ್ ಮಿತ್ರ ರಾಷ್ಟ್ರಗಳು ತನ್ನ ಶತೃಗಳಿಂದ ಗಂಭೀರ ರೀತಿಯ ಹಾನಿಗೆ ಒಳಗಾದ ಕಾರಣ ೧೯೪೧ ಜೂನ್ ತಿಂಗಳ ವೇಳೆಗೆ ಯುದ್ಧ ತೀವ್ರತರ ತಿರುವು ಪಡೆದುಕೊಂಡಿತು. ದಕ್ಷಿಣ–ಪೂರ್ವ– ಏಷ್ಯಾದ ಬಹುಭಾಗವನ್ನು ಜಪಾನ್ ಆಕ್ರಮಿಸಿಕೊಂಡರೆ, ಜರ್ಮನಿಯು ಪೋಲ್ಯಾಂಡ್, ಬೆಲ್ಜಿಯಮ್, ಹಾಲೆಂಡ್, ನಾರ್ವೆ, ಫ್ರಾನ್ಸ್ ಮತ್ತು ಪೂರ್ವ ಯೂರೋಪಿನ ಭಾಗಗಳನ್ನು ಆಕ್ರಮಿಸಿಕೊಂಡಿತು. ೧೯೪೨ರ ಮಾರ್ಚಿಯ ಕೊನೆಯ ವೇಳೆಗೆ ಜಪಾನ್ ದೇಶವು ಭಾರತದ ಅಂಚಿನವರೆಗೂ ಬಂದಿದ್ದಿತು.

ಅಮೆರಿಕಾ ಮತ್ತು ಚೀನಾ ದೇಶಗಳು ಬ್ರಿಟನ್ನಿನ ಮೇಲೆ ಒತ್ತಡ ತಂದದ್ದಲ್ಲದೆ ಬ್ರಿಟನ್ನಿನಲ್ಲೇ ಆಂತರ್ಯವಾಗಿ ಒತ್ತಡವುಂಟಾದ ಕಾರಣ ಭಾರತದ ರಾಜಕೀಯ ಸಂದಿಗ್ಧವನ್ನು ಪರಿಹರಿಸಲು ಬ್ರಿಟಿಷ್ ಸರ್ಕಾರ ಸ್ಟ್ಯಾಫರ್ಡ್ ಕ್ರಿಪ್ಸ್‌ರನ್ನು ಕಳುಹಿಸಿತು. ಕಾಂಗ್ರೆಸ್ ಒತ್ತಾಯಿಸಿದಂತೆ ಬ್ರಿಟನ್ ತತ್‌ಕ್ಷಣವೇ ಅಧಿಕಾರ ಹಸ್ತಾಂತರ ಮಾಡಲು ಸಮ್ಮತಿ ನೀಡದಿದ್ದಾಗ ವಿಭಿನ್ನ ರೀತಿಯ ವಿಧಾನವನ್ನನುಸರಿಸಲು ಕಾಂಗ್ರೆಸ್ ಉಪಾಯ ಹೂಡಿತು. ದೀರ್ಘಕಾಲದ ಚರ್ಚೆ ಹಾಗೂ ಸಮಾಲೋಚನೆಯ ನಂತರ ೧೯೪೨ರ ಆಗಸ್ಟ್ ೮ ರಂದು 'ಕ್ವಿಟ್ ಇಂಡಿಯಾ' ಚಳವಳಿಯನ್ನು ಪ್ರಾರಂಭಿಸಬೇಕೆಂದು ನಿರ್ಧರಿಸಲಾಯಿತು. ಸಾರ್ವತ್ರಿಕ ಹೋರಾಟದ ಮುನ್ಸೂಚನೆಯನ್ನು ತಿಳಿದಿದ್ದ ಬ್ರಿಟಿಷ್ ಸರ್ಕಾರವು ೧೯೪೦ರ ಆಗಸ್ಟ್ ತಿಂಗಳಿನಿಂದಲೇ 'ಕ್ರಾಂತಿಕಾರಿ ಚಳವಳಿ ಸುಗ್ರೀವಾಜ್ಞೆ' ಯನ್ನು ಸಿದ್ಧಪಡಿಸಿಕೊಂಡಿತ್ತು. ಭಾರತೀಯರೊಡನೆ ಯಾವುದೇ ವಿಧವಾದ ಗೌರವಾನ್ವಿತ ಒಪ್ಪಂದಕ್ಕೆ ಬದ್ಧವಾಗದೆ ವಿರೋಧಿ ನಿಲುವನ್ನು ತಾಳಲು ಸಿದ್ಧವಾಗಿರುವುದು ಬ್ರಿಟನ್ನಿನ ಮುನ್ನೆಚ್ಚರಿಕೆ ಕ್ರಮದಿಂದ ಸಾಬೀತಾಗುತ್ತದೆ.

ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಕ್ಷೇತ್ರಗಳಲ್ಲಿನ ಬೆಳವಣಿಗೆಗಳ ಬಗ್ಗೆ ಕರ್ನಾಟಕವು ಜಾಗ್ರತವಾಗಿದ್ದಿತು. ರಚನಾತ್ಮಕ ಕೆಲಸವು ನಿರಂತರವಾಗಿ ಸಾಗಿತ್ತು. ವೈಯಕ್ತಿಕ ಸತ್ಯಾಗ್ರಹವನ್ನು ಗಾಂಧೀಜಿ ಮತ್ತೆ ಪ್ರಾರಂಭಿಸಿದರು; ೧೯೪೦ರ ಅಕ್ಟೋಬರ್‌ನಲ್ಲಿ ಕರ್ನಾಟಕದ ಜನರು ನಿಷ್ಠೆಯಿಂದ ಸತ್ಯಾಗ್ರಹವನ್ನು ಕೈಕೊಂಡರು; ೧೯೪೧ರ ಜೂನ್ ವೇಳೆಗೆ ೧೧೦೧ ಮಂದಿ ಸತ್ಯಾಗ್ರಹಿಗಳಿಗೆ ಜೈಲು ಶಿಕ್ಷೆಯಾಯಿತು ಹಾಗೂ ಸಹಸ್ರಾರು ಸತ್ಯಾಗ್ರಹಿಗಳನ್ನು ಕರೆದುಕೊಂಡು ಹೋಗಿ ಪೋಲೀಸರು ದೂರದ ಕಾಡುಗಳಲ್ಲಿ ಬಿಟ್ಟರು.[೨] ಕರ್ನಾಟಕದ ಬ್ರಿಟಿಷ್ ಭಾಗಗಳಲ್ಲಿ ಸಂಗ್ರಹವಾದ ದಂಡದ ಮೊತ್ತವು ೨೩,೭೭೫ ರೂಪಾಯಿಗಳಾಗಿತ್ತು.

೧೯೪೨ನೇ ಆಗಸ್ಟ್ ೯ನೇ ತಾರೀಖು ಮುಖಂಡರುಗಳ ದಸ್ತಗಿರಿ ಪ್ರಕಟವಾಗುತ್ತಿದ್ದಂತೆಯೇ ರಾಜ್ಯಕ್ಕೆ ರಾಜ್ಯವೇ ವಸಾಹತು–ವಿರೋಧಿ ಬಣವಾಗಿ ಪರಿಣಮಿಸಿತು. ಕೈಗಾರಿಕಾ ಕ್ಷೇತ್ರದಲ್ಲಿ ಹಿಂದುಳಿದಿದ್ದ ಬೊಂಬಾಯಿ ಕರ್ನಾಟಕದಲ್ಲಿ– ಸುಮಾರು ೩೦,೦೦೦ ಮಂದಿ ಕಾರ್ಮಿಕರು ಎರಡುವಾರಗಳ ಕಾಲ ಮುಷ್ಕರ ನಡೆಸಿದರು. ಪೋಲೀಸು ಠಾಣೆಗಳು, ರೈಲ್ವೆ ನಿಲ್ದಾಣಗಳು, ಅಂಚೆ ಕಚೇರಿಗಳ ಅಗ್ನಿಸ್ಪರ್ಶ, ಸೇತುವೆಗಳನ್ನು ಸ್ಫೋಟಿಸುವುದು, ತಂತಿ ಸಂಪರ್ಕವನ್ನು ಕಡಿಯುವಂಥ ಕ್ರಿಯೆಗಳು ರಾಜ್ಯದ ಎಲ್ಲಾ

ಭಾಗಗಳಿಂದ ವರದಿಯಾದವು. ನಾಲ್ಕುವಾರಗಳ ಕಾಲ ರೈಲು ಸಂಚಾರ ಸಂಪೂರ್ಣವಾಗಿ ಸ್ಥಗಿತಗೊಂಡಿತು. ಅನೇಕ ದಿನಗಳ ಕಾಲ ವಾಹನ ಸಂಚಾರ ನಿಲುಗಡೆಗೊಂಡಿತು. ಅನೇಕ ಸರ್ಕಾರಿ ಕಛೇರಿಗಳು ಹಾಗೂ ಕಟ್ಟಡಗಳನ್ನು ದಹನ ಮಾಡಿದರು, ಇಲ್ಲವೆ ಅಲ್ಲಿನ ವಸ್ತುಗಳನ್ನು ಹೊರಗೆಸೆದರು. ವಸಾಹತು ಅಧಿಕಾರವನ್ನು ನಿರ್ನಾಮಗೊಳಿಸುವುದು, ಆ ದಿಶೆಯಲ್ಲಿ ಅದರ ಎಲ್ಲ ಸಂಕೇತಗಳನ್ನು ಕುಬ್ಜಗೊಳಿಸುವುದೇ ಇದರ ಉದ್ದೇಶವಾಗಿತ್ತು.

ಸರ್ಕಾರದವರು ಎಲ್ಲ ಕಡೆ ಕಾಂಗ್ರೆಸ್ ಸಮಿತಿಗಳನ್ನು ನಿಷೇಧಿಸಿದರಲ್ಲದೆ, ಅವುಗಳ ಕಚೇರಿಗಳನ್ನು ಮುಟ್ಟುಗೋಲು ಹಾಕಿಕೊಂಡರು. ಸಭೆಗಳು ಹಾಗೂ ಮೆರವಣಿಗೆಗಳ ಮೇಲೆ ಲಾಠಿ ಪ್ರಹಾರ ಮಾಡಿದರು, ಗುಂಡು ಹಾರಿಸಿ ಚದುರಿಸಿದರು. ಬೊಂಬಾಯಿ ಕರ್ನಾಟಕದ ಅನೇಕ ಪಟ್ಟಣಗಳಲ್ಲಿ ಪೋಲೀಸರು ಗುಂಡು ಹಾರಿಸಿದರು. ತೀವ್ರರೀತಿಯ ಚಳವಳಿಯಿಂದಾಗಿ ನಿಪ್ಪಾಣಿ ಹಾಗೂ ಬೈಲಹೊಂಗಲದಂಥ ಪಟ್ಟಣಗಳು ಸಂಪೂರ್ಣವಾಗಿ ಮಿಲಿಟರಿ ಅಧೀನಕ್ಕೊಳಪಟ್ಟವು.

ಈ ಚಳವಳಿಯಲ್ಲಿ ವಿದ್ಯಾರ್ಥಿಗಳು ಶ್ಲಾಘನೀಯವಾದ ಪಾತ್ರವನ್ನು ನಿರ್ವಹಿಸಿದರು. ಕಾಲೇಜು, ಹೈಸ್ಕೂಲು ಹಾಗೂ ಮಾಧ್ಯಮಿಕ ಶಾಲೆಯ ವಿದ್ಯಾರ್ಥಿಗಳೂ ಸಹ ಅನೇಕ ತಿಂಗಳುಗಳ ಕಾಲ ರಾಜ್ಯಾದ್ಯಂತ ತಮ್ಮ ತರಗತಿಗಳನ್ನು ಬಹಿಷ್ಕರಿಸಿ ಬುಡಮೇಲು ಕೃತ್ಯಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದರು. ಅವರಲ್ಲಿ ಸಹಸ್ರಾರು ಜನ ಗ್ರಾಮಗಳಿಗೆ ತೆರಳಿ 'ಕ್ವಿಟ್ ಇಂಡಿಯಾ' ಚಳವಳಿಯ ಸಂದೇಶವನ್ನು ಹಾಗೂ ಗಾಂಧೀಜಿಯವರ 'ಮಾಡು ಇಲ್ಲವೇ ಮಡಿ' ಕರೆಯನ್ನು ಜನರಿಗೆ ಮನವರಿಕೆ ಮಾಡಿಕೊಟ್ಟರು. ವಿದ್ಯಾರ್ಥಿನಿಯರೂ ಸಹ ಈ ಚಳವಳಿಗೆ ತಮ್ಮದೇ ಆದ ರೀತಿಯಲ್ಲಿ ಕೊಡುಗೆಯನ್ನು ನೀಡಿದರಲ್ಲದೆ ಚಳವಳಿಯನ್ನು ಸೇರಲು ಓಂದೇಟು ಹಾಕುತ್ತಿದ್ದವರನ್ನು ಹುರಿದುಂಬಿಸುವ ಕಾರ್ಯದಲ್ಲಿ ತೊಡಗಿದರು. ತರಗತಿಗಳಲ್ಲಿ ಅಥವಾ ಮನೆಗಳಲ್ಲಿ ಕುಳಿತವರನ್ನು ಕಂಡು ಅವರಿಗೆ ಕುಂಕುಮ ಹಾಗೂ ಬಳೆಗಳನ್ನು ನೀಡಿ ಎಚ್ಚರಿಕೆ ನೀಡಿದರು. ಹೆಣ್ಣು ಮಗಳೊಬ್ಬಳು ತಾನು ಹಿಡಿದಿದ್ದ ಧ್ವಜವನ್ನು ಕಿತ್ತುಕೊಂಡ ಪೋಲೀಸಿನವರ ಕೆನ್ನೆಗೆ ಹೊಡೆದ ಘಟನೆ ವರದಿಯಾಗಿದೆ. ಸರ್ಕಾರಿ ಆಸ್ತಿಪಾಸ್ತಿಗಳನ್ನು ನಾಶ ಮಾಡುವ ಕಾರ್ಯ ಅವ್ಯಾಹತವಾಗಿ ಸಾಗಿತು. ನಿಪ್ಪಾಣಿಯೆಂಬ ಒಂದೇ ಪಟ್ಟಣದಲ್ಲಿ ವಿಧಿಸಿದ ದಂಡದ ಮೊತ್ತ ೧,೩೦,೦೦೦/- ರೂಪಾಯಿಗಳಾಗಿದ್ದಿತು.

ಕರ್ನಾಟಕದ ಹೋರಾಟದ ಇನ್ನೊಂದು ಲಕ್ಷಣವೆಂದರೆ ಜನರು ಟಿಕೆಟ್ಟಿಲ್ಲದೆ ರೈಲುಗಳಲ್ಲಿ ಪ್ರಯಾಣಿಸಿದರು. ಎಂಜಿನ್ನುಗಳ ಮೇಲೆ ಕಾಂಗ್ರೆಸ್ ಧ್ವಜವನ್ನು ಹಾರಿಸಿದರು, ಯೂರೋಪಿಯನ್ನರು ಎರಡು ಮತ್ತು ಮೂರನೇ ದರ್ಜೆಯಲ್ಲಿ ಪ್ರಯಾಣಿಸುವಂತೆ ಮಾಡಿದರು. ಹೋರಾಟಗಾರರೆಲ್ಲ ಖಾದಿ ಉಡುಪು ಮತ್ತು ಟೊಪ್ಪಿಗೆಯನ್ನು ಧರಿಸಿದರು.

ಮೊದಲನೇ ನಾಲ್ಕು ವಾರಗಳಲ್ಲಿ ಕರ್ನಾಟಕದಾದ್ಯಂತ ಹೊಸ ಹುರುಪಿನ ಅಲೆ ಕಾಣಿಸಿಕೊಂಡಿತು. ತಮ್ಮ ಪ್ರಚಾರದ ಮೂಲಕ ನಿದ್ರೆಯಲ್ಲಿ ಮುಳುಗಿದ್ದ ಗ್ರಾಮಾಂತರದ ಜನರನ್ನು ಎಚ್ಚರಿಸಿದ ವಿದ್ಯಾರ್ಥಿಗಳು ಈ ಚಳವಳಿಯಲ್ಲಿ ಮಹತ್ವದ ಪಾತ್ರ ವಹಿಸಿದರೆನ್ನಬೇಕು.[೩]

ಬೊಂಬಾಯಿ ಕರ್ನಾಟಕದ ಸರ್ಕಾರದ ಯಂತ್ರ ಏರುಪೇರಾಯಿತು. ಕಾನೂನುಭಂಗ ಮಾಡಿದವರ ವಿಚಾರಣೆಗಾಗಿ ವಿಶೇಷವಾಗಿ ನ್ಯಾಯಾಧೀಶರನ್ನು ನೇಮಿಸಲಾಯಿತು. ೩೧ನೇ ಅಕ್ಟೋಬರ್‌ನಲ್ಲಿ ಒಂದೇ ದಿನ ಐದು ರೈಲ್ವೆ ನಿಲ್ದಾಣಗಳನ್ನು ಸುಡಲಾಯಿತು. ಧಾರವಾಡ ಜಿಲ್ಲೆಯನ್ನು ಸಂಪೂರ್ಣವಾಗಿ ಮಿಲಿಟರಿ

ನಿಯಂತ್ರಣದಲ್ಲಿಡಲಾಯಿತು. ಧಾರವಾಡದ ಜಿಲ್ಲಾ ನ್ಯಾಯಾಲಯವನ್ನು ಧೈರ್ಯವಾಗಿ ಪ್ರವೇಶಿಸಿದ ಇಬ್ಬರು ವಿದ್ಯಾರ್ಥಿನಿಯರು ನ್ಯಾಯಾಧೀಶರು ಕೂರುವ ಸ್ಥಳದಲ್ಲಿ ರಾಷ್ಟ್ರ ಧ್ವಜವನ್ನು ಹಾರಿಸಿ ಒಂದು ವಾರದೊಳಗಾಗಿ ನ್ಯಾಯಾಲಯವನ್ನು ವಿಲೀನಗೊಳಿಸಿ ರಾಜೀನಾಮೆ ನೀಡಬೇಕೆಂದು ನ್ಯಾಯಾಧೀಶರಿಗೆ ಹೇಳಿ ಮೌನವಾಗಿ ಹೊರ ನಡೆದ ಘಟನೆ ರೋಮಾಂಚನಕಾರಿಯಾದುದಾಗಿದೆ. ಜಿಲ್ಲೆಯಲ್ಲಿ ವಸಾಹತು ಅಧಿಕಾರಶಾಹಿಯು ಯಾವ ರೀತಿಯಲ್ಲಿ ಅಸ್ತವ್ಯಸ್ತಗೊಂಡಿತ್ತೆಂಬುದನ್ನು ಈ ಘಟನೆ ಸಾಬೀತುಪಡಿಸುತ್ತದೆ. ಎಲ್ಲಾ ನಾಲ್ಕೂ ಜಿಲ್ಲೆಗಳಲ್ಲೂ ಬುಡಮೇಲು ಕೃತ್ಯಗಳು ಹಾಗೂ ಚಳವಳಿಗಳು ವರದಿಯಾದವು. ಮುಖಂಡರುಗಳನ್ನು ಪತ್ತೆ ಹಚ್ಚಿ ದಸ್ತಗಿರಿ ಮಾಡುವ ಪೋಲೀಸು ಮತ್ತು ಸೈನ್ಯದವರ ಪ್ರಯತ್ನ ಸಫಲವಾಗಲಿಲ್ಲ, ಏಕೆಂದರೆ ಒಬ್ಬ ನಾಯಕನ ದಸ್ತಗಿರಿಯಾದ ಸಂದರ್ಭದಲ್ಲಿ ಆತನ ಸ್ಥಾನದಲ್ಲಿ ಇನ್ನೊಬ್ಬರು ಪ್ರತ್ಯಕ್ಷವಾಗುತ್ತಿದ್ದರು. ಹೋರಾಟ ಮುಂದುವರಿಯುತ್ತಿತ್ತು. ಅಕ್ಟೋಬರ್ ತಿಂಗಳ ಉದ್ದಕ್ಕೂ ಸಂಪರ್ಕ ತಂತಿ ಕಡಿಯುವುದು, ಸರ್ಕಾರಿ ಕಚೇರಿಗಳ ಮೇಲೆ ಮುತ್ತಿಗೆ, ಸೇತುವೆಗಳ ಸ್ಫೋಟ, ರೈಲು ಹಳಿಗಳ ನಾಶ – ಅವ್ಯಾಹತವಾಗಿ ಮುಂದುವರಿಯಿತು. ಸ್ಥಳೀಯ ಮಂಡಳಿಗಳ ಅನೇಕ ಸದಸ್ಯರು ರಾಜೀನಾಮೆ ನೀಡಿದರು.

ಸರ್ಕಾರ ದಮನಕಾರಿ ನೀತಿಯನ್ನು ಅನುಸರಿಸಿದ ಕಾರಣ, ೧೯೪೨ರ ಅಕ್ಟೋಬರ್‌ನ ನಂತರ ಕಾರ್ಯಕರ್ತರು ಚಳವಳಿಯನ್ನು ಭೂಗತರಾಗಿ ಮುಂದುವರಿಸಿದರು. ಈ ಕೆಳಗೆ ಕಾಣಿಸಿರುವ ಸಿಐಡಿ ವರದಿಯ ಭಾಗಗಳು ಸೂಚಿಸುವಂತೆ ಬಾಂಬ್ ತಯಾರು ಮಾಡುವ ಮತ್ತಿತರ ಬುಡಮೇಲು ಚಟುವಟಿಕೆಗಳು ಸಾಬೀತಾಗುತ್ತವೆ.

"ಬ್ಯಾಡಗಿ ರೈಲ್ವೆ ನಿಲ್ದಾಣದ ಬುಡಮೇಲು ಪ್ರಕರಣಕ್ಕೆ ಸಂಬಂಧಿಸಿದಂತೆ ಮುಖ್ಯ ಅಪರಾಧಿ ಸಂಗೂರಿನ ಕರಿಯಪ್ಪ ನೆಲ್ಲಪ್ಪ ಯರಿಸೀಮೆಯನ್ನು ೨೪-೧-೧೯೪೩ರಂದು ದಾವಣಗೆರೆಯಲ್ಲಿ ದಸ್ತಗಿರಿ ಮಾಡಲಾಗಿದೆ. ಬಾಂಬ್ ತಯಾರಿಸುತ್ತಿದ್ದ ಸಂದರ್ಭದಲ್ಲಿ ಉಂಟಾದ ಸ್ಫೋಟದಿಂದ ಆತನ ಕೈಗೆ ಪೆಟ್ಟಾಗಿದ್ದು ಅದರ ಚಿಕಿತ್ಸೆಗಾಗಿ ಕರೆದೊಯ್ಯಲಾಗಿದೆ. ವಿಚಾರಣೆಗೆ ಒಳಪಡಿಸಲಾಗಿ ಆತ 'ಬುಡಮೇಲು ಕೃತ್ಯಗಳಲ್ಲಿ ತಾನು ಭಾಗಿಯಾಗಿರುವುದರ ಜೊತೆಗೆ ಬೇರೆ ಬೇರೆ ತಂಡಗಳು ಬೇರೆ ಬೇರೆ ನಾಯಕರ ನೇತೃತ್ವದಲ್ಲಿ ಕಾರ್ಯ ಪ್ರವೃತ್ತವಾಗಿರುವ ಸಂಗತಿಯನ್ನು ತಿಳಿಸಿದ್ದಾನೆ......ನಾಲ್ಕು ತಂಡಗಳಿರುವುದಾಗಿ ಆತ ಒಪ್ಪಿಕೊಂಡಿದ್ದಾನೆ......ಈ ತಂಡಗಳನ್ನು (೧) ಬಲಭೀಮ್ (೨) ಬಲ್‌ವಂತ್ (೩) ಕಬೀರ್ (೪) ದಾಶರಥಿ ಎಂದು ಕರೆಯಲಾಗಿದೆ. ಬುಡಮೇಲು ಚಟುವಟಿಕೆಗಳಿಗಾಗಿ ತಲೆಯೆತ್ತಿರುವಂಥ ತಂಡಗಳಿವು" .[೪]

ಚಳವಳಿಗಾರರು ವ್ಯವಸ್ಥಿತವಾದ ಭೂಗತ ಚಟುವಟಿಕೆಯನ್ನು ನಡೆಸುತ್ತಿದ್ದರೆಂದು ಸಾಬೀತಾಗುತ್ತದೆ. ಇದರ ಜೊತೆಗೆ ಗ್ರಾಮಾಂತರ ಸರ್ಕಾರಿ ದಾಖಲಾತಿಗಳನ್ನು ಸುಡುವುದರಲ್ಲಿ ಅವರು ನಿರತರಾಗಿದ್ದರು; ಧಾರವಾಡ ಹಾಗೂ ಬೆಳಗಾವಿ ಜಿಲ್ಲೆಗಳಲ್ಲಿ ಈ ಚಟುವಟಿಕೆ ಹೆಚ್ಚು ಭರದಲ್ಲಿ ಸಾಗಿತ್ತು. ಕರನಿರಾಕರಣೆಯ ಚಳವಳಿಯ ಸಂದರ್ಭದಲ್ಲಿ ಚರಿತ್ರೆ ನಿರ್ಮಿಸಿದ್ದಂಥ ಉತ್ತರ ಕರ್ನಾಟಕದ ನಾಡವ ಜನಾಂಗ ಹೆಚ್ಚು ಬುಡಮೇಲು ಚಟುವಟಿಕೆಗಳಲ್ಲಿ ತೊಡಗಿದರು. ಜಿಲ್ಲೆಗಳಲ್ಲಿ ಸರ್ಕಾರಿ ಮರದ ಡಿಪೋಗಳಿಗೆ ಬೆಂಕಿ ಹಚ್ಚಿ ಹೆಚ್ಚಿನ ಹಾನಿಯನ್ನುಂಟು ಮಾಡಿದರು.[೫]

'ಜನರಿಂದ ತಮಗೆ ಯಾವುದೇ ರೀತಿಯ ಸಹಾಯ ದೊರೆಯಲಿಲ್ಲ' ವೆಂದು ಬೊಂಬಾಯಿ ಸರ್ಕಾರ ಒಪ್ಪಿಕೊಂಡಿರುವುದರಿಂದ ಜನರು ಈ ಚಟುವಟಿಕೆಗಳ ವಿಷಯವಾಗಿ ಹೆಚ್ಚಿನ ಸಹಾನುಭೂತಿ ಹೊಂದಿದ್ದರೆಂಬುದು ಸ್ಪಷ್ಟವಾಗುತ್ತದೆ.[೬] ಭೂಗತ ಚಟುವಟಿಕೆಗಳಲ್ಲಿ ಭಾಗಿಯಾಗಿದ್ದರೆಂಬ ಕಾರಣಕ್ಕೆ ಧಾರವಾಡ ಜಿಲ್ಲೆಯ

ಹೊಸರಿತ್ತಿ ಎಂಬ ಗ್ರಾಮದಲ್ಲಿ ದಿನಾಂಕ: ೧-೪-೧೯೪೩ರಂದು ಪೋಲೀಸಿನವರು ಮೈಲಾರ ಮಹಾದೇವಪ್ಪ, ಓರೇಮಠದ ವೀರಯ್ಯ ಹಾಗೂ ಮಡಿವಾಳ ತಿರಕಪ್ಪ ಎಂಬುವವರನ್ನು ಗುಂಡಿಟ್ಟು ಕೊಂದ ಸಂಗತಿ ದಾಖಲಾಗಿದೆ.[೬]

## ಮೈಸೂರು ಸಂಸ್ಥಾನದಲ್ಲಿ ಚಳವಳಿ

ತ್ರಿಪುರಿ ಅಧಿವೇಶನದ ನಂತರ ಕಾಂಗ್ರೆಸ್‌ನ ದೃಷ್ಟಿಯಲ್ಲಿ ಬ್ರಿಟಿಷ್ ಸರ್ಕಾರ ಹಾಗೂ ದೇಶೀಯ ಸಂಸ್ಥಾನಗಳ ನಡುವೆ ರಾಷ್ಟ್ರವಾದಿ ಚಳವಳಿ ಕುರಿತು ಯಾವುದೇ ವ್ಯತ್ಯಾಸವಿರಲಿಲ್ಲ. ಬ್ರಿಟಿಷ್ ಭಾರತದ ವಿಷಯದಲ್ಲಿ ನಿಜವಾದದ್ದು ದೇಶೀಯ ಸಂಸ್ಥಾನಗಳ ಬಗ್ಗೆಯೂ ನಿಜವಾಗಿದ್ದಿತು. ಮೈಸೂರಿನಲ್ಲಿ ನಡೆದ ಘಟನೆಗಳಿಗೆ ನೇರವಾಗಿ ಕಾಂಗ್ರೆಸ್ ಪಕ್ಷ ಹೊಣೆಯಾಗಿರಲಿಲ್ಲ; ಮೈಸೂರು ಪ್ರಾಂತ್ಯದಲ್ಲೆಲ್ಲಾ ವಿದ್ಯಾರ್ಥಿ ನಾಯಕರು ಮುಂಚೂಣಿಯಲ್ಲಿದ್ದದನ್ನು ನೆನೆಯಬೇಕು. ತಮ್ಮ ಗುಲಾಮಗಿರಿಗೆ ಕಾರಣವಾಗಿದ್ದ ಶಕ್ತಿಗಳನ್ನು ಬಗ್ಗು ಬಡಿಯಲು ಮಹಾತ್ಮಾ ಗಾಂಧೀಯವರ ಕರೆಗೆ ಯುವಕರು ಒಂದಾಗಿ ಓಗೊಟ್ಟರು. ಆಗಸ್ಟ್ ೧೧ನೇ ತಾರೀಖಿನ ವೇಳೆಗೆ ಬೆಂಗಳೂರು ಹಾಗೂ ಮೈಸೂರು ನಗರಗಳ ವಿದ್ಯಾರ್ಥಿಗಳು ಸರ್ಕಾರಿ ಶಿಕ್ಷಣ ಸಂಸ್ಥೆಗಳು ಮುಚ್ಚಬೇಕೆಂದು ಕರೆ ನೀಡಿದರು; ಅವರ ಪ್ರತಿಭಟನೆಯು ಅಷ್ಟು ಉಗ್ರ ಸ್ವರೂಪವನ್ನು ತಾಳಿತ್ತು. ಎಕ್ಸಿಕ್ಯುಟಿವ್ ಕೌನ್ಸಿಲರ್‌ಗಳು ಹಾಗೂ ಸರ್ಕಾರಕ್ಕೆ ಬೆಂಬಲ ನೀಡುತ್ತಿದ್ದ ಇತರರ ಮಕ್ಕಳೂ ಸಹ ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಭಾಗವಹಿಸಿದರು.[೮]

ಬೆಂಗಳೂರು, ಕೆ.ಜಿ.ಎಫ್., ಭದ್ರಾವತಿ, ದಾವಣಗೆರೆ, ಮೈಸೂರು ಮುಂತಾದ ಕೈಗಾರಿಕಾ ನಗರಗಳ ಕಾರ್ಮಿಕರು ಮುಷ್ಕರ ಪ್ರಾರಂಭಿಸಿ ಚಳವಳಿಯಲ್ಲಿ ಭಾಗವಹಿಸಿದರು. ಆಗಸ್ಟ್ ೧೬ ರಂದು ಪೋಲೀಸು ಮತ್ತು ಸೈನ್ಯದ ವಿರುದ್ಧ ಸೆಣಸಲು ತೊಡಗಿದ ಹೋರಾಟಗಾರರ ದೃಢತೆಯ ಎದುರು ಸರ್ಕಾರ ಕಂಗಾಲಾಯಿತು. ಎರಡೂ ಕಡೆ ಅನೇಕರು ಮಡಿದರು ಮತ್ತು ಸಾವಿರಾರು ಜನಕ್ಕೆ ಗಾಯವಾಯಿತು.[೯] ನಿಷೇಧಾಜ್ಞೆಯಿದ್ದಾಗ್ಯೂ ದಾವಣಗೆರೆಯಲ್ಲಿ ವಿದ್ಯಾರ್ಥಿಗಳು, ಕಾರ್ಮಿಕರು ಮತ್ತು ಇತರರು ಮೆರವಣಿಗೆ ತೆಗೆದ ಸಂದರ್ಭದಲ್ಲಿ ಪೋಲೀಸರು ಗುಂಡು ಹಾರಿಸಲಾಗಿ ಆರು ಮಂದಿ ಪ್ರಾಣ ಕಳೆದುಕೊಂಡರು. ಕಂಗಾಲಾದ ಸರ್ಕಾರ ಆವೇಳೆಗಾಗಲೇ ತಮ್ಮನ್ನು ಸಂಪೂರ್ಣವಾಗಿ ವಸಾಹತು ವಿರೋಧಿ ಹೋರಾಟದಲ್ಲಿ ಗುರುತಿಸಿಕೊಂಡಿದ್ದ ವಿದ್ಯಾರ್ಥಿಗಳು ಹಾಗೂ ಕಾರ್ಮಿಕರ ಮೇಲೆ ಉಗ್ರರೀತಿಯ ಶಿಕ್ಷೆ ವಿಧಿಸತೊಡಗಿತು. ಚಳವಳಿಯ ಆರಂಭಿಕ ಹಂತದಲ್ಲಿ ವಿದ್ಯಾರ್ಥಿಗಳ ಭಾಗವಹಿಸುವಿಕೆಯ ಬಗ್ಗೆ ಬರೆಯುತ್ತಾ ಚರಿತ್ರಕಾರರೊಬ್ಬರು ಹೀಗೆ ಅಭಿಪ್ರಾಯಪಡುತ್ತಾರೆ: 'ಭಾರತೀಯರಾಗಿ ಗಾಂಧೀಜಿಯವರ ಹೋರಾಟದ ಕರೆಯನ್ನು ಮನ್ನಿಸಬೇಕಾದುದು ತಮ್ಮ ಕರ್ತವ್ಯವೆಂದು ಅವರೆಲ್ಲರೂ ಉತ್ಕಟವಾಗಿ ನಂಬಿದ್ದರು.... ಏಕೆಂದರೆ ಮೊದಲು ಭಾರತೀಯರು ನಂತರ ಮೈಸೂರಿಗರೆಂಬುದು ಅವರ ಅಂತರಾಳದ ನಂಬಿಕೆಯಾಗಿದ್ದಿತು.[೧೦] ಅವರಲ್ಲನೇಕರು ಸೆರೆಯಾದರು, ಸಾವಿರಾರು ಮಂದಿ ದಸ್ತಗಿರಿಯಾಗಿ ಬಂಧಿಸಲ್ಪಟ್ಟರು. ಸೆಪ್ಟಂಬರ್ ತಿಂಗಳಿನಲ್ಲಿ ಅವರಲ್ಲಿ ಬಹುತೇಕರು ಗ್ರಾಮಾಂತರ ಪ್ರದೇಶಗಳಿಗೆ ಹೋಗಿ ಗಾಂಧೀಜಿಯವರ ಜೈಲು ಶಿಕ್ಷೆ ಮತ್ತು ಹೋರಾಟದ ಮಹತ್ವವನ್ನು ಗ್ರಾಮೀಣ ಜನರಿಗೆ ತಿಳಿಯಹೇಳಿದರು. ಆ ತಿಂಗಳ ಕೊನೆಯ ವೇಳೆಗೆ ಎಲ್ಲಾ ತಾಲೂಕು ಕೇಂದ್ರಗಳು ಹಾಗೂ ಅನೇಕ ಗ್ರಾಮಗಳಲ್ಲಿ ಬುಡಮೇಲು ಕೃತ್ಯಗಳ ವರದಿಯಾಯಿತು. ಗ್ರಾಮಾಂತರ ಜನರಲ್ಲಿ ಕಾಣಿಸಿಕೊಂಡ ಅಗಾಧ ಪ್ರಮಾಣದ ಉತ್ಸಾಹವನ್ನು ತಡೆಹಿಡಿಯಲಾಗದೆ ಅನಿವಾರ್ಯವಾಗಿ ನಾಯಕರು ಅವರನ್ನು ಮುನ್ನಡೆಸಬೇಕಾಯಿತು. ಕರನಿರಾಕರಣೆಯ ಚಳವಳಿಯನ್ನೂ ಅಳವಡಿಸಲಾಯಿತು. ಮದ್ಯದಂಗಡಿಗಳ ಮೇಲೆ ಆಕ್ರಮಣ ಮಾಡಿ ಅವನ್ನು ನಾಶಮಾಡಲಾಯಿತು.[೧೧]

## ಈಸೂರು ಹೋರಾಟ

ಶಿವಮೊಗ್ಗ ಜಿಲ್ಲೆಯ ಈಸೂರು ಎಂಬ ಗ್ರಾಮದಲ್ಲಿ ನಡೆದ ಹೋರಾಟವು ೧೯೪೨ರ ಚಳವಳಿಯಲ್ಲಿ ಇಡೀ ರಾಷ್ಟ್ರದಲ್ಲೇ ಅತ್ಯಂತ ಮಹತ್ವದ ಘಟನೆ ಎನ್ನಬಹುದು. ಅನ್ಯಾಯವಾದ ದಬ್ಬಾಳಿಕೆಯನ್ನು ಪ್ರತಿಭಟಿಸಿ ಧಿಕ್ಕರಿಸುವುದರಲ್ಲಿ ಮೊದಲಿಂದು ಈ ಪ್ರಾಂತ್ಯವು ಪ್ರಾರಂಭದಿಂದಲೂ ಖ್ಯಾತಿ ಪಡೆದಿದ್ದಿತು. ಸೆಪ್ಟೆಂಬರ್ ತಿಂಗಳಿನಲ್ಲಿ ಸ್ವಲ್ಪ ಕಾಲ ಈ ಗ್ರಾಮದವರು ಸಮಾನಾಂತರ ಸರ್ಕಾರವನ್ನು ಸ್ಥಾಪಿಸುವುದರಲ್ಲಿ ಯಶಸ್ವಿಯಾದರು. ಶಿವಮೊಗ್ಗದಲ್ಲಿ ವ್ಯಾಸಂಗ ಮಾಡುತ್ತಿದ್ದ ಈ ಗ್ರಾಮದ ಕೆಲವು ವಿದ್ಯಾರ್ಥಿಗಳು ಮರಳಿ ಗ್ರಾಮಕ್ಕೆ ಬಂದು ಗಾಂಧೀಜಿಯವರ ದಸ್ತಗಿರಿ, ಪೋಲೀಸು ದೌರ್ಜನ್ಯ ನಗರಗಳಲ್ಲಿ ಕಂಡುಬಂದಂಥ ಚಳವಳಿ ಮತ್ತು ಹೋರಾಟದ ಬಗ್ಗೆ ತಿಳಿಸಿದರು. ಬ್ರಿಟಿಷ್‌ರು ಭಾರತ ಬಿಟ್ಟು ತೊಲಗುವವರೆಗೆ ಗ್ರಾಮಸ್ಥರು ತಮ್ಮ ಮಕ್ಕಳನ್ನು ಶಾಲೆಗಳಿಗೆ ಕಳುಹಿಸಬಾರದೆಂದು ಈ ವಿದ್ಯಾರ್ಥಿಗಳು ಜನರಿಗೆ ತಿಳಿಯ ಹೇಳಲು ಸೆಪ್ಟೆಂಬರ್ ೨೪ರಂದು ಒಂದು ಮೆರವಣಿಗೆ ತೆಗೆದರು.[೧೨] ಗ್ರಾಮದ ದೇವಸ್ಥಾನದಲ್ಲಿ ನಿತ್ಯ ಸಭೆ ಸೇರುತ್ತಾ ಸರ್ಕಾರವನ್ನು ವಿರೋಧಿಸಬೇಕೆಂದು ತೀರ್ಮಾನಿಸಲಾಯಿತು. ಗ್ರಾಮದ ಪಟೇಲ ಮತ್ತು ಶಾನುಭೋಗರು ಖಾದಿ ಟೋಪಿಯನ್ನು ಧರಿಸಿ ತಮ್ಮ ಹುದ್ದೆಗಳಿಗೆ ರಾಜೀನಾಮೆ ನೀಡಬೇಕೆಂದು ಒತ್ತಾಯ ಪಡಿಸಲಾಯಿತು. 'ಬೇಜವಾಬ್ದಾರಿ ಸರ್ಕಾರ' ದ ಸೇವೆಯಲ್ಲಿರುವ ಅವರನ್ನು ಅವಹೇಳನ ಮಾಡಲಾಯಿತು.

ಈ ವಿಷಯ ತಿಳಿದು ಗ್ರಾಮಕ್ಕೆ ಬಂದ ಪೋಲೀಸಿನವರನ್ನು ಒರಟು ಉಪಚಾರಕ್ಕೆ ಈಡು ಮಾಡಿ ಬೀದಿಗಳಲ್ಲಿ ಮೆರವಣಿಗೆ ಮಾಡಲಾಯಿತು. ಗ್ರಾಮದ ಪ್ರವೇಶ ದ್ವಾರದಲ್ಲಿ 'ಸ್ವತಂತ್ರ ಹಳ್ಳಿ' ಎಂಬ ನಾಮ ಫಲಕವನ್ನು ತೂಗು ಹಾಕಿದರಲ್ಲದೆ...... ಬೇಜವಾಬ್ದಾರಿ ಸರ್ಕಾರಿ ಅಧಿಕಾರಿಗಳು ಗ್ರಾಮವನ್ನು ಪ್ರವೇಶಿಸಬಾರದು. ಒಂದು ವೇಳೆ ಪ್ರವೇಶಿಸಿದರೆ.....? ತಕ್ಕ ಶಿಕ್ಷೆಯನ್ನನ್ನು ಅನುಭವಿಸಬೇಕಾಗುತ್ತದೆ ಎಂದು ಸೂಚಿಸಲಾಯಿತು.[೧೩] ೨೮ನೇ ತಾರೀಖಿನಂದು ಅಮಲ್ದಾರರೊಡಗೂಡಿ ಪೋಲೀಸು ತಂಡವು ಗ್ರಾಮಕ್ಕೆ ಹೋಯಿತು. ತಾವೇ ಅಮಲ್ದಾರರೊಬ್ಬರನ್ನು ನೇಮಿಸಿಕೊಂಡಿದ್ದ 'ಸ್ವತಂತ್ರ' ಗ್ರಾಮಸ್ಥರು ಅಧಿಕಾರಿಗಳನ್ನು ಸುತ್ತುವರಿದರಲ್ಲದೆ ಪೋಲೀಸು ನಿರೀಕ್ಷಕರ ಟೊಪ್ಪಿಗೆಯನ್ನು ಒಬ್ಬ ಎಗರಿಸಿದ. ಇದರಿಂದ ಕುಪಿತರಾದ ಪೋಲೀಸು ನಿರೀಕ್ಷಕ ಗುಂಡು ಹಾರಿಸಿದಾಗ ಇಬ್ಬರಿಗೆ ಗಾಯವಾಯಿತು. ಆ ಘಟನೆಯನ್ನು ಕಂಡ ಪ್ರತ್ಯಕ್ಷದರ್ಶಿಗಳು ಉದ್ರೇಕ ಗೊಂಡರಲ್ಲದೆ ಜನ ಹೆಚ್ಚು ಹೆಚ್ಚು ಜಮಾಯಿಸಿ ಕೈಗೆ ಸಿಕ್ಕ ಆಯುಧದಿಂದ ಪೋಲೀಸು ನಿರೀಕ್ಷಕ ಹಾಗೂ ಅಮಲ್ದಾರನನ್ನು ಕೊಂದರು. ಉಳಿದವರಿಗೆ ತೀವ್ರತರವಾದ ಗಾಯವಾಯಿತು.[೧೪] ಕರ್ನಾಟಕದ ಸ್ವಾತಂತ್ರ್ಯ ಚಳವಳಿಯ ಇತಿಹಾಸದಲ್ಲಿ ಈ ಪ್ರಮಾಣದ ಘಟನೆಯೊಂದು ಜರುಗಿರಲಿಲ್ಲ.

ಇದರ ನಂತರ ಕಾಣಿಸಿಕೊಂಡ ಸರ್ಕಾರದ ಚಿತ್ರಹಿಂಸೆಯಲ್ಲಿ ಹೆಂಗಸರು ಮಕ್ಕಳು ಹಾಗೂ ವೃದ್ಧಾದಿಯಾಗಿ ಕ್ರೂರವಾದ ಶಿಕ್ಷೆಗೆ ಒಳಗಾದರು. ಸಬಲರು ಅನೇಕರು ಕದ್ದು ತಲೆ ತಪ್ಪಿಸಿಕೊಂಡರು. ಕಾಡುಗಳಲ್ಲಿ ಅವರನ್ನು ಹಿಡಿಯಲು ವಿಶೇಷವಾದ ಅನ್ವೇಷಣಾ ತಂಡಗಳನ್ನು ಹೊರಡಿಸಲಾಯಿತು. ಇಡೀ ಗ್ರಾಮವನ್ನೇ ಪೋಲೀಸಿನವರು ಲೂಟಿ ಮಾಡಿದರು, ಸ್ತ್ರೀಯರ ಮಾನಾಪಹರಣವಾಯಿತು. ತರುವಾಯ ಸರ್ಕಾರವು ವಿಶೇಷ ವಿಚಾರಣೆಗೆ ಆಜ್ಞೆ ಹೊರಡಿಸಿ ಅಂತಿಮವಾಗಿ ಐದು ಮಂದಿಗೆ ಗಲ್ಲುಶಿಕ್ಷೆಯಾಯಿತು. ಮತ್ತು ಸುಮಾರು ಉಳಿದ ಇಪ್ಪತ್ತು ಮಂದಿಗೆ ಕಠಿಣ ಶಿಕ್ಷೆಯಾಯಿತು – ಹತ್ತು ವರ್ಷದಿಂದ ಹಿಡಿದು ಜೀವಾವಧಿ ಶಿಕ್ಷೆಗೆ ಇವರನ್ನು ಗುರಿಪಡಿಸಲಾಯಿತು.[೧೫]

ಈಸೂರಿನ ಘಟನೆಗಳಿಂದ ಕಾಂಗ್ರೆಸ್ ನಾಯಕತ್ವ ಮೊದಲುಗೊಂಡು ಎಲ್ಲರಿಗೂ ದಿಗ್ಭ್ರಮೆಯಾಯಿತು. ಅಧಿಕಾರಿಗಳ ದಮನ ನೀತಿಯಿಂದ ರೊಚ್ಚಿಗೆದ್ದ ಜನರು ರಾಜ್ಯಾದ್ಯಂತ ಬುಡಮೇಲು ಚಟುವಟಿಕೆಗಳಲ್ಲಿ ತೊಡಗಿದರು. ರಾಜ್ಯದ ಜನತೆಯಲ್ಲಿ ಕ್ವಿಟ್ ಇಂಡಿಯಾ ಚಳವಳಿಯಿಂದ ರಾಷ್ಟ್ರೀಯ ಮನೋಭಾವ ಆಳವಾಗಿ ಬೇರೂರುವಂತಾಯಿತು. ಸರ್ಕಾರಿ ಅಂದಾಜಿನ ಪ್ರಕಾರ - ಇದು ನಿಜವಾದ ಅಂಕಿಅಂಶ ವಲ್ಲವೆಂಬುದು ಸರ್ವವಿಧಿತ - ೨೧ ಜನರು ಕೊಲ್ಲಲ್ಪಟ್ಟು ೨೦೩೬ ಮಂದಿ ಜೈಲುಶಿಕ್ಷೆಗೆ ಒಳಗಾದರು. ಏಕಾಧಿಪತ್ಯದ ರೀತಿರಿವಾಜುಗಳ ವಿರುದ್ಧ ಸೆಡ್ಡು ಹೊಡೆಯಲು ಕಾಂಗ್ರೆಸ್ ಪಕ್ಷಕ್ಕೆ ಧೈರ್ಯ ಬಂದಿತು; ಜನರ ಆಂತರ್ಯದ ಶಕ್ತಿಯಲ್ಲಿ ಅವರಿಗೆ ನಂಬಿಕೆಯುಂಟಾಯಿತು. ಭಾರತೀಯ ಸಮೂಹಕ್ಕೆ ಮೈಸೂರು ರಾಜ್ಯವು ಸೇರಲು ಇಚ್ಛೆ ಪ್ರಕಟಿಸುವ ಹಿನ್ನೆಲೆಯಲ್ಲಿ ರಾಜ್ಯದ ಜನತೆ ಹೋರಾಟವನ್ನು ಮುಂದುವರಿಸಲು ತೆಗೆದುಕೊಂಡ ನಿರ್ಧಾರ ಪ್ರಕಟವಾಗುತ್ತದೆ.

**-ಪ್ರೊ. ಎಸ್. ಚಂದ್ರಶೇಖರ್**

## ಟಿಪ್ಪಣಿಗಳು

೧ ಬಿಪಿನ್ ಚಂದ್ರ, ಇತ್ಯಾದಿ, ೧೯೧೯, ಪು. ೪೫೦-೪೫೨

೨ ಸಿಪಿಡಿ ದಾಖಲಿನ ಭಾಗಗಳು: ಸಂ. ೫/ಐಎನ್‌ಸಿ/೪೧-೧೧. ವಿಷಯ ಕಾಂಗ್ರೆಸ್ ಚಟುವಟಿಕೆಗಳು. ಬಾಂಬೆ ಕರ್ನಾಟಕದ ಪೋಲೀಸು ದಾಖಲೆಗಳು. ಜಿ.ಎಸ್. ಹಾಲಪ್ಪ ಅವರ ಗ್ರಂಥ (೧೯೬೬, ಪು. ೨೭೮)ದಲ್ಲಿ ಪುನರ್ಮುದ್ರಿತವಾಗಿದೆ. ಹಾಗೆಯೇ ಸೂರ್ಯನಾಥ್ ಯು. ಕಾಮತ್‌ರ ಗ್ರಂಥದಲ್ಲಿ, ಕ್ವಿಟ್ ಇಂಡಿಯಾ ಮೂವ್ ಮೆಂಟ್ ಇನ್ ಕರ್ನಾಟಕ.

೩ ಹ್ಯಾಪನಿಂಗ್ಸ್ ಇನ್ ಕರ್ನಾಟಕ, ಸಾರ್ವಜನಿಕ ಆವೃತ್ತಿ. ೯-೮-೧೯೪೨ ರಿಂದ ೨೦-೯-೧೯೪೨ರ ವರೆಗೆ ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯ ಸುದ್ದಿ ಪತ್ರಿಕೆಯ ಭಾಗಗಳು.

೪ ಕಡತ ಸಂಖ್ಯೆ. ೫/ಐಎನ್‌ಸಿ/೪೩. ಸಿಐಡಿ. ಪು.೭೭-೭೦, ದಿನಾಂಕ ೧ ಫೆಬ್ರವರಿ ೧೯೪೩

೫ ಕಡತ ಸಂಖ್ಯೆ. ೪೧. ಗೃಹ ಖಾತೆ. ವಿಶೇಷ ಶಾಖೆ. ಪತ್ರ ಸಂಖ್ಯೆ. ೪೯೦೫/೬, ದಿನಾಂಕ ೨೩ ಡಿಸೆಂಬರ್ ೧೯೪೩, ಕಾರವಾರ. ಬೊಂಬಾಯಿ ಸರ್ಕಾರ ಜಿಲ್ಲಾ ಮ್ಯಾಜಿಸ್ಟ್ರೇಟರಿಂದ ಗೃಹಖಾತೆ ಕಾರ್‍ಯದರ್ಶಿಯವರಿಗೆ.

೬ ಹೆಚ್ಚಿನ ವಿವರಗಳಿಗಾಗಿ ನೋಡಿ: ಕಡತ ಸಂ.೫/ಐಎನ್‌ಸಿ/೪೩: ಸಿಐಡಿ ಬೊಂಬಾಯಿ. ಬೆಳಗಾವಿ ಜಿಲ್ಲೆಯಲ್ಲಿ ಸೇನೆಯನ್ನು ಬಳಸಲು ಕರೆಯಲಾದ ಸಭೆಯ ಕಲಾಪಗಳು. ದಿನಾಂಕ: ೧೬ ಮಾರ್ಚ್ ೧೯೪೩

೭ ಹಾಲಪ್ಪ, ಜಿ.ಎಸ್.: ಸಂಪುಟ ೨, ಪು. ೩೦೭-೩೨೨

೮ ದ ಹಿಂದು ೧೭, ೨೪ ಆಗಸ್ಟ್ ೧೯೪೨

೯ ಮದರಾಸು ಮೇಲ್, ೧೮, ೨೦ ಆಗಸ್ಟ್ ೧೯೪೨

೧೦ ಮೇನರ್ ಜೆ. ೧೯೭೭, ಪು. ೪೧

೧೧ ದ ಹಿಂದೂ, ೨೮, ೨೯, ೩೦ ಸೆಪ್ಟಂಬರ್ ೧೯೪೨

೧೧ ರಹಸ್ಯ ದಾಖಲೆಗಳು. ಗೃಹಖಾತೆ, ಸಿಸಿ ೧೧೫-೪೨, ಸಿಬಿ ೧೬೦-೪೨೨. ಈಸೂರು ಖೂನಿ ಖಟ್ಲೆಯಲ್ಲಿ ವಿಶೇಷ ನ್ಯಾಯಾಧೀಶರು ನೀಡಿದ ತೀರ್ಪು.

೧೩ ೩ನೇ ಅಕ್ಟೋಬರ್ ೧೯೪೨ರಂದು ಹಣಕಾಸು ಹಾಗೂ ಕಂದಾಯ ಸಚಿವರು ಸಲ್ಲಿಸಿದ ರಹಸ್ಯ ವರದಿ.

೧೪ ಅದೇ

೧೫ ವಿವರಗಳಿಗಾಗಿ ನೋಡಿ: ವೀರತಪ್ಪ, ಕೆ.: 'ಈಸೂರ್ ಎಪಿಸೋಡ್' , ಕ್ಯೂ.ಜೆ.ಎಂ.ಎಸ್. ಸಂ. LXXIV. ಸಂಖ್ಯೆ. ೩ ಜುಲೈ-ಸೆಪ್ಟಂಬರ್. ಬೆಂಗಳೂರು ೧೯೮೩ ಪು. ೨೦೯-೨೨೦

## ಅಧ್ಯಾಯ : ಹದಿನಾರು

# ಸ್ವಾತಂತ್ರ್ಯದೆಡೆಗೆ

ಜಾಗತಿಕ ಮಟ್ಟದಲ್ಲಿ ಯುದ್ಧ ಕೊನೆಗೊಂಡು ರಾಜಕೀಯ ಪ್ರಜ್ಞೆಯುಳ್ಳ ಭಾರತೀಯರು ನೆಮ್ಮದಿಯ ನಿಟ್ಟುಸಿರು ಬಿಡುವಂತಾಯಿತು. ಯುದ್ಧದಿಂದಾಗಿ ಬ್ರಿಟಿಷ್ ವಸಾಹತುವಿಗೆ ಸೇರಿದ ರಾಷ್ಟ್ರವಾಗಿ ಭಾರತ ಬಹಳ ತೊಂದರೆ ಅನುಭವಿಸಬೇಕಾಯಿತು. ಹಣದುಬ್ಬರ, ಕ್ಷಾಮ ಹಾಗೂ ಕಾಳಸಂತೆಯ ಹೊಡೆತಕ್ಕೆ ಸಿಕ್ಕು ಜನಸಾಮಾನ್ಯನ ಬದುಕು ದುರ್ಭರವಾಯಿತು. ೧೯೪೫ರ ಮಧ್ಯಭಾಗದಲ್ಲಿ ರಾಷ್ಟ್ರವಾದಿ ನಾಯಕರ ಬಿಡುಗಡೆಯಾಯಿತು. ಕಂಗಾಲಾಗಿದ್ದ ತಮ್ಮ ಜನರು ತಮಗೆ ಅದ್ದೂರಿಯ ಸ್ವಾಗತವನ್ನು ಕೋರಲು ಸಜ್ಜಾಗಿದ್ದುದನು ಗಮನಿಸಿ ಅವರಿಗೆ ಆಶ್ಚರ್ಯಭರಿತ ಆನಂದವಾಯಿತು.

ಕ್ಲೆಮೆಂಟ್ ಆಟ್ಲೀಯವರು ಚುಕ್ಕಾಣಿ ಹಿಡಿದಿದ್ದ ಲೇಬರ್ ಪಕ್ಷವು ಬ್ರಿಟನ್ನಿನಲ್ಲಿ ಆಳ್ವಿಕೆ ನಡೆಸಿತು. ಸಮರೋತ್ತರ ಜಗತ್ತಿನಲ್ಲಿ ಘನತೆಯನ್ನು ಕಳೆದುಕೊಳ್ಳುವುದಕ್ಕೆ ಅಂಜಿದ ಬ್ರಿಟನ್ ಭಾರತೀಯ ಸಮಸ್ಯೆಯ ಪರಿಹಾರಕ್ಕೆ ಮುಂದಾಗಿತ್ತು.

ಕಾಂಗ್ರೆಸ್ ಮತ್ತು ಇತರ ಮಿತ್ರ ಪಕ್ಷಗಳ ಮೇಲಿನ ನಿಷೇಧವನ್ನು ತೆಗೆದು ಚುನಾವಣೆಗಳು ಘೋಷಿತವಾದವು. ಕರ್ನಾಟಕದ ಜನರು ಉತ್ಸಾಹದಲ್ಲಿ ಭಾಗವಹಿಸಿ ಕಾಂಗ್ರೆಸ್ ಪಕ್ಷ ಶೇಕಡಾ ೬೦ ಭಾಗ ಸ್ಥಾನಗಳನ್ನು ಗೆಲ್ಲುವಂತೆ ಮಾಡಿದರು. ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷವು ೧೯೪೨-೪೫ರ ಸರ್ಕಾರದ ದೌರ್ಜನ್ಯ ಹಾಗೂ ಸುಭಾಶ್‌ಚಂದ್ರ ಭೋಸರ 'ಭಾರತೀಯ ರಾಷ್ಟ್ರೀಯ ಸೇನೆ' (Indian National Army)ಯ ವಿಚಾರಣೆ- ಈ ಎರಡು ಸಂಗತಿಗಳನ್ನು ಮುಂದೆ ಮಾಡಿತು. ಎರಡನೆಯ ಅಂಶವು ಬಹಳ ಪ್ರಾಮುಖ್ಯತೆಯನ್ನು ಪಡೆದುಕೊಂಡಿತ್ತು. ಐಎನ್‌ಎದ ಪ್ರತಿಯೊಬ್ಬ ಸೈನಿಕನ ಬಗ್ಗೆ ರಾಷ್ಟ್ರದ ಪ್ರತಿಯೊಬ್ಬರೂ ಕಳಕಳಿ ಹೊಂದಿದ್ದರಲ್ಲದೆ ಐಎನ್‌ಎದ 'ರಾಷ್ಟ್ರಪ್ರೇಮಿ' ಗಳನ್ನು 'ರಾಷ್ಟ್ರದ್ರೋಹಿ' ಗಳನ್ನಾಗಿ ನೋಡಬಾರದೆಂಬುದು ಅವರ ಆಗ್ರಹವಾಗಿತ್ತು. ನವೆಂಬರ್ ೧೨ನೇ ದಿನವನ್ನು ಐಎನ್‌ಎ ದಿನವನ್ನಾಗಿಯೂ ೧೯೪೫ರ ೫-೧೧ ವಾರವನ್ನು ಐಎನ್‌ಎ ಸಪ್ತಾಹವಾಗಿಯೂ ರಾಷ್ಟ್ರಾದ್ಯಂತ ಆಚರಿಸಿದರು. ಜನರ ಉತ್ಸಾಹ ಮತ್ತು ಆತಂಕವನ್ನು ಗಮನಿಸುತ್ತಾ ನೆಹರೂ ಹೀಗೆ ಹೇಳಿದ್ದರು: "ಭಾರತ ಚರಿತ್ರೆಯಲ್ಲಿ ಹಿಂದೆಂದೂ ಕಾಣದ ರೀತಿಯಲ್ಲಿ ಈ ರಾಷ್ಟ್ರದ ಭಿನ್ನ ಜನ ಸಮುದಾಯ ಆಜಾದ್ ಹಿಂದ್ ಫೌಜ್‌ನ ವಿಷಯದಲ್ಲಿ ಏಕರೀತಿಯ ಭಾವನೆಯನ್ನು ಪ್ರಕಟಿಸಿದ್ದಾರೆ"[೧] ವಿವಿಧ ಪಕ್ಷಗಳ ಜನರು ಐಎನ್‌ಎ ನಿಧಿಗಾಗಿ ಕಾಣಿಕೆ ನೀಡಿದರು. ಒಂದರ್ಥದಲ್ಲಿ ಐಎನ್‌ಎ ವಿಷಯವಾಗಿ ವಸಾಹತು-ವಿರೋಧದ ಅಲೆ ಎದ್ದು ಕಂಡಿತು. ಐಎನ್‌ಎ ಖೈದಿಗಳ ವಿಷಯವಾಗಿ ಸೇನೆಯಲ್ಲಿಯೂ ಸಹಾನುಭೂತಿ ಇತ್ತು.

ಭಾರತ ಸರ್ಕಾರ ಐಎನ್‌ಎ ವಿಚಾರಣೆಯನ್ನು ಮುಂದುವರಿಸಿದಾಗ ೧೯೪೫-೪೬ನೇ ಇಸವಿಯಲ್ಲಿ ವಸಾಹತು ವಿರೋಧಿ ಭಾವನೆ ತನ್ನ ಪರಾಕಾಷ್ಠೆಯನ್ನು ಮುಟ್ಟಿತು. ಕಾರ್ಮಿಕರು ಹಾಗೂ ವಿದ್ಯಾರ್ಥಿಗಳಿಂದ ಹಿಂಸಾತ್ಮಕವಾದ ಪ್ರದರ್ಶನಗಳು ಸರ್ವೇಸಾಮಾನ್ಯವಾದ ದೃಶ್ಯಗಳಾಗಿದ್ದವು. ಭಾರತದಲ್ಲಿ ಬ್ರಿಟಿಷರ ಆಡಳಿತ ೧೫ನೇ ಆಗಸ್ಟ್ ೧೯೪೭ರಂದು ಕೊನೆಯಾಯಿತಾದರೂ ೧೮ನೇ ಫೆಬ್ರವರಿ ೧೯೪೬ರಂದು ರಾಯಲ್ ಇಂಡಿಯನ್ ನೇವಿಯು ಐಎನ್‌ಎದ ವಿಚಾರಣೆಯನ್ನು ಪ್ರತಿಭಟಿಸಿದಾಗಲೇ ವಸಾಹತುಶಾಹಿಯ ಅವಸಾನದ ನಾಂದಿಯಾಯಿತೆಂದು ಹೇಳಬಹುದು. ಭಾರತೀಯ ರಾಷ್ಟ್ರವಾದ ವಸಾಹತಶಾಯಿಯ ವಿರುದ್ಧ ತನ್ನ ಸಮರದ ಕೊನೆಯ ಹಂತವನ್ನು ಮುಟ್ಟುತ್ತಿರುವಾಗ ಸರ್ಕಾರ ಹೆಚ್ಚು ಕಡಿಮೆ ಸಂಪೂರ್ಣವಾಗಿ ಅಸ್ತವ್ಯಸ್ತಗೊಂಡಿತ್ತು. ವಸಾಹತು ಸರ್ಕಾರವು ಯಾರ ನಿಷ್ಠೆಯ ಮೇಲೂ ಅವಲಂಬಿಸುವ ಸ್ಥಿತಿಯಲ್ಲಿರಲಿಲ್ಲ. ಅಂತರರಾಷ್ಟ್ರೀಯ ಮಟ್ಟದಲ್ಲಿ ಆಗಿದ್ದ ಬೆಳವಣಿಗೆಗಳು ಬ್ರಿಟನ್ನಿನ ಆಯ್ಕೆಯಲ್ಲಿ ಹೆಚ್ಚಿನ ಅವಕಾಶವನ್ನೇನೂ ನೀಡಿರಲಿಲ್ಲ. ತನ್ನ ಹಳತಾದ ವಿಧಾನಗಳಿಂದ ಹೆಚ್ಚು ದಿನ ಆಡಳಿತ ನಡೆಸುವ ಸ್ಥಿತಿಯಲ್ಲಿರಲಿಲ್ಲ. ತನಗೆ ಸಾಧ್ಯವಾದಷ್ಟು ಗೌರವಾನ್ವಿತವಾಗಿ ಅದು ಭಾರತವನ್ನು ಬಿಡಬೇಕಾದ ಅನಿವಾರ್ಯ ಸ್ಥಿತಿ ನಿರ್ಮಾಣವಾಗಿತ್ತು. ಅಧಿಕಾರದ ಹಸ್ತಾಂತರಕ್ಕಾಗಿ ಶೀಘ್ರವಾಗಿ ವಿಧಾನಗಳನ್ನು ಕಂಡುಹಿಡಿಯಬೇಕಾಗಿತ್ತು. ಲಂಡನ್ನಿನ ಲೇಬರ್ ಸರ್ಕಾರದ ಈಗಿನ ಮುಖ್ಯವಾದ ಉದ್ದೇಶವೆಂದರೆ ಸ್ವಾತಂತ್ರ್ಯೋತ್ತರ ಭಾರತದೊಡನೆ ಬ್ರಿಟನ್ನಿನ ಸಂಬಂಧವೇ ಆಗಿತ್ತು. ಹಾಗಾಗಿ ಅಧಿಕಾರ ಹಸ್ತಾಂತರದ ವಿಧಾನಗಳನ್ನು ರಚಿಸಲು ೧೯೪೬ರ ಮಾರ್ಚಿಯಲ್ಲಿ ಕ್ಯಾಬಿನೆಟ್ ಮಿಷನ್ನನ್ನು ಇಲ್ಲಿಗೆ ಕಳುಹಿಸಲಾಯಿತು. ರಾಷ್ಟ್ರೀಯ ಸರ್ಕಾರವನ್ನು ರಚಿಸಿ ಸ್ವತಂತ್ರ ಭಾರತದ ಸಂವಿಧಾನವನ್ನು ರೂಪಿಸುವುದಕ್ಕಾಗಿ ಸಂವಿಧಾನಘಟನಾ ಸಭೆಯನ್ನು ರಚಿಸಲಾಯಿತು. ಮುಸ್ಲಿಂ ಲೀಗ್ ಪಕ್ಷವು ಕೋಮು ಗಲಭೆಗಳನ್ನು ಹುಟ್ಟು ಹಾಕಿ ಪಾಕಿಸ್ತಾನದ ರಚನೆಗೆ ಒತ್ತಾಯಿಸಿದಾಗ, ರಾಷ್ಟ್ರವಿಭಜನೆಗಾಗಿ ಕಾಂಗ್ರೆಸ್ ನಾಯಕತ್ವವು ಅನಿವಾರ್ಯವಾಗಿ ಒಪ್ಪಬೇಕಾಯಿತು.

ಕೆಲವೇ ತಿಂಗಳುಗಳಲ್ಲಿ ಭಾರತದಿಂದ ವಸಾಹತುಶಾಹಿ ಕಾಲ್ತೆಗೆಯುವ ಹಂತದಲ್ಲಿದ್ದಾಗ ಸಂಸ್ಥಾನಗಳ ಸ್ಥಿತಿಯು ಡೋಲಾಯಮಾನವಾಗಿತ್ತು. ಕರ್ನಾಟಕದ ರಾಷ್ಟ್ರವಾದಿಗಳು, ಅದರಲ್ಲೂ ವಿಶೇಷವಾಗಿ ಮೈಸೂರಿನವರು ತುಂಬಾ ಆತಂಕಗೊಂಡಿದ್ದರು: ಸುಮಾರು ಎರಡು ದಶಕಗಳ ಹಿಂದೆಯೇ ರಾಷ್ಟ್ರಮಟ್ಟದಲ್ಲಿ ಕಾಂಗ್ರೆಸ್ ಪಕ್ಷವು ತಮ್ಮ ನೆರೆಹೊರೆಯ ಪ್ರೆಸಿಡೆನ್ಸಿಗಳಲ್ಲಿ ರಾಜ್ಯಗಳು ಲೀನವಾಗಿ ತಮ್ಮ ಪ್ರತ್ಯೇಕತೆಯನ್ನು ಕಳೆದುಕೊಳ್ಳಬೇಕೆಂದು ತಿಳಿಸಿತ್ತು.

ಮೈಸೂರಿನಲ್ಲಿ ಕಾಂಗ್ರೆಸ್ ಪಕ್ಷವು ತನ್ನ ನೆಲೆಯನ್ನು ಅಚ್ಚಳಿಯದಂತೆ ಉಳಿಸಿಕೊಂಡು ತುಂಬಾ ಚಟುವಟಿಕೆಯಿಂದ ಇದ್ದಿತು. ಸಮರೋತ್ತರ ಕಾಲದಲ್ಲಿ ಕಾಂಗ್ರೆಸ್ಸೇತರರ ಧೋರಣೆಯಲ್ಲಿ ದೃಷ್ಟಿಗೆ ಗೋಚರವಾಗುವಂಥ ಬದಲಾವಣೆಗಳು ಕಾಣಿಸಿಕೊಂಡವು. ಶಾಸನ ಸಭೆಯಲ್ಲಿ ಅಥವಾ ಹೊರಗೆ, ಸರ್ಕಾರವನ್ನು ಸೋಲಿಸಿ, ಸಂದರ್ಭ ಸಿಕ್ಕಾಗಲೆಲ್ಲಾ ಸರ್ಕಾರಕ್ಕೆ ಮುಜುಗರವುಂಟುಮಾಡುವ ಕ್ರಿಯೆಯಲ್ಲಿ ಅವು ಕಾಂಗ್ರೆಸ್ಸಿನ ಪರವಾಗಿ ನಿಂತವು.[೨] ಆದರೆ ಮೈಸೂರು ಸರ್ಕಾರ ಮಾತ್ರ ಎಂದಿನಂತೆ ತನ್ನ ತಾಟಸ್ಥ್ಯವನ್ನು ಪ್ರದರ್ಶಿಸಿತ್ತು.

೧೯೪೫ರ ಸೆಪ್ಟಂಬರ್‌ನ ತನಕ ಕಾಂಗ್ರೆಸ್ಸಿನ ಮೇಲಿನ ಬಹಿಷ್ಕಾರ ಮುಂದುವರಿಯಿತು; ಆದರೆ ಪ್ರಮುಖವಾದ ನಗರಗಳಲ್ಲಿ ಸಭೆ ನಡೆಸಬಾರದೆಂಬ ನಿರ್ಬಂಧ ಆ ನಂತರವೂ ಮುಂದುವರಿಯಿತು. ಸರ್ಕಾರದ ನಿರಂಕುಶ ನೀತಿಯಿಂದ ಬೇಸತ್ತ ಕಾಂಗ್ರೆಸ್ ಪಕ್ಷ ಹೋರಾಟದ ಬೇರೆ ದಾರಿಯನ್ನು ಅನ್ವೇಷಿಸುವಂತಾಯಿತು. ರಾಜ್ಯದಲ್ಲಿದ್ದಂಥ ಕ್ಷಾಮ ಪರಿಸ್ಥಿತಿ ಮತ್ತು ಅದನ್ನು ಸರ್ಕಾರ ನಿಭಾಯಿಸಲಾಗದ ಕ್ರಮವನ್ನು ಬಳಸಿಕೊಂಡು ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸಲು ಮುಂದಾಯಿತು. ಆಡಳಿತದ

ಭ್ರಷ್ಟತೆಯನ್ನು ಎತ್ತಿ ತೋರಿಸಲಾಯಿತು. ರಾಜ್ಯದಲ್ಲಿ ಜನರ ಮನಸ್ಸಿನ ಮೇಲೆ ಕಾಂಗ್ರೆಸ್ ಪಕ್ಷವು ಉಂಟು ಮಾಡಿದ ಪ್ರಭಾವದಿಂದಾಗಿ ಸರ್ಕಾರವು ಭ್ರಷ್ಟಾಚಾರ–ವಿರೋಧಿ ಕ್ರಮಗಳ ಶಿಫಾರಸ್ಸಿಗಾಗಿ ಒಂದು ಆಯೋಗವನ್ನೇ ರಚಿಸುವಂತಾಯಿತು.

೧೯೪೬ರ ಜುಲೈನಲ್ಲಿ ಆಗ ದಿವಾನರಾಗಿದ್ದ ಎನ್.ಮಾಧವರಾವ್ ಅವರ ಸ್ಥಾನದಲ್ಲಿ ಆರ್ಕಾಟ್ ರಾಮಸ್ವಾಮಿ ಮುದಲಿಯಾರ್‌ರವರನ್ನು ನೇಮಕ ಮಾಡಲಾಯಿತು. ಬ್ರಾಹ್ಮಣೇತರ ಜಸ್ಟೀಸ್ ಪಕ್ಷದ ಹಿಂದಿನ ನಾಯಕರಾಗಿದ್ದ ರಾಮಸ್ವಾಮಿ ಮುದಲಿಯಾರ್‌ರವರು ಆಗ ಕಾಂಗ್ರೆಸ್‌ನಲ್ಲಿದ್ದ ತಮ್ಮ ಹಿತೈಷಿಗಳನ್ನು ಹೊರಗೆಳೆಯುವರೆಂದು ತಿಳಿಯಲಾಗಿತ್ತು. ಆದರೆ ರಾಜ್ಯದೊಳಗೆ ಮತ್ತು ರಾಷ್ಟ್ರಮಟ್ಟದಲ್ಲಿ ಆಗಿದ್ದ ಬೆಳವಣಿಗೆಗಳ ಫಲವಾಗಿ ಅಂಥ ಆಶಯ ಒಂದು ಭ್ರಮೆಯೇ ಆಗಿತ್ತು. ೧೯೩೦–೪೬ರ ಅವಧಿಯಲ್ಲಿ ಸರ್ಕಾರ ಅನುಸರಿಸಿದ್ದ ದಮನಕಾರಿ ನೀತಿಯ ಪರಿಣಾಮವಾಗಿ ಕಾಂಗ್ರೆಸ್ ಪಕ್ಷದ ಬ್ರಾಹ್ಮಣೇತರರು ತುಂಬಾ ಕಷ್ಟವನ್ನನುಭವಿಸಿದ್ದರು.

ದೆಹಲಿಯಲ್ಲಿ ನೆಹರೂರವರು ಮಧ್ಯಂತರ ಸರ್ಕಾರವನ್ನು ರಚಿಸಿದಾಗ ಮೈಸೂರಿಗರಿಗೆ ಸ್ವಲ್ಪ ಧೈರ್ಯ ಬಂದಿತು. ಬ್ರಿಟನ್ ೧೫ನೇ ಆಗಸ್ಟ್ ೧೯೪೭ರಂದು ವಿಧ್ಯುಕ್ತವಾಗಿ ಅಧಿಕಾರವನ್ನು ಹಸ್ತಾಂತರಿಸುವುದೆಂದು ಮೌಂಟ್ ಬ್ಯಾಟನ್ ೧೯೪೭ರ ಜೂನ್ ೪ನೇ ತಾರೀಖು ಘೋಷಿಸಿದಾಗ ಮೈಸೂರಿನ ವಿಲೀನದ ಗತಿಯನ್ನು ತೀವ್ರಗೊಳಿಸಬೇಕಾಯಿತು. ಹಾಗಾಗಿ ಮುಂದಿನ ಕಾರ್ಯಕ್ಕಾಗಿ ಎಲ್ಲಾ ತಯಾರಿಯನ್ನು ನಡೆಸಿಕೊಳ್ಳತೊಡಗಿದರು. ವಿಲೀನದ ವಿಷಯವಾಗಿ ತೀರ್ಮಾನ ತೆಗೆದುಕೊಳ್ಳಲು ಸರ್ಕಾರ ಒಂದು ತಿಂಗಳ ಕಾಲ ವ್ಯಯ ಮಾಡಿದಾಗ ಸಹಜವಾಗಿಯೇ ಕಾಂಗ್ರೆಸ್ಸಿನವರಿಗೆ ದಿಗಿಲುಂಟಾಯಿತು. ಸರ್‌ದಾರ್ ಪಟೇಲರ ಅಧೀನದ ಸಚಿವಾಲಯವು ವಿದೇಶಿ ವ್ಯವಹಾರಗಳು ಹಾಗೂ ರಕ್ಷಣೆಯನ್ನುಳಿದು ಮಿಕ್ಕಂತೆ ಆಂತರಿಕ ನಿಯಂತ್ರಣವನ್ನು ದೇಶೀಯ ರಾಜರಿಗೆ ನೀಡಲಾಗುವುದೆಂದು ಘೋಷಿಸಿದಾಗ, ಮೈಸೂರಿನ ಜನರು ಆತಂಕದ ಕ್ಷಣಗಳನ್ನು ಕಳೆದರು; ಆದರೆ ಮೈಸೂರು ಸರ್ಕಾರ ಮಾತ್ರ ಅಚಲವಾಗಿತ್ತು.

ಆದಾಗ್ಯೂ ಆಗಸ್ಟ್ ೧೫ರಂದು ಸ್ವಾತಂತ್ರ್ಯ ದಿನವನ್ನು ಆಚರಿಸಲಾಯಿತು. ಆಡಳಿತವನ್ನು ಒಪ್ಪಿಸಲು ಒಂದು ಹೋರಾಟವನ್ನೇ ಮಾಡಬೇಕಾಗಬಹುದೆಂದು ಕಾಂಗ್ರೆಸ್ ನಾಯಕರು ಭಾವಿಸಿದ್ದರು, ಹಾಗಾಗಿ ಆ ದಿಶೆಯಲ್ಲಿ ಸಿದ್ಧತೆಯಾಯಿತು. ರಾಜ್ಯದ ಎಲ್ಲ ಮೂಲೆಗಳಿಂದ ಜಾಥಾ ಹೊರಟು ಮೈಸೂರಿನಲ್ಲಿ ಸೇರುವುದೆಂದು ತೀರ್ಮಾನಿಸಿ ಇದಕ್ಕೆ 'ಮೈಸೂರು ಚಲೋ' ಎಂದು ನಾಮಕರಣ ಮಾಡಿದರು. ಸೆಪ್ಟೆಂಬರ್ ೪ ರಂದು ಜಾಥಾ ಹೊರಟು ೧೩ನೇ ತಾರೀಖಿನಂದು ಮೈಸೂರು ತಲುಪಿ ದಸ್ತಗಿರಿಯಾಗುವುದೆಂದು ತೀರ್ಮಾನಿಸಲಾಯಿತು. ಮಹಾರಾಜರು ಸಂವಿಧಾನಬದ್ಧ ಆಳರಸರಾಗಬೇಕೆಂದು ಒತ್ತಾಯಿಸಲು ಈ ಕ್ರಮ ಅನುಸರಿಸಲಾಯಿತು.

ಈ ಜಾಥಾಕ್ಕೆ ಜನರು ಅದ್ಭುತವಾಗಿ, ವ್ಯಾಪಕವಾಗಿ ಸ್ಪಂದಿಸಿದರು. ಕಾರ್ಮಿಕರು ಈ ಜಾಥಾದ ಮುಂಚೂಣಿಯಲ್ಲಿದ್ದರು. ಸೆಪ್ಟೆಂಬರ್ ೧ನೇ ತಾರೀಖು ಮುಂಜಾನೆ ಏಳುಗಂಟೆಗೆ ಬಿನ್ನಿಮಿಲ್ಲಿನ ದ್ವಾರದಿಂದ ಹೊರಟು ನಗರ ಪ್ರದಕ್ಷಿಣೆ ಮಾಡಿ ಸುಭಾಸ್‌ನಗರದ ಮೈದಾನದಲ್ಲಿ ಸೇರಿದರು. ರಾಜ್ಯದ ಪ್ರತಿಯೊಂದು ಹಳ್ಳಿಯಲ್ಲೂ ಕಾಂಗ್ರೆಸ್ ಧ್ವಜವನ್ನು ಹಾರಿಸಲಾಯಿತು ಹಾಗೂ ಮೈಸೂರಿನಲ್ಲಿ ಏಕಾಧಿಪತ್ಯವನ್ನು ಕೊನೆಗೊಳಿಸಿ ಸ್ವತಂತ್ರ ಮೈಸೂರು ಸರ್ಕಾರದ ಸ್ಥಾಪನೆಗಾಗಿ ಪ್ರತಿಜ್ಞೆ ಮಾಡಲಾಯಿತು. ಜವಾಬ್ದಾರಿ ಸರ್ಕಾರದ ಸ್ಥಾಪನೆಗಾಗಿ ಸಹಿ ಸಂಗ್ರಹಣೆಯನ್ನು ಪ್ರಾರಂಭಿಸಿದರು.

ಆಗ ಮದರಾಸು ಪ್ರೆಸಿಡೆನ್ಸಿಯಲ್ಲಿದ್ದ ಗಡಿ ಪಟ್ಟಣವಾದ ಹಿಂದೂಪುರದಲ್ಲಿ 'ಆಜಾದ್ ಮೈಸೂರು ಸರ್ಕಾರ'ವನ್ನು ರಚಿಸಿ ಘೋಷಣೆ ಹೊರಡಿಸಲಾಯಿತು. ಮೈಸೂರು ಕಾಂಗ್ರೆಸ್ಸಿನ ಎಲ್ಲ ಪ್ರಮುಖ ನಾಯಕರೂ ಆಜಾದ್ ಸರ್ಕಾರದಲ್ಲಿ ಇರಬೇಕೆಂದು ತೀರ್ಮಾನಿಸಲಾಯಿತು. ಚಳವಳಿಯ ಗತಿ ಹೆಚ್ಚಿದಂತೆಲ್ಲಾ ದಿವಾನರಾಗಿದ್ದ ರಾಮಸ್ವಾಮಿ ಮುದಲಿಯಾರ್‌ರ ನೇತೃತ್ವದ ಆಡಳಿತವು ಸನ್ನಿವೇಶವನ್ನು ತಹಬಂದಿಗೆ ತರಲು ಸನ್ನದ್ಧವಾಯಿತು. ಆಜಾದ್ ಸರ್ಕಾರದ ನಾಯಕರುಗಳ ವಿರುದ್ಧ 'ಕಂಡಲ್ಲಿ ಗುಂಡು' ಆದೇಶ ಹೊರಡಿಸಲಾಯಿತು. ಮೊದಲೇ ಯೋಜಿಸಿದ್ದಂತೆ ಸೆಪ್ಟಂಬರ್ ೪ ರಂದು ಜಾಥಾಗಳು ಹೊರಟ ಹಿನ್ನೆಲೆಯಲ್ಲಿ ರಾಜ್ಯಮಟ್ಟದ ಎಲ್ಲಾ ನಾಯಕರನ್ನು ಬಂದಿಸಿದಾಗ ಜನ ರೊಚ್ಚಿಗೆದ್ದರು. ಆ ನಡುವೆ ಸೆಪ್ಟಂಬರ್ ೬ನೇ ತಾರೀಖಿನಂದು ಜವಾಬ್ದಾರಿ ಸರ್ಕಾರವನ್ನು ಸ್ಥಾಪಿಸಬಹುದೆಂದು ಮಹಾರಾಜರು ಪ್ರಕಟಣೆ ಹೊರಡಿಸಿದರು.[೩] ಆದರೆ ಸಾರ್ವಜನಿಕರ ಚಳವಳಿಯಲ್ಲಿ ಯಾವುದೇ ವಿಧವಾದ ನಿಲುಗಡೆ ಕಾಣಲಿಲ್ಲ. ನಾಯಕರ ದಸ್ತಗಿರಿ ಹಿನ್ನೆಲೆಯಲ್ಲಿ ಬೆಂಗಳೂರು ಹಾಗೂ ಮೈಸೂರು ನಗರಗಳಲ್ಲಿ ಹಿಂಸಾಚಾರ ನಡೆಯಿತು. ಪೋಲೀಸು ಗೋಲಿಬಾರಿನಲ್ಲಿ ಅನೇಕರಿಗೆ ಗಾಯಗಳಾದವು ಕೆಲವರು ಪ್ರಾಣ ಕಳೆದುಕೊಂಡರು. ನಿಷೇಧಾಜ್ಞೆಯನ್ನು ವಿಧಿಸಿದ್ದಾಗಿಯೂ ಬೆಂಗಳೂರು ನಗರ ನಿಯಂತ್ರಣವನ್ನು ಮೀರಿಬಿಟ್ಟಿತ್ತು.[೪] ಸರ್ಕಾರದ ವಿಶ್ವಾಸಾರ್ಹತೆ ಸಂಪೂರ್ಣವಾಗಿ ಕಳೆದು ಹೋಗಿ ೭ನೇ ತಾರೀಖಿನಂದು ರೈಲ್ವೆ ನೌಕರರು ಮುಷ್ಕರ ಹೂಡಿದ ಪರಿಣಾಮವಾಗಿ ಎಲ್ಲ ರೀತಿಯ ಸಾರಿಗೆ ಮತ್ತು ಸಂಪರ್ಕವು ಅಸ್ತವ್ಯಸ್ತಗೊಂಡಿತು. ಚಳವಳಿಯಿಂದ ಉಂಟಾದ ಅರಾಜಕತೆಯಲ್ಲಿ ಸೆರೆವಾಸಿಗಳಿಗೆ ಊಟ ಹಾಕಲು ಸಾಕಾಗುವಷ್ಟು ಧಾನ್ಯವನ್ನು ಸಂಗ್ರಹಿಸಲು ಸರ್ಕಾರಕ್ಕೆ ಸಾಧ್ಯವಾಗದ ಸ್ಥಿತಿ ನಿರ್ಮಾಣವಾಯಿತು. ದೃಢ ನಿಲುವನ್ನು ತಾಳಿದ ಜನತೆಯ ಮೇಲೆ ಮೈಸೂರು ಸರ್ಕಾರ ಮಾಡಿದ ದಬ್ಬಾಳಿಕೆಯನ್ನು ಖಂಡಿಸಿ ರಾಷ್ಟ್ರಾದ್ಯಂತ ಕಾಂಗ್ರೆಸ್ ನಾಯಕರು ಪ್ರಕಟಣೆ ಹೊರಡಿಸಿದರು. ನೆರೆಹೊರೆ ರಾಜ್ಯಗಳಿಂದ ಮೈಸೂರಿಗೆ ಬರತೊಡಗಿದ ಕಾಂಗ್ರೆಸ್ ಕಾರ್ಯಕರ್ತರು ಸೆಪ್ಟೆಂಬರ್ ಎರಡನೇ ವಾರದ ಹೊತ್ತಿಗೆ ಸರ್ಕಾರದ ಪಾಲಿಗೆ ತಲೆನೋವಾಗಿ ಕಾಡತೊಡಗಿದರು. ಪರಿಸ್ಥಿತಿ ಬಿಗುವಿನಿಂದ ಕೂಡಿರುವಾಗಲೇ ಬೆಂಗಳೂರಿನ ಆರಕ್ಷಕ ಬಲ ಮುಷ್ಕರ ಹೂಡಿರುವ ಸುದ್ದಿಯಿಂದಾಗಿ ಪರಿಸ್ಥಿತಿ ಇನ್ನಷ್ಟು ಹದಗೆಟ್ಟಿತು.

ಗ್ರಾಮೀಣ ಜನರು ಎಲ್ಲೆಡೆ ಪ್ರತಿ ಸರ್ಕಾರ ಅಥವಾ ಸಮಾನಾಂತರ ಸರ್ಕಾರಗಳನ್ನು ಸ್ಥಾಪಿಸಿದ ಪರಿಣಾಮವಾಗಿ ಸರ್ಕಾರ ತನ್ನ ನಿಯಂತ್ರಣ ಕಳೆದುಕೊಂಡಿತು. ಜನರ ಐಕ್ಯತೆಯನ್ನು ಮುರಿಯುವ ದಿಶೆಯಲ್ಲಿ ದಿವಾನರು ಎಲ್ಲ ಕಸರತ್ತನ್ನೂ ಮಾಡಿದರು; ಬಾಡಿಗೆ ಗೂಂಡಾಗಳ ಸಹಾಯದಿಂದ ಪತ್ರಕರ್ತರನ್ನು ತಳಿಸುವ ಮಟ್ಟಕ್ಕೂ ಹೋದರು.[೫] ಈ ವಿಧಾನಗಳನ್ನು ಅನುಸರಿಸಿದ ಫಲವಾಗಿ ಸರ್ಕಾರದ ಆಡಳಿತದ ಬಗ್ಗೆ ಸಹಾನುಭೂತಿ ಹೊಂದಿದ್ದವರೂ ಕೂಡ ಅದರಿಂದ ದೂರವಾಗುವ ಸನ್ನಿವೇಶವೇರ್ಪಟ್ಟಿತು.

ಜನರ ಸದೃಢವಾದ ಹೋರಾಟದ ಎದುರು ಸರ್ಕಾರಕ್ಕೆ ಯಾವುದೇ ಪರ್ಯಾಯಮಾರ್ಗ ಉಳಿಯದ ಸಂದರ್ಭದಲ್ಲಿ ಸರ್ಕಾರ ಮಣಿಯುವುದು ಅನಿವಾರ್ಯವಾಯಿತು. ಬಂಧಿಸಲ್ಪಟ್ಟ ನಾಯಕರನ್ನು ಬಿಡುಗಡೆ ಮಾಡಿ ಮಾತುಕತೆ ಪ್ರಾರಂಭವಾಯಿತು. ೧೯೪೭ರ ಅಕ್ಟೋಬರ್ ೧೨ನೇ ತಾರೀಖಿನಂದು ರಾಜ್ಯದ ಸಂವಿಧಾನಘಟನಾ ಸಭೆಯ ಚುನಾವಣೆಗೆ ಒಪ್ಪಿದ ಸರ್ಕಾರ ಒಟ್ಟು ಒಂಭತ್ತು ಸಚಿವರ ಪೈಕಿ ಆರು ಮಂದಿ ಚುನಾಯಿತ ಸಚಿವರನ್ನು ಒಳಗೊಳ್ಳುವುದಾಗಿ ತೀರ್ಮಾನಿಸಿತು. ಹಾಗಾಗಿ ಮೈಸೂರಿನಲ್ಲಿ ಏಕಾಧಿಪತ್ಯವು ಕೊನೆಗೊಂಡು ಜವಾಬ್ದಾರಿ ಸರ್ಕಾರವು ಸ್ಥಾಪನೆಯಾಗಿ ಭಾರತ ಒಕ್ಕೂಟದಲ್ಲಿ ಸೇರ್ಪಡೆಯಾದ ಸಂದರ್ಭದಲ್ಲಿ ಆತಂಕದ ಕ್ಷಣಗಳಿಗೆ ಕೊನೆಯಾಯಿತು.

## ಹೈದರಾಬಾದು ಕರ್ನಾಟಕ

ಭಾರತದಲ್ಲಿ ಹೈದರಾಬಾದು ಅತ್ಯಂತ ವಿಶಾಲವಾದ ದೇಶೀಯ ಸಂಸ್ಥಾನವಾಗಿದ್ದಿತು. ನಿಜಾಮರಿಗೆ "His Exalted Highness" ಎಂಬ ಬಿರುದು ನೀಡಿದ್ದರೆ ಉಳಿದ ರಾಜರು "His Highness" ಎಂಬ ಬಿರುದಿಗೆ ತೃಪ್ತಿಪಟ್ಟುಕೊಳ್ಳಬೇಕಾಗಿತ್ತು. ರಾಜ್ಯದ ಜನಸಂಖ್ಯೆಯ ಶೇಕಡಾ ಇಪ್ಪತ್ತೆರಡು ಭಾಗ ಕನ್ನಡ ಮಾತನಾಡುವವರಿದ್ದರು. ಆಧುನಿಕ ಭಾರತದಲ್ಲಿ ಉಳಿಗಮಾನ್ಯ ಪದ್ಧತಿಯ ಅಂಶವೇನಾದರೂ ಅಳಿದುಳಿದಿದ್ದರೆ ಅದು ನಿಸ್ಸಂಶಯವಾಗಿ ಹೈದರಾಬಾದ್ ಕರ್ನಾಟಕದಲ್ಲಿ ಎಂದು ಹೇಳಬಹುದು. ಯಾವುದೇ ರೀತಿಯ ಪ್ರಾತಿನಿಧಿಕ ಸಂಸ್ಥೆ ಅಲ್ಲಿ ಇರಲಿಲ್ಲವಷ್ಟೇ ಅಲ್ಲ ನಾಗರೀಕ ಹಕ್ಕನ್ನು ನೀಡುವಂಥ ಯಾವುದೇ ರೀತಿಯ ಕುರುಹೂ ಇರಲಿಲ್ಲ.

ರಾಜ್ಯದ ಬಹುತೇಕ ಜನರು ಹಿಂದೂಧರ್ಮೀಯರಾಗಿದ್ದರೂ ಸಹ, ಅವರ ಮಾತೃಭಾಷೆಗಳನ್ನು ಕಡೆಗಣಿಸಿ ಉರ್ದುಭಾಷೆಯನ್ನು ಅವರ ಮೇಲೆ ಹೇರಲಾಯಿತು. ಸರ್ಕಾರ ಉದ್ಯೋಗಗಳಲ್ಲಿ ಹೆಚ್ಚಿನ ಅಂಶವನ್ನು ಮುಸ್ಲಿಮರಿಗೆ ನೀಡಲಾಯಿತು. ಇಂಥ ಪರಿಸ್ಥಿತಿಯಲ್ಲಿ ಆರ್ಯ ಸಮಾಜದಂಥ ಹಿಂದೂ ಪುನರುಜ್ಜೀವ ಸಂಘಟನೆಯೊಂದರ ಬೆಳವಣಿಗೆಗೆ ಅಲ್ಲಿ ಅನುಕೂಲವಾಯಿತು. ಆದರೆ ಅದರ ಚಟುವಟಿಕೆಗಳನ್ನು ನಿರ್ದಯವಾಗಿ ಹತ್ತಿಕ್ಕಿದ ಫಲವಾಗಿ ಹಿಂದು ಛಾಯೆಯುಳ್ಳ ಚಳವಳಿಯೊಂದು ಕಣ್ಣೊಡೆಯಲು ಕುಮ್ಮಕ್ಕು ಸಿಕ್ಕಿದಂತಾಯಿತು.

ರಾಜ್ಯದಲ್ಲಿ ಖಿಲಾಫತ್ ಚಳವಳಿಯ ಪ್ರತಿಧ್ವನಿ ಕೇಳಿ ಬರುತ್ತಿದ್ದಂತೆಯೇ ನಿಜಾಮರು ಅದರ ವಿರುದ್ಧ ದನಿಯೆತ್ತಿದರು. ಏಕಾಧಿಪತ್ಯದ ರೀತಿರಿವಾಜುಗಳು ತುಂಬಾ ಅತಿರೇಕಕ್ಕೆ ಹೋಗಿದ್ದ ಕಾರಣ ರಾಜ್ಯದ ಹೊರಗೆ ರಾಜಕೀಯ ಸಮಾವೇಶಗಳನ್ನು ನಡೆಸಬೇಕಾದ ಪ್ರಮೇಯವೇರ್ಪಟ್ಟಿತ್ತು. ಕಾಂಗ್ರೆಸ್ಸಿನ ಬಗ್ಗೆಯಾಗಲಿ ಅಥವಾ ರಾಷ್ಟ್ರವಾದಿ ಚಟುವಟಿಕೆಯ ಬಗ್ಗೆಯಾಗಲಿ ಏನನ್ನೂ ಪ್ರಕಟಿಸಬಾರದೆಂದು ವೃತ್ತಪತ್ರಿಕೆಗಳಿಗೆ ಎಚ್ಚರಿಕೆ ನೀಡಲಾಗಿತ್ತು.[೬]

ಹೈದರಾಬಾದಿನ ಮೇಲೂ ಕೂಡ ಕಾನೂನುಭಂಗ ಚಳವಳಿಯ ಪ್ರಭಾವ ಉಂಟಾಯಿತು. ಹೈದರಾಬಾದು ಕರ್ನಾಟಕದ ಸ್ವಯಂ ಸೇವಕರು ಚಳವಳಿಯಲ್ಲಿ ಭಾಗವಹಿಸಲು ಹೋಗಿದ್ದರು. ರಚನಾತ್ಮಕ ಕಾರ್ಯಕ್ರಮವೂ ಕೂಡ ಜನಪ್ರಿಯವಾಗಿದ್ದಿತು. ಆದರೆ ನಿಜಾಮರ ಸರ್ಕಾರವು ಎಲ್ಲ ಬಗೆಯ ರಾಜಕೀಯ ಚಟುವಟಿಕೆಯನ್ನು ನಿರ್ದಯವಾಗಿ ಹತ್ತಿಕ್ಕುವುದರಲ್ಲಿ ಮುಂದಾಗಿತ್ತು. ರಾಜ್ಯದಲ್ಲಿ ಹಿಂದೂ ಕೋಮುವಾದಿ ಸರ್ಕಾರವನ್ನು ರಚಿಸುವುದು ಜವಾಬ್ದಾರಿ ಸರ್ಕಾರಕ್ಕೆ ಒತ್ತಾಯಿಸುವವರ ಗುರಿಯಾಗಿದೆಯೆಂದು ಪ್ರಚಾರ ಮಾಡಲಾಯಿತು. ಆರ್ಯ ಸಮಾಜವು ಒಂದು ಹಿಂದೂ ಸಂಘಟನೆಯಾಗಿದ್ದು, ರಾಜ್ಯದ ಜನಾಂದೋಲನದ ಮುಖಂಡರು ಆರ್ಯ ಸಮಾಜಕ್ಕೆ ಸೇರಿದವರಾಗಿದ್ದ ಕಾರಣ ಈ ಸಂಘಟನೆಗಳು ಅಂತರ್ಯದಲ್ಲಿ ಕೋಮುವಾದಿಯಾದುವೆಂದು ಆರೋಪಿಸುವುದು ಸರ್ಕಾರಕ್ಕೆ ಸುಲಭವಾಯಿತು.

ಈ ಕಾರಣದಿಂದ ರಾಷ್ಟ್ರೀಯ ಕಾಂಗ್ರೆಸ್ಸಿನ ಸಹಾಯದಿಂದ ಕೋಮುವಾದಿಯೇತರ ರಾಜಕೀಯ ಸಂಘಟನೆಯನ್ನು ರಚಿಸುವುದು ಅವಶ್ಯಕವೆಂದು ಮನಗಣಲಾಯಿತು. ರಾಷ್ಟ್ರನಾಯಕರ ಮನವೊಲಿಸುವ ಸಲುವಾಗಿ ಹೈದರಾಬಾದಿನ ಸುಮಾರು ೫೦೦ ಮಂದಿಯ ಒಂದು ನಿಯೋಗ ೧೯೩೮ರ ಹರಿಪುರದ ಅಧಿವೇಶದಲ್ಲಿ ಭಾಗವಹಿಸಿತು.



ಗುಲ್ಬರ್ಗಾ ಜಿಲ್ಲೆಯ ಕಕ್ಕಳಮೇಳಿ ಗ್ರಾಮವನ್ನು ಸ್ವತಂತ್ರ್ಯವೆಂದು ಸಾರಿ (೭.೮.೧೯೪೮) ತ್ರಿವರ್ಣಧ್ವಜವನ್ನು ಹಾರಿಸುತ್ತಿರುವ ಸ್ವತಂತ್ರ ಸೇನಾನಿಗಳು



ಸಿಂದಗಿ ಶಿಬಿರದ ಸ್ವಾತಂತ್ರ್ಯ ಸೇನಾನಿಗಳು ರಜಾಕಾರರ ವಿರುದ್ಧ ಹೋರಾಡಿ
ನಿಜಾಮ ಸಂಸ್ಥಾನವನ್ನು ಭಾರತದ ಒಕ್ಕೂಟಕ್ಕೆ ಸೇರಿಸಿದ ಸಂದರ್ಭ



ರಜಾಕಾರರ ಅತ್ಯಾಚಾರಕ್ಕೊಳಗಾಗಿ ಅಸುನೀಗಿದ (೭.೭.೧೯೪೮) ಯುವಕ ಕಲ್ಯಾಣ ಪಾಟೀಲ

ಕನ್ನಡ ಮಾತನಾಡುವ ಭಾಗಗಳಲ್ಲಿ ಸಾಹಿತ್ಯದ ಹಾಗೂ ಸಾಂಸ್ಕೃತಿಕ ಸಂಘಟನೆಗಳು ಸ್ಥಾಪನೆಗೊಂಡವು. ೧೯೧೫ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಸ್ಥಾಪನೆಯಾಯಿತು. ತ್ರಿಪುರಿ ಕಾಂಗ್ರೆಸ್ ಅಧಿವೇಶನದ ನಂತರ ೧೯೩೮ರಲ್ಲಿ ಹೈದರಾಬಾದು ರಾಜ್ಯ ಕಾಂಗ್ರೆಸ್ಸಿನ ಸ್ಥಾಪನೆಗಾಗಿ ಪ್ರಯತ್ನಗಳು ನಡೆದವು. ಆದರೆ ಸರ್ಕಾರವು ಅದೊಂದು ಕೋಮಾವಾದಿ ಸಂಘಟನೆ ಎಂದು ಕೂಡಲೇ ತಡೆಯೊಡ್ಡಿತು. ಮಧ್ಯವರ್ತಿಗಳ ಪ್ರಯತ್ನಕ್ಕೆ ಸಫಲತೆಯುಂಟಾಗಲಿಲ್ಲ. ಸ್ವಾಮಿ ರಮಾನಂಥ ತೀರ್ಥರು ನಿಜಾಮರ ಅಧಿಕಾರದ ವಿರುದ್ಧ ಸಮರ ಸಾರಿದ್ದರು. ೧೯೩೮ರ ಅಕ್ಟೋಬರ್ ತಿಂಗಳಿನಲ್ಲಿ ನಿಜಾಮರ ಜನವಿರೋಧಿ ನೀತಿಗಳನ್ನು ಪ್ರತಿಭಟಿಸಿ ರಾಜ್ಯದಲ್ಲಿ 'ಸತ್ಯಾಗ್ರಹ' ವನ್ನು ಪ್ರಾರಂಭಿಸಲಾಯಿತು. ಐದು ಜನಗಳ ತಂಡಗಳಾಗಿ ಕಾಂಗ್ರೆಸ್ ಸದಸ್ಯರೆಂದು ಹೇಳಿಕೊಂಡು ದಸ್ತಗಿರಿಯಾಗುವ ವಿಧಾನವನ್ನನುಸರಿಸಿ ನಿಷೇಧಾಜ್ಞೆಯನ್ನು ಉಲ್ಲಂಘಿಸಲು ತೀರ್ಮಾನಿಸಲಾಯಿತು. ಇದರಿಂದ ಜನರ ಮೇಲೆ ತುಂಬಾ ಪ್ರಭಾವವುಂಟಾಯಿತು. ಗಾಂಧೀಜಿಯವರ ಮಧ್ಯಪ್ರವೇಶದಿಂದಲೂ ದಬ್ಬಾಳಿಕೆ ಕಡಿಮೆಯಾಗುವ ಸಂದರ್ಭ ಕಾಣದಾದಾಗ ಗಾಂಧೀಜಿಯವರೇ ಸತ್ಯಾಗ್ರಹವನ್ನು ನಿಲ್ಲಿಸಲು ಸತ್ಯಾಗ್ರಹಿಗಳಿಗೆ ತಿಳಿಸಬೇಕಾಯಿತು.

ಪಂಡಿತ ತಾರಾನಾಥರು ಹೈದರಾಬಾದು ಕರ್ನಾಟಕದ ಘನವಂತ ವ್ಯಕ್ತಿಯಾಗಿದ್ದರಲ್ಲದೆ ರಾಜ್ಯವನ್ನು ಹೈದರಾಬಾದು ನಿಜಾಮರ ಬಿಗಿ ಆಳ್ವಿಕೆಯಿಂದ ಮುಕ್ತಗೊಳಿಸಲು ತಮ್ಮ ಸರ್ವಸ್ವವನ್ನೂ ತ್ಯಾಗಮಾಡಿದವರು. ರಾಯಚೂರಿನಲ್ಲಿ ತಾರಾನಾಥರು ಒಂದು ರಾಷ್ಟ್ರೀಯ ಶಾಲೆಯನ್ನು ತೆರೆದರು. ಸರ್ಕಾರ ಅವರನ್ನು ಸಹಿಸಲಿಲ್ಲ, ಜೊತೆಗೆ ರಾಜ್ಯದಿಂದ ಅವರನ್ನೂ ಹೊರಗೆ ಹಾಕಿತು.

ಬೇರೆಡೆಗಳಲ್ಲಿಯಂತೆ ರಾಜ್ಯದಲ್ಲಿಯೂ ಕೂಡ ಕ್ವಿಟ್ ಇಂಡಿಯಾ ಚಳವಳಿಯು ತೀವ್ರವಾದ ರೀತಿಯಲ್ಲಿ ಪ್ರತಿಸ್ಪಂದನವನ್ನು ಕಂಡಿತು. ಹರ್ಡೀಕರ್ ಮಂಜಪ್ಪ, ಹಳ್ಳಿಕೇರಿ ಗುಡ್ಲೆಪ್ಪ ಮತ್ತು ಆಂದಾನಪ್ಪ ದೊಡ್ಡಮೇಟಿ ಜನರನ್ನು ಸಂಘಟಿಸಲು ಮೇಲಿಂದ ಮೇಲೆ ಹೈದರಾಬಾದು ಕರ್ನಾಟಕಕ್ಕೆ ಭೇಟಿ ನೀಡಿದರು. ಆದರೆ ಗಮನಾರ್ಹವಾದ ಸಂಗತಿಯೆಂದರೆ ಸರ್ಕಾರ ರಾಜ್ಯದ ಯಾವ ಭಾಗದಲ್ಲೂ ರಾಜಕೀಯ ಚಟುವಟಿಕೆ ನಡೆಯಲು ಆಸ್ಪದ ನೀಡಲಿಲ್ಲ.

೧೯೪೭ರ ಆಗಸ್ಟ್ ೧೫ರಂದು ಭಾರತಕ್ಕೆ ಸ್ವಾತಂತ್ರ್ಯ ದೊರಕುವುದೆಂದು ಮೌಂಟ್ ಬ್ಯಾಟನ್ನರು ೧೯೪೭ರ ಜೂನ್ ೪ರಂದು ಘೋಷಿಸಿದ ಹಿನ್ನೆಲೆಯಲ್ಲಿ ಬ್ರಿಟಿಷ್ ಪರಮಾಧಿಕಾರ ಕೊನೆಗೊಳ್ಳುತ್ತಿದ್ದಂತೆಯೇ ಹೈದರಾಬಾದು ಸರ್ವಸ್ವತಂತ್ರರಾಜ್ಯವಾಗುವುದೆಂದು ಪ್ರಕಟಿಸಿದರು. ಜನರಿಗೆ ಕ್ರೋಧವುಂಟಾಯಿತು. ನಿಜಾಮರ ಸರ್ಕಾರವನ್ನು ಎದುರಿಸುವಂಥ ಬಲವಾದ ಎಡಪಂಥೀಯ ಚಳವಳಿಯು ತೆಲಂಗಾಣ ಪ್ರಾಂತ್ಯದಲ್ಲಿ ಕಂಡುಬಂದರೆ, ನಿಜಾಮರ ಬೆಂಬಲದಲ್ಲಿ ಹೊರಟಿದ್ದಂಥ ರಜಾಕರರ ಚಳವಳಿಯನ್ನು ತಡೆಯುವಂಥ ಯಾವುದೇ ಸಮರ್ಥ ಚಳವಳಿ ಕರ್ನಾಟಕದಲ್ಲಿ ಇರಲಿಲ್ಲ. ಜೂನ್ ತಿಂಗಳಿನಲ್ಲಿ ರಾಜ್ಯ ಕಾಂಗ್ರೆಸ್ಸಿನ ಮೊದಲನೇ ಬಹಿರಂಗ ಅಧಿವೇಶನ ನಡೆದು ಜವಾಬ್ದಾರಿ ಸರ್ಕಾರ ರಚನೆಗಾಗಿ ಭಾರತ ಒಕ್ಕೂಟದಲ್ಲಿ ರಾಜ್ಯವು ವಿಲೀನಗೊಳ್ಳಬೇಕೆಂದು ಠರಾವು ಜಾರಿಗೊಳಿಸಲಾಯಿತು. ದೆಹಲಿಯಲ್ಲಿ ದೃಢವಾಗಿ ಸ್ಥಾಪನೆಗೊಂಡಿದ್ದಂಥ ಭಾರತ ರಾಷ್ಟ್ರೀಯ ಕಾಂಗ್ರೆಸ್ ರಾಜ್ಯ ಕಾಂಗ್ರೆಸ್ಸನ್ನು ಬೆಂಬಲಿಸಿತು. ಅಂತಿಮವಾಗಿ ಸೈನ್ಯದ ಬೆಂಬಲದಿಂದ ಮುನ್ನುಗ್ಗಿದ ಪೋಲೀಸ್ ಕಾರ್ಯಾಚರಣೆಯ ಎದುರು ನಿಜಾಮರು ಶರಣಾಗುವುದು ಅನಿವಾರ್ಯವಾಯಿತು. ಆದರೆ ಹೈದರಾಬಾದು ಕರ್ನಾಟಕ ಜನರ ದುಃಖ ಮಾತ್ರ ಕೊನೆಗೊಳ್ಳಲಿಲ್ಲ. ಕರ್ನಾಟಕದ ಜೊತೆ ೧೯೫೬ರಲ್ಲಿ ತಾವು ವಿಲೀನಗೊಳ್ಳುವವರೆಗೂ ಅವರು ಹೋರಾಟವನ್ನು ಮುಂದುವರಿಸಬೇಕಾಯಿತು.

**-ಪ್ರೊ. ಎಸ್. ಚಂದ್ರಶೇಖರ್**

## ಟಿಪ್ಪಣಿಗಳು

೧ ನೆಹರು, ಜ.: ಸೆಲೆಕ್ಟೆಡ್ ವರ್ಕ್ಸ್, ಸಂ.೧೪ ಪು. ೨೮೦

೨ ಹೆಚ್ಚಿನ ಮಾಹಿತಿಗಾಗಿ ನೋಡಿ: ಮೈಸೂರು ಪ್ರಜಾಪ್ರತಿನಿಧಿ ಸಭೆಯ ಕಲಾಪಗಳು, ಸೆ.ಅ. ೧೯೪೪

೩ ದೊರೆಸ್ವಾಮಿ, ಎಚ್.ಎಸ್.: ೧೯೭೨, ಪು. ೧೦೦-೧೧೦

೪ ದ ಹಿಂದು, ೭ ಸೆ. ೧೯೪೭

೫ ದೊರೆಸ್ವಾಮಿ, ಎಚ್.ಎಸ್.: ೧೯೭೨, ಪು. ೧೧೪-೧೨೦

೬ ಹಾಲಪ್ಪ, ಜಿ.ಎಸ್.: ೧೯೬೬, ಪು. ೪೮೮-೪೮೬

೭ ವಿವರಗಳಿಗಾಗಿ ನೋಡಿ: ಬಿಪಿನ್‌ಚಂದ್ರ ಇತ್ಯಾದಿಗಳು, ೧೯೮೯, ಪು. ೨೬೫-೨೭೪

## ಅಧ್ಯಾಯ : ಹದಿನೇಳು

# ಕರ್ನಾಟಕ ಏಕೀಕರಣ ಚಳವಳಿ

"ಭಾಷೆ, ಜನಾಂಗ ಮತ್ತು ಧರ್ಮದ ಘಟಕಗಳೂ ಮುಖ್ಯವಾದ ಅಂಶಗಳೇ, ಹಾಗೂ ಭಾಷೆ ಎಲ್ಲಕ್ಕಿಂತ ಮುಖ್ಯವಾದ ಅಂಗವೇ ಸರಿ''

**-ಲಯನಲ್ ಕರ್ಟಿಸ್**

ಸ್ವಾತಂತ್ರ್ಯ ಚಳವಳಿಯ ಜೊತೆ ಜೊತೆಗೇ ನಡೆದ ಅತ್ಯಂತ ರೋಮಾಂಚಕಾರಿಯಾದ ಇನ್ನೊಂದು ಚಳವಳಿಯೆಂದರೆ ಕರ್ನಾಟಕ ಏಕೀಕರಣ ಚಳವಳಿ. ಭಾಷೆಗಳ ಆಧಾರದ ಮೇಲೆ ರಾಜ್ಯಗಳನ್ನು ರಚಿಸುವ ಆಲೋಚನೆಯು ಈ ಶತಮಾನದ ಮೊದಲರ್ಧದಲ್ಲಿ ಚಿಂತಕರ ಗಮನ ಸೆಳೆಯಿತು. ರಾಷ್ಟ್ರಪ್ರಜ್ಞೆಯು ವ್ಯಾಪಕವಾಗಿ ಹರಡಿದ ಕಾರಣದಿಂದ ಜನರನ್ನು ಭಾಷೆಯ ಆಧಾರದ ಮೇಲೆ ಏಕೀಕರಣಗೊಳಿಸುವ ಹಂಬಲವು ಹೆಚ್ಚಾಯಿತೆಂದು ಹೇಳಬಹುದು. ಒಂದೇ ಭಾಷೆಯನ್ನಾಡುವ ಜನರನ್ನು ಒಟ್ಟುಗೂಡಿಸುವಲ್ಲಿ ಭಾಷೆಯು ಮಾಧ್ಯಮವಾಗುವುದೆಂದು ಮನಗಾಣಲಾಯಿತು. ಜನರನ್ನು ಒಗ್ಗೂಡಿಸುವ ಸಾಧನವಾಗಿ ಭಾರತೀಯ ಭಾಷೆಗಳು ಕೆಲಸ ಮಾಡುವುದಲ್ಲದೆ ಇಂಗ್ಲಿಷ್ ಭಾಷೆಗೆ ಭಾರತೀಯರು ತೀರಾ ಮಾರುಹೋಗದಂತೆ ತಡೆಗಟ್ಟಲು ಸಹಾಯಕವಾಗುತ್ತವೆಯೆಂದು ಗಾಂಧೀಜಿ ಒತ್ತಿ ಹೇಳಿದರು. ಅವರ ಪ್ರಕಾರ ಇದು 'ಸ್ವರಾಜ್ಯದ ಅತಿಮುಖ್ಯ ಅಂಗ' ವಾಗಿತ್ತು.

ಬ್ರಿಟಿಷರು ಮಾಡಿದ್ದಂಥ ಪ್ರಾಂತೀಕರಣವು ಯಾವುದೇ ವ್ಯವಸ್ಥೆಗೆ ಒಳಪಟ್ಟಿರಲಿಲ್ಲ. ಗಡಿಭಾಗಗಳನ್ನು ಆಡಳಿತಾತ್ಮಕವಾದ ಅನುಕೂಲಕ್ಕಾಗಿ ಹಾಗೂ ತಮ್ಮ ಆರ್ಥಿಕ ಮತ್ತು ರಕ್ಷಣೆಯ ಕಾರಣಗಳಿಗಾಗಿ ಗುರುತು ಮಾಡಲಾಗಿತ್ತು. ಹಾಗಾಗಿ, ಸಾಮ್ರಾಜ್ಯಶಾಹಿ ಹಿತಾಸಕ್ತಿಯ ಆಧಾರದ ಮೇಲೆ ಗಡಿಭಾಗಗಳ ನಿರ್ಧಾರವಾಗಿತ್ತು. ಆ ಕಾರಣದಿಂದ ಅದಕ್ಕೆ ಭೌಗೋಳಿಕವಾದ, ಜನಾಂಗೀಯವಾದ ಅಥವಾ ಭಾಷಿಕವಾದ ತತ್ವದ ಆಧಾರವಿರಲಿಲ್ಲ. ಅನೇಕ ವೇಳೆ ಆ ಬಗೆಯ ವಿಭಾಗೀಕರಣವು 'ಚರಿತ್ರೆಯ ಆಕಸ್ಮಿಕ' ಗಳೆಂದು ಕರೆಯಲ್ಪಡುತ್ತಿದ್ದವು. ವಿಭಿನ್ನವಾದ ಚಾರಿತ್ರಿಕ ಹಾಗೂ ಸಾಂಸ್ಕೃತಿಕ ಹಿನ್ನೆಲೆಗಳ ಜನರನ್ನು ಬಲವಂತವಾಗಿ ಹಾಗೂ ಬೇಕೆಂದೇ ಒಂದೆಡೆ ಸೇರಿಸುವುದರಿಂದ ಭಾವನಾತ್ಮಕವಾದ ಬೆಸುಗೆಗೆ ಯಾವ ರೀತಿಯಲ್ಲೂ ಸಹಾಯಕವಾಗುವಂತಿರಲಿಲ್ಲ. ಇದರಿಂದ ಜನರು ತಮ್ಮ ತಮ್ಮ ಸಂಸ್ಕೃತಿ ಹಾಗೂ ಚರಿತ್ರೆಯ ಬಗ್ಗೆ ಹೆಮ್ಮೆಪಟ್ಟುಕೊಳ್ಳುವುದರ ಜೊತೆಗೆ ಮೇಲರಿಮೆ ಮತ್ತು ಕೀಳರಿಮೆ ಬೆಳೆಸಿಕೊಳ್ಳುವುದಕ್ಕೆ ನಾಂದಿಯಾಯಿತೆನ್ನಬೇಕು.

೧೯೦೫ರಲ್ಲಿ ಬಂಗಾಳದ ವಿಭಜನೆಯಾಗುವ ತನಕ-ಪ್ರತ್ಯೇಕತೆ ಹಾಗೂ ಅನೈಕ್ಯತೆಯ ಬಗ್ಗೆ ಅರಿವಿದ್ದರೂ-ಭಾಷೆಯ ಆಧಾರದ ಮೇಲೆ ಜನರನ್ನು ಒಟ್ಟಿಗೆ ತರುವ ಆಲೋಚನೆಗೆ ಹೇಳಿಕೊಳ್ಳುವಂಥ ಪ್ರಚಾರ

ಸಿಕ್ಕಿರಲಿಲ್ಲ. ಬಂಗಾಳ ಒಂದಾದ ಬಳಿಕವಷ್ಟೇ ಒಂದು ಭಾಷೆಯನ್ನಾಡುವ ಜನರನ್ನು ಒಟ್ಟುಗೂಡಿಸುವತ್ತ ಪ್ರಯತ್ನಗಳು ನಡೆದವು. ಒರಿಸ್ಸಾ ಮತ್ತು ಆಂಧ್ರಗಳಲ್ಲಿಯೂ ಕೂಡ ಭಾಷಿಕ ಒಕ್ಕೂಟದ ಸಂಬಂಧ ಚಳವಳಿಗಳು ಪ್ರಾರಂಭವಾದವು. ಭಾಷಾವಾರು ಆಧಾರದ ಮೇಲೆ ಪ್ರಾಂತ್ಯಗಳ ಮರುವಿಂಗಡಣೆಯಾಗಬೇಕೆಂದು ಅನೇಕರು ವಾದಿಸತೊಡಗಿದರು. ಭಾರತ ರಾಷ್ಟ್ರೀಯ ಕಾಂಗ್ರೆಸ್ ಕೂಡ ಇದನ್ನು ಬೆಂಬಲಿಸಿತು. ಪ್ರಚಲಿತವಿದ್ದ ಪ್ರಾಂತೀಯ ವಿಂಗಡಣೆಯ ಬಗ್ಗೆ ಬರೆಯುತ್ತ ಲಯನಲ್ ಕರ್ಟಿಸ್ ಹೀಗೆ ಹೇಳಿದ್ದರು: 'ಏಕಮೇಕ ಕೇಂದ್ರೀಕೃತ ಸರ್ಕಾರವೊಂದು– ಅದರ ಮೂಲಸೆಲೆ ಇಂಗ್ಲೆಂಡಿನಲ್ಲಿರುವುದು ಎಂಬುದನ್ನು ಮರೆಯದೆ ಕೃತಕವಾಗಿ ಮಾಡಿದಂಥ ವಿಂಗಡಣೆ ಇದು ಎಂದು ತಿಳಿಯಬೇಕು. ವಿಶಾಲವಾದ ಪೌರ್ವಾತ್ಯ ಪ್ರಾಂತ್ಯಗಳೊಳಗೆ ಸಣ್ಣ ಸಣ್ಣ ಪಾಳೆಯ ಪಟ್ಟುಗಳಾಗಿ ಇವು ನಿರ್ಮಿತವಾದಂಥವು......ಸಮರ್ಪಕವಾದ ಪ್ರಾಂತೀಯ ಘಟಕಗಳೆಂದರೆ ಏನು ಎಂದು ನಾವು ಈಗ ತಿಳಿಯಬೇಕಾಗಿರುವುದು ಅಗತ್ಯ; ಇದರ ಮೂಲಕ ಇಡಿಯಾಗಿ ರಾಷ್ಟ್ರೀಯ ವಿನ್ಯಾಸವನ್ನು ನಾವು ರಚಿಸಬಹುದಾಗಿದೆ......ಪ್ರಾಂತೀಯವಾದ ಸ್ವಯಂ ಆಡಳಿತ ಸರ್ಕಾರ ಆರಂಭಿಕ ಹಂತಗಳಲ್ಲಿ ಹೇಗೆ ಯೋಜಿತವಾಗುತ್ತದೆ ಎಂಬುದರ ಮೇಲೆ ಭಾರತದ ಆಂತರಿಕ ಶಾಂತಿ ಅವಲಂಬಿಸುತ್ತದೆ'.[೧]

ಮಾಂಟ್-ಫೋರ್ಡ್ ವರದಿ ಕೂಡ ಈ ಪ್ರಶ್ನೆಯನ್ನು ವಸ್ತುನಿಷ್ಠವಾಗಿ ಗಮನಿಸಿ 'ಸರ್ಕಾರದ ಜನಾಂಗೀಯ ಅಥವಾ ಭಾಷಾವಾರು ಘಟಕಗಳ' ಬಗ್ಗೆಯೇ ಒತ್ತು ನೀಡಿತು. ಆಡಳಿತಾತ್ಮಕ ಕ್ರಮದಿಂದ ಜನರ ಮೇಲೆ ಪ್ರಾಂತೀಯ ಮರುವಿಂಗಡಣೆಯನ್ನು ಹೇರಲಾಗದೆಂದು ವರದಿ ಸೇರಿಸಿತು. ಸಂವಿಧಾನಾತ್ಮಕ ಸುಧಾರಣೆಗೆ ಮೊದಲು ಅಥವಾ ಸುಧಾರಣೆಯ ಜೊತೆಗೆ ಆ ಪ್ರಕ್ರಿಯೆಯನ್ನು ನಡೆಸಲಾಗದೆಂದೂ ವರದಿ ಸೂಚಿಸಿತ್ತು. ಹಾಗೆಯೇ, ಒಂದು ಪ್ರದೇಶದ ಜನರು ಬಯಸುವುದಾದರೆ ಹೊಸ ಪ್ರಾಂತ್ಯಗಳನ್ನು ರಚಿಸಲು ವೈಸ್‌ರಾಯ್ ಅವರಿಗೆ ಅಧಿಕಾರವನ್ನು ನೀಡಲಾಯಿತು.[೨]

ದೇಶದಲ್ಲಿ ಕಂಡುಬಂದ ಸಾಂಸ್ಕೃತಿಕ ಪುನರುಜ್ಜೀವನದ ಫಲವಾಗಿ ಪ್ರಾಂತೀಯ ಭಾಷೆಗಳ ಬೆಳವಣಿಗೆಗೆ ಪ್ರೋತ್ಸಾಹ ದೊರಕಿತಲ್ಲದೆ, ಸಾಂಸ್ಕೃತಿಕವಾದ ಅಖಂಡತೆಯ ಬಗ್ಗೆಯೂ ಒತ್ತು ನೀಡಿತು. ವಸಾಹತು-ವಿರೋಧಿ ಪ್ರಜ್ಞೆಯಲ್ಲಿ ಸಂಸ್ಕೃತಿ ಒಂದು ಮುಖ್ಯವಾದ ಅಂಶವಾಯಿತು. ಸಂಸ್ಕೃತಿಯಲ್ಲೆ ವಸಾಹತುಶಾಹಿಯ ವಿರುದ್ಧದ ದನಿಯನ್ನು ನಾವು ಮೊದಲು ಕಾಣುವುದು.[೩] ಬೇರೆ ಬೇರೆ ಭಾಷೆಯ ಜನರ ಗುಂಪುಗಳಲ್ಲಿ ಹೊಸ ಪ್ರಜ್ಞೆ ಮೂಡಿ ತಮ್ಮದೊಂದು ಪ್ರತ್ಯೇಕ ಸಾಂಸ್ಕೃತಿಕ ಗುಂಪೆಂದು ಗುರುತಿಸಿಕೊಳ್ಳುವ ತುಡಿತ ಕಂಡು ಬಂದಿತು; ಹಾಗಾಗಿ ಭಾಷಿಕ ತತ್ವದ ಮೇಲೆ ಪ್ರಾಂತ್ಯಗಳ ವಿಂಗಡಣೆಯಾಗಬೇಕೆಂಬ ಬೇಡಿಕೆ ಪ್ರಾರಂಭವಾಯಿತು.

ತಿಲಕ್ ಮತ್ತು ಗಾಂಧೀಜಿಯವರು ರಾಷ್ಟ್ರಪ್ರಜ್ಞೆಯ ಉದಯದಲ್ಲಿ ದೇಶೀಯ ಭಾಷೆಗಳ ಪ್ರಾಮುಖ್ಯತೆ ಎಷ್ಟೆಂದು ಮನಗಂಡರು. ಭಾಷಾವಾರು ಆಧಾರದ ಮೇಲೆ ಪ್ರಾಂತೀಯ ಕಾಂಗ್ರೆಸ್ ಸಮಿತಿಗಳನ್ನು ರಚಿಸುವ ಅಗತ್ಯತೆಯನ್ನು ಕಡೆಗಣಿಸಲಾಗದೆಂದು ತಿಳಿದರು. ಸ್ವಾತಂತ್ರ್ಯ ಚಳವಳಿಯು ಒಂದು ಜನಾಂದೋಲನವಾಗಿ ಪರಿವರ್ತಿತವಾಗಲು ಭಾಷೆಯ ಅಂಶ ಮಹತ್ತರವಾದದ್ದೆಂದು ಗಾಂಧೀಜಿ ಅರಿತರು. ಆಂದೋಲನದಲ್ಲಿ ಎಲ್ಲ ವರ್ಗದ ಜನರೂ ಪಾಲ್ಗೊಳ್ಳಲು ವಾಸ್ತವವಾಗಿ ಭಾಷೆಯೇ ಕಾರಣವಾಯಿತೆಂಬುದನ್ನು ನಾವು ಮರೆಯುವಂತಿಲ್ಲ. ಬ್ರಿಟಿಷರ 'ಒಡೆದು ಆಳುವ ನೀತಿ' ಹಾಗೂ ಮುಸ್ಲಿಮರು ಬಹುಸಂಖ್ಯಾತರಾಗಿರುವ ಪ್ರದೇಶಗಳ ರಚನೆಯನ್ನು ಕಾಂಗ್ರೆಸ್ ಪಕ್ಷ ಖಂಡಿಸಿತು. ಪ್ರಾಂತೀಯ ಜಿಲ್ಲೆಗಳ ನಿರ್ಮಾಣದಲ್ಲಿ ಸಾಂಸ್ಕೃತಿಕ ಅಂಶಗಳು ಮುಖ್ಯವಾಗಬೇಕೆಂದು ಕಾಂಗ್ರೆಸ್ ವಾದ ಮಾಡಿತು. ಹಾಗಾಗಿ, ಸರ್ಕಾರ ರಚಿಸಿದ್ದ ಪ್ರಾಂತ್ಯಗಳನ್ನು ಬದಿಗಿಟ್ಟು ಭಾರತ ರಾಷ್ಟ್ರೀಯ ಕಾಂಗ್ರೆಸ್ ೧೯೨೦ರ ತನ್ನ ನಾಗಪುರ ಅಧಿವೇಶನದಲ್ಲಿ ಭಾಷಾವಾರು ಆಧಾರದ ಮೇಲೆ ಪ್ರಾಂತೀಯ ಸಮಿತಿಗಳನ್ನು ರಚಿಸಲು ತೀರ್ಮಾನಿಸಿತು.

ಕರ್ನಾಟಕದ-ನಷೆಯು :—




ಅಷ್ಟೇಕರರು ರಚಿಸಿದ ೧೯೨೪ರಲ್ಲಿಯ ಕನ್ನಡ ಭೂಪ್ರದೇಶಗಳ ನಕಾಶೆ

೧೯೨೭ರಲ್ಲಿ ನೇಮಕವಾದ ಭಾರತ ಶಾಸನ ಆಯೋಗ (Statuory Commission)ಭಾಷೆ ಒಂದು ಪ್ರಮುಖವಾದ ಅಂಶವಾದರೂ, ಇತರ ಬೇರೆ ಅಂಶಗಳನ್ನೂ ಪರಿಗಣಿಸಬೇಕಾಗಿರುವುದು ಮುಖ್ಯವೆಂದು ತೀರ್ಮಾನಿಸಿತು. ಮೋತಿಲಾಲ್ ನೆಹರೂ ಸಮಿತಿಯೂ ಕೂಡ ಈ ಪ್ರಶ್ನೆಯನ್ನು ಪರಿಗಣಿಸಿತಲ್ಲದೆ ಭಾಷೆಯ ಅಂಶಕ್ಕೆ ಪ್ರಥಮ ಸ್ಥಾನವನ್ನು ನೀಡಿ ಜನರ ಇಚ್ಛೆ ಹಾಗೂ ಆಡಳಿತಾತ್ಮಕ ಸೌಲಭ್ಯಕ್ಕೆ ಎರಡನೇ ಹಾಗೂ ಮೂರನೇ ಆದ್ಯತೆಯನ್ನು ನೀಡಿತು. ಏಕೀಕರಣದ ಕನಸು ನನಸಾದ ಹಿನ್ನೆಲೆಯಲ್ಲಿ ಈ ಅಂಶಗಳು ಹೇಗೆ ಕೆಲಸ ಮಾಡಿ ಯಾವ ರೀತಿ ಸಂಬಂಧ ಏರ್ಪಡುತ್ತದೆ ಎಂಬುದು ಕುತೂಹಲದ ಸಂಗತಿಯಾಗಿದೆ.

ಕನ್ನಡ ಭಾಷೆಯನ್ನಾಡುವ ಜನರಲ್ಲೂ ಕೂಡ ಭಾಷೆಯ ಆಧಾರದ ಮೇಲೆ ಪ್ರಾಂತ್ಯ ರಚನೆಯಾಗಬೇಕೆಂಬ ಕೂಗು ಪ್ರಾರಂಭವಾಯಿತು. ಕನ್ನಡ ಭಾಷೆಯ ಪ್ರಾಂತ್ಯಗಳು ಬೇರೆ ಬೇರೆ ಆಡಳಿತಗಳ ಅಡಿಯಲ್ಲಿ ಹರಿದು ಹಂಚಿಹೋಗಿದ್ದವು. ಇವುಗಳಲ್ಲಿ ಕೆಲವು ದೇಶೀಯ ಸಂಸ್ಥಾನಗಳ ಆಳ್ವಿಕೆಯಲ್ಲಿ ಮತ್ತೆ ಕೆಲವು ನೇರವಾಗಿ ಬ್ರಿಟಿಷರ ಆಳ್ವಿಕೆಯಲ್ಲೂ ಒಳಪಟ್ಟಿದ್ದವು. ಮೈಸೂರು ಹಾಗೂ ಹೈದರಾಬಾದು ಸಂಸ್ಥಾನಗಳು ವಿಶಾಲವಾಗಿದ್ದವು. ಮೈಸೂರು ಸಂಸ್ಥಾನವು ಹೆಚ್ಚಿನಂಶ ಕನ್ನಡ ಭಾಷೆಯ ಪ್ರಾಂತ್ಯಗಳನ್ನು ಒಳಗೊಂಡಿತ್ತು. ಹೈದರಾಬಾದ ಆಡಳಿತಕ್ಕೆ ಗುಲ್ಬರ್ಗಾ, ಬೀದರ್ ಹಾಗೂ ರಾಯಚೂರು ಸೇರಿದ್ದವು. ಜಮಖಂಡಿ, ಮುಧೋಳ್, ಕುರುಂದವಾಡ್, ಸೊಂಡೂರು, ದಫ್ಲಾಪುರ್, ಸಾಂಗ್ಲಿ, ಮೀರಜ್ ಹಾಗೂ ಔಂಧ್– ಇಂಥ ಸ್ವಲ್ಪ ಭಾಗ ಮಾತ್ರ ಕನ್ನಡ ಮಾತನಾಡುವ ಪ್ರದೇಶಗಳ ಸಂಸ್ಥಾನಗಳೂ ಇದ್ದವು. ಬ್ರಿಟಿಷ್–ಕರ್ನಾಟಕ ಪ್ರದೇಶಗಳು ಬೊಂಬಾಯಿ ಮತ್ತು ಮದರಾಸು ಪ್ರೆಸಿಡೆನ್ಸಿಗಳಿಗೆ ಸೇರಿದ್ದವು. ಉತ್ತರ ಕನ್ನಡ, ಬೆಳಗಾವಿ, ಧಾರವಾಡ, ಬಿಜಾಪುರ ಹಾಗೂ ಶೋಲಾಪುರದ ಕೆಲವು ತಾಲ್ಲೂಕುಗಳು ಬೊಂಬಾಯಿ ಪ್ರೆಸಿಡೆನ್ಸಿಗೆ ಸೇರಿದ್ದವು. ದಕ್ಷಿಣ ಕನ್ನಡ, ಬಳ್ಳಾರಿ, ನೀಲಗಿರಿ, ಮತ್ತು ಮಡಕಶಿರ, ಕೊಳ್ಳೇಗಾಲ, ಹೊಸೂರು ಮತ್ತು ಕೃಷ್ಣಗಿರಿಯ ಕೆಲವು ತಾಲ್ಲೂಕು ಮತ್ತು ಗ್ರಾಮಗಳು ಮದರಾಸು ಪ್ರೆಸಿಡೆನ್ಸಿಗೆ ಸೇರಿದ್ದವು. ಕೊಡಗನ್ನು ಒಬ್ಬ ಆಯುಕ್ತರು ಆಳುತ್ತಿದ್ದು ಅದಕ್ಕೆ ಪ್ರತ್ಯೇಕವಾದ ಒಂದು ಪ್ರಾಂತ್ಯದ ಸ್ಥಾನವನ್ನು ನೀಡಲಾಗಿತ್ತು.

ಸಣ್ಣಸಣ್ಣ ಘಟಕಗಳಾಗಿ ಒಡೆದುಹೋಗಿದ್ದ ಕಾರಣ ಪ್ರೆಸಿಡೆನ್ಸಿಗಳಲ್ಲಿ ಕನ್ನಡ ಮಾತನಾಡುವ ಜನರ ಪರಿಸ್ಥಿತಿ ಅತ್ಯಂತ ಶೋಚನೀಯವಾಗಿತ್ತು; ಅದರಲ್ಲೂ ಬೊಂಬಾಯಿ ಪ್ರೆಸಿಡೆನ್ಸಿಯ ಕನ್ನಡಿಗರು ತುಂಬಾ ತೊಳಲಾಟಕ್ಕೊಳಗಾಗಿದ್ದರು. ಅಧಿಕೃತವಾಗಿ ಮರಾಠಿ ಭಾಷೆಯನ್ನು ಹೇರಿದ ಬಳಿಕವಂತೂ ಕನ್ನಡಿಗರ ಪ್ರಜ್ಞೆ ಇನ್ನೂ ನಿಶಿತವಾಯಿತು. ಇದರ ಜೊತೆಗೆ ಆ ಪ್ರಾಂತ್ಯಗಳಲ್ಲಿ ಶಾಲೆಗಳನ್ನು ತೆರೆಯುವುದರಲ್ಲಿ ಅಧಿಕಾರಿಗಳು ತೋರಿದ ನಿರ್ಲಕ್ಷ್ಯ, ಹಾಗೂ ಶಾಲೆಗಳಲ್ಲಿ ಕನ್ನಡವನ್ನು ಅಳವಡಿಸುವುದರಲ್ಲಿ ಪ್ರದರ್ಶಿಸಿದ ಅಸಡ್ಡೆ ಜನರನ್ನು ಕೆರಳಿಸಿತು. ಹೈದರಾಬಾದು ರಾಜ್ಯ ಹಾಗೂ ಇತರೆ ಸಣ್ಣಸಣ್ಣ ದೇಶೀಯ ಪ್ರಾಂತ್ಯಗಳಲ್ಲಿ ಕನ್ನಡಕ್ಕೆ ತೋರಿದ ನಿರ್ಲಕ್ಷ್ಯ ಎದ್ದು ಕಂಡಿತು. ಮರಾಠಿ, ತೆಲುಗು ಹಾಗೂ ತಮಿಳು ಭಾಷೆಯನ್ನಾಡುವವರು ಮೇಲುಗೈ ಸಾಧಿಸಿದ್ದರಿಂದ ಅಲ್ಪಸಂಖ್ಯಾತರಾಗಿದ್ದ ಕನ್ನಡಿಗರು ಮುಂದುವರಿಯುವ ವಾತಾವರಣವಿರಲಿಲ್ಲ. ಬಹುಸಂಖ್ಯಾತರ ನಡುವೆ ತಾವು ಪರಿಗಣಿತರಾಗದೇ ಇದ್ದುದು ಹಾಗೂ ಕನ್ನಡ ಬಂಧುಗಳಿಂದ ತಾವು ದೂರವಾಗಿರುವುದು– ಈ ಎರಡು ಕಾರಣಗಳಿಂದ ಪ್ರೆಸಿಡೆನ್ಸಿಗಳ ಕನ್ನಡಿಗರು ನಲುಗಿದರು. ಹೆಚ್ಚು ಹಿಂದುಳಿದಿದ್ದ ಕನ್ನಡ ಪ್ರಾಂತ್ಯಗಳಿಗೆ ಸರ್ಕಾರಗಳೂ ಕೂಡ ಗಮನ ಹರಿಸಲಿಲ್ಲ. ತಾರತಮ್ಯವನ್ನು ಅನುಭವಿಸಿ ಕಂಗಾಲಾಗಿದ್ದ ಕನ್ನಡಿಗರು ತಮಗೊಂದು ಪ್ರತ್ಯೇಕವಾದ ಪ್ರಾಂತ್ಯಬೇಕೆಂದು ಒಕ್ಕೊರಲಿನಿಂದ ಕೇಳಲು ಅನುವಾಯಿತು. ಬ್ರಿಟಿಷ್ ಪ್ಲಾಂಟರುಗಳ ಮೇಲುಗೈ ಇದ್ದ ಕೊಡಗಿನಲ್ಲೂ ಕೂಡ ತಾರತಮ್ಯದ ಅನುಭವ ಜನರಿಗಾಯಿತು.

ಬ್ರಿಟಿಷರ ಕಾರಣದಿಂದಲೇ ಬಹುತೇಕ ಕನ್ನಡಿಗರಲ್ಲಿ ಅರಿವು ಮೂಡಲು ಸಾಧ್ಯವಾಯಿತೆಂದು ಹೇಳಬೇಕು. ಜೀಗ್ಲರ್, ಕಿಟ್ಟೆಲ್, ರೈಸ್, ಫ್ಲೀಟ್ ಹಾಗೂ ಕೆಲವು ದೇಶೀಯ ವಿದ್ವಾಂಸರ ಅಧ್ಯಯನದ ಫಲವಾಗಿ ತಮ್ಮ




ತುಂಡಾದ ೨೨ ಆಡಳಿತ ಘಟಕಗಳು

ಚರಿತ್ರೆ ಹಾಗೂ ಪರಂಪರೆಯನ್ನು ತಿಳಿದುಕೊಳ್ಳಲು ಕನ್ನಡಿಗರಿಗೆ ಸಾಧ್ಯವಾಯಿತು. ಶತಶತಮಾನಗಳಿಂದ ಹೂತುಹೋಗಿದ್ದ ಅನರ್ಘ್ಯ ರಾಶಿಯನ್ನು ಈ ವಿದ್ವಾಂಸರು ಸಮಸ್ತರ ಕಣ್ಣೆದುರಿಗೆ ತಂದರು. ಸಮೃದ್ಧವಾದ ಕನ್ನಡ ಸಾಹಿತ್ಯ ತನ್ನೆಲ್ಲ ವೈಭವದಿಂದ ಕಾಣಿಸಿಕೊಂಡಿತು.

ಅಂಥ ಒಂದು ಅರಿವು ಮೂಡಲು ಮಿಷನರಿಗಳ ಪಾತ್ರವನ್ನೂ ಸಹ ನಾವು ಮರೆಯುವಂತಿಲ್ಲ. ತಮ್ಮ ಮತಾಂತರದ ಜವಾಬ್ದಾರಿಯ ಹಿನ್ನೆಲೆಯಲ್ಲಿ ಮಿಷನರಿಗಳು ಶಾಲೆಗಳನ್ನು ತೆರೆದರಲ್ಲದೆ, ಆ ಶಾಲೆಗಳಲ್ಲಿ ಪ್ರಾಂತೀಯ ಭಾಷೆಗಳಲ್ಲಿ ಬೋಧನೆ ನಡೆಸುತ್ತಿದ್ದರು. ಕನ್ನಡ ವಿದ್ಯಾರ್ಥಿಗಳಿಗಾಗಿ ಪಠ್ಯಪುಸ್ತಕಗಳನ್ನು ಮುದ್ರಣ ಮಾಡಲು ಪ್ರಾರಂಭಿಸಿದರು. ಇದರ ಜೊತೆಗೆ ಕನ್ನಡ ಭಾಷೆಯ ಹರವು ಮತ್ತು ಶ್ರೀಮಂತಿಕೆಗೆ ನಿದರ್ಶನದಂತಿರುವ ನಿಘಂಟುಗಳ ಬೃಹತ್ ಸಂಪುಟಗಳನ್ನು ಮಿಷನರಿಗಳು ಬೆಳಕಿಗೆ ತಂದರು. ಸರ್ಕಾರ ಮಿಷನರಿಗಳಿಗೆ ನೀಡಿದ ಧನ ಸಹಾಯದಿಂದ ಶೈಕ್ಷಣಿಕ ಚಟುವಟಿಕೆಗಳು ಹೆಚ್ಚುವುದರ ಜೊತೆಗೆ ಮತಾಂತರದ ಕಾರ್ಯವೂ ಹೆಚ್ಚು ಹೆಚ್ಚಾಗಿ ನಡೆಯಿತು. ಮಿಷನರಿಗಳು ಕನ್ನಡ ಭಾಷೆಯನ್ನು ಬಳಸತೊಡಗಿದ್ದ ಕಾರಣ ತನ್ನ ಭಾಷೆಯ ಹಿರಿಮೆಯ ಬಗ್ಗೆ ಕನ್ನಡಿಗನಲ್ಲಿ ಹೆಮ್ಮೆಯಾಯಿತು. ಎಲ್ಲ ಕನ್ನಡಿಗರಲ್ಲಿ ಅದೇ ಬಗೆಯ ಭಾವನೆಯನ್ನು ಮೂಡಿಸುವ ಸಲುವಾಗಿ ದೇಶೀಯರೂ ಕೂಡ ಕನ್ನಡ ಸಾಹಿತ್ಯದ ಅಧ್ಯಯನ ಮತ್ತು ಬೆಳವಣಿಗೆಯ ವಿಷಯದಲ್ಲಿ ಮುಂದಾದರು. ಈ ನಿಟ್ಟಿನಲ್ಲಿ ಡೆಪ್ಯುಟಿ ಚೆನ್ನಬಸಪ್ಪ, ಸನಾದಿ ಅಣ್ಣಾರಾವ್, ವೆಂಕಟರಂಗೋ ಕಟ್ಟಿ,- ಇವರು ಒಂದು ಮುದ್ರಣಾಲಯವನ್ನೂ ತೆರೆದರು- ತುರಮುರಿ, ಗಂಗಾಧರ ಮಡಿವಾಳೇಶ್ವರ, ಮುಳ್‌ಬಾಗಲ್ ರಾ.ಹ. ದೇಶಪಾಂಡೆ, ಶ್ಯಾಮರಾವ್ ವಿಠಲ್ ಮುಂತಾದವರು ಶಾಲೆಗಳಲ್ಲಿ ಕನ್ನಡ ವಾತಾವರಣವನ್ನು ನಿರ್ಮಾಣ ಮಾಡದರಷ್ಟೇ ಅಲ್ಲ ಸರಳವೂ ಸುಲಭ ಗ್ರಾಹ್ಯವಾದ ಕನ್ನಡದಲ್ಲಿ ಅನೇಕ ಪಠ್ಯಪುಸ್ತಕಗಳನ್ನು ರಚಿಸಿದರು.[೪] ನಾಡಿನ ಚರಿತ್ರೆ, ಸಂಸ್ಕೃತಿಯ ಬಗ್ಗೆ ಹಾಗೂ ಕನ್ನಡ ಸಾಹಿತ್ಯದ ಬಗ್ಗೆ ಪ್ರಕಟವಾದ ಪುಸ್ತಕಗಳಿಂದಾಗಿ ಜನರಲ್ಲಿ ಹೊಸ ಚೈತನ್ಯ ಮೂಡಿದಂತಾಯಿತು.

ಆ ವೇಳೆಗೆ ರಾಷ್ಟ್ರವಾದಿ ಚಿಂತನೆಗಳು ಬೇರೂರಿದ್ದವು. ತಿಲಕರು ಮೇಲೆ ಬಂದಂತೆ ಬೊಂಬಾಯಿ ಪ್ರೆಸಿಡೆನ್ಸಿಯಲ್ಲಿ ಆಮೂಲಾಗ್ರವಾದ ಬದಲಾವಣೆ ಕಾಣಿಸಿಕೊಂಡಿತು. ತಿಲಕರು ಹಾಗೂ ವಿವೇಕಾನಂದರು ಯುವಕರಲ್ಲಿ ಹೊಸ ರೀತಿಯ ಉತ್ಸಾಹವನ್ನು ತುಂಬಿದರು. ಹಿಂದೂ ಧರ್ಮದ ಪುನರುತ್ಥಾನ ಹಾಗೂ ಗತವೈಭವವನ್ನು ಅವರ ಮೂಲಕ ತಿಳಿಯುವಾಗ ಅವರಲ್ಲಿ ವಿದ್ಯುತ್ ಸಂಚಾರವಾದ ಅನುಭವವಾಯಿತು. ಪ್ರೆಸಿಡೆನ್ಸಿಯಲ್ಲಿ ಕ್ರಾಂತಿಕಾರಿಗಳೂ ಸಹ ತರುಣರ ಮನಸ್ಸಿನ ಮೇಲೆ ಅಚ್ಚಳಿಯದ ಛಾಪನ್ನು ಒತ್ತಿದ್ದರು. ಉನ್ನತ ಶಿಕ್ಷಣಕ್ಕಾಗಿ ಕನ್ನಡ ಪ್ರದೇಶದ ವಿದ್ಯಾರ್ಥಿಗಳು ಬೊಂಬಾಯಿ ಅಥವಾ ಪೂನಾಕ್ಕೆ ಹೋಗಬೇಕಾದಂಥ ಪ್ರಮೇಯವಿದ್ದಿತು. ಈ ಪ್ರದೇಶಗಳಲ್ಲಿ ಪ್ರಚಲಿತವಿದ್ದ ರಾಷ್ಟ್ರಪ್ರಜ್ಞೆ ಯುವಕರ ಮೇಲೆ ಅತ್ಯಂತ ಗಾಢವಾದ ಪ್ರಭಾವ ಬೀರಿತು. ಈ ಅವಧಿಯಲ್ಲೇ ರಾಷ್ಟ್ರೀಯ ಚಳವಳಿಯಲ್ಲಿ ಬ್ರಾಹ್ಮಣರ ಅಧಿಪತ್ಯ ಹೆಚ್ಚಾಗಿ ಕಾಣಿಸಿಕೊಂಡಿತು. ಕ್ರಾಂತಿಕಾರಿಗಳಲ್ಲಿಯೂ ಸಹ ಈ ಜನಾಂಗದ ಗುಂಪೊಂದು ಮುಂಚೂಣಿಯಲ್ಲಿತ್ತು. ಈಗ ಮತ್ತೆ ಏಕೀಕರಣದ ಚಳವಳಿಯನ್ನೂ ಸಹ ಈ ಮುಂದುವರಿದವರೇ ಮುನ್ನಡೆಸಬೇಕಾಯಿತು. ದೀರ್ಘಕಾಲದ ನಂತರವೇ ಈ ಎರಡೂ ಚಳವಳಿಗಳ ಹೆಚ್ಚು ವಿಶಾಲವಾದ ತಳಹದಿಯನ್ನು ಹೊಂದಿದುದು.

ತಿಲಕರ ಮೂಲಕವಾಗಿ ಗತಕಾಲದ ವೈಭವವನ್ನು ಮರಳಿ ತರುವುದರ ಬಗ್ಗೆ ಹಾಗೂ ಪ್ರಾಂತೀಯ ಭಾಷಿಕ ಸಂಸ್ಕೃತಿ ಹಾಗೂ ರಾಷ್ಟ್ರಪ್ರಜ್ಞೆಯ ಪರಸ್ಪರಾವಲಂಬನೆಯನ್ನು ಕನ್ನಡದ ಯುವಕರು ಮನಗಂಡಿದ್ದರು.[೫] ಇದರಿಂದ ಸಹಜವಾಗಿಯೇ ಭಾರತದ ಗತವೈಭವವನ್ನಷ್ಟೇ ಅಲ್ಲದೆ ಕರ್ನಾಟಕದ ಸಮೃದ್ಧ ಇತಿಹಾಸವನ್ನು ಅರಿಯುವ ಜರೂರು ಅವರಲ್ಲಿ ಕಾಣಿಸಿಕೊಂಡಿತು. ಬೊಂಬಾಯಿ ಕರ್ನಾಟಕದಲ್ಲಿ ಮರಾಠಿ ಮೇಲುಗೈ

ಸಾಧಿಸಿದ್ದರಿಂದ ಕನ್ನಡ ಹಿನ್ನೆಲೆಗೆ ಸರಿಯಿತು. ಗಣಪತಿ ಹಬ್ಬ ಮುಂತಾದ ಹಬ್ಬದ ಸಂದರ್ಭದಲ್ಲಿಯೂ ಕೂಡ ಕನ್ನಡ ಮಾತನಾಡುವ ಪ್ರದೇಶಗಳಲ್ಲೂ ಮರಾಠಿ ಹಾಡುಗಳೇ ಕೇಳಿಬರತೊಡಗಿದವು. ಭಾಷೆಯ ವಿಷಯದಲ್ಲಿ ಎದ್ದು ಕಂಡ ಈ ತಾರತಮ್ಯವನ್ನು ಸಹಿಸಲಾರದ ತರುಣ ಪೀಳಿಗೆಯವರು ಕನ್ನಡದ ಪುನರುಜ್ಜೀವನಕ್ಕಾಗಿ ಆಕ್ರಮಣಶೀಲರಾಗಿಯೇ ಮುನ್ನುಗ್ಗಿದ್ದರು.

ಆ ಸಂದರ್ಭದಲ್ಲಿ ಸಾಹಿತ್ಯಕ ಚಟುವಟಿಕೆಗಳಿಗೆ ಹೆಚ್ಚು ಚಾಲನೆ ದೊರೆಯಿತು. ಈ ದಿಶೆಯಲ್ಲಿ 'ಕನ್ನಡ ಮಿತ್ರಕೂಟ' ಹಾಗೂ 'ಫೋರ್ತ್ ಕರ್ನಾಟಕ ಕ್ಲಬ್' ಹೆಚ್ಚು ಕೊಡುಗೆ ನೀಡಿದವು. ಆಲೂರು ವೆಂಕಟರಾಯರು ಈ ಎರಡೂ ಸಂಸ್ಥೆಗಳೊಡನೆ ನಿಕಟವಾದ ಸಂಪರ್ಕ ಹೊಂದಿದ್ದರಲ್ಲದೆ ಮೂಲತಃ ಅವರ ಪ್ರಯತ್ನದ ಫಲವಾಗಿ ಕನ್ನಡಕ್ಕೊಂದು ಅನನ್ಯತೆಯನ್ನು ದೊರಕಿಸಿಕೊಡುವ ದಿಶೆಯಲ್ಲಿ ಮೊದಲ ಹೆಜ್ಜೆ ಇಡಲಾಯಿತು. ಹೆಚ್ಚಿದ ಸಾಹಿತ್ಯದ ಚಟುವಟಿಕೆಗಳಿಂದ ಕನ್ನಡ ಪ್ರಜ್ಞೆ ಮೂಡಿತಷ್ಟೇ ಅಲ್ಲ, ಕನ್ನಡಿಗರಲ್ಲಿ ರಾಷ್ಟ್ರಪ್ರಜ್ಞೆ ಬೆಳೆಯುವುದಕ್ಕೂ ಇದರಿಂದ ಸಹಾಯವಾಯಿತು. ಹಾಗಾಗಿ ರಾಷ್ಟ್ರೀಯ ಚಳವಳಿಯ ಜೊತೆ ಜೊತೆಗೇ ಏಕೀಕರಣದ ಚಳವಳಿಯೂ ಸಾಗಿತು.

ಪುನರುಜ್ಜೀವನ ಪ್ರಯತ್ನದಲ್ಲಿ ಬಹಳ ಮುಖ್ಯವಾದ ಮೈಲಿಗಲ್ಲೆಂದರೆ ರಾ.ಹ. ದೇಶಪಾಂಡೆಯವರು ೧೮೯೦ರಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘವನ್ನು ಸ್ಥಾಪಿಸಿದುದು. ಕನ್ನಡಿಗರು ತಮ್ಮ ಸಂಸ್ಕೃತಿಯ ಬಗ್ಗೆ ಅಭಿರುಚಿಯನ್ನು ತಾಳುವಂತೆ ಮಾಡಬೇಕೆನ್ನುವ ಹಿನ್ನೆಲೆಯಲ್ಲಿ ಸಂಘ ಸ್ಥಾಪನೆಯಾಯಿತು.[೬] ಹೊಸ ಚಿಂತನೆಗಳು ಹಾಗೂ ಸಾಂಸ್ಕೃತಿಕ ಪುನರುಜ್ಜೀವನದ ಬೀಜಗಳಲ್ಲಿಯೇ ನಿಜವಾದ ರಾಷ್ಟ್ರೀಯ ಒಲವುಗಳಿದ್ದದ್ದನ್ನು ನಾವು ಗಮನಿಸಬಹುದು. 'ವಾಗ್ಭೂಷಣ' ವೆಂಬ ನಿಯತಕಾಲಿಕೆಯನ್ನೂ ಸಂಘ ಪ್ರಕಟಿಸಿತು. ವಿದ್ಯಾವರ್ಧಕ ಸಂಘ ಏಕೀಕರಣದ ಸಮಸ್ಯೆಯನ್ನು ಚರ್ಚಿಸಲು ಮುಂದೆ ಒಂದು ವೇದಿಕೆಯಾಗಿ ಪರಿಣಮಿಸಿತು. ೧೯೦೩ರಲ್ಲಿ ಸಂಘದ ಒಂದು ಸಭೆಯ ಅಧ್ಯಕ್ಷತೆ ವಹಿಸಿ ಮಾತನಾಡುತ್ತಾ ವೆಂಕಟರಾಯರು ಮದರಾಸು ಹಾಗೂ ಉತ್ತರ ಕರ್ನಾಟಕದ ಕನ್ನಡಿಗರನ್ನು ಏಕೀಕರಣಗೊಳಿಸುವ ಬಗ್ಗೆ ಪ್ರಸ್ತಾಪ ಮಾಡಿದರು.[೭] 'ವಾಗ್ಭೂಷಣ' ದ ಫೆಬ್ರವರಿ ಸಂಚಿಕೆಯಲ್ಲಿ ಬರೆಯುತ್ತ ಆಲೂರು ವೆಂಕಟರಾಯರು ಇದೇ ಕನಸನ್ನು ಕಂಡರು. ದೇಶಪಾಂಡೆಯವರು ಧಾರವಾಡದಿಂದ ವರ್ಗವಾಗಿ ಹೋದ ಬಳಿಕ ಸಂಘದ ಚಟುವಟಿಕೆಗಳು ಸ್ಥಗಿತಗೊಂಡವು. ಹಾಗಾಗಿ ಮತ್ತೆ ಸಂಘದ ಚಟುವಟಿಕೆಗಳಿಗೆ ಚಾಲನೆ ಕೊಡಲು ಆಲೂರು ವೆಂಕಟರಾಯರೇ ಜವಾಬ್ದಾರಿ ಹೊರಬೇಕಾಯಿತು. 'ವಾಗ್ಭೂಷಣ' ದ ಸಂಪಾದಕತ್ವವೂ ಆಲೂರರ ಪಾಲಿಗೇ ಬಂದಿತು. ತಮ್ಮ ಪರಂಪರೆಯ ಬಗ್ಗೆ ಕನ್ನಡಿಗರಲ್ಲಿ ಅಭಿಮಾನ ತುಂಬಿ ಅವರಲ್ಲಿ ಅನನ್ಯತೆಯ ಪ್ರಜ್ಞೆ ಮೂಡಿಸುವುದು ಆಲೂರರ ಮುಂದಿದ್ದ ಒಂದು ದೊಡ್ಡ ಸವಾಲೆಂದು ತಿಳಿಯಬೇಕು. ಹಂಪಿ ಹಾಗೂ ಆನೆಗೊಂದಿಗೆ ಆಲೂರರು ಭೇಟಿ ನೀಡಿದಾಗ ಕನ್ನಡಿಗರ ಗತ ಇತಿಹಾಸದ ಬಗ್ಗೆ ಅವರಲ್ಲಿ ಅಭಿಮಾನ ಮೂಡಿತು. ಈ ಎರಡು ಸ್ಥಳಗಳು ಅವರ ಮೇಲೆ ಎಂಥ ಪರಿಣಾಮ ಬೀರಿದುವೆಂದರೆ ಆಲೂರರು 'ಕರ್ನಾಟಕ ಗತ ವೈಭವ' ಎಂಬ ಗ್ರಂಥವನ್ನು ಬರೆಯುವಂತೆ ಪ್ರೇರೇಪಣೆ ದೊರೆಯಿತು.

ಬೊಂಬಾಯಿ ಪ್ರೆಸಿಡೆನ್ಸಿಯು ರಾಷ್ಟ್ರೀಯ ಆಂದೋಲನದಲ್ಲಿ ಸಿಲುಕಿತ್ತು. ಸ್ವದೇಶಿ ಮತ್ತು ಬಹಿಷ್ಕಾರ ಜನರಲ್ಲಿ ಹೆಚ್ಚಿನ ಉತ್ಸಾಹ ತುಂಬಿದ್ದವು. ಬಂಗಾಳದ ವಿಭಜನೆಯಾದ ಬಳಿಕ ರಾಷ್ಟ್ರಾದ್ಯಂತ ಪ್ರತಿಭಟನೆ ಹಾಗೂ ಚಳವಳಿ ಕಾಣಿಸಿಕೊಂಡವು. ಪ್ರೆಸಿಡೆನ್ಸಿಯಲ್ಲಿ ಬ್ರಿಟಿಷರ ನಿಯಮಗಳ ವಿರುದ್ಧ ದನಿಯೆತ್ತಲಾಯಿತು. ಬಂಗಾಳದ ಏಕೀಕರಣದ ಪ್ರಶ್ನೆಯನ್ನು ಅಲ್ಲಿ ಚರ್ಚಿಸುತ್ತಿರುವಾಗಲೇ ಆಲೂರರು ಕರ್ನಾಟಕದ ಏಕೀಕರಣದ ಬಗ್ಗೆ ಚಿಂತಿಸತೊಡಗಿದರು.

ಕರ್ನಾಟಕ ಏಕೀಕರಣದ ಹಾದಿಯಲ್ಲಿ ಇಟ್ಟ ಮೊದಲನೆಯ ಪ್ರಯತ್ನದ ಫಲವಾಗಿ ಧಾರವಾಡದಲ್ಲಿ ೧೯೦೭ ಮತ್ತು ೧೯೦೮ರಲ್ಲಿ ಕನ್ನಡ ಲೇಖಕರ ಸಮ್ಮೇಳನಗಳನ್ನು ನಡೆಸಲಾಯಿತು. ಕನ್ನಡ ಸಾಹಿತ್ಯದ ಬೆಳವಣಿಗೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಈ ಸಮ್ಮೇಳನಗಳನ್ನು ನಡೆಸಿದರಾದರೂ ಹೆಚ್ಚಿನ ಲಾಭವೇನೂ ಕಾಣಲಿಲ್ಲ. ಭಾಷಾಂತರವೂ ಸೇರಿದಂತೆ ಕನ್ನಡದಲ್ಲಿ ಕೃತಿಗಳ ಪ್ರಕಟಣೆಯಾದುದು ಒಂದು ಮಹತ್ವಾಕಾಂಕ್ಷೆಯ ಹೆಜ್ಜೆಯೆನ್ನಬಹುದು. ಸ್ವದೇಶಿ ಕಾರ್ಯಕ್ರಮದ ಮುಂದುವರಿಕೆಯಾಗಿ ರಾಷ್ಟ್ರೀಯ ಶಾಲೆಗಳನ್ನು ತೆರೆಯಲಾಯಿತು. ೧೯೦೯ರಲ್ಲಿ ಧಾರವಾಡದಲ್ಲಿ ಆಲೂರು ವೆಂಕಟರಾಯರು ಕರ್ನಾಟಕ ನೂತನ ವಿದ್ಯಾಲಯವನ್ನು ತೆರೆದರು. ಈ ಶಾಲೆಗಳಲ್ಲಿ ನೀಡಿದ ಶಿಕ್ಷಣ ಕ್ರಮದ ಮೂಲಕ ಸ್ವದೇಶಿ ಚಳವಳಿಯ ಮಹತ್ವವನ್ನು ಕಾಣಬಹುದು- ಅದರಲ್ಲಿ ಭಾರತೀಯವಾದ ವಸ್ತುಗಳ ತಯಾರಿಕೆಗೆ ಪ್ರಾಮುಖ್ಯತೆ ನೀಡಿದಂತೆಯೇ ವಿದ್ಯಾರ್ಥಿಗಳು ಸ್ವಾವಲಂಬಿಗಳಾಗುವುದರ ಕಡೆಯೂ ಒತ್ತು ನೀಡಲಾಗಿತ್ತು.

ಕನ್ನಡಿಗರಲ್ಲಿ ಇತಿಹಾಸ ಹಾಗು ಐತಿಹಾಸಿಕ ವ್ಯಕ್ತಿಗಳ ಬಗ್ಗೆ ಕುತೂಹಲವುಂಟುಮಾಡಲು ಸಾಧ್ಯವೆಂದು ಮನಗಂಡು ಆಲೂರರು ೧೯೧೪ರಲ್ಲಿ 'ಕರ್ನಾಟಕ ಇತಿಹಾಸ ಸಂಶೋಧನ ಮಂಡಲಿ' ಯನ್ನು ಸ್ಥಾಪಿಸಿದರು. ಮಂಡಲಿಯ ನಿಯತಕಾಲಿಕೆಯಾದ 'ಪ್ರಾಚೀನ ಇತಿಹಾಸ' ದ ಮೂಲಕ ಚಾರಿತ್ರಿಕ ಮಹತ್ವವುಳ್ಳ ಅನೇಕ ಸ್ಥಳಗಳ ಬಗ್ಗೆ ಲೇಖನಗಳನ್ನು ಪ್ರಕಟಿಸಲಾಯಿತು. ಪುರಾತತ್ವ ಇಲಾಖೆಯ ಸಹಾಯದಿಂದ ಮಂಡಲಿಯು ಅನೇಕ ಉತ್ಖನನಗಳನ್ನು ಸಹ ನಡೆಸಿತು.

ಮೈಸೂರು ಮಹಾರಾಜರ ಕೃಪಾಶ್ರಯದಲ್ಲಿ ೧೯೧೫ರಲ್ಲಿ ಬೆಂಗಳೂರಿನಲ್ಲಿ ನಡೆಸಿದ ಮೊದಲನೇ ಕರ್ನಾಟಕ ಸಾಹಿತ್ಯ ಸಮ್ಮೇಳನ ನಿಜಕ್ಕೂ ಒಂದು ಮಹತ್ವದ ಹೆಜ್ಜೆಯಾಗಿದೆ. ಬೇರೆ ಬೇರೆ ಭಾಗಗಳ ಕನ್ನಡಿಗರು ಒಂದೆಡೆ ಸೇರಿ ಮೊದಲನೆ ಬಾರಿಗೆ ಕರ್ನಾಟಕ ಏಕೀಕರಣ ಕುರಿತು ಚರ್ಚಿಸುವುದಕ್ಕೆ ಸಾಧ್ಯವಾಯಿತು. ಈ ಸಮ್ಮೇಳನದ ಮುಖ್ಯವಾದ ಲಾಭವೆಂದರೆ ಬೆಂಗಳೂರಿನಲ್ಲೇ ಕನ್ನಡ ಸಾಹಿತ್ಯ ಪರಿಷತ್ತನ್ನು ಸ್ಥಾಪಿಸಿದುದು. ಧಾರವಾಡದಲ್ಲಿ ಸ್ಥಾಪನೆಗೊಂಡ ಕರ್ನಾಟಕ ಸಭಾ ಕೂಡ ೧೯೧೭ರಲ್ಲಿ ಏಕೀಕರಣದ ಪ್ರಸ್ತಾಪ ಮಾಡಿತು. ಹಾಗಾಗಿ ಈ ಚಳವಳಿಯ ಮುಂಚೂಣಿಯಲ್ಲಿದ್ದವರು ಏಕೀಕರಣದ ಅಗತ್ಯವನ್ನು ಒತ್ತಿ ಹೇಳಲು ವೇದಿಕೆಗಳನ್ನು ಹೊಂದುವಂತಾಯಿತು.

ಸಾಹಿತ್ಯದ ಮೂಲಕ ಕನ್ನಡ ಪ್ರಜ್ಞೆಯನ್ನು ಬೆಳೆಸಲು ಪ್ರಾರಂಭವಾದ ಚಳವಳಿಯು ಏಕೀಕರಣದ ಸಮಸ್ಯೆಗೆ ಈಗ ರಾಜಕೀಯ ಪರಿಹಾರವನ್ನು ಕಂಡುಕೊಳ್ಳುವ ಕಡೆ ತುಡಿಯಿತು. ನೆನಪೋಲೆ ಹಾಗೂ ಮನವಿ ಪತ್ರಗಳನ್ನು ನೀಡುವುದು ನಿತ್ಯದ ಕೆಲಸವಾಯಿತು. ಹೋಂ ರೂಲ್ ಲೀಗ್‌ನ ಕರ್ನಾಟಕ ಘಟಕವನ್ನು ಸಂಘಟಿಸಿದಾಗ ಇದಕ್ಕೆ ಮತ್ತಷ್ಟು ಚಾಲನೆ ದೊರೆತ ಹಾಗಾಯಿತು. ಆಲೂರು ವೆಂಕಟರಾವ್, ಹೊನ್ನಾಪುರಮಠ, ಕೆ.ಆರ್. ಮುದ್ವೇಡ್ಕರ್, ಕಡಪ ರಾಘವೇಂದ್ರರಾವ್ ಮತ್ತು ಚಳವಳಿಯ ಇನ್ನಿತರ ಬೆಂಬಲಿಗರು ಸಾರ್ವಜನಿಕರಲ್ಲಿ ಪ್ರಜ್ಞೆ ಮೂಡಿಸುವುದಕ್ಕಾಗಿ ವ್ಯಾಪಕವಾದ ಸಂಚಾರ ಕೈಗೊಂಡರು. ಇದರ ಫಲವಾಗಿ, ಕರ್ನಾಟಕ ಏಕೀಕರಣಕ್ಕಾಗಿ ಸರ್ ಮಾಂಟೆಗ್ಯೂ ಅವರಿಗೆ ಬೇರೆ ಬೇರೆ ಭಾಗಗಳಿಂದ ಬಂದ ನೆನಪೋಲೆಗಳನ್ನು ಅರ್ಪಿಸಲಾಯಿತು. ೧೯೨೦ರಲ್ಲಿ ವಿ.ಪಿ. ಮಾಧವರಾವ್ ಅವರ ಅಧ್ಯಕ್ಷತೆಯಲ್ಲಿ ಅಖಿಲ ಕರ್ನಾಟಕ ಪ್ರಾಂತೀಯ ಸಮ್ಮೇಳನವನ್ನು ಧಾರವಾಡದಲ್ಲಿ ನಡೆಸಲಾಯಿತು. ತಮ್ಮ ಭಾಷಣದಲ್ಲಿ ಮಾಧವರಾಯರು ಕನ್ನಡದ ಎಲ್ಲ ನೆಲವನ್ನು ಒಂದುಗೂಡಿಸುವುದರ ಮೂಲಕ ಕನ್ನಡ ಪ್ರಾಂತ್ಯದ ರಚನೆಗಾಗಿ ಎಲ್ಲರೂ ಚಳವಳಿ ಹೂಡಬೇಕೆಂದು ಪ್ರೇಕ್ಷಕ ವೃಂದವನ್ನು ಆಗ್ರಹಪಡಿಸಿದರು.[೮] ನಾಗಪುರದಲ್ಲಿ ಸಮಾವೇಶಗೊಳ್ಳುತ್ತಿದ್ದ ಕಾಂಗ್ರೆಸ್ ಅಧಿವೇಶನಕ್ಕೆ ಕನ್ನಡದ ಪ್ರತಿನಿಧಿಗಳನ್ನು ಕಳುಹಿಸಬೇಕೆಂದು ತೀರ್ಮಾನ

ಕೈಗೊಳ್ಳಲಾಯಿತು. ಕನ್ನಡಿಗರು ಭಾಗವಹಿಸಲು ಆಗ್ರಹ ಪಡಿಸಲಾಯಿತಲ್ಲದೆ ಸುಮಾರು ೮೦೦ ಮಂದಿ ಪ್ರತಿನಿಧಿಗಳು ಪ್ರತ್ಯೇಕವಾದ ಕಾಂಗ್ರೆಸ್ ವೃತ್ತಕ್ಕಾಗಿ ಒತ್ತಾಯಿಸಿದರು. ಭಾಷಾವಾರು ರಾಜ್ಯಗಳ ಪರವಾಗಿದ್ದ ಭಾರತ ರಾಷ್ಟ್ರೀಯ ಕಾಂಗ್ರೆಸ್ ಈ ಬೇಡಿಕೆಯನ್ನು ಮನ್ನಿಸಿತು. ಹಾಗಾಗಿ ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿ ಅಸ್ತಿತ್ವಕ್ಕೆ ಬಂದಿತು. ಮತ್ತು ಅದರ ಕೇಂದ್ರ ಕಚೇರಿ ಗದಗದಲ್ಲಿ ಸ್ಥಾಪನೆಯಾಯಿತು.

ಅಸಹಕಾರ ಚಳವಳಿಯ ಅಲೆಯಿದ್ದ ಸಂದರ್ಭದಲ್ಲಿ ಬ್ರಿಟಿಷ್-ಕರ್ನಾಟಕ ಭಾಗವು ಕಾಂಗ್ರೆಸ್ ಕರೆಗೆ ಓಗೊಟ್ಟ ಕಾರಣ ಸ್ವಲ್ಪ ಕಾಲ ಏಕೀಕರಣದ ವಿಷಯವನ್ನು ಬದಿಗಿಡಬೇಕಾಯಿತು.[೯] ಬಹಿಷ್ಕಾರ ಮತ್ತು ಪಿಕೆಟಿಂಗ್ ಚಟುವಟಿಕೆಗಳು ವ್ಯಾಪಕವಾದುವು. ಅಸಹಕಾರ ಚಳವಳಿಯನ್ನು ನಿಲ್ಲಿಸಿದ ನಂತರವೂ ಬೊಂಬಾಯಿ ಕರ್ನಾಟಕ ಪ್ರದೇಶದಲ್ಲಿ ರಾಜಕೀಯ ಚಟುವಟಿಕೆಗಳು ಮುಂದುವರಿದವು. ೧೯೨೨ರಲ್ಲಿ ಮಂಗಳೂರಿನಲ್ಲಿ ಎರಡನೇ ರಾಜಕೀಯ ಸಮ್ಮೇಳನವು ಸರೋಜಿನಿನಾಯ್ಡು ಅವರ ಅಧ್ಯಕ್ಷತೆಯಲ್ಲಿ ನಡೆಯಿತು, ಮತ್ತೆ ೧೯೨೪ರಲ್ಲಿ ಗೋಕರ್ಣದಲ್ಲಿ ಜರುಗಿತು. ಧ್ವಜಸತ್ಯಾಗ್ರಹ ಕೂಡ ಯಶಸ್ವಿಯಾಯಿತು. ಬ್ರಿಟಿಷ್-ಕರ್ನಾಟಕ ಪ್ರದೇಶ ಹಾಗೂ ಕೊಡಗು ಪ್ರಾಂತ್ಯದಲ್ಲಿ ಅನೇಕ ಜನ ಪ್ರತಿನಿಧಿಗಳು ಭಾಗವಹಿಸಿದ್ದರಿಂದ ೧೯೨೪ರ ಬೆಳಗಾವಿ ಕಾಂಗ್ರೆಸ್ ಅಧಿವೇಶನವು ಏಕೀಕರಣದ ದೃಷ್ಟಿಯಲ್ಲಿ ಮಹತ್ವದ್ದಾಗಿ ಗೋಚರಿಸುತ್ತದೆ.[೧೦] ಕನ್ನಡಿಗರು ಅಖಿಲ ಭಾರತ ಹೋರಾಟದೊಡನೆ ತಮ್ಮನ್ನು ಗುರುತಿಸಿಕೊಳ್ಳುವ ದಿಶೆಯಲ್ಲಿ ಬೆಳಗಾವಿ ಅಧಿವೇಶನವು ಕನ್ನಡಿಗರಿಗೆ ಒಂದು ಅವಕಾಶ ಒದಗಿಸಿತು ಎನ್ನಬೇಕು. ಅಧಿವೇಶನ ನಡೆದ ಸ್ಥಳಕ್ಕೆ 'ವಿಜಯನಗರ' ವೆಂದು ನಾಮಕರಣ ಮಾಡಲಾಗಿತ್ತು. ಕನ್ನಡಿಗರ ಇತಿಹಾಸ ಹಾಗೂ ಸಂಸ್ಕೃತಿಯನ್ನು ಅವರ ಸ್ಮರಣೆಗೆ ಮತ್ತೆ ತರವಂಥ ಎಲ್ಲ ಪ್ರಯತ್ನಗಳನ್ನೂ ಮಾಡಲಾಗಿತ್ತು. ಹುಯಿಲುಗೋಳ ನಾರಾಯಣ ರಾಯರು ಹಾಡಿದ 'ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು' ಎಂಬ ಹಾಡು ಅತ್ಯಂತ ಭಾವನಾತ್ಮಕವಾಗಿದ್ದೂ ಕನ್ನಡಿಗರಲ್ಲಿ ಹೆಮ್ಮೆ ತರುವಂತಿತ್ತು. ಬೆಳಗಾವಿ ಅಧಿವೇಶನದ ಅತ್ಯಂತ ಮುಖ್ಯವಾದ ಫಲಿತಾಂಶವೆಂದರೆ ಮೊದಲನೇ ಕರ್ನಾಟಕ ಏಕೀಕರಣ ಸಮಾವೇಶವನ್ನು ನಡೆಸಿ ಕರ್ನಾಟಕ ಏಕೀಕರಣ ಸಭಾ(ಇದನ್ನು ತರುವಾಯ ಕರ್ನಾಟಕ ಏಕೀಕರಣ ಸಂಘವೆಂದು ಕರೆಯಲಾಯಿತು)ವನ್ನು ಸ್ಥಾಪಿಸಿದುದು.

ಏಕೀಕರಣದ ವಿಷಯವಾಗಿ ಕೆಪಿಸಿಸಿಯ ಉಪಸಮಿತಿಯ ಸಹಯೋಗದೊಂದಿಗೆ ಏಕೀಕರಣ ಸಭೆಯು ಶ್ಲಾಘನೀಯವಾದ ಕೆಲಸಗಳನ್ನು ಮಾಡಿತು. ೧೯೨೧ರಿಂದಲೇ ಬಳ್ಳಾರಿಯು ನಮಗೆ ಸೇರಬೇಕೆಂಬ ಕೂಗು ಕೇಳಿಬರುತ್ತಿದ್ದರೂ ಕೇಳ್ಕರ್ ತೀರ್ಪು ಬಳ್ಳಾರಿಯನ್ನು ಕರ್ನಾಟಕಕ್ಕೆ ನೀಡಿದ ಬಳಿಕ ಆ ಕೂಗು ಮತ್ತೂ ಸ್ಪಷ್ಟವಾಗತೊಡಗಿತು. ಹಾಗಾಗಿ ೧೯೩೫ರಲ್ಲಿ ಆಂಧ್ರ ವಿಶ್ವವಿದ್ಯಾನಿಲಯದ ಆಡಳಿತ ವ್ಯಾಪ್ತಿಯಿಂದ ಬಳ್ಳಾರಿಯನ್ನು ಬಿಡುಗಡೆ ಮಾಡುವ ದಿಶೆಯಲ್ಲಿ ಎಲ್ಲ ಪ್ರಯತ್ನಗಳನ್ನು ಮಾಡಲಾಯಿತು. ಆ ದಿಶೆಯಲ್ಲಿ ಸಮಸ್ಯೆಯ ಪರಿಹಾರಾರ್ಥವಾಗಿ ಶಾಸನ ಮಂಡಲಿಯ ಮನವೊಲಿಸಲು ಎರಡು ಬಾರಿ, ಅಂದರೆ ೧೯೩೫ ಮತ್ತು ೧೯೩೬ರಲ್ಲಿ ಎರಡು ನಿಯೋಗಗಳನ್ನು ಮದರಾಸಿಗೆ ಕಳುಹಿಸಲಾಯಿತು. ಪ್ರಯತ್ನಗಳು ಫಲ ನೀಡದಾದಾಗ ಕರ್ನಾಟಕ ಎಲ್ಲಾ ದೊಡ್ಡ ನಗರಗಳಲ್ಲಿ ಹಾಗೂ ಎಲ್ಲಾ ಸಮ್ಮೇಳನಗಳಲ್ಲಿ ಪ್ರತಿಭಟನೆಯ ಠರಾವುಗಳನ್ನು ಜಾರಿಗೊಳಿಸಲಾಯಿತು.[೧೧] 'ಏಕೀಕರಣವು ಕರ್ನಾಟಕ ಜನತೆಯ ಆಜನ್ಮ ಸಿದ್ಧ ಹಕ್ಕು' ಎಂದು ಘೋಷಣೆ ಮಾಡಿ ಕೆಪಿಸಿಸಿ ಉಪಸಮಿತಿ ಹಾಗೂ ಸಭಾ ಒಂದು ಸಹಿ ಸಂಗ್ರಹಣಾ ಚಳವಳಿಯನ್ನು ಪ್ರಾರಂಭಿಸಿದವು.[೧೨] ಕರ್ನಾಟಕ ಏಕೀಕರಣದ ವಿಷಯವಾಗಿ ಜನಾಭಿಪ್ರಾಯವನ್ನು ಬಲಪಡಿಸುವ ದಿಶೆಯಲ್ಲಿ ಸೇವಾದಳದವರು ಬೆಳಗಾವಿ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ೩೬,೦೦೦ ಸಹಿಯನ್ನು ಸಂಗ್ರಹಿಸಿದರು. ಅದೇ ವರ್ಷ ಬಳ್ಳಾರಿಯಲ್ಲಿ ನಾಲ್ಕನೇ ಕರ್ನಾಟಕ ಪ್ರಾದೇಶಿಕ ಸಮ್ಮೇಳನ, ಕರ್ನಾಟಕ ಏಕೀಕರಣದ ಎರಡನೇ ಸಮ್ಮೇಳನ ಹಾಗೂ ಅಖಿಲ ಕರ್ನಾಟಕ ಏಕೀಕರಣ ಸಮ್ಮೇಳನಗಳು ನಡೆದವು.

ತಮ್ಮ ಬೇಡಿಕೆಗನುಗುಣವಾಗಿ ೧೯೨೭ರಲ್ಲಿ ಕೊಡಗಿನಲ್ಲಿ ನಡೆದ ಜಮೀಂದಾರರ ಸಮ್ಮೇಳನದಲ್ಲಿ ಭಾಗವಹಿಸಿ ಎಸ್.ಪಿ.ಕೌಜಲಗಿ, ಆರ್.ಆರ್.ದಿವಾಕರ್, ಎನ್.ಎಸ್. ಹರ್ಡೀಕರ್ ಮತ್ತು ಎಸ್.ಪಿ. ಖಿಸೋಲ್ಕರ್‌ರವರು ಕರ್ನಾಟಕದೊಡನೆ ಕೊಡಗು ವಿಲೀನವಾಗಬೇಕೆಂಬ ಏಕೀಕರಣದ ಠರಾವನ್ನು ಮುಂದಿಟ್ಟರು. ಪ್ರತಿವರ್ಷದ ವಾರ್ಷಿಕ ಸಮ್ಮೇಳನದಲ್ಲಿ ಅದೇ ಠರಾವನ್ನು ಹೊರಡಿಸಿದರು. ಉತ್ತರ ಮತ್ತು ದಕ್ಷಿಣ ಕನ್ನಡ, ಕೊಳ್ಳೇಗಾಲ ಮತ್ತು ನೀಲಗಿರಿ ಪ್ರಾಂತ್ಯಗಳಲ್ಲಿ ಪ್ರವಾಸ ಕೈಗೊಂಡು ಏಕೀಕರಣದ ಪ್ರಾಮುಖ್ಯತೆಯನ್ನು ಜನರಿಗೆ ಮನವರಿಕೆ ಮಾಡಿಕೊಡುವ ಪ್ರಯತ್ನಗಳಾದವು. ೧೯೨೭ರ ಅಖಿಲ ಭಾರತ ಕಾಂಗ್ರೆಸ್ ಸಮಿತಿಯು ಒಂದು ಠರಾವು ಹೊರಡಿಸಿ ಪ್ರಸ್ತಾಪಿತವಾದ ಕರ್ನಾಟಕ ಏಕೀಕರಣವನ್ನು ಆ ಕೂಡಲೇ ಸಾಧಿಸಬೇಕೆಂದು ಆಗ್ರಹಪಡಿಸಲಾಯಿತು. ಶಾಸನಬದ್ಧ ಸಮಿತಿಯೂ ಸಹ ಭಾಷಿಕ ಆಧಾರದ ಮೇಲೆ ಕರ್ನಾಟಕದ ಪುನರ್ರಚನೆ ಆಗಬೇಕೆಂದು ಶಿಫಾರಸು ಮಾಡಿತು. ಅದೇ ವರ್ಷ ಆಗಸ್ಟ್ ತಿಂಗಳಿನಲ್ಲಿ ಮೈಸೂರು ಮಹಾರಾಜರ ರಜತ ಮಹೋತ್ಸವವನ್ನು ಕೇವಲ ಮೈಸೂರಿನಲ್ಲಲ್ಲದೆ ಕನ್ನಡದ ಇತರ ಪ್ರದೇಶಗಳಲ್ಲಿಯೂ ಆಚರಿಸಲಾಯಿತು.

೧೯೨೮ರಲ್ಲಿ ಸರ್ವಪಕ್ಷಗಳ ಸಮ್ಮೇಳನ ಮೋತಿಲಾಲ್ ನೆಹರೂ ಸಮಿತಿಯನ್ನು ನೇಮಕ ಮಾಡುವ ವೇಳೆಗೆ ಸುಸಂಘಟಿತವಾದ ಕರ್ನಾಟಕ ಏಕೀಕರಣ ಚಳವಳಿ ಪ್ರಾರಂಭವಾಗಿತ್ತಲ್ಲದೆ, ವಿಶಾಲವಾದ ತಳಹದಿಯನ್ನೂ ಹೊಂದಿತ್ತು. ಕನ್ನಡಿಗರ ಬೇಡಿಕೆಗಳ ಕಡೆ ಅನೇಕ ಸಂದರ್ಭದಲ್ಲಿ ಗಮನ ಹರಿಸಲಾಯಿತು. ನೆಹರೂ ಸಮಿತಿ ರಚನೆಯಾದ ತರುಣದಲ್ಲೇ ಕರ್ನಾಟಕ ಏಕೀಕರಣ ಸಮಿತಿಯ ಪ್ರತಿನಿಧಿಯೊಬ್ಬರು ಹಾಗೂ ಕೆಪಿಸಿಸಿಯ ಪ್ರತಿನಿಧಿ ಏಕೀಕರಣವನ್ನು ಒತ್ತಾಯಿಸಿ ೧೯೨೮ರ ಜೂನ್ ತಿಂಗಳಿನಲ್ಲಿ ಒಂದು ಮನವಿಯನ್ನು ಸಲ್ಲಿಸಿದರು. ಪ್ರತಿನಿಧಿಗಳೊಡನೆ ಸುದೀರ್ಘವಾದ ಚರ್ಚೆ ನಡೆಸಿದ ನಂತರ ಯೋಜನೆಯನ್ನು ಸಮಿತಿ ಆಮೂಲಾಗ್ರವಾಗಿ ಚರ್ಚಿಸಿತು. ಏಕೀಕರಣದ ವಿಷಯದಲ್ಲಿ ಎರಡು ಮಾತಿಲ್ಲವೆಂದು ಒಪ್ಪಿಕೊಂಡ ಸಮಿತಿಯೂ ಒಂದೇ ಕರ್ನಾಟಕ ಪ್ರಾಂತ್ಯವನ್ನು ರಚಿಸುವಲ್ಲಿ ಮೈಸೂರು ಸಂಸ್ಥಾನ ಹಾಗೂ ಇತರ ನೆರೆಹೊರೆ ರಾಜ್ಯಗಳಿಂದ ಆಗಬಹುದಾಗಿದ್ದ ಅಡ್ಡಿಯ ಬಗ್ಗೆ ಗಮನ ಸೆಳೆಯಿತು. ಮುಂದುವರಿದು ಸಮಿತಿ ಹೀಗೆ ಹೇಳಿತು: '......ಆರ್ಥಿಕವಾಗಿ ಕರ್ನಾಟಕದ ಸ್ಥಿತಿ ಉತ್ತಮವಾಗಿದೆ. ವರ್ತಮಾನದಲ್ಲಿ ಕೂಡ ಬ್ರಿಟಿಷ್ ಭಾಗದ ಕರ್ನಾಟಕದಲ್ಲಿ ಹೆಚ್ಚುವರಿ ಸಂಪತ್ತು ಇದೆ'.[೧೦] ನೆಹರೂ ಸಮಿತಿಯ ಶಿಫಾರಸುಗಳು ಏಕೀಕರಣದ ಹೋರಾಟದಲ್ಲಿ ಇನ್ನೊಂದು ಮಹತ್ವದ ಹೆಜ್ಜೆಯೆಂದು ಹೇಳಬೇಕು. ೧೯೨೮ರ ಆಗಸ್ಟ್‌ನಲ್ಲಿ ಲಖ್ನೊದಲ್ಲಿ ಸೇರಿದ ಸರ್ವ ಪಕ್ಷ ಸಮ್ಮೇಳನದಲ್ಲಿ ಸಹ ಈ ಕುರಿತಾಗಿ ಒಂದು ಠರಾವು ಹೊರಡಿಸಲಾಗಿತ್ತು.

ಬ್ರಿಟಿಷ್ ಭಾರತ ಪ್ರಾಂತ್ಯಗಳಲ್ಲಿ ಏಕೀಕರಣಕ್ಕಾಗಿ ಚಳವಳಿ ತೀವ್ರತರವಾಗುತ್ತಿದ್ದರೆ ದೇಶೀಯ ಸಂಸ್ಥಾನಗಳಲ್ಲಿ ಪ್ರತಿಕ್ರಿಯೆ ಹೆಚ್ಚು ಕಂಡುಬರಲಿಲ್ಲ. ಮೈಸೂರಿಗರ ಮನವೊಲಿಸಲು ಸತತ ಪ್ರಯತ್ನಗಳಾದುವಾದರೂ ಸುಲಭವಾಗಿ ಅವರು ಚಳವಳಿಯ ಕಡೆ ವಾಲಲಿಲ್ಲವೆಂಬುದು ಗಮನಿಸಬೇಕಾದ ಸಂಗತಿ. ಆಳುವವರು ಹಾಗೂ ಆಳಿಸಿಕೊಳ್ಳುವವರು– ಇಬ್ಬರೂ ಈ ವಿಷಯವನ್ನು ಒಂದು ರಾಜಕೀಯ ಸಂಗತಿಯಾಗಿ ಕಂಡರು.[೧೧] ಬ್ರಿಟಿಷ್ ಕರ್ನಾಟಕ ಭಾಗದವರ ದೃಷ್ಟಿಯಲ್ಲಿ ಕನ್ನಡ ಸಾಹಿತ್ಯ ಪರಿಷತ್ತು, ಕರ್ನಾಟಕ ಏಕೀಕರಣವನ್ನು ಸಾಧಿಸುವ ಸಲುವಾಗಿ ನಿರ್ಮಾಣವಾದ ವೇದಿಕೆಯೆಂಬ ಗುಮಾನಿಯಿತ್ತು. ಆದರೆ ವಾಸ್ತವವಾಗಿ ಪರಿಷತ್ತು ಕನ್ನಡ ಭಾಷೆ ಮತ್ತು ಸಾಹಿತ್ಯದ ಬೆಳವಣಿಗೆಯ ಬಗ್ಗೆ ಹೆಚ್ಚು ಗಮನ ಕೇಂದ್ರೀಕರಿಸಿತ್ತೇ ಹೊರತು ಏಕೀಕರಣದ ಸಮಸ್ಯೆ ಅಷ್ಟಾಗಿ ಅದರ ಲಕ್ಷ್ಯದಲ್ಲಿರಲಿಲ್ಲ. ಮೈಸೂರು ಸರ್ಕಾರವೂ ಪರಿಷತ್ತಿಗೆ ಪ್ರೋತ್ಸಾಹ ನೀಡಿತೆಂಬುದು ನಿಜವಾದರೂ, ಸಾಹಿತ್ಯವನ್ನು ಉತ್ತೇಜಿಸಲು ನೀಡಿದ ಪ್ರೋತ್ಸಾಹವದು ಎಂಬುದನ್ನು ಮರೆಯುವಂತಿಲ್ಲ. ಏಕೀಕರಣದ ವಿಷಯದಲ್ಲಿ ಸಕ್ರಿಯವಾಗಿ ಪಾಲುಗೊಳ್ಳದ ಪರಿಷತ್ತಿನ ಧೋರಣೆಯಿಂದ


ಮೈಸೂರು ಸಂಸ್ಥಾನ
ಶಿವಮೊಗ್ಗ
ಚಿತ್ರದುರ್ಗ
ಚಿಕ್ಕಮಗಳೂರು
ತುಮಕೂರು
ಕೋಲಾರ
ಹಾಸನ
ಬೆಂಗಳೂರು
ಮಂಡ್ಯ
ಮೈಸೂರು
ಉ
ಪ
ಪೂ
ದ

ಚಳವಳಿಯ ಮುಂಚೂಣಿಯಲ್ಲಿದ್ದ ಆಲೂರು ವೆಂಕಟರಾವ್ ಅಂಥವರು ಸಹಜವಾಗಿಯೇ ನಿರಾಶೆಗೊಂಡರು; ಆಲೂರರು ಮತ್ತವರ ಸಹಚರರು ಈ ಕಾರಣಕ್ಕಾಗಿ ಕಾಲಾನಂತರದಲ್ಲಿ ಪರಿಷತ್ತಿನಿಂದ ದೂರವಾದರು. ಪರಿಷತ್ತು ಒಂದು ಹೆಜ್ಜೆ ಮುಂದೆ ಹೋಗಿ ಇದು ರಾಜಕೀಯವಾದ ಸಮಸ್ಯೆಯಾಗಿರುವ ಕಾರಣ ಇದರ ಚರ್ಚೆಯಲ್ಲಿ ತಾನು ಭಾಗಿಯಾಗುವುದಿಲ್ಲವೆಂದು ಕೂಡ ಘೋಷಿಸಿತು.[೧೫]

ನಾವು ಮೊದಲೇ ಗಮನಿಸಿದ ಹಾಗೆ, ಏಕೀಕರಣ ಚಳವಳಿಯು ಸ್ವಾತಂತ್ರ್ಯ ಚಳವಳಿಯೊಂದಿಗೆ ಸಂಬಂಧ ಪಡೆದಿತ್ತು. ಏಕೀಕರಣದ ವಿಷಯವನ್ನು ಗಂಭೀರವಾಗಿ ಪರಿಗಣಿಸಿದ ಕೆಪಿಸಿಸಿಯು ಆ ಕುರಿತು ಹೋರಾಟ ಮಾಡುವ ಸಲುವಾಗಿ ಒಂದು ಉಪಸಮಿತಿಯನ್ನೂ ರಚಿಸಿತ್ತು. ಕರ್ನಾಟಕ ಏಕೀಕರಣ ಸಂಘ, ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯ ಉಪಸಮಿತಿಯೊಡಗೂಡಿ ಸಾರ್ವಜನಿಕ ಅಭಿಪ್ರಾಯವನ್ನು ರೂಢಿಸುವಲ್ಲಿ ಯಶಸ್ವಿಯಾಯಿತು. ಮಹಾರಾಷ್ಟ್ರದ ನಾಯಕರು ಮತ್ತು ಪತ್ರಿಕೆಗಳು ಬೆಂಬಲ ಸೂಚಿಸಿದ ಪರಿಣಾಮವಾಗಿ ಈ ಚಳವಳಿಗೆ ಗರಿ ಮೂಡಿತು. ಮಹಾರಾಷ್ಟ್ರದ ಧೋರಣೆಯ ಕುರಿತು ಅಲ್ಲಿನ ಹಿರಿಯರಲ್ಲೊಬ್ಬರಾದ ಎನ್.ಸಿ.ಕೇಳ್ಕರ್‌ರವರು ಹೀಗೆ ಹೇಳಿದರು: '.....ಬೊಂಬಾಯಿ ಪ್ರೆಸಿಡೆನ್ಸಿಯ ಬ್ರಿಟಿಷ್ ಪ್ರಾಂತ್ಯಗಳಲ್ಲಿ ಮೂಲತಃ ಕನ್ನಡ ಮಾತನಾಡುವ ಪ್ರದೇಶಗಳನ್ನು, ಭಾಷೆಯ ಪರಂಪರೆ ಮತ್ತು ಸಂಸ್ಕೃತಿಯ ದೃಷ್ಟಿಯಿಂದ, ಒಪ್ಪಿಸಿದರೆ ನಮ್ಮ ಅಭ್ಯಂತರವೇನೂ ಇಲ್ಲ..... '[೧೬] ಏಕೀಕರಣಕ್ಕಾಗಿ ಅನೇಕ ಸಾರ್ವಜನಿಕ ಸಂಘಟನೆಗಳೂ ಕೂಡ ಸೇರಿದವು. ೧೯೩೭ರ ಅಕ್ಟೋಬರ್ ೧೧ನೇ ದಿನವನ್ನು 'ಕರ್ನಾಟಕ ಏಕೀಕರಣ ದಿನ' ವನ್ನಾಗಿ ಆಚರಿಸಲಾಯಿತು. ಪ್ರತಿಯೊಂದು ಹಳ್ಳಿ ಹಾಗೂ ಪಟ್ಟಣದಲ್ಲಿ ಏಕೀಕರಣದ ದಿನವನ್ನು ಜನರು ಆಚರಿಸಿದರು.

ಮೈಸೂರಿನವರ ಮೇಲೆ ಮಾತ್ರ ಈ ಬೆಳವಣಿಗೆಗಳಿಂದ ಅಂಥ ಪರಿಣಾಮವಾಗಲಿಲ್ಲ. ದೇಶೀಯ ಸಂಸ್ಥಾನದಲ್ಲಿ ಸ್ವಾತಂತ್ರ್ಯ ಚಳವಳಿಯು ಆಳವಾಗಿ ಬೇರು ಬಿಟ್ಟಿರಲಿಲ್ಲ. ಜೊತೆಗೆ ಮೈಸೂರು ಕಾಂಗ್ರೆಸ್ಸಿನವರಿಗೂ ಬ್ರಿಟಿಷ್ ಕರ್ನಾಟಕ ಪ್ರಾಂತ್ಯದ ಕಾಂಗ್ರೆಸ್ಸಿಗರಿಗೂ ಮೈತ್ರಿಯುತವಾದ ಸಂಬಂಧವಿರಲಿಲ್ಲ. ಬ್ರಿಟಿಷ್ ಕರ್ನಾಟಕ ಪ್ರಾಂತ್ಯದವರ ಕಠಿಣ ಬದುಕಿನ ರೀತಿಯಲ್ಲಿ ಮೈಸೂರಿಗರಿಗೆ ಬ್ರಿಟಿಷರ ನೇರವಾದ ಆಡಳಿತದ ಪರಿಚಯವಿರದಿದ್ದ ಕಾರಣ ಏಕೀಕರಣದ ವಿಷಯದಲ್ಲಿ ಅವರಿಗೆ ತುರ್ತು ಇದ್ದಂತೆ ಕಂಡುಬರಲಿಲ್ಲ. ಮೇಲುನೋಟಕ್ಕೆ ಮೈಸೂರಿನವರು ಬ್ರಿಟಿಷ್ ಭಾರತ ಪ್ರಾಂತ್ಯದ ಜನರಿಗಿಂತ ಹೆಚ್ಚು ತೃಪ್ತರಾಗಿ ತೋರಿದರು. ಸಾಂಸ್ಕೃತಿಕವಾಗಿ ಮೈಸೂರು ಹೆಚ್ಚು ಪ್ರಗತಿ ಸಾಧಿಸಿದೆಯೆಂಬ ಕಲ್ಪನೆ ವ್ಯಾಪಕವಾಗಿತ್ತು. ಸಾರ್ವಜನಿಕ ಅಭಿಪ್ರಾಯ ಸಮಗ್ರವಾಗಿಲ್ಲದಿದ್ದರೂ ಕೂಡ ಸಾಹಿತಿಗಳು ಹಾಗೂ ಪತ್ರಿಕಾರಂಗ ಏಕೀಕರಣದ ಪರವಾಗಿದ್ದುದು ಕಂಡುಬಂದಿತು. ಸಾಧ್ವಿ, ಕರ್ನಾಟಕ ವೃತ್ತಾಂತ ಚಿಂತಾಮಣಿ, ಧನುರ್ಧಾರಿ, ಒಕ್ಕಲಿಗರ ಪತ್ರಿಕೆ, ಮೈಸೂರು ಸ್ಟಾರ್, ಚಿತ್ರಗುಪ್ತ, ತಾಯಿನಾಡು, ಸಂಯುಕ್ತ ಕರ್ನಾಟಕ ಹಾಗೂ ವೀರಕೇಸರಿ ಇಂಥ ಪತ್ರಿಕೆಗಳು ಏಕೀಕರಣವನ್ನು ಎತ್ತಿಹಿಡಿದವು.

ಈ ಶತಮಾನದ ಮೂರನೇ ದಶಕದವರೆಗೆ ಇದೇ ಪರಿಸ್ಥಿತಿ ಮುಂದುವರಿಯಿತು. ಬ್ರಿಟಿಷ್ ಕರ್ನಾಟಕ ಪ್ರಾಂತ್ಯದ ಕಾಂಗ್ರೆಸ್ಸಿಗರಿಗೆ–ಆರಂಭದಲ್ಲಿ ಏಕೀಕರಣಕ್ಕಾಗಿ ತುದಿಗಾಲಲ್ಲಿದ್ದವರು–ಮೈಸೂರು ಪ್ರಜಾ ಸಂಯುಕ್ತ ಪಕ್ಷವು ಕಾಂಗ್ರೆಸ್ಸಿನೊಡನೆ ವಿಲೀನಗೊಂಡು ಕೆಪಿಸಿಸಿಯಿಂದ ಪ್ರತ್ಯೇಕವಾದ ಕಾಂಗ್ರೆಸ್ ವೃತ್ತವನ್ನು ರಚಿಸಿಕೊಂಡ ಬಳಿಕ ಮೈಸೂರು ರಾಜಕಾರಣಿಗಳ ಬಗ್ಗೆ ಗುಮಾನಿ ಉಂಟಾಯಿತು. ಬಹುಸಂಖ್ಯೆಯಲ್ಲಿ ಏಕೀಕರಣ ಸಮ್ಮೇಳನಗಳು ನಡೆದಾಗ್ಯೂ ಮೈಸೂರಿಗರಲ್ಲಿ ಹೆಚ್ಚಿನ ಉತ್ಸಾಹವನ್ನು ಮಾತ್ರ ಮೂಡಿಸಲಿಲ್ಲ. ಆದರೆ ಚಳವಳಿಗೆ ಪ್ರತಿಸ್ಪಂದಿಸದೆ ದೀರ್ಘಕಾಲದವರೆಗೆ ವಿಮುಖವಾಗಿರುವುದು ಕೂಡ ಮೈಸೂರಿನವರಿಗೆ ಸಾಧ್ಯವಾಗಲಿಲ್ಲ. ೧೯೩೭ರ ಕಲ್ಕತ್ತಾ ಅಧಿವೇಶನದ ಮೂಲಕ ಸ್ಪಷ್ಟವಾಗುವಂತೆ ಭಾರತ ರಾಷ್ಟ್ರೀಯ




ಮುಂಬಯಿ ಕರ್ನಾಟಕ

ಕಾಂಗ್ರೆಸ್ಸು ಭಾಷಾವಾರು ಪ್ರಾಂತ್ಯಗಳ ಪರವಾಗಿದ್ದದ್ದನ್ನು ಕಾಣಬಹುದಾಗಿದೆ. ಮೈಸೂರಿನವರು ಜವಾಬ್ದಾರಿ ಸರ್ಕಾರವನ್ನು ಹೊಂದಲು ಹೆಚ್ಚು ಕಾತರರಾಗಿದ್ದರು. ಆದರೆ ಬೆಂಗಳೂರಿನಲ್ಲಿ ಸ್ಥಾಪನೆಯಾದ ಏಕೀಕರಣ ಸಂಘವು ಗಡಿನಾಡಿನಲ್ಲಿ ಹೆಚ್ಚು ಕ್ರಿಯಾಶೀಲವಾಗಿದ್ದಿತೆ ಹೊರತು ರಾಜ್ಯದ ಒಳನಾಡಿನಲ್ಲಿ ಅದರ ಚಟುವಟಿಕೆ ಹೇಳಿಕೊಳ್ಳುವಂತಿರಲಿಲ್ಲ. ಇದಕ್ಕೆ ಮೊದಲು ಪ್ರಜಾ ಸಂಯುಕ್ತ ಪಕ್ಷವು ಏಕೀಕರಣವನ್ನು ಒಪ್ಪಿ ಒಂದು ಠರಾವು ಹೊರಡಿಸಿತ್ತಾದರೂ ಅದರ ಪ್ರಸ್ತಾಪನೆ ದ್ವಂದ್ವದಿಂದ ಕೂಡಿತ್ತು. ಕೇಂದ್ರದಲ್ಲಿ ಹಾಗೂ ಪ್ರಾಂತ್ಯಗಳಲ್ಲಿ ಕಾಂಗ್ರೆಸ್ ಪಕ್ಷ ತಾತ್ಕಾಲಿಕ ಸರ್ಕಾರಗಳನ್ನು ರಚಿಸಿದಾಗಲೂ ಸಹ ಅಂಥದೇ ಠರಾವನ್ನು ಹೊರಡಿಸಲಾಯಿತು. ಕಾಂಗ್ರೆಸು ಸರ್ಕಾರಗಳು ಸ್ಥಾಪನೆಯಾದ ಬೆನ್ನಲೆಯಲ್ಲಿ ಏಕೀಕರಣದ ಪ್ರಕ್ರಿಯೆಯು ತೀವ್ರಗತಿಯಲ್ಲಿ ಸಾಗುವುದೆಂದು ಜನರು ತಿಳಿದರು.[೧೭] ಆ ನಡುವೆ ಜವಾಬ್ದಾರಿ ಸರ್ಕಾರಕ್ಕಾಗಿ ಮೈಸೂರಿನವರ ಬೇಡಿಕೆ ಪರಾಕಾಷ್ಠೆ ಮುಟ್ಟಿತು. ಚಳವಳಿಯನ್ನು ಹತ್ತಿಕ್ಕಲು ದಮನಕಾರಿ ಕ್ರಮಗಳನ್ನು ಕೈಗೊಳ್ಳಲು ಸರ್ಕಾರ ನಿರ್ಧರಿಸಿತು. ಆದರೆ ಬ್ರಿಟಿಷ್-ಕರ್ನಾಟಕ ಅಥವಾ ದೇಶೀಯ ಸಂಸ್ಥಾನದ ಭಾಗಗಳಿಂದ ಕೇಳಿಬಂದ ಕೂಗಿಗೆ ಓಗೊಡಲು ಬ್ರಿಟಿಷರು ಸಿದ್ಧರಿರಲಿಲ್ಲ.

ಬ್ರಿಟಿಷ್ ಭಾರತದಲ್ಲಿ ಏಕೀಕರಣದ ಚಟುವಟಿಕೆಗಳು ಅವ್ಯಾಹತವಾಗಿ ನಡೆದೇ ಇದ್ದವು. ಬೊಂಬಾಯಿ ಹಾಗೂ ಮದರಾಸು ಶಾಸನ ಸಭೆಗಳೂ ಕೂಡ ಏಕೀಕರಣದ ಬೇಡಿಕೆಯನ್ನು ಮುಂದಿಡುವ ವೇದಿಕೆಗಳಾಗಿ ಪರಿವರ್ತನೆಗೊಂಡಿದ್ದವು. ಕರ್ನಾಟಕ ಏಕೀಕರಣದ ಪ್ರಸ್ತಾವನೆಯನ್ನು ಎರಡೂ ಶಾಸನಸಭೆಗಳೂ ಒಪ್ಪಿಕೊಂಡಿದ್ದವು. ಕರ್ನಾಟಕದ ನಾಯಕರ ನಿಯೋಗವೊಂದು ವಾರ್ಧಾಕ್ಕೆ ತೆರಳಿ ಅಲ್ಲಿ ಕಾಂಗ್ರೆಸ್ ಕ್ರಿಯಾ ಸಮಿತಿಯೊಂದಿಗೆ ಚರ್ಚಿಸಿ ಈ ಸಂಗತಿಯನ್ನು ಸಹಾನುಭೂತಿಯಿಂದ ಪರಿಗಣಿಸಬೇಕೆಂದು ವಿನಂತಿಸಿಕೊಂಡಿತು. ಕೇಂದ್ರದಲ್ಲಿ ಕಾಂಗ್ರೆಸ್ ಸರ್ಕಾರ ಅಸ್ತಿತ್ವಕ್ಕೆ ಬರುತ್ತಿದ್ದಂತೆಯೇ ಏಕೀಕರಣವು ಸಾಧಿತವಾಗುವುದೆಂದು ಕಾಂಗ್ರೆಸ್ ಕ್ರಿಯಾ ಸಮಿತಿ ತಿಳಿಸಿತು.[೧೮] ೧೯೩೮ರಿಂದ ಈ ಚಳವಳಿಗೆ ಸ್ವಲ್ಪ ಹಿನ್ನಡೆಯಾಯಿತು. ೧೯೩೯ರಲ್ಲಿ ಎರಡನೇ ಮಹಾಯುದ್ಧ ಪ್ರಾರಂಭವಾದ ಹಿನ್ನಲೆಯಲ್ಲಿ ಕಾಂಗ್ರೆಸ್ ಸಚಿವ ಸಂಪುಟ ರಾಜೀನಾಮೆ ನೀಡಿತು; ೧೯೪೧-೪೨ರಲ್ಲಿ ವಿಶೇಷವಾಗಿ ಕ್ವಿಟ್ ಇಂಡಿಯಾ ಚಳವಳಿ ಪ್ರಾರಂಭವಾದಾಗ ರಾಜಕೀಯ ಚಟುವಟಿಕೆ ಹೆಚ್ಚಿತು. ೧೯೪೦ರಲ್ಲಿ ನಾಗನಗೌಡರ ಅಧ್ಯಕ್ಷತೆಯಲ್ಲಿ ಸೊಲ್ಲಾಪುರದಲ್ಲಿ ಏಕೀಕರಣ ಸಮ್ಮೇಳನವನ್ನು ನಡೆಸಿದಾಗ್ಯೂ ಈ ಮೇಲೆ ಕಾಣಿಸಿದ ಬೆಳವಣಿಗೆಗಳಿಂದಾಗಿ ಏಕೀಕರಣ ಚಳವಳಿ ನಿಲುಗಡೆಗೆ ಬಂದಿತು. ಆದರೆ ೧೯೪೩ರಿಂದ ಚಳವಳಿಗೆ ಚಾಲನೆ ದೊರೆಯಿತು. ಬಳ್ಳಾರಿಯಲ್ಲಿ ಆಂಧ್ರ ಸಮ್ಮೇಳನವನ್ನು ನಡೆಸಲು ಉದ್ದೇಶಿಸಿದ ಹಿನ್ನೆಲೆಯಲ್ಲಿ ಬಳ್ಳಾರಿಯ ಕನ್ನಡ ಯುವಕರು ಸತ್ಯಾಗ್ರಹಕ್ಕಾಗಿ ಸುಮಾರು ಐದುನೂರು ಮಂದಿಯನ್ನು ಕಲೆಹಾಕಿದಾಗ ಮತ್ತೆ ಚಳವಳಿಯಲ್ಲಿ ಹೊಸ ಆಸಕ್ತಿ ಮೂಡಿತು.[೧೯] ಮುಖ್ಯಮಂತ್ರಿ ಬಿ.ಜಿ.ಖೇರ್ ಅವರ ಅಧ್ಯಕ್ಷತೆಯಲ್ಲಿ (೧೯೪೬) ಬೊಂಬಾಯಿಯಲ್ಲಿ ಹತ್ತನೇ ಏಕೀಕರಣ ಸಮಾವೇಶ ನಡೆಯಿತು. ವಲ್ಲಭಬಾಯಿ ಪಟೇಲರು ಸಮಾವೇಶವನ್ನು ಉದ್ಘಾಟಿಸಿದರು.

ಆ ವೇಳೆಗಾಗಲೇ ಬ್ರಿಟಿಷರು ದೇಶ ಬಿಟ್ಟು ಹೋಗುವರೆಂದು ಬಹಳಷ್ಟು ಖಚಿತವಾಗಿತ್ತು. ಹೊಸ ಸಂವಿಧಾನದ ರಚನೆಗಾಗಿ ಶಾಸನರಚನಾ ಮಂಡಲಿ ದೆಹಲಿಯಲ್ಲಿ ಸಭೆ ಸೇರಿತು. ೧೯೪೬ರಲ್ಲಿ ದಾವಣಗೆರೆಯಲ್ಲಿ ಏಕೀಕರಣ ಸಮಾವೇಶ ನಡೆಯಿತು. ವಾಸ್ತವವಾಗಿ ಮೈಸೂರು ರಾಜ್ಯದಲ್ಲಿ ಮೊದಲ ಬಾರಿಗೆ ಸಮಾವೇಶವೊಂದನ್ನು ನಡೆಸಲಾಗಿತ್ತು. ಆದಷ್ಟು ಶೀಘ್ರವಾಗಿ ಕರ್ನಾಟಕದ ಬೇಡಿಕೆಯನ್ನು ಈಡೇರಿಸಬೇಕೆಂದು ಸಮಾವೇಶದಲ್ಲಿ ಶಾಸನ ರಚನಾ ಮಂಡಲಿಯನ್ನು ಮನವಿ ಮಾಡಿಕೊಳ್ಳಲಾಯಿತು. ಈ ಸಮಸ್ಯೆಯ ಬಗ್ಗೆ ಮುಂದುವರಿದು ಗಮನ ಸೆಳೆಯಲು ಎಂ.ಪಿ.ಪಾಟೀಲ್, ಎಸ್.ನಿಜಲಿಂಗಪ್ಪ ಹಾಗೂ ಕೆ.ಬಿ.ಜಿನರಾಜ ಹೆಗ್ಡೆ ಇವರನ್ನೊಳಗೊಂಡ ಮೂರು-ಮಂದಿ ಸಮಿತಿಯನ್ನು ನೇಮಕ ಮಾಡಲಾಯಿತು.[೨೦] ಬಹುಸಂಖ್ಯೆಯಲ್ಲಿ ಮೈಸೂರು ಪ್ರಾಂತ್ಯದವರು




ಹೈದರಾಬಾದ್ (ನಿಜಾಂ) ಕರ್ನಾಟಕ

ಸಮಾವೇಶದಲ್ಲಿ ಭಾಗವಹಿಸಿದ್ದರು. ಏಕೀಕರಣದ ಬೇಡಿಕೆಗೆ ಮೈಸೂರು ಕಾಂಗ್ರೆಸ್ ತನ್ನ ಬೆಂಬಲ ಸೂಚಿಸಿತು. ಜವಾಬ್ದಾರಿ ಸರ್ಕಾರಕ್ಕಾಗಿ ಮೈಸೂರಿಗರು ಸಲ್ಲಿಸಿದ್ದ ಬೇಡಿಕೆಯನ್ನು ಇನ್ನೂ ಈಡೇರಿಸಿರಲಿಲ್ಲ. ಜವಾಬ್ದಾರಿ ಸರ್ಕಾರ ರಚನೆಯಾಗುವುದೆಂಬ ಆಶಯದಿಂದ ಪ್ರಾಯಶಃ ಮೈಸೂರಿಗರು ಸಮಾವೇಶಕ್ಕೆ ಬೆಂಬಲ ಸೂಚಿಸಿದ್ದರು. ಮೈಸೂರಿನಲ್ಲಿ ಜವಾಬ್ದಾರಿ ಸರ್ಕಾರವನ್ನು ಹೊಂದಿದ ನಂತರವೇ ಅಖಂಡ ಕರ್ನಾಟಕದಲ್ಲಿ ಮೈಸೂರನ್ನು ಸೇರ್ಪಡೆ ಮಾಡಿಕೊಳ್ಳುವುದಾಗಿ ತೀರ್ಮಾನಿಸಲಾಯಿತು. ಮೈಸೂರಿನ ಪ್ರತಿನಿಧಿಗಳು ಈ ತೀರ್ಮಾನದಿಂದ ಸಹಜವಾಗಿಯೇ ನಿರಾಶೆ ಹೊಂದಿದ್ದರು. ಅಲ್ಲಿ ತೆಗೆದುಕೊಂಡ ನಿಲುವಿನ ವಿರುದ್ಧ ಕೆಂಗಲ್ ಹನುಮಂತಯ್ಯನವರು ಪ್ರತಿಭಟಿಸಿದರು. ಜವಾಬ್ದಾರಿ ಸರ್ಕಾರವನ್ನು ಸ್ಥಾಪಿಸುವಲ್ಲಿ ಕೆಪಿಸಿಸಿಯು ಮೈಸೂರು ಕಾಂಗ್ರೆಸ್ಸಿಗೆ ಬೆಂಬಲ ನೀಡಿ ಸಹಕರಿಸುವುದೆಂದು ಮೈಸೂರು ಪ್ರತಿನಿಧಿಗಳಿಗೆ ವಾಗ್ದಾನ ಮಾಡಲಾಯಿತು. ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನವರು ಸೂಚಿಸಿದ್ದ ತತ್ವವನ್ನು ಮೈಸೂರು ಪ್ರದೇಶ ಕಾಂಗ್ರೆಸ್ ಪಕ್ಷ ಸ್ವೀಕರಿಸಿತ್ತು. ಬೆಂಗಳೂರು ಅಧಿವೇಶನದಲ್ಲಿ ಕೆ.ಸಿ.ರೆಡ್ಡಿಯವರ ಅಧ್ಯಕ್ಷತೆಯಲ್ಲಿ ಮೈಸೂರು ಕಾಂಗ್ರೆಸ್ ಕನ್ನಡ ಮಾತನಾಡುವ ಎಲ್ಲ ಪ್ರದೇಶಗಳನ್ನು ಒಟ್ಟು ಗೂಡಿಸುವುದರ ಬಗ್ಗೆ ಮಾತನಾಡಿದರು. ಎಸ್.ನಿಜಲಿಂಗಪ್ಪನವರ ಅಧ್ಯಕ್ಷತೆಯಲ್ಲಿ ಕರ್ನಾಟಕ ಏಕೀಕರಣ ಮಹಾಸಮಿತಿಯು ಸಮಸ್ಯೆಯ ಶೀಘ್ರ ಪರಿಹಾರಕ್ಕಾಗಿ ಒತ್ತಾಯಿಸಿತು.

ಸ್ವಾತಂತ್ರ್ಯಗಳಿಸಿದ ನಂತರ ಕರ್ನಾಟಕ ಏಕೀಕರಣದ ಬೇಡಿಕೆ ಇಮ್ಮಡಿಯಾಯಿತು. ರಾಷ್ಟ್ರವಿಭಜನೆ ಹಾಗೂ ಇತರ ಸಮಸ್ಯೆಗಳಿಗೆ ಗಮನ ಹರಿಸಬೇಕಾಗಿದ್ದ ಕಾರಣ ಕೇಂದ್ರದಲ್ಲಿನ ಸರ್ಕಾರವು ರಾಜ್ಯದ ಸಮಸ್ಯೆಯನ್ನು ಬದಿಗಿಟ್ಟಂತೆ ತೋರುತ್ತದೆ. ೧೯೪೮ರಲ್ಲಿ ಧರ್ ಸಮಿತಿಯನ್ನು ನೇಮಿಸಿ ಸಮಸ್ಯೆಯನ್ನು ವಿಶದವಾಗಿ ಚರ್ಚಿಸಿ ಶಿಫಾರಸುಗಳೊಡನೆ ಒಂದು ವರದಿ ಸಲ್ಲಿಸಬೇಕೆಂದು ತಿಳಿಸಲಾಯಿತು. ಪ್ರಸ್ತಾಪಿತ ಅಖಂಡ ಕರ್ನಾಟಕದ ಒಂದು ಭಾಗವಾಗಲು ಮೈಸೂರು ಇನ್ನೂ ಸಿದ್ಧವಿಲ್ಲವೆಂದೂ ಹಾಗೆಯೇ ಮೈಸೂರು ರಾಜ್ಯದ ಭಾಗವಾಗಿರುವುದಾಗಿ ಕೊಡಗು ಇಚ್ಛಿಸುವುದಾಗಿಯೂ ವರದಿಯಲ್ಲಿ ಸಮಿತಿ ತಿಳಿಸಿತ್ತು.[೨೦] ಭಾಷಾವಾರು ಪ್ರಾಂತ್ಯಗಳನ್ನು ರಚಿಸುವುದು ಅನಿವಾರ್ಯವಾದಲ್ಲಿ ಆರ್ಥಿಕ, ಹಣಕಾಸು, ಆಡಳಿತಾತ್ಮಕವಾದ ಜವಾಬ್ದಾರಿಗಳ ಬಗ್ಗೆಯೂ ಸಮಿತಿ ಅಧ್ಯಯನ ಮಾಡಬೇಕೆಂದು ಸೂಚಿಸಲಾಗಿತ್ತು; ಅದರ ಪ್ರಕಾರ, ವರ್ತಮಾನದಲ್ಲಿ ಇತರ ಸಮಸ್ಯೆಗಳನ್ನು ಗಮನಿಸಬೇಕಾಗಿರುವುದರಿಂದ ಭಾಷೆಯ ಆಧಾರದ ಮೇಲೆ ಪ್ರಾಂತ್ಯವನ್ನು ರಚಿಸುವುದು ಸೂಕ್ತವಲ್ಲವೆಂದು ಸಮಿತಿ ವರದಿ ನೀಡಿತು. ಭಾಷೆಯೊಂದನ್ನೇ ಮಾನದಂಡವಾಗಿ ಇಟ್ಟುಕೊಂಡ ಪಕ್ಷದಲ್ಲಿ ಪಂಡೋರಾಳ ಪೆಟ್ಟಿಗೆಯನ್ನು ತೆರೆದಂತಾಗುತ್ತದೆ ಎಂದು ಸೂಚಿಸಲಾಯಿತು.[೨೧] ಭಾಷೆಯ ಆಧಾರವನ್ನು ಪರಿಗಣಿಸುವುದರ ಏಕೈಕ ಸೌಲಭ್ಯವೆಂದರೆ ಶಾಸನಸಭೆಗಳಲ್ಲಿ ಪ್ರಾದೇಶಿಕ ಭಾಷೆಯಲ್ಲಿಯೇ ಚರ್ಚೆಗಳನ್ನು ನಡೆಸುವುದು ಎಂದು ಸಮಿತಿ ತಿಳಿಸಿತು.[೨೨]

ಧರ್ ಸಮಿತಿಯ ವರದಿಯನ್ನು ವ್ಯಾಪಕವಾಗಿ ಖಂಡಿಸಲಾಯಿತು. ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯು ವರದಿಯನ್ನು ತಿರಸ್ಕರಿಸಿತು. ಈ ನಡುವೆ ೧೯೪೮ರ ನವೆಂಬರ್‌ನಲ್ಲಿ ಬೀರೂರಿನಲ್ಲಿ ಸೇರಿದ್ದ ಅಖಿಲ ಮೈಸೂರು ಕಾಂಗ್ರೆಸ್ ಸಮಿತಿಯು ಮೈಸೂರು ಮಹಾರಾಜರ ಸಂವಿಧಾನಾತ್ಮಕ ಆಡಳಿತದಲ್ಲೇ ಕರ್ನಾಟಕ ರಚನೆಯಾಗಬೇಕೆಂದು ತೀರ್ಮಾನಿಸಿತು. ಉಪಸಮಿತಿಯೊಂದನ್ನು ರಚಿಸಿ ಈ ಸಮಿತಿಯ ಸದಸ್ಯರು ಮೈಸೂರಿನ ಹೊರಗಿನ ಪ್ರದೇಶಗಳಲ್ಲಿ ಪ್ರವಾಸ ಕೈಗೊಂಡು ಮೈಸೂರಿನ ಜೊತೆ ವಿಲೀನವಾಗಬೇಕೆಂದು ಶಿಫಾರಸು ಮಾಡಿದರು. ೧೯೪೮ ಡಿಸೆಂಬರ್‌ನ ಜೈಪುರ ಅಧಿವೇಶನದಲ್ಲಿ ಭಾರತ ರಾಷ್ಟ್ರೀಯ ಕಾಂಗ್ರೆಸ್ ಈ ಸಮಸ್ಯೆಯ ಬಗ್ಗೆ ಅಧ್ಯಯನ ಮಾಡಲು ಒಂದು ಸಮಿತಿಯನ್ನು ನೇಮಕಮಾಡಿತು. ಜವಹರ್‌ಲಾಲ್ ನೆಹರು, ವಲಭಭಾಯಿ ಪಟೇಲ್ ಹಾಗೂ ಪಟ್ಟಾಭಿ ಸೀತಾರಾಮಯ್ಯನವರು ಈ ಸಮಿತಿಯಲ್ಲಿದ್ದುದರಿಂದ




ಮದರಾಸು ಕರ್ನಾಟಕ ಮತ್ತು ಕೊಡಗು

ಇದನ್ನು 'ಜೆ.ವಿ.ಪಿ. ಸಮಿತಿ' ಯೆಂದು ಕರೆಯಲಾಯಿತು. ೧೯೪೯ರಲ್ಲಿ ಪ್ರಕಟವಾದ ಜೆ.ವಿ.ಪಿ. ವರದಿಯು ಭಾಷಿಕ ಆಧಾರದ ಮೇಲೆ ವಿಂಗಡಿಸುವುದರ ವಿರುದ್ಧ ಎಚ್ಚರಿಸಿತು. ಬೇರೆ ರಾಜ್ಯಗಳ ಬೇಡಿಕೆಗಳನ್ನು ತಿರಸ್ಕರಿಸಿ ಸಮಿತಿಯು ಆಂಧ್ರದ ರಚನೆಯನ್ನು ಒಪ್ಪಿಕೊಂಡಿತು. ಸದ್ಯದಲ್ಲಿ ಗಹನವಾದ ರಾಷ್ಟ್ರೀಯ ಸಮಸ್ಯೆಗಳನ್ನು ಪರಿಹರಿಸುವ ಒತ್ತಡವಿರುವುದರಿಂದ ಭಾಷಾವಾರು ಪ್ರಾಂತ್ಯ ರಚನೆಯ ವಿಷಯಕ್ಕೆ ಸಮಯ ಪರಿಪಕ್ವವಾಗಿಲ್ಲವೆಂಬ ಧರ್ ಸಮಿತಿಯ ಅಭಿಪ್ರಾಯವನ್ನು ಈ ಸಮಿತಿಯೂ ಒಪ್ಪಿತು.[೨೪] ಈ ವರದಿ ಪ್ರಕಟವಾದ ಬಳಿಕ ಬ್ರಿಟಿಷ್-ಕರ್ನಾಟಕ ಪ್ರಾಂತ್ಯದಲ್ಲಿ ಕೋಲಾಹಲ ಪ್ರಾರಂಭವಾಯಿತು. ಕಾಂಗ್ರೆಸ್ ಶಾಸಕರು ತಮ್ಮ ಸ್ಥಾನಗಳಿಗೆ ರಾಜೀನಾಮೆ ನೀಡಬೇಕೆಂದು ಕೆಪಿಸಿಸಿ ಕರೆ ಕೊಟ್ಟಿತು. ಬ್ರಿಟಿಷ್ ಕರ್ನಾಟಕ ಪ್ರದೇಶಗಳಲ್ಲಿ ಶಾಸಕರು ಸ್ವಯಂಸ್ಫೂರ್ತಿಯಿಂದ ಈ ಕರೆಗೆ ಓಗೊಟ್ಟರಾದರೂ ಕಾಂಗ್ರೆಸ್ ಕ್ರಿಯಾ ಸಮಿತಿಯಲ್ಲಿ ಇದರ ಬಗ್ಗೆ ಟೀಕೆ ಕೇಳಿಬಂದಿತು. ದೇಶೀಯ ಸಂಸ್ಥಾನವನ್ನು ಇತರ ಪ್ರಾಂತ್ಯಗಳೊಡನೆ ವಿಲೀನಗೊಳಿಸಬೇಕೆಂದು ವರದಿಯಲ್ಲಿ ಶಿಫಾರಸ್ಸಾಗಿದ್ದ ಕಾರಣ ಈ ವರದಿಯಿಂದ ಮೈಸೂರಿನವರೂ ಸಂತುಷ್ಟರಾಗಿರಲಿಲ್ಲ. ಎರಡು ಪ್ರತ್ಯೇಕ ರಾಜ್ಯಗಳನ್ನು ಹೊಂದುವ ಮೈಸೂರಿಗರ ಅಪೇಕ್ಷೆಯು ಬಹಿರಂಗವಾಗಿ ಕಾಣಿಸಿಕೊಳ್ಳತೊಡಗಿತು. ಹಾಗಾಗಿ ಕರ್ನಾಟಕ ರಚನೆಯ ಪ್ರಶ್ನೆ ಮತ್ತೊಮ್ಮೆ ಹಿನ್ನಡೆ ಸಾಧಿಸುವಂತಾಯಿತು.

ಮೈಸೂರಿನ ಒಂದು ಗುಂಪಿನ ಜನರು ಏಕೀಕೃತ ಕರ್ನಾಟಕದ ಕಲ್ಪನೆಯಿಂದ ದೂರವಿದ್ದರೆಂಬುದು ಸುಸ್ಪಷ್ಟ. ಈ ಭಾಗವು ಪ್ರತ್ಯೇಕವಾದ ಅನನ್ಯತೆಯನ್ನು ತಮ್ಮ ರಾಜ್ಯ ಹೊಂದಬೇಕೆಂದು ಒಂದು ಪಕ್ಷ ಯಾವತ್ತೂ ತಿಳಿಸಿತ್ತು. ತುಂಬಾ ಹಿಂದಿನಿಂದ ರಾಜ್ಯವು ತನ್ನ ಅನನ್ಯತೆಯನ್ನು ಕಾಪಾಡಿಕೊಂಡಿತ್ತು. 'ಮಾದರಿ ರಾಜ್ಯ' ವೆಂಬ ಬಿರುದನ್ನೂ ಕೂಡ ಆಗಿನ ಮೈಸೂರು ಪಡೆದಿತ್ತು. ಆಡಳಿತ, ಆರ್ಥಿಕತೆ, ಶಿಕ್ಷಣ ಮುಂತಾದ ಕ್ಷೇತ್ರಗಳಲ್ಲಿ ರಾಜ್ಯವು ಬಹಳ ಗಮನಾರ್ಹವಾದ ಪ್ರಗತಿಯನ್ನು ಸಾಧಿಸಿತ್ತು. ಬೇರೆ ಪ್ರದೇಶಗಳೊಡನೆ ಮೈಸೂರನ್ನು ವಿಲೀನಗೊಳಿಸುವುದರಿಂದ ಆರ್ಥಿಕವಾಗಿ ಮುಗ್ಗಟ್ಟಾಗಬಹುದೆಂದು ಅನೇಕ ಮೈಸೂರಿಗರು ಕೊರಗಿದ್ದರು. ಬೊಂಬಾಯಿ, ಮದರಾಸು ಹಾಗೂ ಹೈದರಾಬಾದು ಕರ್ನಾಟಕ ಪ್ರಾಂತ್ಯಗಳು ಹಾಗೂ ಅಲ್ಲಿನ ಜನರು ಹಿಂದುಳಿದವರಾಗಿದ್ದು ಅಂಥ ಪ್ರದೇಶಗಳೊಡನೆ ವಿಲೀನವಾಗುವುದರಿಂದ ಮೈಸೂರು ಒಂದು ದಶಕದ ಹಿನ್ನಡೆ ಸಾಧಿಸುವ ಪ್ರಮೇಯವೇರ್ಪಡಬಹುದೆಂದು ದಿಗಿಲುಗೊಂಡಿದ್ದರು.[೨೫] ಇದರ ಜೊತೆಗೆ ರಾಜ್ಯದ ಉಳಿದ ಪ್ರದೇಶಗಳಿಗಿಂತ ಭಿನ್ನವಾದ ಒಂದು ಸಂಸ್ಕೃತಿಯನ್ನು ಮೈಸೂರಿಗರು ಪಡೆದಿದ್ದರೆಂಬುದು ಇನ್ನೊಂದು ಕಾರಣವಾಗಿತ್ತು. ಪ್ರಸ್ತಾಪಿತ ರಾಜ್ಯದಲ್ಲಿ ಲಿಂಗಾಯಿತರು ಮೇಲುಗೈ ಸಾಧಿಸುವರೆಂಬ ಮತ್ತೊಂದು ದಿಗಿಲು ಅವರನ್ನು ಕಾಡಿತ್ತು; ಆರ್ಥಿಕವಾದ ಮತ್ತು ಕೈಗಾರಿಕಾ ಹಿಂದುಳಿಧಿರುವಿಕೆಯೂ ಇದರೊಡನೆ ಸೇರಿಕೊಂಡಿತ್ತು.

ಏಕೀಕರಣ ಪ್ರಕ್ರಿಯೆಯನ್ನು ವಿಳಂಬಗೊಳಿಸಿದ್ದರಿಂದ ಬೊಂಬಾಯಿ ಕರ್ನಾಟಕ ಪ್ರದೇಶದಲ್ಲಿ ಒತ್ತಡ ಜಾಸ್ತಿಯೇ ಆಯಿತು. ಆದರೆ ತನ್ನ ಸಮಸ್ಯೆಗಳಲ್ಲಿಯೇ ಮುಳುಗಿದ್ದ ಮೈಸೂರು ರಾಜ್ಯದ ಕೆ.ಸಿ.ರೆಡ್ಡಿಯವರ ಸರ್ಕಾರವು ಈ ಕೂಗಿಗೆ ಕಿವಿಗೊಡುವ ಸ್ಥಿತಿಯಲ್ಲಿರಲಿಲ್ಲ. ಜೊತೆಗೆ ಈ ಸಮಸ್ಯೆಯನ್ನೆತ್ತಿಕೊಳ್ಳಲು ಕಾಲ ಇನ್ನೂ ಪಕ್ವವಾಗಿಲ್ಲವೆಂದು ಮೈಸೂರು ಸರ್ಕಾರ ತೀರ್ಮಾನಿಸಿದ್ದಿತು. ಸರ್ಕಾರದ ಆಂತರಿಕ ದೌರ್ಬಲ್ಯದ ಕಾರಣ ಅಸಂತೃಪ್ತಿ ಎಲ್ಲಕಡೆ ಕಾಣಿಸಿಕೊಂಡಿತ್ತು. ಅಧಿಕಾರ ಸ್ಥಾನಕ್ಕೆ ಆಸೆಪಟ್ಟವರು ಈ ಪರಿಸ್ಥಿತಿಯ ಲಾಭ ಪಡೆಯಲು ಮುಂದಾದರು. ಕೆಂಗಲ್ ಹನುಮಂತಯ್ಯನವರು ಅವರಲ್ಲೊಬ್ಬರು. ಶಾಸನ ರಚನಾ ಮಂಡಳಿಯ ಸದಸ್ಯರಾಗಿದ್ದೂ ಕೂಡ ಕೆಂಗಲ್ ಹನುಮಂತಯ್ಯನವರು ರಾಜ್ಯದ ಬೆಳವಣಿಗೆಗಳ ಬಗ್ಗೆ ಗಮನವಿಟ್ಟಿದ್ದರು. ರೆಡ್ಡಿ-ವಿರೋಧಿ ಬಣಗಳಿಗೆ ಕೆಂಗಲ್ಲರಿಂದ ಪ್ರೋತ್ಸಾಹ ದೊರೆಯಿತು. ನೆಹರೂರವರಂಥ ಕೇಂದ್ರದ ನಾಯಕರುಗಳಿಗೆ ರಾಜ್ಯದ ಪರಿಸ್ಥಿತಿಯನ್ನು ತಿಳಿಸಿ ಅದರ ಶೀಘ್ರ ಇತ್ಯರ್ಥಕ್ಕಾಗಿ ಗಮನ ಸೆಳೆಯುವಂಥ



೩೨ನೆಯ ಸಾಹಿತ್ಯ ಸಮ್ಮೇಳನ (ಮಾರ್ಚ್ ೧೯೪೯, ಗುಲ್ಬರ್ಗಾ)ದಲ್ಲಿ ಉತ್ತಂಗಿ ಚನ್ನಪ್ಪನವರು ಕರ್ನಾಟಕ ಏಕೀಕರಣ ಬೆಂಬಲಿಸಿ ನಿರ್ಣಯ ಸ್ವೀಕಾರ

ಪ್ರಯತ್ನಗಳು ನಡೆದವು.[೨೬] ತಮ್ಮ ನಿಕಟವರ್ತಿಗಳಾಗಿದ್ದ ಟಿ. ಸಿದ್ಧಲಿಂಗಯ್ಯನವರೊಡನೆ ಮೇಲಿಂದ ಮೇಲೆ ಪತ್ರವ್ಯವಹಾರ ನಡೆಸಿ ಹನುಮಂತಯ್ಯನವರು ರೆಡ್ಡಿಯವರ ವಿರುದ್ಧ ಬೆಂಬಲ ಪಡೆಯಲು ಪ್ರಯತ್ನಿಸಿದರು.[೨೭] ಪ್ರಭಾವಶಾಲಿ ಕಾಂಗ್ರೆಸ್ಸಿಗರಾದ ಎಸ್. ನಿಜಲಿಂಗಪ್ಪನವರಂಥವರ ಬೆಂಬಲ ಪಡೆಯಲು ಕೂಡ ಅವರು ಯತ್ನಿಸಿದರು. ಹಾಗಾಗಿ ಕಾಂಗ್ರೆಸ್ಸಿನೊಳಗಿನಿಂದಲೇ ರೆಡ್ಡಿಯವರಿಗೆ ವಿರೋಧವುಂಟಾಯಿತು.

ಹಿರಿಯ ಕಾಂಗ್ರೆಸ್ಸಿಗ ಹನುಮಂತಯ್ಯನವರು ನೇರ ನಡೆಯವರು ದಾಕ್ಷಿಣ್ಯವಿಲ್ಲದೆ ಖಂಡಿಸುವವರೆಂದು ನಂಬಿರುವರಾದರೂ, ಕುತೂಹಲವೆಂದರೆ, ಮುಖ್ಯಮಂತ್ರಿ ರೆಡ್ಡಿಯವರಿಗೆ ತಾವೊಬ್ಬರೆ ಸಬಲ ಪರ್ಯಾಯ ಅಭ್ಯರ್ಥಿಯೆಂದು ಹನುಮಂತಯ್ಯನವರು ತಮ್ಮನ್ನು ಸ್ಥಾಪಿಸಿಕೊಂಡಿದ್ದರು. ರೆಡ್ಡಿ ಸರ್ಕಾರವನ್ನು ಬೀಳಿಸಲು ಹನುಮಂತಯ್ಯನವರು ವಿವಿಧ ಹಂತಗಳಲ್ಲಿ ಕೆಲಸ ಮಾಡಲು ಪ್ರಾರಂಭಿಸಿದರು. ರೆಡ್ಡಿ-ವಿರೋಧಿ ಬಣಗಳಿಗೆ ಸೇರಿದ ಸ್ಥಾಯಿ ಸಮಿತಿಯ ಸದಸ್ಯರುಗಳ ಹಾಗೂ ಪಕ್ಷದ ಕಾರ್ಯಕಾರಿ ಸಮಿತಿಯ ರಾಜೀನಾಮೆ ಪತ್ರಗಳನ್ನು ಪಡೆದುಕೊಳ್ಳುವಂತೆ ಟಿ.ಸಿದ್ಧಲಿಂಗಯ್ಯನವರನ್ನು ಒತ್ತಾಯಿಸಲಾಗಿತ್ತು.[೨೮]

ಆಡಳಿತದ ದೌರ್ಬಲ್ಯದ ಜೊತೆಗೆ ಅಸಂತೃಪ್ತಿ ಹರಡಲು ಅನೇಕ ಅಲ್ಪಸಂಖ್ಯಾತ ಕೋಮುಗಳೂ ಕಾರಣವಾದವು. ಜೊತೆಗೆ ಪಕ್ಷದಲ್ಲಿ ಒಕ್ಕಲಿಗರು ಪ್ರಾಬಲ್ಯವಿರುವುದಾಗಿ ಲಿಂಗಾಯಿತರು ಭಾವಿಸಿದರು. ಅಸಂತುಷ್ಟರಾದ ಕೆಲವು ಒಕ್ಕಲಿಗ ನಾಯಕರು ನೊಂದ ಕೋಮುಗಳೊಡನೆ ಕೈಬೆಸೆದರು. ಅಲ್ಪ ಸಂಖ್ಯಾತರ ಗುಂಪಿನ ಕೆಲವು ಸದಸ್ಯರು, ಒಕ್ಕಲಿಗರು ಹಾಗೂ ಲಿಂಗಾಯಿತರು ಒಗ್ಗಟ್ಟಾದರೆ ತಮ್ಮ ಅಸ್ತಿತ್ವಕ್ಕೆ ಮಾರಕವೆಂದು ತಿಳಿದರು.

ನಂತರ ನಡೆದ ಚುನಾವಣೆಯಲ್ಲಿ ಹನುಮಂತಯ್ಯನವರು ಹೆಚ್ಚು ಸಬಲರಾಗಿ ಹೊರಹೊಮ್ಮಿದ್ದರಲ್ಲದೆ ೧೯೫೨ರ ಮಾರ್ಚಿಯಲ್ಲಿ ಮುಖ್ಯಮಂತ್ರಿಯಾಗಿ ಪದವಿ ಸ್ವೀಕಾರ ಮಾಡಿದರು; ೧೯೫೬ರ ತನಕ ಅವರು ಆ ಸ್ಥಾನದಲ್ಲಿದ್ದರು. ಅವರು ಮುಖ್ಯಮಂತ್ರಿಯಾಗಿದ್ದ ಅವಧಿಯಲ್ಲಿ ಅನೇಕ ಸಮಸ್ಯೆಗಳು ಎದುರಾದವು. ರೆಡ್ಡಿಯವರಿಂದ ಅನುಕೂಲ ಪಡೆಯದಿದ್ದ ಗುಂಪುಗಳು ಹನುಮಂತಯ್ಯನವರಿಗೆ ಬೆಂಬಲ ನೀಡಿದುವಲ್ಲದೆ ಈಗ ತಮ್ಮ ಅಸ್ತಿತ್ವವನ್ನು ಸ್ಥಾಪಿಸಲು ಮುಂದಾದವು. ಗುಂಪುಗಳ ಹಿತಾಸಕ್ತಿಗಳೂ ಮೇಲೆ ಕಾಣಿಸಿ ಕೊಳ್ಳತೊಡಗಿದವು. ಜಾತಿವಾರು ಗುಂಪುಗಳಿಂದ ದೂರವಾಗುಳಿಯುವ ಅವರ ಪ್ರಯತ್ನಗಳಿಂದ ಪ್ರಭಾವಶಾಲಿ ಕೆಂಗಲ್ಲರು ಕಾಂಗ್ರೆಸ್ಸಿಗರ ಅವಕೃಪೆಗೆ ಪಾತ್ರವಾಗಬೇಕಾಯಿತು.

ಈ ನಡುವೆ ಬೇರೆ ಬೇರೆ ಪ್ರದೇಶಗಳಿಂದ ಮತ್ತು ಬೇರೆ ಬೇರೆ ನಾಯಕರುಗಳಿಂದ ರಾಜ್ಯ ಪುನರ್ವಿಂಗಡನೆಯ ಸಮಸ್ಯೆಯನ್ನು ಶೀಘ್ರವಾಗಿ ಇತ್ಯರ್ಥ ಮಾಡಬೇಕೆಂದು ಕೇಂದ್ರದ ಮೇಲೆ ಒತ್ತಡ ತೀವ್ರವಾಯಿತು. ಪೊಟ್ಟಿ ಶ್ರೀರಾಮುಲು ಅವರ ನಿಧನದ ನಂತರ ಆಂಧ್ರ ರಾಜ್ಯದ ರಚನೆಯ ಸಂಬಂಧ ತೀರ್ಮಾನ ತೆಗೆದುಕೊಂಡಾಗ ಪುನರ್ರಚನೆಯ ಕೂಗು ತಾರಕ ಮುಟ್ಟಿತು. ನಾಸಲ್‌ನಗರದ ೧೯೫೩ರ ಜನವರಿಯ ಕಾಂಗ್ರೆಸ್ ಅಧಿವೇಶನದಲ್ಲಿ ಆಂಧ್ರ ರಾಜ್ಯವೊಂದನ್ನು ಹೊರತುಪಡಿಸಿ ಭಾಷಾವಾರು ಪ್ರಾಂತ್ಯ ರಚನೆಯ ಸಮಸ್ಯೆಯನ್ನು ಸದ್ಯಕ್ಕೆ ಕೈಗೆತ್ತಿಕೊಳ್ಳಬಾರದೆಂದು ಠರಾವು ಹೊರಡಿಸಲಾಯಿತು. ಕನ್ನಡಿಗರ ಬೇಡಿಕೆಯನ್ನು ಮತ್ತೆ ಬದಿಗೊತ್ತಿದ ಕಾರಣ ಈ ಠರಾವನ್ನು ಖಂಡಿಸಲಾಯಿತು. ಈ ಸಮಸ್ಯೆಯನ್ನು ಆದಷ್ಟು ಶೀಘ್ರವಾಗಿ ಇತ್ಯರ್ಥ ಪಡಿಸಬೇಕೆಂದು ಒತ್ತಾಯಿಸಲು ಎ.ಜೆ.ದೊಡ್ಡಮೇಟಿಯವರು ಜಕ್ಕಳಿಯಲ್ಲಿ ಉಪವಾಸ ಸತ್ಯಾಗ್ರಹವನ್ನು ಪ್ರಾರಂಭಿಸಿದರು. ಇದರ ಬೆನ್ನ ಹಿಂದೆಯೇ ಬೊಂಬಾಯಿ-ಕರ್ನಾಟಕ ಪ್ರಾಂತ್ಯದ ಅನೇಕ ಜಿಲ್ಲೆಗಳಲ್ಲಿ ಅನೇಕ ಉಪವಾಸಗಳನ್ನು ಪ್ರಾರಂಭಿಸಲಾಯಿತು. ಕರ್ನಾಟಕ ರಾಜ್ಯ ನಿರ್ಮಾಣ ಸಭೆಯು ಈ ಉಪವಾಸಗಳನ್ನು



ಗುಲ್ಬರ್ಗಾದ ಸಾಹಿತ್ಯ ಸಮ್ಮೇಳನ(೧೯೪೯)ದಲ್ಲಿ ಸರ್ದಾರ್ ಶರಣಗೌಡರು ಜಿನರಾಜ ಹೆಗಡೆ ಅವರ ಅಧ್ಯಕ್ಷತೆಯಲ್ಲಿ
ಹೈದರಾಬಾದ್-ಕರ್ನಾಟಕವನ್ನು ಸಂಯುಕ್ತ ಕರ್ನಾಟಕದಲ್ಲಿ ವಿಲೀನಿಕರಿಸಲು ಮಂಡಿಸುತ್ತಿರುವ ನಿರ್ಣಯ

ಸಂಘಟಿಸಿತ್ತು. ಈ ಯಾವುದೇ ಪ್ರಯತ್ನಕ್ಕೆ ಕೇಂದ್ರ ಸರ್ಕಾರವು ಜಗ್ಗದೇ ಹೋದಾಗ ಹುಬ್ಬಳ್ಳಿ ಸಮೀಪದ ಅದರಗುಂಚಿಯಲ್ಲಿ ಶಂಕರಗೌಡ ಪಾಟೀಲರು ಆಮರಣಾಂತ ಉಪವಾಸವನ್ನು ಕೈಗೊಂಡರು. ೧೯೫೩ರ ಏಪ್ರಿಲ್‌ನಲ್ಲಿ ಕೆಪಿಸಿಸಿಯು ಹುಬ್ಬಳ್ಳಿಯಲ್ಲಿ ಸಭೆ ಸೇರಿದಾಗ ಅಸಂಖ್ಯಾತ ಜನರು ಅಲ್ಲಿಗೆ ಆಕರ್ಷಿತರಾದರು. ಆದರೆ ಗಲಭೆಗಳು ತಲೆದೋರಿದ ಕಾರಣ ಸಭೆಯನ್ನು ಮುಂದೂಡಬೇಕಾಯಿತು. ಜನರ ಗುಂಪನ್ನು ಚದುರಿಸಲು ಪೋಲೀಸರು ಲಾಠಿಪ್ರಹಾರ ಮಾಡಬೇಕಾಯಿತು.

ಈ ಬೆಳವಣಿಗೆಗಳ ಬಗ್ಗೆ ಕೇಂದ್ರವು ದಿವ್ಯ ನಿರ್ಲಕ್ಷ್ಯವನ್ನು ತಾಳಿದ ಪರಿಣಾಮವಾಗಿ ಕೆಲವು ಮಂದಿ ಲೋಕಸಭಾ ಸದಸ್ಯರೊಡಗೂಡಿ ಕೆಪಿಸಿಸಿ ಅಧ್ಯಕ್ಷರಾಗಿದ್ದ ಎಸ್.ನಿಜಲಿಂಗಪ್ಪನವರು ೧೯೫೩ರ ಏಪ್ರಿಲ್‌ನಲ್ಲಿ ಪಂಡಿತ್ ನೆಹರೂರವರನ್ನು ಭೇಟಿಯಾದರು. ಇಲ್ಲಿ ನಡೆದ ಘಟನಾವಳಿಗಳ ಬಗ್ಗೆ ಪ್ರಧಾನ ಮಂತ್ರಿಗಳ ಗಮನ ಸೆಳೆದ ನಾಯಕರು ಕರ್ನಾಟಕದಲ್ಲಿ ಕಾಂಗ್ರೆಸ್ ಪಕ್ಷ ತನ್ನ ಜನಪ್ರಿಯತೆಯನ್ನು ಕಳೆದುಕೊಳ್ಳುವುದರ ಬಗ್ಗೆಯೂ ಕೂಡ ಮನವರಿಕೆ ಮಾಡಲಾಯಿತು. ಸಮಸ್ಯೆಗೆ ಶೀಘ್ರ ಪರಿಹಾರದ ಅಗತ್ಯವಿದೆಯೆಂದು ಮನಗಂಡ ನೆಹರೂರವರು ಪುನರ್ವಿಂಗಡನೆಯ ಕುರಿತು ಚರ್ಚಿಸಲು ಒಂದು ಸಮಿತಿಯನ್ನು ರಚಿಸುವುದಾಗಿ ನಿಯೋಗಕ್ಕೆ ಭರವಸೆ ನೀಡಿದರು. ಹಾಗಾಗಿ, ೧೯೫೩ರ ಡಿಸೆಂಬರ್ ೨೨ರಂದು ರಾಜ್ಯಗಳ ಪುನರ್ರಚನಾ ಸಮಿತಿಯನ್ನು ನೇಮಕ ಮಾಡಲಾಯಿತು. ಪುನರ್ರಚನೆಯ ಸಮಸ್ಯೆಯನ್ನು 'ವಸ್ತುನಿಷ್ಠವಾಗಿ ಹಾಗೂ ನಿಷ್ಪಕ್ಷಪಾತವಾಗಿ' ಪರಿಶೀಲಿಸುವುದು ಸಮಿತಿಯ ಜವಾಬ್ದಾರಿಯಾಗಿತ್ತು.[೨೯] ಫಜ್ಲ್ ಅಲಿಯವರು ಅಧ್ಯಕ್ಷರಾಗಿದ್ದ ಸಮಿತಿಯಲ್ಲಿ ಹೃದಯ್‌ನಾಥ್ ಕುಂಜ್ರು ಹಾಗೂ ಕೆ.ಎಂ. ಪಣಿಕ್ಕರ್‌ರವರು ಸದಸ್ಯರಾಗಿದ್ದರು. ಭಾಷಿಕ ತತ್ವವನ್ನು ಅಧ್ಯಯನ ಮಾಡುವುದರ ಜೊತೆಗೆ ಸಮಿತಿಯು ಆರ್ಥಿಕ, ಹಣಕಾಸು, ಆಡಳಿತಾತ್ಮಕ ಇತ್ಯಾದಿ ಸಮಸ್ಯೆಗಳು ಬಗ್ಗೆ ಕೂಡ ಗಮನ ಹರಿಸಿತು. ಸಮಿತಿಯು ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಯಿತು; ಮೈಸೂರಿಗರು ಸಮಿತಿಯೊಡನೆ ಸಹಕರಿಸದಿದ್ದುದು ಇದರಲ್ಲೊಂದು. ಮೈಸೂರಿನವರ ಅಭಿಪ್ರಾಯಗಳು ಹಾಗೂ ಸಂಶಯಗಳನ್ನು ಸಮಿತಿಗೆ ತಿಳಿಸಲಾಯಿತು. ಭಿನ್ನಾಭಿಪ್ರಾಯಗಳು ಎದ್ದು ಕಂಡಿತಲ್ಲದೆ ಎರಡು ಗುಂಪುಗಳು ಹೊರಹೊಮ್ಮಿದವು: ಒಂದು ಏಕೀಕೃತ ಕರ್ನಾಟಕಕ್ಕಾಗಿ ಒತ್ತಾಯಿಸಿದರೆ ಇನ್ನೊಂದು ಗುಂಪು ಎರಡು ಕನ್ನಡ ರಾಜ್ಯಗಳ ಬಗ್ಗೆ ಕೇಳಿತು. 'ಮೈಸೂರು ಮೈಸೂರಿನವರಿಗಾಗಿ' ಎಂಬ ಘೋಷಣೆಯೊಂದಿಗೆ ಮೈಸೂರಿನ ಪ್ರತ್ಯೇಕತೆ ಹಾಗೂ ಅನನ್ಯತೆಯ ಬಗ್ಗೆ ಹೇಳಲಾಯಿತು. ಪ್ರಾಂತೀಯ ಮರುಹಂಚಿಕೆಯ ಬಗ್ಗೆ ಸ್ವಲ್ಪ ಅಸಮಧಾನವಿದ್ದರೂ ಸಹ ಬ್ರಿಟಿಷ್–ಕರ್ನಾಟಕ ಪ್ರದೇಶಗಳಲ್ಲಿ ಸಮಿತಿಯ ವರದಿಯನ್ನು ಸಾಮಾನ್ಯವಾಗಿ ಎಲ್ಲರೂ ಒಪ್ಪಿಕೊಂಡಿದ್ದರು.

ಮೈಸೂರಿನಲ್ಲಿ ಏಕೀಕರಣದ ವಿಷಯವಾಗಿ ಕೆಂಗಲ್ ಗುಂಪಿನವರಾಗಲೀ ಅಥವಾ ರೆಡ್ಡಿ ಗುಂಪಿನವರಾಗಲೀ ಹೆಚ್ಚು ಚಿಂತಿತರಾಗಿರಲಿಲ್ಲವೆಂಬುದು ನಿಜ. ಕೇಂದ್ರದ ಪರಿಷ್ಕರ ತೀರ್ಮಾನಗಳಿಗೆ ಎರಡೂ ಗುಂಪುಗಳು ಬದ್ಧವಾಗಿರಬೇಕೆಂದು ಒತ್ತಾಯಿಸಿದಾಗ ಮಾತ್ರ ರಾಜ್ಯದಲ್ಲಿ ರಾಜಕೀಯವಾದ ಅರಾಜಕತೆ ಉಂಟಾಯಿತು. ಈ ವಿಷಯದ ಸಂಬಂಧವಾಗಿ ಪ್ರಾರಂಭದಿಂದ ಅಸ್ಪಷ್ಟವಾಗಿದ್ದ ಕೆಂಗಲ್ ಹನುಮಂತಯ್ಯನವರಿಗೆ ಸ್ಪಷ್ಟವಾದ ನಿಲುವು ತಳೆಯುವುದು ಅನಿವಾರ್ಯವಾಯಿತು. ೧೯೪೬ರ ದಾವಣಗೆರೆ ಸಮಾವೇಶದಲ್ಲಿ ಕೆಂಗಲ್ ಹನುಮಂತಯ್ಯನವರು ಕರ್ನಾಟಕ ಪ್ರಾಂತ್ಯದಲ್ಲಿ ಮೈಸೂರನ್ನು ಸೇರ್ಪಡೆ ಮಾಡಬೇಕೆಂದು ಕೇಳಿದ್ದರೆಂಬುದು ನಿಜ. ೧೯೫೩ರ ಜನವರಿಯಲ್ಲಿ ಜರುಗಿದ್ದ ನನಲ್‌ನಗರ್ ಅಧಿವೇಶನದಲ್ಲಿ ಅದನ್ನು ಮತ್ತೊಮ್ಮೆ ಪುನರುಚ್ಚರಿಸಲಾಯಿತು. ಆದರೆ ವಿಷಯವನ್ನು ಗಂಭೀರವಾದ ಚರ್ಚೆಗೆ ತೆಗೆದುಕೊಂಡಾಗ ಕೆಂಗಲ್ಲರ ನಿಲುವು ಅಸ್ಪಷ್ಟವಾಗಿತ್ತು. ಮೈಸೂರಿನ ಹೊರಗಿನ ಪ್ರದೇಶಗಳಲ್ಲಿ ಅವರು ಪ್ರವಾಸ ಕೈಗೊಂಡಾಗ ಎಲ್ಲಾ ಕನ್ನಡ ಪ್ರದೇಶಗಳು ಏಕೀಕರಣವಾಗಬೇಕೆಂದರಲ್ಲದೆ ಕರ್ನಾಟಕ ರಚನೆಯ ವಿಷಯದಲ್ಲಿ ಮೈಸೂರಿನವರ



ಗುಲ್ಬರ್ಗಾದ ತಾಂಡೂರ್ ಗ್ರಾಮದ ರೈತ ಸಮ್ಮೇಳನ (೧೯೪೭)ದಲ್ಲಿ ಎಸ್.ನಿಜಲಿಂಗಪ್ಪನವರ ಅಧ್ಯಕ್ಷತೆಯಲ್ಲಿ ಕರ್ನಾಟಕದ ಏಕೀಕರಣಕ್ಕೆ ಗೊತ್ತುವಳಿ ಸ್ವೀಕಾರ

ವಿರೋಧವಿಲ್ಲವೆಂದು ಸ್ಪಷ್ಟಪಡಿಸಿದರು.[೨೦] ಹಾಗಾಗಿ ಮೈಸೂರಿನ ಹೊರಗಿನ ಪ್ರಾಂತ್ಯಗಳಿಗೆ ಅವರು ಭೇಟಿ ನೀಡಿದ ಸಂದರ್ಭದಲ್ಲೆಲ್ಲ ಜನರು ತುಂಬು ಹೃದಯದ ಸ್ವಾಗತ ಕೋರಿದರು. ಆದರೆ ತಮ್ಮ ರಾಜ್ಯದಲ್ಲೇ ಆ ಬಗೆಯಾದ ಪ್ರಚಾರ ನಡೆಯಲಿಲ್ಲ.

ಆ ವೇಳೆಗೆ ಮೈಸೂರು ಪ್ರಾಂತ್ಯದ ಕೆಲವು ಪ್ರಮುಖರು ಏಕೀಕರಣದ ಪರಿಣಾಮಗಳ ಬಗ್ಗೆ ಗಂಭೀರವಾದ ಪ್ರಶ್ನೆಗಳನ್ನು ಎತ್ತಿದಾಗ, ಅವುಗಳಲ್ಲಿ ಕೆಲವು ವಿಚಾರಾರ್ಹವಾಗಿದ್ದ ಕಾರಣ, ಕೆಂಗಲ್ಲರು ಅವುಗಳ ಚರ್ಚೆಗೆ ಒಪ್ಪಿ ಒಂದು ಮಾಹಿತಿ ಸಂಗ್ರಹಣಾ ಸಮಿತಿಯನ್ನು ನೇಮಕ ಮಾಡಿದರು. ಇದು ಶೇಷಾದ್ರಿ ಸಮಿತಿ ಎಂದು ಕೂಡ ಪ್ರಸಿದ್ಧವಾಗಿದೆ. ಮೈಸೂರಿನ ಹೊರಗಿರುವ ಪ್ರಾಂತ್ಯಗಳು ಹಿಂದುಳಿದಿರುವುದರಿಂದ ಏಕೀಕರಣದ ಪರಿಣಾಮವಾಗಿ ಆರ್ಥಿಕವಾದ ಮುಗ್ಗಟ್ಟು ಎದುರಿಸಬೇಕಾದ ಸಂದರ್ಭವಿದೆಯೆಂದು ಸಮಿತಿ ವರದಿ ಮಾಡಿತು. ಏಕೀಕರಣದ ಬಗ್ಗೆ ತಮ್ಮ ವಿರೋಧಿಗಳ ಮನಗೆಲ್ಲುವ ಕೆಂಗಲ್ಲರ ಪ್ರಯತ್ನ ಸಫಲವಾಗಲಿಲ್ಲ. ಅವರ ಸಚಿವ ಸಂಪುಟದ ಮೂವರು ಸಚಿವರೇ ಅವರ ವಿರುದ್ಧ ತಿರುಗಿ ಬಿದ್ದಿದ್ದರು. ಒಂದು ಗುಂಪು ಮಾತ್ರ ಎರಡು ಕರ್ನಾಟಕಗಳಿಗಾಗಿ ಒತ್ತಾಯಿಸಿತು. ಏಕೀಕರಣದ ವಿಷಯದಲ್ಲಿ ಮುಖ್ಯಮಂತ್ರಿಗಳು ಸ್ಪಷ್ಟ ನಿಲುವು ತಾಳಬೇಕೆಂದು ಅನೇಕ ಶಾಸಕರು ಆಗ್ರಹಪಡಿಸಿದರು. ಆ ಕಠಿಣ ಪರಿಸ್ಥಿತಿಯನ್ನು ಗಮನಿಸಿ ಅಂತಿಮ ತೀರ್ಮಾನದ ಜವಾಬ್ದಾರಿಯನ್ನು ಕೆಂಗಲ್ಲರು ಕೇಂದ್ರ ಸರ್ಕಾರಕ್ಕೆ ವಹಿಸಿದರು. ಕೇಂದ್ರ ಸರ್ಕಾರ ಎಸ್‌ಆರ್‌ಸಿ ವರದಿಯ ಪರವಾಗಿರುವುದಾಗಿ ತಿಳಿದುಬಂದಾಗ ಕೆಂಗಲ್ಲರು ತಮ್ಮ ದ್ವಂದ್ವ ಮನಸ್ಸನ್ನು ಬದಲಿಸಿ ಏಕೀಕರಣವನ್ನು ಸಮರ್ಥಿಸಿಕೊಳ್ಳುವ ಪ್ರಕ್ರಿಯೆಯಲ್ಲಿರುವಾಗ ತಮ್ಮ ಮುಖ್ಯಮಂತ್ರಿ ಪದವಿಯನ್ನು ಕಳೆದುಕೊಂಡರು.

೧೯೫೫ರ ಅಕ್ಟೋಬರ್‌ನಲ್ಲಿ ಕಾಂಗ್ರೆಸ್ ಕ್ರಿಯಾ ಸಮಿತಿ ತನ್ನ ಸಭೆಯಲ್ಲಿ ಎಸ್‌ಆರ್‌ಸಿ ವರದಿಯನ್ನು ಪರಿಶೀಲಿಸಿತು. ಜವಹರ್‌ಲಾಲ್ ನೆಹರು, ಮೌಲಾನಾ ಅಬುಲ್ ಕಲಂ ಆಜಾದ್, ಯು.ಎನ್.ಢೇಬರ್ ಮತ್ತು ಗೋವಿಂದ್ ವಲ್ಲಭ್ ಪಂತ್ ಅವರನ್ನೊಳಗೊಂಡಂತೆ ರಚಿತವಾದ ಉಪಸಮಿತಿಯು ಎಸ್‌ಆರ್‌ಸಿ ವರದಿಯನ್ನು ಅಳವಡಿಸಿಕೊಂಡು ಮೈಸೂರು ಸೇರಿದಂತೆ ಕರ್ನಾಟಕವನ್ನು ರಚಿಸಲು ತೀರ್ಮಾನ ತೆಗೆದುಕೊಂಡಿತು.

೧೯೫೫ರ ನವೆಂಬರ್‌ನಲ್ಲಿ ಮೈಸೂರು ಶಾಸನ ಸಭೆಯಲ್ಲಿ ಮಾಡಿದ ತಮ್ಮ ಅಮೋಘವಾದ ಭಾಷಣದ ಮೂಲಕ ಕೆಂಗಲ್ ಹನುಮಂತಯ್ಯನವರು ಏಕೀಕರಣದ ಪರವಾಗಿ ವಾದಿಸಿದರು.[೨೧] ಅವರನ್ನು ವಿರೋಧಿಸುತ್ತಾ ಬಂದಿದ್ದ ಗುಂಪು ಕೂಡ ಅವರ ವಾದದ ಪರಿಣಾಮವಾಗಿ ಈಗ ಸಮ್ಮತಿ ಸೂಚಿಸಿತು. ಕೇಂದ್ರದ ದೃಢ ನಿರ್ಧಾರದ ಮುಂದೆ ಮೈಸೂರಿನ ರಾಜಕಾರಣಿಗಳು ದೀರ್ಘಕಾಲದವರೆಗೆ ಮೌನವಾಗಿರಲು ಸಾಧ್ಯವಾಗಲಿಲ್ಲ. ಕೇಂದ್ರದ ನಾಯಕರೊಡನೆ ಉತ್ತಮವಾದ ಬಾಂಧವ್ಯ ಹೊಂದಬೇಕೆಂದು ಎರಡೂ ಗುಂಪಿನವರು ತವಕಿಸುತ್ತಿದ್ದುದು ಸ್ಪಷ್ಟವಾಯಿತು. ಹಾಗಾಗಿ ೧೯೫೬ರ ಏಪ್ರಿಲ್‌ನಲ್ಲಿ ಹೊಸ ರಾಜ್ಯವನ್ನು ಬೆಂಬಲಿಸಿ ಶಾಸನಸಭೆ ಹಾಗೂ ವಿಧಾನಮಂಡಲದಲ್ಲಿ ಸರ್ವಾನುಮತದ ಗೊತ್ತುವಳಿಗಳನ್ನು ಹೊರಡಿಸಲಾಯಿತು.

ಏಕೀಕರಣದ ವಿಷಯದಲ್ಲಿ ವರಿಷ್ಠರ ಅಭಿಪ್ರಾಯಗಳನ್ನು ಮೈಸೂರಿನವರ ಮೇಲೆ ಹೇರುವ ಸಂಗತಿಯು ಅನೇಕರಿಗೆ ನುಂಗಲಾರದ ತುತ್ತಾಗಿತ್ತು. ೧೯೫೫ರಿಂದ ಏಕೀಕರಣದ ಬಗ್ಗೆ ಕೆಂಗಲ್‌ರು ತೆಗೆದುಕೊಂಡಿದ್ದ ನಿಲುವಿನಿಂದಾಗಿ ಅವರು ಅನೇಕರಿಗೆ ಅಪ್ರಿಯರಾಗಿದ್ದರು ಕೂಡ. ಹಾಗಾಗಿ ಉನ್ನತ ಪದವಿಯಿಂದ ಅವರನ್ನು ಇಳಿಸಲು ಪಿತೂರಿ ಪ್ರಾರಂಭವಾಯಿತು.[೨೨] ಹೊಸ ರಾಜ್ಯದ ಉದಯದ ಉದ್ಘಾಟನೆಯನ್ನು ನೆರವೇರಿಸುವ ಮುನ್ನವೇ ಅವರು ತಮ್ಮ ಪದವಿಯಿಂದ ಇಳಿಯಬೇಕಾಯಿತು. ಸಮಿತಿಯ ಶಿಫಾರಸುಗಳನ್ನು

ಅಂಗೀಕರಿಸಿ ಲೋಕಸಭೆಯಲ್ಲಿ ಮಸೂದೆಯನ್ನು ಜಾರಿಗೊಳಿಸಲಾಯಿತು. ೧೯೫೬ರ ಆಗಸ್ಟ್ ೩೧ರಂದು ರಾಷ್ಟ್ರಾಧ್ಯಕ್ಷರ ಅನುಮತಿಯೂ ದೊರೆಯಿತು.

'ಮೈಸೂರು ರಾಜ್ಯ' ವೆಂದು ನಾಮಕರಣವಾದ ಹೊಸರಾಜ್ಯವು ಮೈಸೂರಿನ ಮಹಾರಾಜರ ರಾಜ್ಯಪಾಲತ್ವದಲ್ಲಿ ಸ್ಥಾಪಿತವಾಯಿತು. ಬಹುಸಂಖ್ಯೆಯ ಮೈಸೂರಿಗರ ಇಚ್ಛೆಗೆ ಅನುಸಾರವಾಗಿ ಏಕೀಕೃತ ರಾಜ್ಯದ ಹೆಸರನ್ನು 'ಮೈಸೂರು ರಾಜ್ಯ' ವೆಂದೇ ಅಂಗೀಕರಿಸಲಾಯಿತು.[೩೩] ವಾಸ್ತವವಾಗಿ ಪ್ರತ್ಯೇಕ ರಾಜ್ಯಗಳೇ ರಚನೆಯಾಗಬೇಕೆಂದು ಪಟ್ಟು ಹಿಡಿದಿದ್ದ ಗುಂಪುಗಳಿಗೆ ನೀಡಿದ ರಿಯಾಯ್ತಿ ಇದಾಗಿತ್ತು. ಎರಡು ಕರ್ನಾಟಕಗಳನ್ನು ಹೊಂದಲಾರದ ಅವರಿಗೆ ಕಡೆಯ ಪಕ್ಷ ಹೊಸರಾಜ್ಯವನ್ನು ಹಳೆಯ ಹೆಸರಿನಲ್ಲಿ ಕರೆಯ ಬಹುದಾದ ತೃಪ್ತಿಯನ್ನು ಕಲ್ಪಿಸಲಾಗಿತ್ತು. ೧೯೭೩ರ ನವೆಂಬರ್ ೧ನೇ ತಾರೀಖು ರಾಜ್ಯವನ್ನು 'ಕರ್ನಾಟಕ' ವೆಂದು ಕರೆಯಲಾಯಿತು.

ಹೊಸದಾಗಿ ಅಸ್ತಿತ್ವಕ್ಕೆ ಬಂದ ರಾಜ್ಯದಲ್ಲಿ ಸೇರ್ಪಡೆಯಾದ ಭಾಗಗಳಿವು:

ಅ. ಮೈಸೂರು ರಾಜ್ಯ
(ಇದರ ಜೊತೆಗೆ ೧೯೫೩ರಲ್ಲಿ ಮೈಸೂರಿನೊಡನೆ ವಿಲೀನವಾಗಿದ್ದ ಬಳ್ಳಾರಿಯ ಆರು ತಾಲೂಕುಗಳು)

ಆ. ಬೊಂಬಾಯಿ-ಕರ್ನಾಟಕ, ಬೆಳಗಾವಿ (ಚಂದ್‌ಗಡ್ ತಾಲೂಕು ಬಿಟ್ಟು),
ಬಿಜಾಪುರ, ಧಾರವಾಡ ಮತ್ತು ಉತ್ತರ ಕರ್ನಾಟಕ ಪ್ರಾಂತ್ಯ-ಇವುಗಳಲ್ಲಿ ಕನ್ನಡ ಮಾತನಾಡುವ ಪ್ರದೇಶಗಳು.

ಇ. ರಾಯಚೂರು, ಬೀದರ್ ಮತ್ತು ಗುಲ್ಬರ್ಗಾ ಜಿಲ್ಲೆಗಳು
(ಹಿಂದಿನ ಹೈದರಾಬಾದು ರಾಜ್ಯದಿಂದ)

ಈ. ದಕ್ಷಿಣ ಕನ್ನಡ ಜಿಲ್ಲೆ (ಕಾಸರಗೋಡು ತಾಲೂಕು ಬಿಟ್ಟು)

ಉ. ಕೊಳ್ಳೇಗಾಲ ತಾಲೂಕು (ಕೊಯಮತ್ತೂರಿನಿಂದ)

ಊ. ಕೊಡಗು.

ಅನೇಕ ಕನ್ನಡಿಗರ ಪಾಲಿಗೆ ಕರ್ನಾಟಕದ ಏಕೀಕರಣವು ನನಸಾದ ಕನಸು. ನ್ಯಾಯಬದ್ಧವಾದ ಕನ್ನಡಿಗರ ಬೇಡಿಕೆಯನ್ನು ಅನಿರ್ದಿಷ್ಟ ಕಾಲದವರೆಗೆ ಮುಂದೂಡುವಂತಿರಲಿಲ್ಲ. ಬ್ರಿಟಿಷ್-ಕರ್ನಾಟಕ ಪ್ರದೇಶದಲ್ಲಿ, ಅದರಲ್ಲೂ ವಿಶೇಷವಾಗಿ ಬೊಂಬಾಯಿ-ಕರ್ನಾಟಕ ಪ್ರಾಂತ್ಯದ ಏಕೀಕರಣದ ಹೋರಾಟಗಾರರ ಶ್ರಮ, ದುಡಿಮೆ ಹಾಗೂ ದೃಢ ನಿಲುವುಗಳ ಬಗ್ಗೆ ಮೆಚ್ಚಲೇಬೇಕು. ಈ ದ್ರಷ್ಟಾರರಿಗೆ ಖಚಿತವಾದಂಥ ಗುರಿಗಳಿದ್ದವು. ಅವರಲ್ಲನೇಕರು ಅದನ್ನು ಒಂದು ಮಂತ್ರವಾಗಿ ಪಠಿಸುತ್ತಿದ್ದರು. ಏಕೀಕರಣ ಹೋರಾಟದ ಮುಂಚೂಣಿಯಲ್ಲಿದ್ದ ಆಲೂರು ವೆಂಕಟರಾವ್ ಅವರಿಗೆ 'ಕರ್ನಾಟಕ ಕುಲಪುರೋಹಿತ' ಎಂಬ ಬಿರುದು ನೀಡಿ ಗೌರವಿಸಲಾಯಿತು. ತಮ್ಮ ಬರಹಗಳ ಮೂಲಕ ಕನ್ನಡಿಗರಲ್ಲಿ ಏಕೀಕರಣದ ಕಿಡಿ ಹೊತ್ತಿಸಿದ ಕೀರ್ತಿ-ಮೈಸೂರು ರಾಜ್ಯದ ಬರಹಗಾರರೂ ಸೇರಿದಂತೆ ಇಲ್ಲಿನ ಲೇಖಕರಿಗೆ ಸಲ್ಲಬೇಕು. ಬೇಂದ್ರೆ, ಕುವೆಂಪು, ಗೋವಿಂದ ಪೈ, ಬಿ.ಎಂ.ಶ್ರೀ., ಹುಯಿಲುಗೋಳ ನಾರಾಯಣರಾವ್ ಇನ್ನೂ ಮುಂತಾದ ಸಾಹಿತಿಗಳು ಹಾಗೂ ಬುದ್ಧಿಜೀವಿಗಳು ಈ ಹೋರಾಟಕ್ಕೆ ತಮ್ಮ ವಿಶಿಷ್ಟ ಕೊಡುಗೆಯನ್ನು ನೀಡಿದರು. ಕರ್ನಾಟಕದ ಏಕೀಕರಣವು ಸಾಧ್ಯವೆಂದು ಈ ಚಿಂತಕರಿಗೆ ಮನವರಿಕೆಯಾಗಿತ್ತು.

ಹತ್ತೊಂಭತ್ತನೆಯ ಶತಮಾನದ ಆದಿಭಾಗವು ಭಾರತದ ಸಾಂಸ್ಕೃತಿಕ ಪುನರುಜ್ಜೀವನದ ಕಾಲವಾಗಿ ತೋರುತ್ತದೆ. ಸಾಂಪ್ರದಾಯಿಕ ಸಮಾಜದ ಕೆಲವು ಸಾಮಾಜಿಕ-ಧಾರ್ಮಿಕ ವಿಷಯಗಳನ್ನು ಪ್ರಶ್ನಿಸಲು

ಸುಧಾರಣಾ ಚಳವಳಿಗಳು ಪ್ರಾರಂಭವಾದ ಕಾಲವದು. ಸಾಮಾಜಿಕವಾಗಿ ಪ್ರತಿಗಾಮಿಯಾದ ಪದ್ಧತಿಗಳು ಸಹಜವಾಗಿಯೇ ಸುಧಾರಣಾವಾದಿಗಳ ಗಮನಸೆಳೆದವು. ಸಾಂಸ್ಕೃತಿಕವಾಗಿ ಭಾರತ ಮುಂದುವರಿದ ರಾಷ್ಟ್ರವೆಂದು ಎತ್ತಿ ತೋರಿಸುವ ಜವಾಬ್ದಾರಿ ಕೂಡ ಆ ಚಳವಳಿಗಿತ್ತು. ಹಾಗಾಗಿ ವಸಾಹತುಶಾಹಿ ನಡವಳಿಕೆಯನ್ನು ತಿರಸ್ಕರಿಸುವುದು ಆಗಿನ ಜರೂರಾಗಿತ್ತು. ಸಮಾಜವನ್ನು ಸುಧಾರಿಸುವುದಷ್ಟೇ ಅಲ್ಲದೆ ಗತಕಾಲದ ವೈಭವವನ್ನು ಮುಂಬೆಳಕಿನಲ್ಲಿಟ್ಟು ತೋರಿಸುವುದು ಕರ್ತವ್ಯವಾಗಿತ್ತು. ಸಾಂಸ್ಕೃತಿಕವಾದ ಪುನರುಜ್ಜೀವನವು ರಾಷ್ಟ್ರೀಯ ಪ್ರಜ್ಞೆಯ ಜೊತೆ ಜೊತೆಗೇ ಕುಡಿಯೊಡೆದಿದ್ದನ್ನು ಕಳೆದ ಶತಮಾನದ ಆದಿಭಾಗದಲ್ಲಿ ಕಾಣುತ್ತೇವೆ.

ಬಹುಮುಖಿ ಸಮಾಜದ ಒಳಗಡೆಯೇ ಭಾರತೀಯರು ತಮ್ಮದೇ ಆದ ಒಂದು ಅನನ್ಯತೆಗಾಗಿ ಅನ್ವೇಷಣೆ ಮಾಡಿದುದನ್ನು ಗಮನಿಸಬಹುದಾಗಿದೆ. ಈ ಪ್ರಕ್ರಿಯೆಯ ಹಿನ್ನೆಲೆಯಲ್ಲಿ ಭಾಷಾವಾರು ರಾಜ್ಯಗಳು ಹೊರ ಹೊಮ್ಮಲು ಚಳವಳಿ ಆರಂಭವಾಯಿತು. ಗತಕಾಲದ ತಮ್ಮ ಪರಂಪರೆ, ಭಾಷೆ, ಹಾಗೂ ತಮ್ಮದೆಂದು ಬಗೆಯುವ ಪ್ರತಿಯೊಂದು ಸಂಗತಿಯೂ ಅವರು ಕಟ್ಟಲು ಉದ್ಯುಕ್ತರಾಗಿದ್ದ ಏಕೀಕರಣ ಶಿಲ್ಪಕ್ಕೆ ಆಧಾರವಾಗಿ ಒದಗಿದವು. ಅದು ಮೂಲತಃ ಮೇಲ್ಮಧ್ಯಮವರ್ಗದಿಂದ ಹೊಸದಾಗಿ ಹೊರಹೊಮ್ಮುತ್ತಿದ್ದ ಬುದ್ಧಿಜೀವಿಗಳು ಕಲ್ಪಿಸಿಕೊಂಡ ಒಂದು ಆಲೋಚನೆಯಾಗಿತ್ತು ಎನ್ನಬಹುದು. ಆಡಳಿತಾತ್ಮಕ ಹಾಗೂ ಇತ್ಯಾದಿ ಸೌಲಭ್ಯಕ್ಕಾಗಿ ಪ್ರಾಂತ್ಯಗಳನ್ನು ರಚಿಸಿಕೊಂಡ ಸಂದರ್ಭದಲ್ಲಿ ಜನರಲ್ಲಿ ಪ್ರತ್ಯೇಕತಾ ಭಾವನೆಯುಂಟಾದದ್ದೂ ಸಹಜ. ಒಂದು ಭಾಷೆಯನ್ನಾಡುವ ಜನರ ಗುಂಪನ್ನು ಇನ್ನೊಂದು ಭಾಷೆಯನ್ನಾಡುವ ಜನರ ಗುಂಪಿನೊಡನೆ ಬೆರಕೆ ಮಾಡುವ ಪರಿಯಿಂದ ಈ ಭಾವನೆಯುಂಟಾಯಿತು. ಅಲ್ಪಸಂಖ್ಯಾತರಲ್ಲಿ ತಮ್ಮದೇ ಆದ ಒಂದು ಅನನ್ಯತೆಯನ್ನು ಹೊಂದಬೇಕೆಂಬ ಉತ್ಕಟವಾದ ಇಚ್ಛೆಯಾಯಿತು. ಅನನ್ಯತೆಯ ಅನ್ವೇಷಣೆ ಬಹುತೇಕ ಸಾಂಸ್ಕೃತಿಕ ಹಾಗೂ ಭಾಷಿಕವಾದುದಾಗಿತ್ತು. ಬೇರೊಂದು ಭಾಷಿಕ ಗುಂಪಿನ ದಬ್ಬಾಳಿಕೆಯಲ್ಲಿದ್ದೇವೆ ಎಂಬ ಭಾವನೆಯೇ ಮೂಲತಃ ಪ್ರಾಂತ್ಯಗಳು ಹಾಗೂ ರಾಜ್ಯಗಳ ಏಕೀಕರಣದ ಹಿಂದೆ ಕೆಲಸ ಮಾಡಿದೆಯೆಂಬುದನ್ನು ಮರೆಯುವಂತಿಲ್ಲ.

ಏಕೀಕರಣದ ಕನಸನ್ನು ನನಸು ಮಾಡಿಕೊಳ್ಳುವ ಹಾದಿಯಲ್ಲಿ ಅನೇಕ ಎಡರು ತೊಡರುಗಳನ್ನು ಎದುರಿಸಬೇಕಾಯಿತು. ಮೈಸೂರು ಬಹುತೇಕ ಚಳವಳಿಯಲ್ಲಿ ಭಾಗವಹಿಸದೆ ಹೊರಗುಳಿದದ್ದು ಹಾಗೂ ಆ ಸಂಬಂಧ ಸರ್ವಾನುಮತದ ತೀರ್ಮಾನವಾಗದೆ ಹೋದದ್ದು ನಾಯಕರನೇಕರಿಗೆ ಇರಸು ಮುರುಸು ಉಂಟು ಮಾಡಿತು. ಮೈಸೂರಿನ ನಾಯಕರಿಗೆ ಚಳವಳಿಯ ಮುಂಚೂಣಿಯಲ್ಲಿದ್ದವರು ಅನೇಕ ಬಾರಿ ಮನವಿ ಸಲ್ಲಿಸಿದರು. ಆರ್.ಆರ್.ದಿವಾಕರರು ಸಾಹುಕಾರ ಚನ್ನಯ್ಯನವರಿಗೆ ಹೀಗೆ ಬರೆದರು: ‘ಈ ಅತ್ಯಂತ ಪ್ರಮುಖವಾದ ವಿಷಯವಾಗಿ ಭಿನ್ನಾಭಿಪ್ರಾಯವಿದ್ದಿತೆಂದು ಚರಿತ್ರಕಾರ ಮುಂದೆ ಬರೆಯುವಂತಾಗದಿರಲಿ. ಮೈಸೂರಿನ ಏಕಾಧಿಪತ್ಯದ ವಿರುದ್ಧ ಹಾಗೂ ಪರಕೀಯರ ವಿರುದ್ಧ ನಮ್ಮಿಬ್ಬರದೂ ಉಭಯ ಸಾಮಾನ್ಯವಾದ ಹೋರಾಟ. ನಾವಿಬ್ಬರೂ ಒಟ್ಟಾಗಿ ಅಖಂಡ ಕರ್ನಾಟಕ ಹಾಗೂ ಒಂದು ಆಡಳಿತದ ಕನಸನ್ನು ಕಂಡಿದ್ದೇವೆ. ಈ ಚಾರಿತ್ರಿಕ ಕ್ಷಣದಲ್ಲಿ ನಾವು ವಿರೋಧಿ ಬಣಗಳಲ್ಲಿ ಗೋಚರವಾಗುವುದನ್ನು ತಪ್ಪಿಸೋಣ......’ [೨೪]

ಮನವೊಲಿಸಿ, ರಾಜಕೀಯ ಹುನ್ನಾರಿನಿಂದ ಏಕೀಕರಣವನ್ನು ಸಾಧಿಸಿದರಾದರೂ ಲಾಗಾಯ್ತಿನಿಂದ ಬೆಳೆದಿದ್ದ ಅಡ್ಡಿಯಾತಂಕಗಳನ್ನು ನಿವಾರಿಸಬೇಕಾದ ಅಗತ್ಯ ಕಂಡಿತು. ಆದರೆ ತಾತ್ಕಾಲಿಕವಾಗಿ ಬದಿಗಿರಿಸಲ್ಪಟ್ಟಿದ್ದ ಸಮಸ್ಯೆಗಳು ಮತ್ತೆ ತಲೆಯೆತ್ತತೊಡಗಿದವು. ಹೊಸದಾಗಿ ರಚಿತವಾಗಿದ್ದ ಸರ್ಕಾರ ಅನೇಕ ಸವಾಲುಗಳನ್ನು ಎದುರಿಸಬೇಕಾಯಿತಲ್ಲದೆ, ಆ ಕೆಲವು ಸಮಸ್ಯೆಗಳು ಇಂದಿಗೂ ಜೀವಂತವಾಗಿವೆ. ಗಡಿ ಸಮಸ್ಯೆ ಹಾಗೂ


ಬೀದರ್
ಗುಲ್ಬರ್ಗಾ
ಬಿಜಾಪುರ
ಬೆಳಗಾವಿ
ರಾಯಚೂರು
ಧಾರವಾಡ
ಉತ್ತರ ಕನ್ನಡ
ಬಳ್ಳಾರಿ
ಚಿತ್ರದುರ್ಗ
ಶಿವಮೊಗ್ಗ
ಚಿಕ್ಕಮಗಳೂರು
ದಕ್ಷಿಣ ಕನ್ನಡ
ತುಮಕೂರು
ಕೋಲಾರ
ಬೆಂಗಳೂರು
ಹಾಸನ
ಮಂಡ್ಯ
ಕೊಡಗು
ಮೈಸೂರು
ಉ
ಪ
ಪೂ
ದ

ಪ್ರಸ್ತುತ ಕರ್ನಾಟಕ

ಭಾಷೆಯ ಸಮಸ್ಯೆಗಳು ರಾಜ್ಯದ ಅನವರತದ ಸಮಸ್ಯೆಗಳಾಗಿ ಪರಿಣಮಿಸಿವೆ. ಬೆಳಗಾಂ ಬಗೆಹರಿಯದ ಸಮಸ್ಯೆಯಾಗಿದೆ. ಮಹಾರಾಷ್ಟ್ರ ಏಕೀಕರಣ ಸಮಿತಿಯು ಬೆಳಗಾವಿ ಕನ್ನಡಿಗರ ಪಾಲಾಗುವುದನ್ನು ಏಕೀಕರಣ ಪೂರ್ವದ ಕಾಲದಿಂದಲೂ ವಿರೋಧಿಸುತ್ತಾ ಬಂದಿದೆ.[೩.೫] ಏಕೀಕರಣದ ನಂತರವೂ ಸಹ ಬೆಳಗಾವಿ ತಮಗೆ ಸೇರಬೇಕೆಂದು ಎರಡೂ ರಾಜ್ಯಗಳು ವ್ಯಾಜ್ಯ ಹೂಡಿರುವುದರಿಂದ ಅದರ ಇತ್ಯರ್ಥಕ್ಕಾಗಿ ಮಹಾಜನ್ ಆಯೋಗವನ್ನು ನೇಮಕ ಮಾಡಲಾಯಿತು. ಇದರ ಜೊತೆಗೆ ನೆರೆಹೊರೆಯ ರಾಜ್ಯದಲ್ಲಿನ ಕನ್ನಡ ಅಲ್ಪ ಸಂಖ್ಯಾತರು ಹಾಗೂ ಕರ್ನಾಟಕದಲ್ಲಿ ವಾಸವಾಗಿರುವ ಇತರ ಭಾಷೆಯ ಅಲ್ಪಸಂಖ್ಯಾತರು – ಇವರ ಸಮಸ್ಯೆ ಬಗೆಹರಿಯಬೇಕಾಗಿದೆ.

ಹಳೆಯ ಮೈಸೂರು ರಾಜ್ಯದ ಹೊರಗಿನ ಪ್ರದೇಶಗಳು ಆಡಳಿತದ ಅವಜ್ಞೆಯ ಫಲವಾಗಿ ಹಿಂದುಳಿಯುವಂತಾಯಿತು. ಈ ಭಾಗಗಳು ಪ್ರಾಕೃತಿಕವಾಗಿ ಸಮೃದ್ಧವಾಗಿರುವುದಾದರೂ ಅಲ್ಲಿ ಪ್ರಗತಿ ಸಾಧಿಸುವಲ್ಲಿ ಸಾಕಷ್ಟು ಪ್ರಯತ್ನಗಳು ಆಗುತ್ತಿಲ್ಲವೆಂದು ವಿಷಾದದಿಂದ ಹೇಳಬೇಕಾಗಿದೆ. ಅನೇಕ ನೀರಾವರಿ ಯೋಜನೆಗಳನ್ನು ಪ್ರಾರಂಭಿಸಿರುವುದು ನಿಜ; ಹಾಗೆಯೇ ಅನೇಕ ವಿಶ್ವವಿದ್ಯಾಲಯಗಳ ಸ್ಥಾಪನೆಯಾಗಿದೆ; ಸಮಾಜ ಕಲ್ಯಾಣ ಕಾರ್ಯಕ್ರಮಗಳನ್ನು ಕೈಗೆತ್ತಿಕೊಳ್ಳಲಾಗಿದೆ. ಏಕೀಕೃತ ಕರ್ನಾಟಕದ ಹಿಂದುಳಿದಿರುವ ಪ್ರದೇಶಗಳ ಜನರು ತಮ್ಮ ಪ್ರದೇಶಗಳಲ್ಲಾಗಿರುವ ಅಭಿವೃದ್ಧಿ ಕಾರ್ಯಗಳ ಬಗ್ಗೆ ಅತೃಪ್ತಿ ವ್ಯಕ್ತಪಡಿಸಿರುವ ಕಾರಣ ಆಯಾ ಕಾಲದ ರಾಜ್ಯ ಸರ್ಕಾರಗಳು ಅಭಿವೃದ್ಧಿ ಮಂಡಳಿಗಳನ್ನು ಸ್ಥಾಪಿಸಿವೆ. ಆದಾಗ್ಯೂ ಬಹುಪಾಲು ಜನಸಂಖ್ಯೆಯ ಸಾಮಾಜಿಕ ಹಾಗೂ ಆರ್ಥಿಕ ಬದುಕು ಅತೃಪ್ತಿಕರವಾಗಿಯೇ ಮುಂದುವರೆದಿದೆ. ಹಳೆಯ ಮೈಸೂರು ಪ್ರಾಂತ್ಯಕ್ಕೆ ಹೋಲಿಸಿದರೆ ಏಕೀಕೃತ ಕರ್ನಾಟಕದ ವಲಯಗಳಲ್ಲಿ ಹೇಳಿಕೊಳ್ಳುವಂಥ ಪ್ರಗತಿಯಾಗಿಲ್ಲ. ಪ್ರಜ್ಞಾವಂತ ದಿವಾನರುಗಳು ಹಾಗೂ ಮೈಸೂರಿನ ಮಹಾರಾಜರ ಆಶ್ರಯದಡಿಯಲ್ಲಿ, ಕೃಷಿ, ನೀರಾವರಿ, ಕೈಗಾರಿಕೆ, ಶಿಕ್ಷಣ ಹಾಗೂ ಇತರೆ ಕಲ್ಯಾಣ ಕಾರ್ಯಕ್ರಮಗಳಲ್ಲಿ ಗಣನೀಯವಾಗಿ ಪ್ರಗತಿ ಸಾಧಿಸಲಾಗಿತ್ತು.

ಏಕೀಕರಣದ ಕನಸು ಕಂಡಿದ್ದ ನಾಯಕರು ಸಾಂಸ್ಕೃತಿಕ ಐಕ್ಯತೆಗಾಗಿ ಮಾಡಿದ್ದ ನಿರೀಕ್ಷೆ ಇನ್ನೂ ಸಾಧಿತವಾಗಿಲ್ಲ. ಬೇರೆ ಬೇರೆ ಸಾಂಸ್ಕೃತಿಕ ಹಾಗೂ ಸಾಹಿತ್ಯಕ ಅಕಾಡೆಮಿಗಳ ಮೂಲಕ ಸರ್ಕಾರ ಭಾವನಾತ್ಮಕವಾದ ಐಕ್ಯತೆಯನ್ನು ಸಾಧಿಸಲು ಪ್ರಯತ್ನ ನಡೆಸಿದೆಯಾದರೂ ನಿರೀಕ್ಷಿತ ಮಟ್ಟದಲ್ಲಿ ಕಾರ್ಯ ಸಾಧನೆಯಾಗದ ಕಾರಣ ಹೆಚ್ಚು ಕ್ರಿಯಾಶೀಲವಾದ ಪ್ರಯತ್ನಗಳು ಈ ದಿಶೆಯಲ್ಲಿ ಆಗಬೇಕಾಗಿದೆ.

**-ಡಾ. ಎಂ. ಜಮುನ**

## ಟಿಪ್ಪಣಿಗಳು

೧ ಯುನೈಟೆಡ್ ಕರ್ನಾಟಕ: ಎ ಕೇಸ್ ಫಾರ್ ಕರ್ನಾಟಕ ಯೂನಿಫಿಕೇಷನ್, (ಸಂ): ಕರ್ನಾಟಕ ಯೂನಿಫಿಕೇಷನ್ ಸಭಾ, ಸಂಪಾದಕರು ಕರ್ನಾಟಕ ಯುನಿಫಿಕೇಷನ್ ಸಬ್ ಕಮಿಟಿ, ಕೆ.ಪಿ.ಸಿ.ಸಿ, ಧಾರವಾಡ, ೧೯೨೪, ಶ್ರೀ ನರಸಿಂಗ್ ನಾರಾಯಣ ಭಿಸೆಯವರ ಕಲೆಕ್ಷನ್ಸ್. ಕೆ.ಎಸ್.ಎ.

೨ ಅದೇ

೩ ಪಣಿಕ್ಕರ್.ಕೆ.ಎನ್.: ಕಲ್ಚರ್ ಅಂಡ್ ಕಾನ್ಷಿಯಸ್‌ನೆಸ್ ಇನ್ ಮಾಡರ್ನ್ ಇಂಡಿಯಾ: ಎ ಹಿಸ್ಟಾರಿಕಲ್ ಪರ್‌ಸ್ಪೆಕ್ಟಿವ್, ನವದೆಹಲಿ, ೧೯೯೨, ಪು. ೨೮
೪ ಯುನೈಟೆಡ್ ಕರ್ನಾಟಕ: ೧೯೨೮
೫ ರಾಘವೇಂದ್ರ ರಾವ್.ಕೆ.: ಆಲೂರು ವೆಂಕಟರಾವ್, ಧಾರವಾಡ, ಪು. ೧೩
೬ ವಾಗ್ಭೂಷಣ: (ಕನ್ನಡ ಸಾಪ್ತಾಹಿಕ) ಧಾರವಾಡ, ೧೯೭೩, ಪು. ೧೮೭, ಧಾರವಾಡದ, ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ ಇದರ ಹಳೆಯ ಸಂಚಿಕೆಗಳನ್ನು ಜೋಡಿಸಿ ರಕ್ಷಿಸಿಡಲಾಗಿದೆ.
೭ ಮಂಗಳವೇಡೆ ಶ್ರೀನಿವಾಸರಾವ್, ಸಂಗಮ ನಾರಾಯಣ: ಕರ್ನಾಟಕ ಏಕೀಕರಣ, ರಾಷ್ಟ್ರೀಯ ವಾಗ್ಮಯ ಪ್ರಕಾಶನ ಟ್ರಸ್ಟ್, ಹುಬ್ಬಳ್ಳಿ, ೧೯೪೬, ಪು. ೩೮-೩೯
೮ ಸ್ವದೇಶಾಭಿಮಾನಿ: ಮಂಗಳೂರು, ೧೪ ಮೇ. ೧೯೨೦
೯ ಹಾಲಪ್ಪ. ಜಿ.ಎಸ್.: ಹಿಸ್ಟರಿ ಆಫ್ ಫ್ರೀಡಮ್ ಮೂವ್‌ಮೆಂಟ್ ಇನ್ ಕರ್ನಾಟಕ, ಸಂಪುಟ ೨, ಬೆಂಗಳೂರು, ೧೯೬೪, ಪು. ೧೧೦-೧೧೫
೧೦ ಅದೇ, ಬೆಳಗಾವಿ ಅಧಿವೇಶನ, ಪು. ೧೨೧
೧೧ ಯುನೈಟೆಡ್ ಕರ್ನಾಟಕ, ೧೯೨
೧೨ ಅದೇ.
೧೩ ಎ ಕೇಸ್ ಫಾರ್ ಕರ್ನಾಟಕ ಯೂನಿಫಿಕೇಷನ್: ಆಲ್ ಕರ್ನಾಟಕ ಯೂನಿಫಿಕೇಶನ್ ಲೀಗ್ ಬೆಳಗಾವಿ, ೧೯೩೭, ಪು. ೧೧
೧೪ ದಿವಾಕರ್, ಆರ್.ಆರ್.: ಕರ್ನಾಟಕ ಏಕೀಕರಣದ ಕಥೆ, ಹುಬ್ಬಳ್ಳಿ, ೧೯೫೬, ಪು. ೨೧
೧೫ ಮುಗಳಿ, ಆರ್.ಎಸ್.(ಸಂ): ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರ ಭಾಷಣಗಳು, ಬೆಂಗಳೂರು, ೧೯೬೦, ಪು. ೨೩೧-೨೩೪
೧೬ ಎ ಕೇಸ್ ಫಾರ್ ಕರ್ನಾಟಕ ಯೂನಿಫಿಕೇಷನ್, ೧೯೩೭, ಪು. ೧೬
೧೭ ಕಾಂಗ್ರೆಸ್ ಮಂತ್ರಿಮಂಡಲವೂ ಏಕೀಕರಣದ ಸಿದ್ಧತೆಯೂ, ಅಖಿಲ ಕರ್ನಾಟಕ ಏಕೀಕರಣ ಸಂಘ, ಧಾರವಾಡ, ೧೯೪೬. ಪು-೧.
೧೮ ಮಂಗಳವೀಡು ಶ್ರೀನಿವಾಸರಾವ್, ಸಂಗಮ ನಾರಾಯಣ
೧೯ ಅದೇ, ಪು. ४೫-४೬
೨೦ ದಿವಾಕರ್, ಆರ್.ಆರ್. (ಸಂ): ಕರ್ನಾಟಕ ಥ್ರೂದ ಏಜಸ್, ಬೆಂಗಳೂರು, ೧೯೬೮, ಪು. ೯೪೮
೨೧ ಭಾಷಾವಾರು ಪ್ರಾಂತ್ಯ ಸಮಿತಿಯ ವರದಿ-ದರ್ ಸಮಿತಿಯ ವರದಿ, ೧೯೪೮, ಪು. ೨೦-೨೧
೨೨ ಅದೇ, ಪು. ೫೨
೨೩ ಅದೇ, ಪು. ೬೩
೨೪ ರಿಪೋರ್ಟ್ ಆಫ್ ದಿ ಸ್ಟೇಟ್ ರಿ ಆರ್ಗನೈಜೇಷನ್ ಕಮಿಷನ್,(ಎಸ್‌ಆರ್‌ಸಿ) ೧೯೫೫, ಪು. ೨೦-೨೨
೨೫ ವೀರಣ್ಣಗೌಡ, ಎಚ್.ಕೆ.: ಬದುಕು ಮೆಲುಕು (ಕನ್ನಡದಲ್ಲಿ ಆತ್ಮಕತೆ) ಮೈಸೂರು, ೧೯೭೪, ಪು. ೨೫೮
೨೬ ಟಿ.ಸಿದ್ಧಲಿಂಗಯ್ಯನವರಿಗೆ ಕೆಂಗಲ್ ಹನುಮಂತಯ್ಯನವರ ಪತ್ರಗಳು, ದಿನಾಂಕ, ೨೭.೩.೧೯೫೦ ಹಾಗೂ ೫.೨.೧೯೫೧, ಕೆಂಗಲ್ ಹನುಮಂತಯ್ಯನವರ ಸಂಗ್ರಹ
೨೭ ಕೆಂಗಲ್‌ರವರಿಂದ ಸಿದ್ಧಲಿಂಗಯ್ಯನವರಿಗೆ. ೫.೨.೧೯೫೧
೨೮ ಅದೇ
೨೯ ಎಸ್‌ಆರ್‌ಸಿಯ ವರದಿ.
೩೦ ದಿವಾಕರ್, ಆರ್.ಆರ್.: ೧೯೬೮, ಪು. ೯೫೭
೩೧ ಮೈಸೂರು ಶಾಸನಸಭೆಯ ಕಲಾಪಗಳು, ನವೆಂಬರ್ ೧೬, ೧೯೫೫, ಪು. ೩೨-೩೩
೩೨ ಜಯಸಿಂಹ ರಾವ್, ಸಿ.ಆರ್.: ಕೆಂಗಲ್ ಹನುಮಂತಯ್ಯ-ಒಂದು ನೋಟ, ರಾಷ್ಟ್ರರತ್ನ ಕೆಂಗಲ್ ಹನುಮಂತಯ್ಯ ಅಭಿನಂದನ ಸಂಚಿಕೆ, ೧೯೮೦

೩೩ ಕೆ.ಸಿ.ರೆಡ್ಡಿಯವರಿಂದ ಸಾಹುಕಾರ್ ಚೆನ್ನಯ್ಯನವರಿಗೆ ಪತ್ರ ಮೇ ೧೬ ೧೯೫೬, ನವದೆಹಲಿ, ಸಾಹುಕಾರ್ ಚೆನ್ನಯ್ಯನವರ ಸಂಗ್ರಹ

೩೪ ಆರ್.ಆರ್. ದಿವಾಕರರಿಂದ ಸಾಹುಕಾರ್ ಚೆನ್ನಯ್ಯನವರಿಗೆ ಪತ್ರ. ನವೆಂಬರ್ ೧೦ ೧೯೫೫, ಸಾಹುಕಾರ್ ಚೆನ್ನಯ್ಯನವರ ಸಂಗ್ರಹ.

೩೫ ವಿವರಗಳಿಗಾಗಿ ನೋಡಿ: ಬೆಳಗಾಂ ಸಿಟಿ, ಮಹಾರಾಷ್ಟ್ರ ಏಕೀಕರಣ ಸಮಿತಿಯು ಎಸ್‌ಆರ್‌ಸಿಗೆ ಸಲ್ಲಿಸಿದ ಮನವಿ, ಬೆಳಗಾವಿ.

## ಅಧ್ಯಾಯ : ಹದಿನೆಂಟು

# ಉಪಸಂಹಾರ

ವಸಾಹತು-ವಿರೋಧಿ, ಏಕಾಧಿಪತ್ಯ-ವಿರೋಧಿ ಚಳವಳಿಗಳ ಸಂಗಮಸ್ಥಾನವಾಗಿದ್ದ ಕರ್ನಾಟಕವು ಶೋಷಣಾತ್ಮಕವಾದ ಏಕಾಧಿಪತ್ಯವನ್ನು ಕೊನೆಗಾಣಿಸುವಲ್ಲಿ ಯಶಸ್ಸು ಸಾಧಿಸಿತು. ಈ ಯಶಸ್ಸು ಕೇವಲ ಪರಕೀಯ ಆಳ್ವಿಕೆಯ ವಿರುದ್ಧವಷ್ಟೆ ಆಗಿರದೆ ದೇಶೀಯ ಸಂಸ್ಥಾನದ ಪಾಳೆಗಾರಿಕೆಯ ಜೊತೆಗೆ ಪುರೋಹಿತಶಾಹಿ ಮೇಲ್ವರ್ಗದ ದಬ್ಬಾಳಿಕೆಯ ವಿರುದ್ಧದ ಯಶಸ್ಸು.

ಅನೇಕ ರೀತಿಯ ಆಡಳಿತಗಳ ಅಧೀನದಲ್ಲಿ ವಸಾಹತುಕಾಲದ ಕರ್ನಾಟಕ ಮತ್ತು ಅಲ್ಲಿಯ ಜನರು ಪರಿಪರಿಯಾದ ಪರಿತಾಪಕ್ಕೊಳಗಾಗಿದ್ದರು. ಕರ್ನಾಟಕದ ಸಾಂಸ್ಕೃತಿಕ ಅನನ್ಯತೆಯು ಸಂಪೂರ್ಣವಾಗಿ ಅಳಿಸಿ ಹೋಗಿದ್ದ ಕಾರಣ ಸಾಂಸ್ಕೃತಿಕ, ರಾಜಕೀಯ, ಆರ್ಥಿಕ ಹಾಗೂ ಸಾಮಾಜಿಕ ಅನನ್ಯತೆಯನ್ನು ಮರಳಿ ಪಡೆಯುವ ಹೋರಾಟದ ಹಿನ್ನೆಲೆಯಲ್ಲಿ ರಾಷ್ಟ್ರೀಯ ವಿಮೋಚನಾ ಚಳವಳಿಯನ್ನು ಗಮನಿಸಬೇಕಾಗುತ್ತದೆ.

ತಮ್ಮ ನಾಡು ಭಾಷೆ ಮತ್ತು ಸಾಹಿತ್ಯವನ್ನು ಪುನಶ್ಚೇತನಗೊಳಿಸುವಲ್ಲಿ ಕನ್ನಡಿಗರು ಮಾಡಿದ ಪ್ರಯತ್ನದ ಪ್ರಾರಂಭ ಹಂತದಲ್ಲಿ 'ಕರ್ನಾಟಕ ಭಾಷೋಜ್ಜೀವಿನಿ ಸಭಾ' , 'ಕರ್ನಾಟಕ ವಿದ್ಯಾವರ್ಧಕ ಸಂಘ' ಹಾಗೂ 'ಕರ್ನಾಟಕ ಸಾಹಿತ್ಯ ಪರಿಷತ್ತು' ಸ್ಥಾಪನೆಯಾದವು. ಮಹಿಳೆಯರ ಶಿಕ್ಷಣಕ್ಕೆ ಪ್ರೋತ್ಸಾಹ, ವಿಧವಾ ವಿವಾಹ ಹಾಗೂ ಬಾಲ್ಯವಿವಾಹವನ್ನೂ ತಡೆಗಟ್ಟುವ ಕಾರ್ಯಕ್ರಮಗಳ ಮೂಲಕ ಸಮಾಜವು ಹೆಚ್ಚು ಪ್ರಜಾಸತ್ತಾತ್ಮಕ ವಾಗುವ ಸೂಚನೆಗಳೂ ಕಂಡುಬಂದವು. ಜಾತಿಪದ್ಧತಿ ಹಾಗೂ ಅಸ್ಪೃಶ್ಯತಾ ನಿವಾರಣೆಯಂಥ ಕ್ರಾಂತಿಕಾರಿ ಹೆಜ್ಜೆಗಳನ್ನು ತೆಗೆದುಕೊಳ್ಳುವಷ್ಟು ಸುಧಾರಣಾ ನೀತಿ ಮುಂದುವರಿದಿರಲಿಲ್ಲ ; ಆದರೆ ಸುಧಾರಣಾವಾದಿಗಳ ಸಾಮಾಜಿಕ ಹಿನ್ನೆಲೆ ಮತ್ತು ಅವರ ಪ್ರಭಾವಗಳನ್ನು ಗಮನಿಸಿದರೆ ಅವರ ಸಾಧನೆ ಗೌಣವೆಂದು ತೋರುವುದಿಲ್ಲ.

ಕರ್ನಾಟಕದಲ್ಲಿ ತಿಲಕವಾದವು ಪ್ರಾರಂಭದಲ್ಲಿಯೇ ವ್ಯಾಪಕವಾಗಿದ್ದು ಇಲ್ಲಿನ ರಾಷ್ಟ್ರೀಯ ಚಟುವಟಿಕೆಗೆ ಮೂಲಪ್ರೇರಣೆಯಾಗಿ ಪರಿಣಮಿಸಿದುದು ವಾಸ್ತವವಾಗಿದೆ. 'ದ ಏಜ್ ಆಫ್ ಕನ್ಸೆಂಟ್ ಬಿಲ್' ಹಾಗೂ 'ದ ಇಂಡಿಯನ್ ಸೋಷಿಯಲ್ ಕಾನ್ಫರೆನ್ಸ್' ಗಳನ್ನು ತಿಲಕರು ವಿರೋಧಿಸಿದ ಕಾರಣ ಕರ್ನಾಟಕದ ಅವರ ಬಹುತೇಕ ಅನುಯಾಯಿಗಳೂ ಸೇರಿದಂತೆ ತಿಲಕರು ಸುಧಾರಣಾ-ವಿರೋಧಿಯೇ ಎಂದು ಶಂಕಿಸುವುದಕ್ಕೆ ಎಡೆಮಾಡಿಕೊಟ್ಟಿತು.

ಮೈಸೂರು ಸರ್ಕಾರ ರಾಜಕೀಯವಾದ ವಿರೋಧವನ್ನು ಹತ್ತಿಕ್ಕುವಲ್ಲಿ ಅವರ ಏಕಾಧಿಪತ್ಯದ ಮಾರ್ಗಗಳೇನೇ ಇರಲಿ ಸುಧಾರಣಾ ಚಳವಳಿಯ ನಿಜವಾದ ನೇತಾರನಂತೆ ಕೆಲಸ ಮಾಡಿದುದನ್ನು ಮರೆಯುವಂತಿಲ್ಲ.

ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮವನ್ನೂ ಕೈಗೆತ್ತಿಕೊಂಡ ಮೈಸೂರು ಸರ್ಕಾರ ಗಾಂಧೀಜಿಯವರ ಮೆಚ್ಚುಗೆ ಗಳಿಸಿತು. ಹಾಗಾಗಿ ಸಾಮಾಜಿಕ ಸುಧಾರಣೆ, ಸ್ವದೇಶಿ, ಹಾಗೂ ರಚನಾತ್ಮಕ ಕಾರ್ಯಕ್ರಮವನ್ನು ಮೈಸೂರು ಸರ್ಕಾರ ಮೊದಲೇ ಪ್ರಾರಂಭಿಸಿದ್ದ ಕಾರಣ ಮೈಸೂರು ರಾಷ್ಟ್ರವಾದಿಗಳು ಅದನ್ನು ಮುಂದುವರಿಸುವ ಮಾರ್ಗ ಅನುಸರಿಸಬೇಕಾಯಿತು.

ಕರ್ನಾಟಕದ ದೇಶೀಯ ಭಾಗಗಳಲ್ಲಿ ಈ ಹಿನ್ನೆಲೆಯಲ್ಲಿ ನಾವು ಸ್ವಾತಂತ್ರ್ಯ ಹೋರಾಟವನ್ನು ಗಮನಿಸ ಬೇಕಾಗುತ್ತದೆ. ಮೈಸೂರಿನ ರಾಷ್ಟ್ರವಾದಿಗಳಿಗೆ ಅದು ಏರುದಾರಿಯಾಗಿ ಪರಿಣಮಿಸಿತ್ತು. ರಾಷ್ಟ್ರಮಟ್ಟದ ಕಾಂಗ್ರೆಸ್ ನಾಯಕರುಗಳಿಗೆ ನಂಬಿಕೆ ಬರುವ ರೀತಿಯಲ್ಲಿ ಮೈಸೂರು ಆಳರಸರ ಏಕಾಧಿಪತ್ಯದ ಪ್ರತಿಗಾಮಿ ಆಡಳಿತದ ಬಗ್ಗೆ ತಿಳಿಸಿ ಹೇಳುವ ಸ್ಥಿತಿಯಲ್ಲಿರಲಿಲ್ಲ. 'ಮಾದರಿ ರಾಜ್ಯ'ವೆಂಬ ಬಿರುದು ಗಳಿಸಿದ ಹಮ್ಮಿನಲ್ಲಿ ಮೈಸೂರು ಸಂಸ್ಥಾನವು ರಾಜಕೀಯವಾದ ವಿರೋಧವನ್ನು ನಿರ್ದಯವಾಗಿ ಬಗ್ಗು ಬಡಿಯಿತು. ದೇಶೀಯ ಸಂಸ್ಥಾನಗಳ ವಿಷಯವಾಗಿ ಕಾಂಗ್ರೆಸ್ ಪಕ್ಷ ಸ್ಪಷ್ಟ ನಿಲುವು ಹೊಂದದ ಪರಿಸ್ಥಿತಿಯನ್ನು ಮೈಸೂರು ರಾಜರು ಉಪಯೋಗಿಸಿಕೊಂಡು ರಾಷ್ಟ್ರವಾದಿಗಳನ್ನು ಹದ್ದುಬಸ್ತಿನಲ್ಲಿಟ್ಟರು. ಆದರೆ ಇಲ್ಲಿ ಗಮನಿಸಬೇಕಾದ ಅಂಶ ವೆಂದರೆ ಮೈಸೂರಿನ ವಸಾಹತು-ವಿರೋಧಿ ಹಾಗೂ ಏಕಾಧಿಪತ್ಯ-ವಿರೋಧಿ ಚಳವಳಿಯೇ ದೇಶೀಯ ಸಂಸ್ಥಾನಗಳ ವಿಷಯವಾಗಿ ಕಾಂಗ್ರೆಸ್ ತನ್ನ ನಿಲುವನ್ನು ಸಂಪೂರ್ಣವಾಗಿ ಬದಲಿಸಿಕೊಳ್ಳುವಂತೆ ಮಾಡಿದುದು. ಕರ್ನಾಟಕದಲ್ಲಿ ಎರಡನೇ ಜಲಿಯನ್‌ವಾಲಾ ಬಾಗ್ ಎಂದೇ ಹೆಸರಾಗಿರುವ ವಿಧುರಾಶ್ವತ್ಥದ ದುರಂತದ ನಂತರ ಗಾಂಧೀಜಿಯವರು ದೇಶೀಯ ಸಂಸ್ಥಾನಗಳ ವಿಷಯವಾಗಿ ತಮ್ಮ ನಿಲುವನ್ನು ಬದಲಾಯಿಸಿಕೊಂಡರು; ಹಾಗಾಗಿ ದೇಶೀಯ ಸಂಸ್ಥಾನಗಳ ಬಗ್ಗೆ ಕಾಂಗ್ರೆಸ್ ಅಧಿವೇಶನದಲ್ಲಿ ಹರಿಪುರ ಗೊತ್ತುವಳಿ ದಕ್ಕುವಂತಾಯಿತು.

ಕರ್ನಾಟಕದಲ್ಲಿ ಹೋರಾಟದ ಇನ್ನೊಂದು ಮುಖ್ಯವಾದ ಲಕ್ಷಣವೆಂದರೆ ಉದಾರವಾದಿ ಪ್ರಜಾಸತ್ತಾತ್ಮಕ ಜಾತಿ ಚಳವಳಿಗಳು ಹಾಗೂ ಬ್ರಾಹ್ಮಣೇತರ ಹಿಂದುಳಿದ ವರ್ಗ ಚಳವಳಿ. ಆರಂಭದಲ್ಲಿ ಈ ಚಳವಳಿಯು ಕಾಂಗ್ರೆಸ್‌ನಿಂದ ದೂರವಾಗಿದ್ದದ್ದು ನಿಜವಾದರೂ ಆ ಕಾರಣಕ್ಕಾಗಿಯೇ ಅದು ವಸಾಹತುಪರ ಹಾಗೂ ರಾಷ್ಟ್ರವಾದ-ವಿರೋಧವೆಂದು ಬಗೆಯಲಾಗದು. ಚಳವಳಿಯ ನಾಯಕತ್ವ ಸ್ಥಳೀಯ ಕಾಂಗ್ರೆಸ್ ನಾಯಕತ್ವಕ್ಕೆ ವಿರೋಧಿಯಾಗಿರಲು ಕಾರಣ ಕಾಂಗ್ರೆಸ್ ನಾಯಕತ್ವ ಮಧ್ಯಮ ಮತ್ತು ಕೆಳಜಾತಿಗಳ ಹೆಚ್ಚುತ್ತಿದ್ದ ಪ್ರಜಾಸತ್ತಾತ್ಮಕ ತುಡಿತಗಳಿಗೆ ವಿರೋಧಿಯಾಗಿದ್ದುದು. ದಕ್ಷಿಣ ಭಾರತದಲ್ಲಿ ವಿಶೇಷವಾಗಿ ಕರ್ನಾಟಕದಲ್ಲಿ ಆರಂಭ ಕಾಲದ ಕಾಂಗ್ರೆಸ್ ನಾಯಕತ್ವವು ಇಲ್ಲಿನ ಸಾಮಾಜಿಕ ಆರ್ಥಿಕ ಸನ್ನಿವೇಶವನ್ನು ವಸ್ತುನಿಷ್ಠವಾಗಿ ಅರಿಯುವಲ್ಲಿ ವಿಫಲವಾಯಿತು. ಚಾರಿತ್ರಿಕ ಹಾಗೂ ಸಾಮಾಜಿಕ ಬೆಳವಣಿಗೆಯ ಬೇರೆ ಬೇರೆ ಹಂತಗಳಲ್ಲಿದ್ದಂಥ ಎಲ್ಲಾ ಸಾಮಾಜಿಕ-ವರ್ಗಗಳನ್ನು ರಾಷ್ಟ್ರೀಯ ಮುಖ್ಯ ಪ್ರವಾಹಕ್ಕೆ ತರಬೇಕಾದ ತುರ್ತನ್ನು ಅದು ಅರಿಯದಾಯಿತು. ಅಖಿಲ ಭಾರತ ನಾಯಕತ್ವಕ್ಕೆ ಹೋಲಿಸಿಕೊಂಡರೆ ಈ ನಾಯಕತ್ವ ಕ್ಷೇತ್ರೀಯವಾದ ಇತಿಮಿತಿಗಳಿಂದ ಕೂಡಿತ್ತು. ತನ್ನ ಅನುಕೂಲಕ್ಕೆ ತಕ್ಕಂತೆ ಸನ್ನಿವೇಶವಿದ್ದ ಕಾರಣ, ವಸಾಹತುಶಾಹಿ-ದೇಶೀಯ ಸಂಸ್ಥಾನ ಈ ವಿಭಿನ್ನ ಸಾಮಾಜಿಕ ಬಲಗಳ ನಡುವಿನ ವ್ಯತ್ಯಾಸಗಳನ್ನು ದೊಡ್ಡದು ಮಾಡಿತು. ಆರಂಭಿಕ ರಾಷ್ಟ್ರವಾದಿ ನಾಯಕತ್ವವು ಸ್ವರಾಜ್ಯ ಸಾಧನೆಯ ಹೋರಾಟದಲ್ಲಿ ಭಾರತ ಜನಸ್ತೋಮವನ್ನು ಒಳಗೊಂಡು ಜನಾಂದೋಲನ ನಡೆಸಬೇಕಾದ ತುರ್ತು ಇರುವುದಾಗಿ ಮನಗಂಡು ಆ ದಿಶೆಯಲ್ಲಿ ಕಾರ್ಯೋನ್ಮುಖಿವಾಗಿದ್ದರೆ ನಂತರದಲ್ಲಿ ಹುಟ್ಟಿಕೊಂಡ ಹಲವು ಚಳವಳಿಗಳ ಅಗತ್ಯವೇ ಇರುತ್ತಿರಲಿಲ್ಲ. ಆದರೆ ಹಾಗಾಗಲಿಲ್ಲ. ನಾಯಕತ್ವವು ವಸ್ತುಸ್ಥಿತಿಯನ್ನು ಅರ್ಥ ಮಾಡಿಕೊಳ್ಳದ ಪರಿಣಾಮವಾಗಿ ಚಳವಳಿಗಳನ್ನು ಗೇಲಿ ಮಾಡಿ ಎಲ್ಲರಿಂದ ದೂರೀಕೃತವಾಯಿತು.

ತಮ್ಮ ಹೊಸ ಸಿದ್ಧಾಂತ ಹಾಗೂ ಕಾರ್ಯಕ್ರಮದ ಜೊತೆ ರಾಷ್ಟ್ರೀಯ ವೇದಿಕೆಯ ಮೇಲೆ ಗಾಂಧೀಜಿಯವರು ಕಾಣಿಸಿಕೊಂಡ ನಂತರ ಬ್ರಾಹ್ಮಣೇತರ ವರ್ಗಗಳಲ್ಲಿ ಒಂದು ಬಗೆಯ ಆತ್ಮವಿಶ್ವಾಸ ಮೂಡಿತು. ೧೯೨೪ರಲ್ಲಿ ಬೆಳಗಾವಿಯಲ್ಲಿ ಗಾಂಧೀಜಿಯವರ ಅಧ್ಯಕ್ಷತೆಯಲ್ಲಿ ಕಾಂಗ್ರೆಸ್ ಸಭೆ ಸೇರಿ ಎಲ್ಲಾ ಜಾತಿಗಳ, ವರ್ಗಗಳ ಸಮ್ಮೇಳನವನ್ನು ಬೇರೆ ಬೇರೆಯಾಗಿ ಮತ್ತು ಸಂಯುಕ್ತವಾಗಿ ರಾಷ್ಟ್ರವಾದಿ ಪತಾಕೆಯಡಿಯಲ್ಲಿ ಮತ್ತೆ ಕರ್ನಾಟಕದಲ್ಲಿ ನಡೆಸುದುದು ಗಮನಾರ್ಹವಾಗಿದೆ. ಉದಯವಾಗಲಿದ್ದ ರಾಷ್ಟ್ರದ ಅಂದರೆ ಸ್ವತಂತ್ರ ಆಧುನಿಕ ಭಾರತದ ಒಂದು ಭಾಗವೇ ಆಗಿ ಜಾತಿ ಹಾಗೂ ವರ್ಗ ಸಂಘಟನೆಗಳು ಗಾಂಧೀಜಿಯವರ ದೃಷ್ಟಿಗೆ ಗೋಚರವಾದವು. ವಸಾಹತು-ವಿರೋಧಿ ರಾಷ್ಟ್ರೀಯ ಹೋರಾಟವು ನಿಜವಾದ ಅರ್ಥದಲ್ಲಿ ರಾಷ್ಟ್ರೀಯ ಹೋರಾಟವಾಗಬೇಕಾಗಿದ್ದರೆ ಆ ಎಲ್ಲಾ ಸಂಘಟನೆಗಳನ್ನು-ಅವುಗಳ ವಿಭಿನ್ನ ಬೇಡಿಕೆಗಳೇನೇ ಇದ್ದರೂ-ಒಟ್ಟಿಗೆ ಸೇರಿಸಬೇಕಾದ ಅಗತ್ಯವಿತ್ತು.

ಹಾಗಾಗಿ ಜಾತಿ ರಾಜಕಾರಣವಾಗಿ ಕರ್ನಾಟಕದಲ್ಲಿ ಗಮನಕ್ಕೆ ಬಂದ ಬೆಳವಣಿಗೆ ಮುಂದೆ ರಾಷ್ಟ್ರೀಯ ಚಳವಳಿಯಾಗಿ ರೂಪುಗೊಂಡಿತು. ಈ ಎಲ್ಲಾ ಸಂಘಟನೆಗಳು ಕಾಂಗ್ರೆಸ್ಸಿನೊಡನೆ ವಿಲೀನಗೊಂಡ ನಂತರವೇ ಕರ್ನಾಟಕದಲ್ಲಿ ಕಾಂಗ್ರೆಸ್ ಒಂದು ರಾಷ್ಟ್ರೀಯ ಸಂಘಟನೆಯಾಗಿ ಬೆಳೆಯಿತಲ್ಲದೆ ವಸಾಹತುಶಾಹಿ ಹಾಗೂ ದೇಶೀಯ ಸಂಸ್ಥಾನದ ಏಕಾಧಿಪತ್ಯದ ವಿರುದ್ಧ ಸೆಣಸಲು ಸಾಮರ್ಥ್ಯ ಪಡೆದದ್ದು. ಅಸಹಕಾರ ಚಳವಳಿ ಹಾಗೂ ಖಿಲಾಫತ್ ಚಳವಳಿಗಳು ಈ ಪ್ರಾಂತ್ಯದಲ್ಲಿ ಗಂಭೀರವಾಗಿ ಪರಿಗಣಿತವಾಗಲಿಲ್ಲವೆಂಬುದನ್ನು ನಾವು ಚೆನ್ನಾಗಿ ಬಲ್ಲೆವು. ಉಪ್ಪಿನ ಸತ್ಯಾಗ್ರಹ, ಕರನಿರಾಕರಣೆ ಹಾಗೂ ಕ್ವಿಟ್ ಇಂಡಿಯಾ ಚಳವಳಿಗಳಲ್ಲಿ ಮಧ್ಯಮ ಹಾಗೂ ಕೆಳ ಜಾತಿಗಳು ಬೃಹತ್ ಪ್ರಮಾಣದಲ್ಲಿ ಭಾಗವಹಿಸಿದ ಪರಿಣಾಮವಾಗಿ ಸರ್ಕಾರದ ದರ್ಪ ಅಡಗಿತು ಎನ್ನಬೇಕು. ವಾಸ್ತವವಾಗಿ ಸರ್ಕಾರಿ-ವಿರೋಧಿ ಚಟುವಟಿಕೆಗಳು ರಾಷ್ಟ್ರವಾದಿ ಕಾಂಗ್ರೆಸ್ಸಿಗರಿಂದ ಪ್ರಾರಂಭವಾಗದೆ ಕಾಂಗ್ರೆಸ್ಸಿನ ಹೆಸರಿನಲ್ಲಿ ಬ್ರಾಹ್ಮಣೇತರರಿಂದ ಪ್ರಾರಂಭವಾಯಿತೆಂದು ಆಗ ದಿವಾನರಾಗಿದ್ದ ಮಿರ್ಜಾ ಇಸ್ಮಾಯಿಲ್ಲರು ಗಾಂಧೀಜಿಯವರಿಗೆ ಪತ್ರ ಬರೆದರು. ಮಿರ್ಜಾ ರಾಷ್ಟ್ರೀಯ ಚಳವಳಿಯ ಪ್ರಭಾವವನ್ನು ತಪ್ಪಾಗಿ ಎಣಿಸಿದ್ದದ್ದೂ ನಿಜ. ಆದಾಗ್ಯೂ ಬಹುತೇಕ ಬ್ರಾಹ್ಮಣೇತರ ಜಾತಿಗಳಿಗೆ ಸೇರಿದ್ದ ರೈತರು, ಕಾರ್ಮಿಕರು, ಮಹಿಳೆಯರು, ಯುವಕರು ಹಾಗೂ ವಿದ್ಯಾರ್ಥಿಗಳ ಭಾಗವಹಿಸುವಿಕೆಯಿಂದ ಕರ್ನಾಟಕದಲ್ಲಿ ಚಳವಳಿ ದೊಡ್ಡ ಪ್ರಮಾಣದಲ್ಲಿ ನಡೆಯಿತೆಂಬುದನ್ನು ಯಾರೂ ಅಲ್ಲಗಳೆಯಲಾರರು.

ಹೈದರಾಬಾದು ಕರ್ನಾಟಕವೊಂದನ್ನು ಹೊರತುಪಡಿಸಿ ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ನಡೆದ ಹೋರಾಟದ ಒಂದು ಪ್ರಮುಖ ಲಕ್ಷಣವೆಂದರೆ, ನಿಗದಿಯಾದ ಸಂವೈಧಾನಿಕ ಚೌಕಟ್ಟಿನೊಳಗೆ ಆಡಳಿತ ನಡೆಸಿದ್ದವರ ವಿರುದ್ಧ ಇದು ನಡೆದದ್ದು. ತಾತ್ವಿಕವಾಗಿ ಏಕಾಧಿಪತ್ಯ ಹೊಂದಿದ್ದ ಮೈಸೂರು ವಾಸ್ತವವಾಗಿ ಹಾಗಿರಲಿಲ್ಲ. ಗಂಭೀರವಾಗಿ ತಮ್ಮ ಅಧಿಕಾರಕ್ಕೆ ಕುತ್ತು ತಾರದಂಥ ಚಟುವಟಿಕೆಗಳನ್ನು ಅವರು ಅಂಗೀಕರಿಸಿದ್ದರು. ಆ ಕಾರಣಕ್ಕಾಗಿಯೇ ಮೈಸೂರಿನ ರಾಷ್ಟ್ರವಾದಿಗಳು ದೇಶೀಯ ಸಂಸ್ಥಾನದ ರದ್ದತಿಗೆ ಒತ್ತಾಯಿಸದೆ ಮೈಸೂರು ಮಹಾರಾಜರ ರಕ್ಷಣೆಯಲ್ಲೇ ಒಂದು ಜವಾಬ್ದಾರಿ ಸರ್ಕಾರದ ರಚನೆಗಾಗಿ ತುಡಿದಿದ್ದರು. ೧೯೩೯ರಷ್ಟು ಹಿಂದೆಯೇ ನೆಹರೂರವರು ರಾಜ್ಯ ಮತ್ತು ಪ್ರಾಂತ್ಯಗಳೊಡನೆ ದೇಶೀಯ ಸಂಸ್ಥಾನಗಳು ವಿಲೀನವಾಗಿ ರಾಜರು ತಮ್ಮ ಹಿತಾಸಕ್ತಿಯನ್ನು ಪ್ರಜೆಗಳ ಹಿತಾಸಕ್ತಿಗಳಲ್ಲಿ ಕಾಣಬೇಕಲ್ಲದೆ ತಮ್ಮ ಅನನ್ಯತೆಯನ್ನು ಕ್ರಮೇಣ ಕಳೆದುಕೊಳ್ಳಬೇಕೆಂದು ತಿಳಿಸಿದ್ದಾದರೂ ಕರ್ನಾಟಕದ ಕಾಂಗ್ರೆಸ್ಸಿಗರು ನೆಹರೂರವರ ಈ ತಾತ್ವಿಕತೆಗೆ ಬದ್ಧರಾಗಲಿಲ್ಲ. ಅವರ ಚಟುವಟಿಕೆಗಳಲ್ಲಿ ಹಾಗೆ ಬದ್ಧರಾಗಿದ್ದರೆಂಬ ಸುಳಿವು ದೊರೆಯಲಿಲ್ಲ. ಒಂದೇ ಆಡಳಿತದಡಿಯಲ್ಲಿ ಕನ್ನಡ ಮಾತನಾಡುವ ಜನರೆಲ್ಲ ಒಂದಾಗಬೇಕೆಂದು ಅವರು ಹೋರಾಟ ನಡೆಸಿದ ಸಂದರ್ಭದಲ್ಲೂ ಸಹ ಏಕೀಕರಣದ ನಂತರ ಮೈಸೂರಿನ ಮಹಾರಾಜರು ರಾಜಪ್ರಮುಖರಾಗಿ ಮುಂದುವರಿಯ ಬೇಕೆಂದು ಅವರ ಇಚ್ಛೆಯಾಗಿತ್ತು. ಮಹಾರಾಜರ ವಿಷಯದಲ್ಲಿ ಆ ಬಗೆಯಾದ ಗೌರವವನ್ನು ಕರ್ನಾಟಕದ ಜನತೆ ಹೊಂದಿತ್ತು.

ಈ ರೀತಿ ಅಚಲವಾದ ಗೌರವವನ್ನು ರಾಜರ ಬಗ್ಗೆ ಪ್ರಜೆಗಳು ತೋರುತ್ತಿದ್ದ ಕಾರಣದಿಂದಲೇ ರಾಷ್ಟ್ರವಾದಿ ರಾಜಕಾರಣಿಗಳ ಹಾದಿಯಲ್ಲಿ ಕಾಲ್ತೊಡಕುಗಳು ಎದ್ದು ಕಂಡವು. ದೇಶೀಯ ಸಂಸ್ಥಾನದ ರಾಷ್ಟ್ರೀಯ ಚಳವಳಿಯ ಕುರಿತು ಆಳವಾಗಿ ಅಧ್ಯಯನ ಮಾಡಿದರೆ, ಆಳರಸರು, ಅವರ ಆಡಳಿತ ಹಾಗೂ ಅಖಿಲ ಭಾರತ ಕಾಂಗ್ರೆಸ್ ಇವರ ಸಂಬಂಧದ ಬಗ್ಗೆ ಅನೇಕ ಕುತೂಹಲಕರ ಸಂಗತಿಗಳು ಹೊರ ಬೀಳಲು ಸಾಧ್ಯ.

ಸ್ವಾತಂತ್ರ್ಯ ಹೋರಾಟದ ಯಜಮಾನಿಕೆಯನ್ನು ಲಾಗಾಯ್ತಿನಿಂದ ವಹಿಸಿಕೊಂಡಿದ್ದ ಕಾಂಗ್ರೆಸ್ ಕರ್ನಾಟಕದ ಸಂದರ್ಭದಲ್ಲಿ ತನ್ನ ಹಿಡಿತವನ್ನು ಸಡಿಲಿಸಲಿಲ್ಲ. ಸಮಾಜವಾದಿ, ಸಮತಾವಾದಿ ಚಟುವಟಿಕೆ ಇಲ್ಲಿ ಅಷ್ಟಾಗಿ ಕಾಣಿಸಿಕೊಳ್ಳಲಿಲ್ಲ. ಅವುಗಳ ಅಸ್ತಿತ್ವವೇ ಹೇಳಿಕೊಳ್ಳುವಂಥದ್ದಾಗಿರಲಿಲ್ಲ. ಕೇವಲ ಗುಂಪುಗಳಾಗಿಯಷ್ಟೇ ಅವು ಗೋಚರವಾಗಿದ್ದವು. ಕಾರ್ಮಿಕರನ್ನು ಸಂಘಟಿಸಿ ಅವು ವಸಾಹತು–ವಿರೋಧಿ, ಸರ್ಕಾರಿ–ವಿರೋಧಿ ಮುಷ್ಕರಗಳನ್ನು ಮತ್ತು ಚಳವಳಿಗಳನ್ನು ನಡೆಸಿದ್ದು ನಿಜ. ಆದರೆ ಸ್ವತಂತ್ರ ಸಂಘಟನೆಗಳಾಗಿ ಅವು ಬೆಳೆಯಲೇ ಇಲ್ಲ. ಈ ಪ್ರಾಂತ್ಯ ಹೆಚ್ಚು ಕೈಗಾರಿಕೀಕರಣವಾಗದ ಕಾರಣ, ಒಂದು ಸುಸಂಘಟಿತವಾದ ಕಾರ್ಮಿಕ ಚಳವಳಿ ಇಲ್ಲಿ ನಡೆಯಲೇ ಇಲ್ಲ. ಇಲ್ಲಿ ಬೆಳೆದಿದ್ದಂಥ ಕೆಲವು ಕೈಗಾರಿಕೆಗಳು ಸರ್ಕಾರಿ ಸಂಸ್ಥೆಗಳಾಗಿದ್ದುದಲ್ಲದೆ, ಮೈಸೂರು ಸರ್ಕಾರವು ವಸಾಹತು ಸರ್ಕಾರದಷ್ಟು ಕ್ರೂರವಾಗಿರಲಿಲ್ಲ. ಖಾಸಗಿ ಬಂಡವಾಳ ಕರ್ನಾಟಕಕ್ಕೆಲ್ಲ ಹರಿದು ಬರಲಿಲ್ಲ; ವಿಶೇಷವಾಗಿ ಉತ್ತರ ಕರ್ನಾಟಕದಲ್ಲಿ ಖಾಸಗಿ ಬಂಡವಾಳಗಾರರಿಂದ ಸ್ಥಾಪಿತವಾದ ಕೆಲವು ಬಟ್ಟೆ ಗಿರಣಿಗಳಿದ್ದವು. ಇವರಲ್ಲಿ ಬಹುತೇಕ ಕಾಂಗ್ರೆಸ್ಸಿಗರೇ ಬಂಡವಾಳಶಾಹಿಗಳಾಗಿದ್ದ ಕಾರಣ–ಬಂಡವಾಳಶಾಹಿ ತತ್ವಕ್ಕೆ ಕಾಂಗ್ರೆಸ್ಸಿಗರು ಬದ್ಧವಾಗದ್ದದ್ದು ಸಹಜವೇ ಆಗಿದೆ–ಕಾರ್ಮಿಕ ಬಲ ಅಸಂಘಟಿತವಾಗಿ ಉಳಿಯಿತು.

ರೈತ ಚಳವಳಿಯ ಗತಿಯೂ ಇದೇ ಆಯಿತು. ಹೈದರಾಬಾದು ಕರ್ನಾಟಕ ಭಾಗವನ್ನು ಹೊರತುಪಡಿಸಿ, ಕರ್ನಾಟಕದಲ್ಲಿ ಬಹಳಷ್ಟು ಜನ ಜಮೀನುದಾರರಿರಲಿಲ್ಲ; ವಸಾಹತುಶಾಹಿ ಸರ್ಕಾರದ ಶೋಷಣಾತ್ಮಕ ಕಂದಾಯ ನೀತಿ, ನೀರಾವರಿಯನ್ನು ಕಡೆಗಣಿಸಿದುದು, ಮೇಲಿಂದ ಮೇಲೆ ಉಂಟಾಗುತ್ತಿದ್ದ ಕ್ಷಾಮ ಪರಿಸ್ಥಿತಿ, ಮತ್ತು ಇತರೆ ಪ್ರಕೃತಿ ವಿಕೋಪಗಳಿಂದಾಗಿ ರೈತರು ಬೆಳೆದು ಇಟ್ಟುಕೊಳ್ಳುವಂಥಾದ್ದೇನೂ ಇರುತ್ತಿರಲಿಲ್ಲ. ಜೊತೆಗೆ ಕರ್ನಾಟಕದಲ್ಲಿ, ಈಗಾಗಲೇ ತಿಳಿಸಿರುವಂತೆ, ಆಮೂಲಾಗ್ರವಾದ ಕೃಷಿ ಸುಧಾರಣೆಯಲ್ಲಿ ನಂಬಿಕೆ ಇಲ್ಲದಿರುವ ಮಂದಿಯ ಕೈಯಲ್ಲಿ ಕಾಂಗ್ರೆಸ್ ನಾಯಕತ್ವ ಉಳಿಯಿತು. ಭೂಸುಧಾರಣಾ ಕಾಯಿದೆ (ಪಶ್ಚಿಮ ಬಂಗಾಳವನ್ನು ಬಿಟ್ಟರೆ ಸಮಗ್ರ ಸುಧಾರಣೆಯಲ್ಲಿ ಇದು ಕ್ರಾಂತಿಕಾರಕ ಹೆಜ್ಜೆಯೆಂದೇ ಪರಿಗಣಿತವಾಗಿತ್ತು) ೧೯೭೦ರ ದಶಕದಲ್ಲಿ ಜಾರಿಗೆ ಬಂದಾಗ ಈ ಕಾಯಿದೆಯ ಪರಿಣಾಮವಾಗಿ ಹೊಸದಾಗಿ ಕೊಂಡುಕೊಳ್ಳಲು ಯಾವ ಭೂಮಿಯೂ ಲಭ್ಯವಿರದಂಥ ಪರಿಸ್ಥಿತಿಯುಂಟಾಗಿತ್ತು. ಹೆಚ್ಚುವರಿಯಾಗಿ ಲಭ್ಯವಿದ್ದಷ್ಟು ಜಮೀನು ಹೈದರಾಬಾದು ಕರ್ನಾಟಕ ಭಾಗದಲ್ಲಿ ಗೋಚರವಾಯಿತು. ಉಳುವವರಿಗೇ ಜಮೀನು ದೊರೆತು ರೈತಾಪಿ ಜನಗಳು ಶೋಷಣೆಯಿಂದ ಮುಕ್ತರಾಗಿದ್ದರೆಂದು ಇದರ ಅರ್ಥವಲ್ಲ. ಶೋಷಣೆ, ಜಪ್ತಿ, ಸುಸ್ತಿಸಾಲ–ಇವೆಲ್ಲಾ ಇದ್ದವು. ವಸಾಹತು ಭಾರತದ ಬೇರೆ ಭಾಗಗಳಲ್ಲಿ ಇದ್ದಷ್ಟು ಪ್ರಖರವಾಗಿ ಇದು ಕಂಡುಬಾರದ ಕಾರಣ ಕ್ರಾಂತಿಕಾರಿ ಕೃಷಿ ಕಾರ್ಯಕ್ರಮವನ್ನು ಹಾಕಿಕೊಂಡು ತನ್ಮೂಲಕ ರಾಷ್ಟ್ರೀಯ ಆಂದೋಲನವನ್ನು ಉತ್ತೇಜಿಸುವಷ್ಟು ಪರಿಸ್ಥಿತಿ ಇಲ್ಲಿ ಪಕ್ವವಾಗಿರಲಿಲ್ಲ ಎಂಬುದು ಗಮನಾರ್ಹ. ರೈತರು ಹಾಗೂ ಗೇಣೀದಾರರನ್ನು ಸಂಘಟಿಸುವ ಕೆಲಸವನ್ನು ವ್ಯಕ್ತಿಗತವಾಗಿ ಕಾಂಗ್ರೆಸ್ಸಿಗರು ಕೈಗೊಂಡರು. ಆದರೆ ಈ ಪ್ರಯತ್ನಗಳನ್ನು ಅಖಿಲ ಭಾರತ ಕಿಸಾನ್ ಸಭಾ ನಾಯಕರಾದ ಸಹಜಾನಂದ್, ಎನ್.ಜಿ.ರಂಗಾ, ಕೃಷ್ಣ ಪಿಳ್ಳೈ, ರವಿನಾರಾಯಣ ರೆಡ್ಡಿ, ಪಿ.ಸುಂದರಯ್ಯ ಮತ್ತಿತರರ ಪ್ರಯತ್ನಗಳಿಗೆ ಹೋಲಿಸಲು ಸಾಧ್ಯವಾಗದು.

ಎರಡನೇ ಮಹಾಯುದ್ಧ ಪ್ರಾರಂಭವಾದ ನಂತರ, ವಿಶೇಷವಾಗಿ 'ಭಾರತ ಬಿಟ್ಟು ತೊಲಗಿ' ಚಳವಳಿಯು ಪ್ರಾರಂಭವಾದ ಮೇಲೆ -ಕಮ್ಯೂನಿಷ್ಟರಿಗೆ ಇದು ಒಗ್ಗಲಿಲ್ಲವೆಂಬುದು ಬೇರೆ ಮಾತು- ಕರ್ನಾಟಕದ ಹೋರಾಟದಲ್ಲಿ ಯಾವುದೇ ಬಗೆಯ ಒಡಕು ಉಂಟಾಗಲಿಲ್ಲ. ರೈತರು ಮತ್ತು ಕಾರ್ಮಿಕರು ಯಾವುದೇ ವರ್ಗ ಸಂಘಟನೆಗಳ ರೀತಿ ಭಾಗವಹಿಸದೆ ವಸಾಹತು-ವಿರೋಧಿ ಚಳವಳಿಯಾಗಿ ಮಾತ್ರ ಇದನ್ನು ತೆಗೆದುಕೊಂಡು ಭಾಗವಹಿಸಿದ್ದು ಗಮನಾರ್ಹ. ವಸಾಹತು ಕಾಲದಲ್ಲಿ ಸಮಾಜವಾದಿಗಳು ಹಾಗೂ ಸಮತಾವಾದಿಗಳು ರೈತರನ್ನು ಸಂಘಟಿಸುವಲ್ಲಿ ಮಾಡಿದ ಪ್ರಯತ್ನಕ್ಕೆ ಅಷ್ಟು ಫಲ ದೊರೆಯಲಿಲ್ಲವೆನ್ನಬೇಕು. ಆದಾಗ್ಯೂ ಪಶ್ಚಿಮ ಭಾಗದ ರೈತರು ಸಂಘಟಿತರಾಗಿದ್ದರಲ್ಲದೆ ಮಲನಾಡು ಪ್ರದೇಶದಲ್ಲಿ ಸ್ವಾತಂತ್ರ್ಯಗಳಿಸಿದ ಬಳಿಕವೇ ಹೋರಾಟಗಳು ಆರಂಭವಾದವು.

ಜಾತಿಯನ್ನು ಒಂದು ಪ್ರಜಾಸತ್ತಾತ್ಮಕ-ವಿರೋಧಿ ಶಕ್ತಿಯಾಗಿ ಕರ್ನಾಟಕದ ನಾಯಕತ್ವ ಯಾವಾಗಲಾದರೂ ಗಮನಿಸಿತೇ ಎಂಬುದು ಸಂದೇಹಾಸ್ಪದ, ಜಾತಿಪದ್ಧತಿಯ ಅನಿಷ್ಟದ ಬಗೆಗೆ ಅದು ಗಂಭೀರವಾಗಿ ಚಿಂತಿಸಿದಂತೆ ತೋರುವುದಿಲ್ಲ. ಜಾತಿಯ ಬಗೆಗೆ ಗಾಂಧೀಜಿಯವರ ಆಲೋಚನಾ ಕ್ರಮದಲ್ಲೇ ಸ್ವಲ್ಪ ದ್ವಂದ್ವವಿದ್ದದ್ದೂ ನಿಜ. ಆದರೆ ಜಾತಿ ಸಂಬಂಧವಾದ ಅರಿವಿನಿಂದ ಭಾರತ ಬೇರೆ ಭಾಗಗಳಲ್ಲಿ ವಸಾಹತು ವಿರೋಧಿ ಹೋರಾಟಕ್ಕೆ ಅಡ್ಡಿಯಾಗಲಿಲ್ಲ; ದಕ್ಷಿಣದಲ್ಲಿ, ಅದರಲ್ಲೂ ವಿಶೇಷವಾಗಿ ಕರ್ನಾಟಕದಲ್ಲಿ, ಇದರ ಪ್ರಭಾವ ಹೆಚ್ಚಿನ ಪ್ರಮಾಣದಲ್ಲಿ ಆಯಿತು. ತನ್ನ ಅನುಭವದಿಂದಲೇ ಪಾಠ ಕಲಿಯುವುದನ್ನು ಕರ್ನಾಟಕ ಕೈಬಿಟ್ಟಿತಲ್ಲದೆ ಈ ವಿಷಯವನ್ನು ಸಂಪೂರ್ಣವಾಗಿ ಕಡೆಗಣಿಸಿತು. ಗಾಂಧೀಜಿಯವರ ನಾಯಕತ್ವವನ್ನು ಒಪ್ಪಿಕೊಂಡೂ ಸಹ ಕರ್ನಾಟಕದ ನಾಯಕತ್ವವು ಭಾರತವು ಈಗಾಗಲೇ ಆಧುನಿಕ ರಾಷ್ಟ್ರವಾಯಿತು ಎಂಬ ತೀರ್ಮಾನಕ್ಕೆ ಬಂದ ಹಾಗೆ ತೋರುತ್ತದೆ. ಒಂದು ಆಧುನಿಕ ರಾಷ್ಟ್ರವಾಗುವ ದಿಶೆಯಲ್ಲಿ ಭಾರತ ಇನ್ನೂ ತಡಕಾಡುತ್ತಿರುವ ಒಂದು ಬಹುಮುಖಿ ಸಮಾಜವೆಂಬ ಸತ್ಯವನ್ನು ಕರ್ನಾಟಕದ ನಾಯಕತ್ವ ಮರೆಯಿತೆಂದು ಹೇಳಬೇಕು; ಆಧುನಿಕ ರಾಷ್ಟ್ರ ನಿರ್ಮಾಣದ ಹಾದಿಯಲ್ಲಿ ಆಂತರಿಕ ಘರ್ಷಣೆಯನ್ನು ನಿವಾರಿಸಿಕೊಂಡು ಉಭಯ ಸಾಮಾನ್ಯ ಶತ್ರುವಾದ, ವಸಾಹತುಶಾಹಿಯ ವಿರುದ್ಧ ಹೋರಾಟ ನಡೆಸಬೇಕಾದ ಅನಿವಾರ್ಯತೆಯಿತ್ತು. ಹಾಗಾಗಿ ಜಾತಿಪದ್ಧತಿಯ ಅನಿಷ್ಟ ಮತ್ತು ಅಸ್ಪೃಶ್ಯತೆಯ ಶಾಸನವನ್ನು ನಿವಾರಿಸುವ ದಿಶೆಯಲ್ಲಿ ಇಲ್ಲಿನ ನಾಯಕತ್ವ ಯಾವುದೇ ಕಾರ್ಯಕ್ರಮವನ್ನು ಹಾಕಿಕೊಂಡಿರಲಿಲ್ಲ ಹಾಗೂ ಈ ಸಮಸ್ಯೆಗಳಿಗೆ ಸಂಪೂರ್ಣವಾಗಿ ಕುರುಡಾಗಿಲ್ಲದಿದ್ದರೂ ತುಂಬಾ ತಣ್ಣಗೆ ಪ್ರತಿಕ್ರಿಯೆ ವ್ಯಕ್ತಪಡಿಸಿತ್ತು. ಈ ಕ್ಷೇತ್ರದಲ್ಲಿ ಕೆಲಸ ಮಾಡಿದ ಸರ್ದಾರ್ ವೀರಣ್ಣಗೌಡ ಪಾಟೀಲ್, ತಗಡೂರು ರಾಮಚಂದ್ರರಾವ್ ಮತ್ತು ಗೋಪಾಲಸ್ವಾಮಿ ಅಯ್ಯರ್‌ರಂಥ ಒಬ್ಬಿಬ್ಬರು ಇದ್ದರೆಂಬುದು ನಿಜ. ಆದರೆ ಅವರ ಸಂಖ್ಯೆ ತೀರಾ ವಿರಳವಾಗಿತ್ತು. ಕರ್ನಾಟಕದಲ್ಲಿ ಸ್ವಾತಂತ್ರ್ಯ ಹೋರಾಟದ ಮುಖ್ಯ ಅಂಗವಾಗಿ ಅಸ್ಪೃಶ್ಯತಾ-ವಿರೋಧ ಚಳವಳಿ ಕಾಣಿಸಿಕೊಳ್ಳಲಿಲ್ಲ ಎನ್ನುವುದಕ್ಕೆ ಪುರಾವೆಗಳಿವೆ; ಉದಾಹರಣೆಗೆ ತಗಡೂರರಂಥ ಚಳವಳಿಗಾರರನ್ನು ಸ್ಥಳೀಯ ನಾಯಕರು ಕೀಳಾಗಿ ಕಂಡರಲ್ಲದೆ, ಅವರು ಗಾಂಧೀಜಿಯವರನ್ನು ಭೇಟಿ ಮಾಡದಂತೆ ತಡೆದರು ಕೂಡ.

ಕರ್ನಾಟಕದಲ್ಲಿ ಈ ಚಳವಳಿಗೆ ಇನ್ನೊಂದು ಆಯಾಮವಿತ್ತು. ಹರಿದು ಹಂಚಿಹೋಗಿದ್ದ ಕರ್ನಾಟಕದ ಬೇರೆ ಬೇರೆ ಭಾಗಗಳು ಒಂದು ಘಟಕವಾಗುವ ಏಕೀಕರಣದ ಚಳವಳಿಯ ಕಾಲವದು. ಅಂಥ ಚಳವಳಿಗಳಿಗೆ ಕಾಂಗ್ರೆಸ್ ಕಾರ್ಯಕ್ರಮದಲ್ಲಿ ಅವಕಾಶ ನೀಡಿ ಪ್ರೋತ್ಸಾಹಿಸಿದ ಗಾಂಧೀಜಿಯವರು ಹೊರ ಹೊಮ್ಮಿದ ಪರಿಣಾಮವಾಗಿ ಚಳವಳಿ ದಿಕ್ಕು ತಪ್ಪುವ ಪ್ರಮೇಯ ಒದಗಲಿಲ್ಲ. ಒಂದೆರಡು ಅಪವಾದಗಳನ್ನುಳಿದು ಕರ್ನಾಟಕದ ನಾಯಕತ್ವವು ಏಕೀಕೃತ ಕರ್ನಾಟಕಕ್ಕೆ ಒಕ್ಕೊರಲಿನ ಕೂಗು ಹಾಕಿತ್ತು. ಆದಾಗ್ಯೂ ರಾಜಕೀಯ ನಾಯಕತ್ವವು ಸ್ವಾತಂತ್ರ್ಯ ಹೋರಾಟದಲ್ಲಿ ಮುಳುಗಿರುವ ಸಂದರ್ಭದಲ್ಲಿ ಏಕೀಕರಣದ ಚಳವಳಿಯ ಬೆನ್ನೆಲುಬಾಗಿ ದುಡಿದವರು

ಸಾಹಿತಿಗಳು, ಬರಹಗಾರರು, ಬುದ್ಧಿಜೀವಿಗಳು ಹಾಗೂ ಪತ್ರಿಕೋದ್ಯಮಿಗಳು. ಹಾಗೆಯೇ ಈ ವಿಷಯವಾಗಿ ಸಾಂಸ್ಕೃತಿಕ ಹಾಗೂ ಸಾಹಿತ್ಯಕ ಸಂಘಟನೆಗಳೂ ಶ್ರಮವಹಿಸಿ ದುಡಿದದ್ದನ್ನು ಮರೆಯಲಾಗದು. ವಸಾಹತು-ವಿರೋಧಿ ಹೋರಾಟದಲ್ಲೂ ಕೂಡ ಕನ್ನಡ ಸಾಹಿತಿಗಳ ಪಾತ್ರ ಗಣನೀಯವಾಗಿದೆ. ರಾಷ್ಟ್ರದ ವಿಮೋಚನೆಯ ಪರವಾಗಿ ಲೇಖಣಿ ಹಿಡಿದವರಲ್ಲಿ ಕುವೆಂಪು, ಬೇಂದ್ರೆ, ಶಿವರಾಮ ಕಾರಂತ ಮತ್ತು ಗೋವಿಂದ ಪೈ ಪ್ರಮುಖರು.

ಕರ್ನಾಟಕ ಏಕೀಕರಣದ ವಿಷಯವಾಗಿ ಭಿನ್ನಾಭಿಪ್ರಾಯಗಳು ಇದ್ದದ್ದು ನಿಜ. ಆದರೆ ೧೯೫೬ರಲ್ಲಿ ಏಕೀಕೃತ ಕರ್ನಾಟಕವಾಗಿ ಈ ರಾಜ್ಯ ಹೊರಹೊಮ್ಮುವ ಗುರಿಸಾಧನೆಯ ಹಾದಿಯಲ್ಲಿ ಆ ತೊಡಕುಗಳು ಕೇವಲ ಸಣ್ಣ ಪುಟ್ಟ ಕಂಟಕಗಳಾಗಿಯಷ್ಟೇ ಪರಿಣಮಿಸಿದವು.

ಹಾಗಾಗಿ ಸ್ಥೂಲವಾಗಿ ಅಖಿಲ ಭಾರತ ಚಳವಳಿಯ ಮಾರ್ಗವನ್ನೇ ಕರ್ನಾಟಕ ಸ್ವಾತಂತ್ರ್ಯ ಚಳವಳಿ ಅನುಸರಿಸಿತಾದರೂ ಕೆಲವು ವಿಚಾರಗಳಲ್ಲಿ ಸ್ವಲ್ಪ ಭಿನ್ನವಾಗಿತ್ತೆಂದು ತಿಳಿಯಬೇಕು. ಅಖಿಲ ಭಾರತದ ಮಾನದಂಡಗಳನ್ನು ದೃಷ್ಟಿಯಲ್ಲಿಟ್ಟುಕೊಂಡೂ ಸ್ಥಳೀಯ ನಿರೀಕ್ಷೆಗಳಿಗೆ ಅನುಗುಣವಾಗಿ, ಅಂದರೆ ಸ್ಥಳೀಯ ನಾಯಕತ್ವದ ನಿರೀಕ್ಷೆಗಳಿಗೆ ಅನುಗುಣವಾಗಿ ಮಾರ್ಪಾಟು ಮಾಡಿಕೊಂಡು ಚಳವಳಿ ಮುಂದುವರಿದದ್ದು ನಮ್ಮ ಗಮನಕ್ಕೆ ಬರುತ್ತದೆ.

**-ಪ್ರೊ. ಎಸ್. ಚಂದ್ರಶೇಖರ್**

ಅನುಬಂಧ

# ಕಾಸರಗೋಡಿನಲ್ಲಿ ಸ್ವಾತಂತ್ರ್ಯ ಹೋರಾಟ

ಉಳಿದ ಕರ್ನಾಟಕದ ಪ್ರದೇಶಗಳಿಗಿಂತ ಭಿನ್ನವಾದ ರೀತಿಯಲ್ಲಿ ಕಾಸರಗೋಡಿನ ಸ್ವಾತಂತ್ರ್ಯ ಹೋರಾಟಕ್ಕೆ ರಾಜನೈತಿಕ, ಸಾಮಾಜಿಕ ಹಾಗೂ ಆರ್ಥಿಕವಾದ ಆಯಾಮಗಳಿದ್ದವು. ಟಿಪ್ಪು ಸುಲ್ತಾನನ ಪತನದ ನಂತರ ಕಾಸರಗೋಡು ತಾಲೂಕು ಬ್ರಿಟಿಷರ ನೇರಾಡಳಿತಕ್ಕೆ ಒಳಪಟ್ಟಿತ್ತಲ್ಲದೆ ಈ ಮೇಲೆ ಹೆಸರಿಸಿದ ವಿಭಿನ್ನ ಆಯಾಮಗಳಿಗೆ ಇದರ ಭೌಗೋಳಿಕ ಹಾಗೂ ಭಾಷಿಕ ವೈಶಿಷ್ಟ್ಯವೇ ಕಾರಣವೆನ್ನಬಹುದಾಗಿದೆ. ಆಡಳಿತಾತ್ಮಕ ಸೌಲಭ್ಯಕ್ಕಾಗಿ ದಕ್ಷಿಣ ಕನ್ನಡವನ್ನು ಉಳಿದ ಭಾಗಗಳಿಂದ ಪ್ರತ್ಯೇಕಿಸಿ ೧೮೬೨ನೇ ಏಪ್ರಿಲ್ ೧೬ರಂದು ಮದರಾಸು ಪ್ರೆಸಿಡೆನ್ಸಿಯ ಅಧೀನಕ್ಕೆ ಒಳಪಡಿಸಲಾಯಿತು. ಮೊದಲು ಬೇಕಲ್ ತಾಲೂಕು ಎಂದಾಗಿದ್ದು ಈಗ ಕಾಸರಗೋಡಾಗಿ ಪುನರ್ನಾಮಕರಣ ಮಾಡಲಾಯಿತು. ಮಂಗಳೂರನ್ನು ಜಿಲ್ಲಾ ಕೇಂದ್ರವನ್ನಾಗಿ ಮಾಡಿ ಕನ್ನಡ, ತುಳು ಹಾಗೂ ಮಲೆಯಾಳಂ ಭಾಷೆ ಮಾತನಾಡುವ ಜನರನ್ನು ಒಂದು ಆಡಳಿತದ ಘಟಕದಡಿಯಲ್ಲಿ ತರಲಾಯಿತು.

ಈ ತಾಲೂಕಿನ ಉತ್ತರ ಭಾಗದಲ್ಲಿ ಮಂಗಳೂರು ಹಾಗೂ ಉಪ್ಪಿನಂಗಡಿ ಸೇರ್ಪಡೆಯಾದರೆ ಪೂರ್ವದಲ್ಲಿ ಕೊಡುಗು ಸೇರಿತ್ತು. ಪಶ್ಚಿಮದಲ್ಲಿ ಸಮುದ್ರ ತಡಿ ಇದ್ದರೆ ದಕ್ಷಿಣದಲ್ಲಿ ಮಲಬಾರ್ ಜಿಲ್ಲೆ ಇತ್ತು.[1] ೧೭ ಮತ್ತು ೧೮ನೇ ಶತಮಾನಗಳಲ್ಲಿ ಇಕ್ಕೇರಿ ಅಥವಾ ಬಿದನೂರಿನ ನಾಯಕರು ಈ ಪ್ರದೇಶದ ಮೇಲೆ ದಾಳಿ ನಡೆಸಿ ಮೊದಲು ಕೇರಳದ ಕೊಲತಿರಿ ಆಳರಸರ ಅಂಕಿತದಲ್ಲಿದ್ದ ಅದರ ಬಹುಭಾಗವನ್ನು ಆಕ್ರಮಿಸಿಕೊಂಡರು. ಕೊಲತಿರಿ ವಂಶಸ್ಥರ ಆಳ್ವಿಕೆಯ ಕಾಲದಲ್ಲಿ ಸ್ಥಳೀಯ ನೀಲೇಶ್ವರ ಹಾಗೂ ಕುಂಬಳದ ಆಳರಸರು ಅಧೀನ ಮಾಂಡಲೀಕರಾಗಿದ್ದರಷ್ಟೆ. ಬಿದನೂರಿನ ಪತನದ ನಂತರ ಈ ಪ್ರದೇಶವನ್ನು ತಮ್ಮ ರಾಜನೈತಿಕ ಪ್ರಾಬಲ್ಯದಿಂದಾಗಿ ಹೈದರಾಲಿ ಮತ್ತು ಟಿಪ್ಪು ಸುಲ್ತಾನರು ಸೇರಿಸಿಕೊಂಡರು. ಮೇಲಿಂದ ಮೇಲೆ ನಡೆದ ದಾಳಿಗಳು ಹಾಗೂ ಆಂತರಿಕ ರಾಜಕೀಯ ಪಿತೂರಿಗಳಿಂದಾಗಿ ಈ ಪ್ರದೇಶವು ಬೇರೆ ಬೇರೆ ಭಾಷಿಕ ಸಮುದಾಯಗಳ ನಾಡಾಯಿತು. ರಾಜಕೀಯ ದಾಳಿಗೆ ಈ ಪ್ರದೇಶವು ಈಡಾಗಿದ್ದ ಕಾರಣ ಕೊಲತಿರಿ ದೊರೆ ತನ್ನ ಸೈನ್ಯಾಧಿಕಾರಿಗಳಿಗೆ ಆಗಿಂದಾಗ್ಗೆ ಭೂಮಿಯನ್ನು ಕೊಡುವ ರೂಢಿ ಇಟ್ಟುಕೊಂಡಿದ್ದನು; ಪರಿಣಾಮವಾಗಿ ಆ ಸೈನ್ಯಾಧಿಕಾರಿಗಳೇ ಮುಂದೆ ದೊಡ್ಡ ಭೂ ಒಡೆಯರಾಗಿ ಬೆಳೆದರು.

ಥಾಮಸ್ ಮನ್ರೋ ಅವರ ನೇತೃತ್ವದಲ್ಲಿ ಬ್ರಿಟಿಷರು ಭೂಮಿ ವಿತರಣಾ ವ್ಯವಸ್ಥೆಯನ್ನು ನಡೆಸಿದಾಗ ವರಗದಾರರಾಗಿದ್ದ ಈ ಭೂ ಒಡೆಯರನ್ನು ರೈತವಾರಿ ಪದ್ಧತಿಗೆ ಒಳಪಡಿಸಲಾಯಿತು. ಕೇವಲ ಚಲಗೇಣಿ ಹಕ್ಕನ್ನು ಮಾತ್ರ ಹೊಂದಿದ್ದ ಗೇಣಿದಾರರು ಮಲಬಾರು ಪ್ರದೇಶದ ರೈತರ ಮಾದರಿಯಲ್ಲಿ ಗುತ್ತಿಗೆದಾರರಾಗಿ ಮುಂದುವರಿದರು. ಸುಲಭ ಕಂದಾಯ, ಮುಕ್ತ ವರ್ಗಾವಣೆ ಮತ್ತು ಅವಧಿ ನಿಗದಿ- ಇತ್ಯಾದಿ ಹಕ್ಕುಗಳು

ಅವರಲ್ಲಿ ಅನೇಕರಿಗೆ ಇರಲಿಲ್ಲ. ಮಲಬಾರಿನ ಮಂದಿಗೆ ಹೋಲಿಸಿದಾಗ ಪರಗದಾರ ಅಥವಾ ಜಮೀನುದಾರರ ಸ್ಥಿತಿಯೂ ಕೂಡ ಉತ್ತಮವಾಗಿಯೇನೂ ಇರಲಿಲ್ಲ. ಅವರಲ್ಲಿ ಬಹುತೇಕ ಮಂದಿ ಮಲೆಯಾಳಂ ಭಾಷೆಗೆ ಸೇರಿದವರಾಗಿದ್ದೂ–ಹೊಸದುರ್ಗ ಪ್ರದೇಶದಲ್ಲಿ ಮಲೆಯಾಳಂ ಭಾಷೆಯನ್ನು ಮಾತ್ರ ಆಡುತ್ತಿದ್ದರು. ವಸಾಹತು ವ್ಯವಸ್ಥೆಯಲ್ಲಿನ ಆಡಳಿತ ಭಾಷೆ ಮಾತ್ರ ಕನ್ನಡವೇ ಆಗಿತ್ತು. ಕರ್ನಾಟಕದ ಅಥವಾ ಕೇರಳದ ಬೇರೆ ಯಾವ ಪ್ರದೇಶಕ್ಕಿಂತಲೂ ಹೆಚ್ಚಾಗಿ ಈ ಪ್ರದೇಶದಲ್ಲಿ ಆರಂಭದಿಂದಲೂ ಭಾಷಿಕವಾದ ಮತ್ತು ಒಡುವಳಿ ಅವಧಿಗೆ ಸಂಬಂಧಿಸಿದಂಥ ಸಮಸ್ಯೆಗಳು ಇದ್ದೇ ಇದ್ದವು. ಇದರ ಪರಿಣಾಮವಾಗಿ ಇಪ್ಪತ್ತನೇ ಶತಮಾನದಲ್ಲಿ ಜನಾಂದೋಲನದ ಬೆಂಬಲದಿಂದ ಈ ಭಾಗದಲ್ಲಿ ರಾಷ್ಟ್ರೀಯ ಚಳವಳಿಯ ತೀವ್ರತರವಾದದ್ದು ಕಂಡು ಬಂದಿತು.

## ರಾಷ್ಟ್ರೀಯ ಚಳವಳಿಯ ಆರಂಭ

೨೦ನೇ ಶತಮಾನದ ಮೊದಲ ದಶಕಗಳಲ್ಲಿ ಕಾಸರಗೋಡು ತಾಲೂಕನ್ನು ಕರ್ನಾಟಕ ಪ್ರದೇಶದ ಕಾಂಗ್ರೆಸ್ ಸಮಿತಿಯ ಒಂದು ಘಟಕವಾಗಿ ಸೇರಿಸಲಾಗಿತ್ತು. ಸಮರ್ಪಕವಾದ ಮೂಲಗಳ ಅಭಾವದಿಂದಾಗಿ ಆರಂಭ ಕಾಲದಲ್ಲಿ ಸಮಿತಿಯು ಯಾವ ಪ್ರಕಾರವಾಗಿ ರಾಷ್ಟ್ರೀಯ ಚಳವಳಿಯನ್ನು ಪ್ರೋತ್ಸಾಹಿಸಿತೆಂದು ತಿಳಿಯಲು ತೊಂದರೆಯಾಗಿದೆ. ಮಂಗಳೂರಿನ ಜಮೀನುದಾರರಾದ ಕಾರ್ನಾಡು ಸದಾಶಿವರಾವ್ ಅವರು ತಾಲೂಕು ಮುಖ್ಯ ಕೇಂದ್ರವಾದ ಕಾಸರಗೋಡಿಗೆ ಮೇಲಿಂದ ಮೇಲೆ ಭೇಟಿ ನೀಡಿ ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಸಂದೇಶವನ್ನು ಸಾರಿದರು. ಉಮೇಶ ರಾವ್ ಅವರಂಥ ವಕೀಲರು ಕಾಂಗ್ರೆಸ್ ಕಾರ್ಯಕ್ರಮದ ಒಂದು ಅಂಗವಾಗಿ ಮಂಜುನಾಥ ದೇವಸ್ಥಾನದಲ್ಲಿ ಚರಕ ನೂಲೂವುದನ್ನು ಏರ್ಪಡಿಸಿದರು. ಹೊಸದುರ್ಗ ಉಪ–ತಾಲೂಕಿನಲ್ಲಿ ೧೯೨೧ರಲ್ಲಿ ಹೋಂ ರೂಲ್ ಲೀಗ್‌ನ ಘಟಕವೊಂದು ಇದ್ದಿತು. ಗಾಂಧಿ ಪೂರ್ವದ ಕಾಂಗ್ರೆಸ್ಸಿನ ಲಕ್ಷಣಕ್ಕನುಗುಣವಾಗಿ ಈ ತಾಲೂಕಿನಲ್ಲಿ ಕಾಂಗ್ರೆಸ್ ಚಟುವಟಿಕೆಗಳು ಅಷ್ಟಾಗಿ ಇರಲಿಲ್ಲ.[೨] ಮಂಗಳೂರು ಹಾಗೂ ಕಲ್ಲಿಕೋಟೆಯಂಥ ನಗರ ಕೇಂದ್ರಗಳಲ್ಲಿ ಕ್ರಮೇಣ ರಾಷ್ಟ್ರೀಯ ಚಳವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸುವುದು ಕುಡುಬಂದ ಪರಿಣಾಮವಾಗಿ ಕಾಸರಗೋಡು ಕೂಡ ರಾಷ್ಟ್ರೀಯ ರಾಜಕಾರಣದ ಮುಖ್ಯ ಪ್ರವಾಹದಲ್ಲಿ ಕಾಣಿಸಿಕೊಂಡಿತು.

೧೯೨೫ರ ವೇಳೆಗೆ ಈ ತಾಲೂಕು ಎರಡು ಕಾಂಗ್ರೆಸ್ ಸಮಿತಿಗಳನ್ನು ಕಂಡಿತ್ತು; ವಿಶೇಷವಾಗಿ ಕನ್ನಡ ಮಾತನಾಡುವ ಭಾಗಗಳನ್ನು ಒಳಗೊಂಡಂಥ ಕಾಸರಗೋಡಿನಲ್ಲಿ ಒಂದು ಸಮಿತಿ ರಚನೆಯಾಗಿತ್ತು. ಹೊಸದುರ್ಗದಲ್ಲಿ, ವಿಶೇಷವಾಗಿ ಮಲೆಯಾಳಂ ಭಾಷೆಯನ್ನಾಡುವ ಭಾಗಗಳನ್ನು ಒಳಗೊಂಡು, ಇನ್ನೊಂದು ಸಮಿತಿ ರಚನೆಯಾಯಿತು. ಕಾಸರಗೋಡು ಸಮಿತಿಯು ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯ ಅಧೀನವಾಗಿದ್ದರೆ, ಹೊಸದುರ್ಗದ ಸಮಿತಿಯು ಕೇರಳ ಪ್ರದೇಶ ಕಾಂಗ್ರೆಸ್ ಸಮಿತಿಗೆ ಸೇರಿತ್ತು.[೩] ಕಾಂಗ್ರೆಸ್‌ನ ಈ ಎರಡೂ ಸಮಿತಿಗಳು ಈ ಪ್ರದೇಶದಲ್ಲಿ ರಾಷ್ಟ್ರೀಯ ಚಳವಳಿ ಹರಡಲು ಕಾರಣವಾಗಿದ್ದವು. ಆದಾಗ್ಯೂ ಆರಂಭ ಕಾಲದ ಕಾಂಗ್ರೆಸ್ ಚಟುವಟಿಕೆಗಳು ಈ ತಾಲೂಕಿನಲ್ಲಿ ಹೇಗೆ ನಡೆದಿದ್ದವು ಎಂಬುದನ್ನು ನಾವು ತಿಳಿಯದಂತಾಗಿದೆ.[೪]

ಸಿ.ಆರ್.ದಾಸರ ಅಕಾಲ ಮರಣಕ್ಕೆ ಶ್ರದ್ಧಾಂಜಲಿ ಅರ್ಪಿಸಲು ೧೯೨೫ರ ಜುಲೈ ೧ನೇ ದಿನಾಂಕದಂದು ಕನ್ಹನಗಾಡ್(ಹೊಸದುರ್ಗ)ನಲ್ಲಿ ಒಂದು ಸಾರ್ವಜನಿಕ ಸಭೆ ನಡೆಯಿತು. ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮವನ್ನು ಉತ್ತೇಜಿಸುವ ಸಲುವಾಗಿ ಖಾದಿ ಮಾರಾಟ ಮಳಿಗೆಯೊಂದನ್ನು ತೆರೆಯಲು ಈ ಸಭೆ ತೀರ್ಮಾನಿಸಿತು.[೫] ಈ ಸಭೆಯಲ್ಲಿ ಭಾಗವಹಿಸಿದ್ದ ರಾಷ್ಟ್ರವಾದಿಗಳು ರಾಷ್ಟ್ರೀಯ ಶಿಕ್ಷಣಕ್ಕಾಗಿ ಒಂದು

ಕೇಂದ್ರವನ್ನು ತೆರೆಯಲು ಕೂಡ ನಿರ್ಧರಿಸಿದರು. ಹೊಸದುರ್ಗದ ಬಳಿ ಅಜನೂರಿನಲ್ಲಿರುವ ವಿಜ್ಞಾನದಾಯಿನಿ ಶಾಲೆಯ ಪ್ರಾರಂಭ ಅದಾಯಿತು.

## ವಿಜ್ಞಾನದಾಯಿನಿ ಶಾಲೆ

ಕೆಲವು ವರ್ಷಗಳ ತನಕ ಹೊಸದಾಗಿ ತೆರೆದ ಈ ಶಾಲೆಯೇ ಈ ಪ್ರಾಂತ್ಯದ ಕಾಂಗ್ರೆಸ್ ಚಟುವಟಿಕೆಗಳಿಗೆ ಕೇಂದ್ರಸ್ಥಾನವಾಗಿತ್ತು. ರಾಷ್ಟ್ರೀಯ ಚಳವಳಿಯಲ್ಲಿ ಅರಳಿದ ಅನೇಕ ಧೀಮಂತ ನಾಯಕರನ್ನು ತಯಾರಿಸಿದ ಕೀರ್ತಿಯೂ ಈ ಶಾಲೆಗೆ ಸೇರಬೇಕು. ಎ.ಸಿ. ಕಣ್ಣನ್‌ನಾಯರ್ ಹಾಗೂ ಪಿ.ಕೇಲುನಾಯರ್‌ರವರು ೧೯೨೧ರಲ್ಲಿ ಪ್ರಾರಂಭಿಸಿದ ಒಂದು ಪುಟ್ಟ ಗ್ರಾಮೀಣ ಗ್ರಂಥಭಂಡಾರವೂ ಕೂಡ ಅಜನೂರಿನಲ್ಲಿ ಇತ್ತು. 'ಭಾರತ್ ಮಾತಾ ಕಿ ಜೈ', 'ಮಹಾತ್ಮಾ ಗಾಂಧಿ ಕಿ ಜೈ' ಎಂಬ ಘೋಷಣೆಗಳೊಡನೆ ೧೯೨೬ರ ಏಪ್ರಿಲ್‌ನಲ್ಲಿ ವಿಜ್ಞಾನದಾಯಿನಿ ಶಾಲೆಯು ಪ್ರಾರಂಭವಾಯಿತು. ಪಾರಂಪರಿಕವಾದ ಪದ್ಧತಿಯ ಪ್ರಕಾರ ಸುಮಾರು ೬೫ ಮಂದಿ ವಿದ್ಯಾರ್ಥಿಗಳು ಆವಾಗ ಸಂಸ್ಕೃತ ಮತ್ತು ಕಾವ್ಯವನ್ನು ಅಭ್ಯಾಸ ಮಾಡುತ್ತಿದ್ದರು.[೬] ಕೆ.ಎ.ಕೇರಳೀಯನ್, ಕೆ.ಮಾಧವನ್, ವಿ.ಪಿ.ಕೃಷ್ಣನಾಯರ್ ಮತ್ತು ಪನ್ನನ್ ಅಂಬು ಮುಂತಾದ ಈ ಭಾಗದ ಸ್ವಾತಂತ್ರ್ಯ ಹೋರಾಟಗಾರರು ಹಾಗೂ ಮುಂಚೂಣಿ ನಾಯಕರು ಈ ಶಾಲೆಯ ವಿದ್ಯಾರ್ಥಿಗಳೆಂಬುದನ್ನು ನೆನೆಯಬೇಕು.

ಈ ಶಾಲೆ ಕ್ರಮೇಣ ರಾಷ್ಟ್ರೀಯ ಚಟುವಟಿಕೆಗಳ ಕೇಂದ್ರ ಸ್ಥಾನವಾಗಿ ಬೆಳೆಯಿತು. ನೀಲೇಶ್ವರದ ಸಿ.ಕೆ. ರಾಘವನ್ ನಂಬಿಯಾರ್, ಕಾಸರಗೋಡಿನ ಉಮೇಶ್ ರಾವ್, ಚೆರ್ವತೂರಿನ ತಿರುಂಬ್ ಸಹೋದರರು ಹಾಗೂ ಸಿ.ಪಿ.ಕೃಷ್ಣನ್ ನಾಯರ್ ಮುಂತಾದ ಸ್ಥಳೀಯ ಕಾಂಗ್ರೆಸ್ ನಾಯಕರು ಈ ಕೇಂದ್ರಕ್ಕೆ ಮೇಲಿಂದ ಮೇಲೆ ಭೇಟಿ ನೀಡುತ್ತಿದ್ದರು. ನಿಧಿ-ಸಂಗ್ರಹಣೆಗಾಗಿ ಈ ಶಾಲೆಯ ವಿದ್ಯಾರ್ಥಿಗಳು ಕವಿವರ್ಯ ಕುಟ್ಟಮತ್ ಅವರ ಬಾಲಗೋಪಾಲನ್‌ದಂಥ ನಾಟಕಗಳನ್ನು ಅಭಿನಯಿಸುತ್ತಿದ್ದರು. ಆ ನಾಟಕಗಳು ವಸಾಹತು ಸಂಸ್ಕೃತಿಗೆ ಭಿನ್ನವಾದ ದೇಶೀಯ ಸಂಸ್ಕೃತಿಯನ್ನು ಬಿಂಬಿಸುವಂತಿದ್ದವು. ಉತ್ತರ ಕೇರಳದ ಸ್ವಾತಂತ್ರ್ಯ ಹೋರಾಟದ ಚರಿತ್ರೆಯಲ್ಲಿ ವಿದ್ಯಾರ್ಥಿಗಳಲ್ಲಿ ರಾಷ್ಟ್ರೀಯ ಭಾವನೆ ಹಾಗೂ ತ್ಯಾಗ ಮನೋಭಾವವನ್ನು ಹುಟ್ಟು ಹಾಕುವಲ್ಲಿ ಈ ಶಾಲೆ ಮಹತ್ವದ ಪಾತ್ರವನ್ನು ವಹಿಸಿತು.

ಮಂಗಳೂರು ಮತ್ತು ಕಲ್ಲಿಕೋಟೆಯ ನಾಯಕರು ಈ ಕೇಂದ್ರದೊಡನೆ ನಿರಂತರ ಸಂಪರ್ಕ ಇಟ್ಟುಕೊಂಡಿದ್ದರು. ೧೯೨೭ನೇ ಆಗಸ್ಟ್ ೧ನೇ ತಾರೀಖು ಬಾಲಗಂಗಾಧರ ತಿಲಕ್ ಅವರ ಪುಣ್ಯತಿಥಿಯ ಸಂದರ್ಭದಲ್ಲಿ ಹೊಸದುರ್ಗದಲ್ಲಿ ಒಂದು ಸಾರ್ವಜನಿಕ ಸಭೆಯನ್ನು ಏರ್ಪಡಿಸಲಾಗಿತ್ತು. ಕೊಟ್ಟಿಚೇರಿಯಲ್ಲಿ ಸೆಪ್ಟಂಬರ್ ತಿಂಗಳಲ್ಲಿ ಏರ್ಪಾಟಾದ ಇನ್ನೊಂದು ಸಭೆಯಲ್ಲಿ ಮಂಗಳೂರಿನ ಮಾಧವರಾವ್ ಎಂ.ಎಲ್.ಸಿ, ಹಾಗೂ ಏಕ್ಕಲ್ ಆಚಾರ್ಯ ಮುಂತಾದ ಕಾಂಗ್ರೆಸ್ ನಾಯಕರು ಭಾಗವಹಿಸಿದ್ದರು. ಸುಶಿಕ್ಷಿತ ಸಮುದಾಯಗಳಲ್ಲಿ 'ಯಂಗ್ ಇಂಡಿಯಾ' ಪತ್ರಿಕೆಯನ್ನು ಓದುವುದನ್ನು ಹೆಚ್ಚು ಪ್ರಚುರ ಪಡಿಸಲಾಯಿತು.[೭]

## ಗಾಂಧೀಜಿಯವರು ಭೇಟಿ ನೀಡಿದುದು (೧೯೨೭)

೧೯೨೭ನೇ ಇಸವಿಯಲ್ಲಿ ಗಾಂಧೀಜಿಯವರು ಮಂಗಳೂರಿಗೆ ಭೇಟಿ ನೀಡಿದ ನಂತರ ರಾಷ್ಟ್ರೀಯ ಚಳವಳಿಗೆ ಹೆಚ್ಚು ಚೇತನ ಪ್ರಾಪ್ತವಾಯಿತು. ಗಾಂಧೀಜಿಯವರ ಭೇಟಿಗೆ ಸಿದ್ಧತೆ ನಡೆಸುವುದಕ್ಕಾಗಿ ತಾಲೂಕು ಮಂಡಳಿ ಅಧ್ಯಕ್ಷ ಎ.ಸಿ. ಕೇಲು ನಾಯರ್, ಚೋಟಾಲಾಲ್- ಈ ತಾಲೂಕಿನಲ್ಲಿ ಖಾದಿಯನ್ನು

ಪ್ರಚಾರಪಡಿಸುವ ಸಲುವಾಗಿ ಗಾಂಧೀಜಿಯವರು ನೇಮಕ ಮಾಡಿದ್ದ ಗುಜರಾತಿ– ಎ.ಸಿ. ಕಣ್ಣನ್ ನಾಯರ್, ಹಾಗೂ ಕಾರ್ನಾಡ್ ಸದಾಶಿವರಾವ್ ಅವರು ಕಾಸರಗೋಡಿನಲ್ಲಿ ಸಭೆ ಸೇರಿದರು. ಕಾಸರಗೋಡಿನಲ್ಲಿ ಕನ್ನಡಿಗರ ಮೇಲಾಗಲಿ ಅಥವಾ ಮಲಯಾಳಿಗಳ ಮೇಲಾಗಲಿ ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಗೆ ಯಾವ ಹಿಡಿತವೂ ಇರಲಿಲ್ಲ; ಇವುಗಳ ನಾಯಕರು ಹೆಚ್ಚಿನ ಸಂಖ್ಯೆಯಲ್ಲಿ ವಕೀಲರಾಗಿದ್ದು ಅವರು ಸಾಮ್ರಾಜ್ಯಶಾಹಿಗಳಂತೆಯೇ ಶೋಷಣೆಯಲ್ಲಿ ತೊಡಗಿದ್ದರು. ಹಾಗಾಗಿ ಮಲೆಯಾಳಂ ಮಾತನಾಡುವ ಭಾಗಗಳ ಮೇಲೆ ಸಂಘಟನಾತ್ಮಕ ಕಾರ್ಯದ ಬಹುಭಾಗದ ಜವಾಬ್ದಾರಿ ಬಿದ್ದಿತು. ೧೯೨೭ರ ಅಕ್ಟೋಬರ್ ೨೭ನೇ ತಾರೀಖು ರೈಲಿನಲ್ಲಿ ಗಾಂಧೀಜಿ ಮಂಗಳೂರು ತಲುಪಿದರು. ಅವರು ಉದ್ದೇಶಿಸಿ ಮಾತನಾಡಿದ ಸಭೆಯಲ್ಲಿ ಈ ತಾಲೂಕಿನ ನಾಯಕರನೇಕರು ಭಾಗವಹಿಸಿದರು. ಖಾದಿ ನಿಧಿಗೆ ೧೩೨೨ ರೂಪಾಯಿಗಳ ಮೊತ್ತವನ್ನು ನೀಡಲಾಯಿತು.[೮]

ಏಕಕಾಲದಲ್ಲಿ ಕೇರಳ ಪ್ರದೇಶ ಕಾಂಗ್ರೆಸ್ ಸಮಿತಿಗೆ ಸೇರಿದಂತೆ, ಎ.ಸಿ. ಕಣ್ಣನ್‌ನಾಯರ್ ಅಧ್ಯಕ್ಷರಾಗಿ ಹಾಗೂ ಕೆ.ಟಿ.ಕುನ್ಹಿರಾಮನ್ ನಂಬಿಯಾರ್ ಕಾರ್ಯದರ್ಶಿಯಾಗಿ ಒಂದು ತಾಲೂಕು ಸಮಿತಿ–ಹೊಸದುರ್ಗ ಪ್ರದೇಶದ ಮಲೆಯಾಳಂ ಭಾಷೆ ಮಾತನಾಡುವ ಜನರಿಗಾಗಿ– ರಚನೆಯಾಯಿತು. ಇದರ ಪ್ರತಿನಿಧಿಯೊಬ್ಬರು ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಮದರಾಸು ಅಧಿವೇಶನದಲ್ಲಿ ಭಾಗವಹಿಸಿದರು. ಸೈಮನ್ ಆಯೋಗವನ್ನು ಬಹಿಷ್ಕರಿಸಲು ಇಲ್ಲಿ ತೀರ್ಮಾನ ತೆಗೆದುಕೊಳ್ಳಲಾಯಿತು. ಕಞ್ಞಂಗಾಡ್ ಪ್ರಾಥಮಿಕ ಶಾಲೆಯಲ್ಲಿ ಸಭೆ ಸೇರಿ ಬಹಿಷ್ಕಾರದ ಸಂಘಟನಾ ಕೆಲಸಗಳ ರೂಪುರೇಷೆ ರಚಿಸಲಾಯಿತು. ಕೆ.ಕೇಳಪ್ಪನ್, ಮೋಯಾರತ್ ಶಂಕರನ್ ಹಾಗೂ ಟಿ.ಆರ್. ಕೃಷ್ಣಸ್ವಾಮಿ ಅಯ್ಯರ್ ಈ ಸಭೆಯಲ್ಲಿ ಭಾಗವಹಿಸಿದ್ದರು. ೧೯೨೮ರ ಫೆಬ್ರವರಿ ೩ರಂದು ಆಯೋಗದ ವಿರುದ್ಧ ತಾಲೂಕಿನಲ್ಲಿ ಒಂದು ಹರತಾಳವನ್ನು ಆಚರಿಸಲಾಯಿತು.

## ಭಾರತ್ ಯುವಜನ ಸಂಘ

ವಾಸ್ವಾನಿಯವರು ಸಂಘಟಿಸಿದ ಭಾರತ ಯುವಜನ ಸಂಘದ ಒಂದು ಘಟಕವು ವಿಜ್ಞಾನದಾಯಿನಿ ಶಾಲೆಯಲ್ಲಿ ಪ್ರಾರಂಭವಾಯಿತು. ಖಾದಿ, ಕಾಂಗ್ರೆಸ್ ಹಾಗೂ ಸೈಮನ್ ಆಯೋಗದ ಬಹಿಷ್ಕಾರ–ಇತ್ಯಾದಿಗಳ ಪ್ರಚಾರಕ್ಕಾಗಿ ಈ ಘಟಕವು ಕೆಲಸ ಮಾಡಿತು. ವಸಾಹತುಶಾಹಿಯ ನಿಷ್ಠರು ಹಾಗೂ ಅಧಿಕಾರಿಗಳು ಶಾಲೆಯ ಚಟುವಟಿಕೆಗಳನ್ನು ಪ್ರತಿಭಟಿಸಿದರು.[೯] ಈ ಘಟಕವು ನಡೆಸುತ್ತಿದ್ದ ಪ್ರಾರ್ಥನಾ ಸಭೆಗಳಲ್ಲಿ ಭಗವದ್ಗೀತೆಯ ಪಠಣ, ಅಸ್ಪೃಶ್ಯತೆಯ ವಿರುದ್ಧ ಚರ್ಚೆ ಹಾಗೂ ಗಾಂಧೀಜಿ ಮತ್ತು ವಿವೇಕಾನಂದರ ಲೇಖನಗಳ ವಾಚನ ಏರ್ಪಾಟಾಗುತ್ತಿತ್ತು. ರಾಷ್ಟ್ರೀಯ ಸಪ್ತಾಹವನ್ನು ಆಚರಿಸಿ ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮದ ಬಗ್ಗೆ ತಿಳಿವಳಿಕೆ ಮೂಡಿಸಲಾಗುತ್ತಿತ್ತು. ರಾತ್ರಿ ತರಗತಿಗಳು ಹಾಗೂ ಮಹಿಳಾ ಸಂಘಗಳೂ ಕೂಡ ರಚನೆಯಾದವು. ರಾಷ್ಟ್ರೀಯವಾದಿಗಳು ಸಾಂಪ್ರದಾಯಿಕ ವ್ಯವಸ್ಥೆಯ ವಿರುದ್ಧ ಒಂದು ಸಾಂಸ್ಕೃತಿಕ ಹೋರಾಟವನ್ನೂ ಆರಂಭಿಸಿದ್ದರು. ಅಂತರಜಾತಿ ಸಹ ಭೋಜನವನ್ನು ಏರ್ಪಡಿಸಿ ಜಾತಿ ವಿಭಿನ್ನತೆಯ ನಿವಾರಣೆಗೆ ಪ್ರಯತ್ನಿಸಿದರು.[೧೦]

## ಪಯ್ಯನೂರ್ ಸಭೆ(೧೯೨೮)

೧೪೨೮ರ ಮೇ ೨೫–೨೭ರವರೆಗೆ ಕಾಸರಗೋಡಿನ ದಕ್ಷಿಣ ತುದಿಯ ಹೊರಗೆ ಪಯ್ಯನೂರಿನಲ್ಲಿ ಕೇರಳ ಕಾಂಗ್ರೆಸ್ಸಿನ ನಾಲ್ಕನೇ ಸಭೆಯನ್ನು ನಡೆಸಲಾಯಿತು. ಜವಾಹರ್‌ಲಾಲ್ ನೆಹರೂರವರು ಅಧ್ಯಕ್ಷತೆ

ವಹಿಸಿದ್ದ ಆ ಅಧಿವೇಶನದಲ್ಲಿ ಕಾಸರಗೋಡಿನ ಅನೇಕ ಮಂದಿ ರಾಷ್ಟ್ರವಾದಿಗಳು ಭಾಗವಹಿಸಿದ್ದರು. ಆ ಅಧಿವೇಶನದಲ್ಲೇ ಪೂರ್ಣ ಸ್ವರಾಜ್ಯಕ್ಕಾಗಿ ಮತ್ತು ಮಲಬಾರಿನ ಎಲ್ಲಾ ಗೇಣಿದಾರರಿಗೆ ಅವಧಿಯನ್ನು ನಿಗದಿ ಪಡಿಸುವ ದಿಶೆಯಲ್ಲಿ ಗೊತ್ತುವಳಿ ಹೊರಡಿಸಲಾಯಿತು. ಭಾಷಾವಾರು ಪ್ರಾಂತ್ಯ ರಚನೆಯ ವಿಷಯವಾಗಿ ಇನ್ನೊಂದು ಗೊತ್ತುವಳಿ ಹೊರಡಿಸಲಾಯಿತು. ಈ ಸಭೆಯು ಯುವಕರ ರಾಷ್ಟ್ರೀಯ ಭಾವನೆಗಳನ್ನು ಪ್ರತಿಫಲಿಸಲು ಒಂದು ಸೂಕ್ತವಾದ ವೇದಿಕೆಯಾಗಿ ಪರಿಣಮಿಸಿತು.[೧೧]

## ಕಾಸರಗೋಡು ಮಲೆಯಾಳಿ ಸೇವಾ ಸಂಘ

೧೯೨೮ರ ಜೂನ್ ೨ರಂದು ಹೊಸದುರ್ಗದಲ್ಲಿ ತಾಲೂಕು ಕಾಂಗ್ರೆಸ್ ಸಭೆ ನಡೆಯಿತು. ಕನ್ಹಂಗಾಡಿನಲ್ಲಿ ಬಾರ್ಡೋಲಿ ದಿನವನ್ನು ಆಚರಿಸುವುದರ ಜೊತೆಗೆ ವಲ್ಲಭಭಾಯಿ ಪಟೇಲ್ ಅವರ ಹೆಸರಿನಲ್ಲಿ ಒಂದು ವಾಚನಾಲಯವನ್ನು ತೆರೆಯಲಾಯಿತು. ಮಂಗಳೂರಿನಲ್ಲಿ ನಡೆದ ಇನ್ನೊಂದು ಕಾಂಗ್ರೆಸ್ ಸಭೆಯಲ್ಲಿ ಹೋರ್ನಿಮಾನ್ ಮತ್ತು ನಾರಿಮನ್ ಭಾಗವಹಿಸಿದ್ದರು. ಈ ಸಭೆಯಲ್ಲಿ ಸರಿಸುಮಾರು ಎಲ್ಲಾ ರಾಜಕೀಯ ಚಳವಳಿಗಾರರು ಭಾಗವಹಿಸಿದ್ದರಲ್ಲದೆ ಲಾಲಾಲಜಪತ್ ರಾಯ್ ಅವರಿಗೆ ಶ್ರದ್ಧಾಂಜಲಿ ಅರ್ಪಿಸಿದರು.

ಕೃಷಿ ಮತ್ತು ಕರಕುಶಲತೆಯ ಆಧುನೀಕರಣವು ಕಾಂಗ್ರೆಸ್ ಕಾರ್ಯಕರ್ತರ ಬೇಡಿಕೆಯಾಗಿತ್ತು. ಗ್ರಾಮ ಪಂಚಾಯಿತಿಗಳ ರಚನೆಗೂ ಕೂಡ ಅವರು ಒತ್ತಾಯಿಸಿದ್ದರು. ಮಲಬಾರಿನ ಜೊತೆ ವಿಲೀನಕ್ಕಾಗಿ ಕಾಸರಗೋಡು ಮಲೆಯಾಳಿ ಸೇವಾ ಸಂಘದ ರಚನೆಯಾಯಿತು. ಸಂಘವು 'ಕಾಸರಗೋಡು ತಾಲೂಕು ವಿಲೀನ ಸಮಿತಿ' ಯನ್ನೂ ಸಹ ರಚಿಸಿತು.[೧೨]

ಪೂರ್ಣ ಸ್ವರಾಜ್ಯದ ಗೊತ್ತುವಳಿಯ ನಂತರ ತಾಲೂಕಿನ ಬೇರೆ ಬೇರೆ ಭಾಗಗಳಲ್ಲಿ ೧೯೩೦ರ ಜನವರಿ ೧೬ನೇ ದಿನವನ್ನು ಆಚರಿಸಲಾಯಿತು. ಕಾಸರಗೋಡಿನಲ್ಲಿ ಸೇವಾದಳದ ಸ್ವಯಂಸೇವಕರಿಗಾಗಿ ಕವಾಯಿತು ಹಾಗೂ ಉಪನ್ಯಾಸಗಳನ್ನೊಳಗೊಂಡಂತೆ ಒಂದು ತರಬೇತಿಯನ್ನು ನೀಡಲಾಯಿತು. ನಾಗರೀಕ ಕಾನೂನುಭಂಗದ ಅಂಗವಾಗಿ ಪಯ್ಯನೂರಿನಲ್ಲಿ ಉಪ್ಪಿನ ಸತ್ಯಾಗ್ರಹವನ್ನು ಆಚರಿಸಿದಾಗ ತಾಲೂಕಿನ ಅನೇಕ ಸ್ವಯಂಸೇವಕರು ಈ ಚಳವಳಿಗೆ ಬೆಂಬಲ ನೀಡಲು ಕಾಸರಗೋಡಿನಲ್ಲಿ ಭಾಗವಹಿಸಿದರು. ಸತ್ಯಾಗ್ರಹ ಸ್ವಯಂ ಸೇವಕರು–ಗೌಡ ಸಾರಸ್ವತ ಕೋಮಿನ ಮಹಿಳೆಯರೂ ಸೇರಿದಂತೆ–ಉಮೇಶ್‌ರಾವ್‌ರವರ ನಾಯಕತ್ವದಲ್ಲಿ ಮಲ್ಲಿಕಾರ್ಜುನ ದೇವಸ್ಥಾನದಲ್ಲಿ ಸೇರಿ ಸಮುದ್ರದ ನೀರಿನಿಂದ ಉಪ್ಪನ್ನು ತಯಾರಿಸಿ ಹಂಚಿದರು. ವಿದೇಶಿ ವಸ್ತ್ರಗಳನ್ನು ಸುಡಲಾಯಿತು. ಗಾಂಧೀಜಿಯವರನ್ನು ಬಂಧಿಸಿದಾಗ ಕಾಸರಗೋಡು, ಕನ್ಹಂಗಾಡ್ ಹಾಗೂ ನೀಲೇಶ್ವರದಲ್ಲಿ ಹರತಾಳಗಳಾದವು. ವಿದೇಶಿ ಮಧ್ಯದಂಗಡಿಗಳ ಮುಂದೆ ಸ್ವಯಂಸೇವಕರು ಪಿಕೆಟಿಂಗ್ ನಡೆಸಿದರು. ಟಿ.ಸುಬ್ರಮಣಿಯನ್ ತಿರುಂಬ್‌ರಂಥ ಸ್ವಯಂಸೇವಕರು ೧೯೩೧ರ ಗುರುವಾಯೂರ್ ಸತ್ಯಾಗ್ರಹದಲ್ಲಿ ಭಾಗವಹಿಸಿ ಎಲ್ಲಾ ಜಾತಿ ಮತ್ತು ಕೋಮುಗಳಿಗೆ ಕೃಷ್ಣನ ದೇವಾಲಯದ ಪ್ರವೇಶ ಕಲ್ಪಿಸಬೇಕೆಂದು ಒತ್ತಾಯಿಸಿದರು.[೧೩] ನಾಗರೀಕ ಕಾನೂನುಭಂಗ ಚಳವಳಿ ಕ್ರಮೇಣ ಈ ತಾಲೂಕಿನಲ್ಲಿ ಕಡಿಮೆಯಾಗಿ ಗುರುವಾಯೂರು ಸತ್ಯಾಗ್ರಹದ ಪರವಾಗಿ ಜಾಥಾಗಳು ಮತ್ತು ಮೆರವಣಿಗೆಗಳು ನಡೆದು ಸ್ವಲ್ಪ ಕಾಲದವರೆಗೆ ರಾಷ್ಟ್ರೀಯ ಚಳವಳಿ ಜೀವಂತವಾಗಿರುವಂತೆ ನೋಡಿಕೊಂಡವು.

## ಕಟಕಮ್‌ನ ಅರಣ್ಯ ಸತ್ಯಾಗ್ರಹ

೧೯೩೨ರಲ್ಲಿ ಮತ್ತೆ ಗಾಂಧೀಜಿಯವರನ್ನು ಬಂಧಿಸಿ ಕಾಂಗ್ರೆಸ್ ಒಂದು ಕಾನೂನುಬಾಹಿರ ಸಂಘಟನೆಯೆಂದು ಘೋಷಿತವಾಯಿತು. ವಿದೇಶಿ ಮದ್ಯದಂಗಡಿಗಳ ಮುಂದೆ ಪಿಕೆಟಿಂಗ್ ಮಾಡಿ, ವಿದೇಶಿ ವಸ್ತ್ರಗಳನ್ನು ಸುಡುವುದರ ಮೂಲಕ ಮತ್ತೆ ನಾಗರೀಕ ಕಾನೂನುಭಂಗ ಚಳವಳಿಯನ್ನು ಪ್ರಾರಂಭಿಸಲಾಯಿತು. ಸತ್ಯಾಗ್ರಹಿಗಳ ವಿರುದ್ಧ ಪೋಲೀಸು ಎಲ್ಲ ಬಗೆಯ ದಮನಕಾರಿ ತಂತ್ರಗಳನ್ನು ಪ್ರಯೋಗಿಸಿದರು. ಸ್ಥಳೀಯ ಅರಣ್ಯಗಳಿಂದ ಹುಲ್ಲು, ಸೌದೆ ಹಾಗೂ ಅರಣ್ಯ ಪದಾರ್ಥಗಳನ್ನು ತೆಗೆದುಕೊಂಡು ಹೋಗುವುದರ ವಿರುದ್ಧ ಸರ್ಕಾರ ಕಾನೂನು ರಚಿಸಿತು. ಈ ತಾಲೂಕಿನ ಗುಡ್ಡಗಾಡು ಜನರು ಸರ್ಕಾರದ ಕಾನೂನಿನ ನಿಮಿತ್ತ ಕಂಗಾಲಾಗುವ ಪರಿಸ್ಥಿತಿ ಒದಗಿತು. ಅಂಥ ಅರಣ್ಯ ಕಾನೂನಿನ ವಿರುದ್ಧ ಕರಡ್ಕಾ ಗ್ರಾಮದ ಕಟಕಮ್ ಎಂಬಲ್ಲಿ ಒಂದು ಸತ್ಯಾಗ್ರಹ–ಪ್ರಾರಂಭವಾಯಿತು. ಸತ್ಯಾಗ್ರಹಿಗಳು ಕಾಡು ಪ್ರವೇಶಿಸಿ ಗಂಧದ ಮರಗಳನ್ನು ನಾಶ ಮಾಡಿದರು. ಈ ಅಪರಾಧಕ್ಕಾಗಿ ಅವರನ್ನು ಬಂಧಿಸಲಾಯಿತು. ಉಮೇಶ್‌ರಾವ್, ಮಂಜುನಾಥ ಹೆಗಡೆ, ರಾಮ ಹೆಗ್ಗಡೆ, ಲಕ್ಷಣ ಹೆಗ್ಗಡೆ, ಎ.ವಿ. ಕುನ್ನಂಬು, ಕೃಷ್ಣ ಮನೋಲಿತಾಯ, ಹಾಗೂ ರಾಮಕೃಷ್ಣ ಸ್ವಯಂಸೇವಕರಾಗಿ ಈ ಸತ್ಯಾಗ್ರಹದಲ್ಲಿ ಭಾಗವಹಿಸಿದರು. ಮಲಬಾರಿನಿಂದ ಜಾಥಾಗಳು ಬಂದು ಈ ಸ್ಥಳ ತಲುಪಿದವು. ಸ್ವಯಂಸೇವಕರನ್ನು ಬಂಧಿಸಿ ಕಾಸರಗೋಡಿಗೆ ತಂದರು. ನಂತರ ಅವರನ್ನು ದೂರದ ಬೇರೆ ಬೇರೆ ಸ್ಥಳಗಳಿಗೆ ಕರೆದುಕೊಂಡು ಹೋಗಿ ಹಾದಿ ಮಧ್ಯದಲ್ಲಿ ಬಿಡಲಾಯಿತು. ಮತ್ತೆ ಅವರೆಲ್ಲ ಕಾಲ್ನಡಿಗೆಯಲ್ಲಿ ಕರಡ್ಕಾವನ್ನು ತಲುಪಿದರು. ವಿಷ್ಣು ಕಟಂಬಳಿತಾಯ ಎಂಬ ಗ್ರಾಮದ ಪಟೇಲರು ಸ್ವಯಂಸೇವಕರಿಗೆ ಸ್ವಲ್ಪ ಸೌಲಭ್ಯ ಕಲ್ಪಿಸಿದರು ಎನ್ನುವ ಕಾರಣಕ್ಕೆ ಅವರನ್ನು ಅವರ ಸ್ಥಾನದಿಂದ ವಜಾ ಮಾಡಲಾಯಿತು.[೧೪]

ಕಾಸರಗೋಡು ಪಟ್ಟಣದಲ್ಲಿ ವಿದೇಶಿ ಬಟ್ಟೆಗಳ ಅಂಗಡಿಗಳನ್ನು ಪಿಕೆಟಿಂಗ್ ಮಾಡಲಾಯಿತು. ಪೋಲೀಸಿನವರು ಸ್ವಯಂಸೇವಕರ ಮೇಲೆ ಹಲ್ಲೆ ನಡೆಸಿದಾಗ ಅವರಲ್ಲನೇಕರು ಏಟಿನ ಬಾಧೆಗೆ ಪ್ರಜ್ಞಾಹೀನರಾದರು. ಡಾ. ವಿಠಲ ಭಂಡಾರಿಯವರ ಆಸ್ಪತ್ರೆಯಲ್ಲಿ ಈ ಸ್ವಯಂಸೇವಕರಿಗೆ ಚಿಕಿತ್ಸೆ ನೀಡಲಾಯಿತು. ತಮ್ಮ ಹಕ್ಕನ್ನು ಕಾಪಾಡಿದವರು ಬ್ರಿಟಿಷರೇ ಎಂದು ಹಿಂದುಳಿದ ವರ್ಗದ ಸುಶಿಕ್ಷಿತ ಸದಸ್ಯರು ತಿಳಿದಿದ್ದರು. ಹಾಗಾಗಿ ವ್ಯಾಪಾರಸ್ಥರು, ಜಮೀನುದಾರರು ಮತ್ತು ವಕೀಲರನ್ನೊಳಗೊಂಡ ಕಾಂಗ್ರೆಸ್ ಪಕ್ಷವನ್ನು ಅವರು 'ಕೊಂಕಣಿ ಕಾಂಗ್ರೆಸ್' ಎಂದು ಮೂದಲಿಸುತ್ತಿದ್ದರು. ಕಾಂಗ್ರೆಸ್ ಕಚೇರಿ ಕೂಡ ಉಮೇಶ್‌ರಾವ್‌ರವರ ಮನೆಯಲ್ಲಿ ನಡೆಯುತ್ತಿತ್ತು.

## ಕಾಂಗ್ರೆಸ್-ಸಮಾಜವಾದಿ ಪಕ್ಷದ ಉದಯ

ಹೊಸದುರ್ಗದಲ್ಲಿ ಕರ್ನಾಟಕ ಕಾಂಗ್ರೆಸ್ ಸಮಿತಿ ಮತ್ತು ಕೇರಳ ಕಾಂಗ್ರೆಸ್ ಸಮಿತಿಯ ನಡುವೆ ಒಂದು ಶೀತಲ ಸಮರ ತಲೆದೋರಿತ್ತು; ಜಿಲ್ಲಾ ಮಂಡಳಿ ಚುನಾವಣೆಯಲ್ಲಿ ಈ ಸಮರವು ಚೆನ್ನಾಗಿ ಬೆಳಕಿಗೆ ಬಂದಿತ್ತು. ಈ ಸನ್ನಿವೇಶದ ಬಗ್ಗೆ ಗಮನ ಸೆಳೆದು ಪಯ್ಯನೂರಿನಲ್ಲಿ ಎ.ಸಿ.ಕಣ್ಣನ್ ನಾಯರ್‌ರವರು ಡಾ. ರಾಜೇಂದ್ರ ಪ್ರಸಾದ್‌ರವರಿಗೆ ಒಂದು ಮನವಿಯನ್ನು ಸಲ್ಲಿಸಿದರು. ಕಾಂಗ್ರೆಸ್ಸಿನ ಸುವರ್ಣ ಮಹೋತ್ಸವವನ್ನು ತುಂಬಾ ಸಂಭ್ರಮ, ಸಡಗರಗಳಿಂದ ಈ ತಾಲೂಕಿನಲ್ಲಿ ಆಚರಿಸಲಾಯಿತು.

೧೯೩೪ರಲ್ಲಿ ಕಾಂಗ್ರೆಸ್ ಸಮಾಜವಾದಿ ಪಕ್ಷ ಸಂಘಟನೆಯಾಯಿತಲ್ಲದೆ ಅದರ ಒಂದು ಘಟಕವನ್ನು ಕಾಸರಗೋಡಿನಲ್ಲೂ ಸ್ಥಾಪಿಸಲಾಯಿತು. ದಕ್ಷಿಣ ಕನ್ನಡದಿಂದ ಕಾಂಗ್ರೆಸ್‌ನ ಅಭ್ಯರ್ಥಿ ಕೆ.ಆರ್.ಕಾರಂತರು

ಶಾಸನಸಭೆಗೆ ಚುನಾಯಿತರಾದರು. ಚುನಾವಣೆಯಲ್ಲಿ ಸ್ಪರ್ಧಿಸಲು ಕಾರ್ನಾಡ್ ಸದಾಶಿವರಾವ್ ಅವರ ಬಳಿ ಹಣವಿಲ್ಲದ ಕಾರಣ ಕಾಂಗ್ರೆಸ್ ಪಕ್ಷ ಅವರನ್ನು ಸೂಚಿಸಲಿಲ್ಲ. ತದನಂತರ ಅವರು ಬೊಂಬಾಯಿಗೆ ವಲಸೆ ಹೋದರಲ್ಲದೆ ಅಲ್ಲಿ ತುಂಬಾ ಮಾನಸಿಕವಾದ ಯಾತನೆಯಲ್ಲಿ ಅಸುನೀಗಿದರು. ಗಾಂಧೀಜಿಯವರ ಶಿಫಾರಸಿನ ಮೇರೆಗೆ ಜಮುನಾಲಾಲ್ ಬಜಾಜ್‌ರವರ ದತ್ತಿಯಿಂದ ಸದಾಶಿವರಾಯರ ಶ್ರೀಮತಿಗೆ ೫೦ ರೂಪಾಯಿಗಳ ಮಾಸಿಕ ಪಿಂಚಣಿ ಲಭ್ಯವಾಯಿತು.

ಕಾಂಗ್ರೆಸ್–ಸಮಾಜವಾದಿಗಳು ಚಳವಳಿಯಲ್ಲಿ ಹೆಚ್ಚ ಹೆಚ್ಚು ಕಾರ್ಮಿಕರು ಹಾಗೂ ರೈತರನ್ನು ಒಳಗೊಳ್ಳುವ ಮೂಲಕ ಜನಾಂದೋಲನಕ್ಕೆ ಹೆಚ್ಚು ದೃಢತೆಯನ್ನು ತಂದರು. ಸಾಮ್ರಾಜ್ಯಶಾಹಿ ಹಾಗೂ ಜಮೀನ್ದಾರಿಯ ವಿರುದ್ಧ ಅವರು ನಿಂತರು.[೧೫] ಗ್ರಾಮ ಹಾಗೂ ತಾಲೂಕು ಮಟ್ಟದಲ್ಲೂ ಕೂಡ ಕಾಂಗ್ರೆಸ್–ಸಮಾಜವಾದಿ ಪಕ್ಷದ ಘಟಕಗಳ ಸ್ಥಾಪನೆಯಾಯಿತು. ಆದಾಗ್ಯೂ ಕಾಸರಗೋಡಿನ ತುಳು ಮಾತನಾಡುವ ಭಾಗಗಳಲ್ಲಿ ಚಳವಳಿಗೆ ಹೆಚ್ಚಿನ ಪ್ರೋತ್ಸಾಹ ದೊರೆಯಲಿಲ್ಲ. ಬ್ರಿಟಿಷರು ಜಾರಿಗೊಳಿಸಿದ 'ಭಾರತ ಕಾಯಿದೆ' ಯ ವಿರುದ್ಧ ೧೯೩೭ರ ಏಪ್ರಿಲ್ ೧ನೇ ದಿನದಂದು ತಾಲೂಕಿನಾದ್ಯಂತ ಹರತಾಳ ಆಚರಿಸಲಾಯಿತು.

ಮದರಾಸಿನಲ್ಲಿ ಕಾಂಗ್ರೆಸ್ ಸಚಿವ ಸಂಪುಟ ಅಧಿಕಾರಕ್ಕೆ ಬಂದಾಗ ರೈತರು ೧೯೨೯ರ ಮಲಬಾರ್ ಗೇಣಿ ಕಾಯಿದೆಯನ್ನು ರದ್ದುಗೊಳಿಸಿ ಹೊಸ ಶಾಸನ ಹೊಂದಿಸಬೇಕೆಂದು ಒತ್ತಾಯಿಸಿದರು. ೧೯೩೭ರ ಡಿಸೆಂಬರ್‌ನಲ್ಲಿ ನೀಲೇಶ್ವರದಲ್ಲಿ ಒಂದು ಸಭೆ ಕರೆದು ಸಚಿವ ಕೊಂಗತ್ತಿಲ್ ರಾಮ ಮೆನನ್ ಆ ಸಭೆಯ ಅಧ್ಯಕ್ಷರಾಗಿದ್ದರು. ಗೇಣಿ ಕಾಯಿದೆಯನ್ನು ಜಾರಿಗೊಳಿಸಿ ಮಲಬಾರಿನೊಡನೆ ಕಾಸರಗೋಡನ್ನು ವಿಲೀನಗೊಳಿಸಬೇಕೆಂದು ಗೊತ್ತುವಳಿ ಸೂಚಿಸಲಾಯಿತು. ಕೆ.ಪಿ.ಆರ್.ಗೋಪಾಲನ್ ಅವರ ಅಧ್ಯಕ್ಷತೆಯಲ್ಲಿ ೧೯೩೮, ಏಪ್ರಿಲ್ ೧೭ನೇ ದಿನದಂದು ಮೊಟ್ಟಮೊದಲು ಕಾಸರಗೋಡು ತಾಲೂಕು ರೈತರ ಸಂಘದ ಸಭೆ ಕಣ್ಣಂಗಾಡ್‌ನಲ್ಲಿ ಜರುಗಿತ್ತು. ಸಂಘದ ಅಧ್ಯಕ್ಷ ಟಿ.ಸುಬ್ರಮಣಿಯನ್ ತಿರುಂಬ್ ಅವರು ಡಿಸೆಂಬರ್‌ನಲ್ಲಿ ದಕ್ಷಿಣ ತ್ರಿಕಾರ್‌ಪುರದಿಂದ ಮಂಗಳೂರಿಗೆ ಜಾಥಾ ಹೊರಟು ರೈತಾಪಿಜನರ ಕೃಷಿ ಸಂಬಂಧೀ ಸಮಸ್ಯೆಗಳ ಬಗ್ಗೆ ಜಿಲ್ಲಾಧಿಕಾರಿಯವರಿಗೆ ಒಂದು ಮನವಿ ಪತ್ರ ಸಲ್ಲಿಸಿದರು. ಕಾಂಗ್ರೆಸ್‌ನ ಕರಾಚಿ ಹಾಗೂ ಫೈಜ್‌ಪುರ ಅಧಿವೇಶನದ ಗೊತ್ತುವಳಿಗಳನ್ನು ಅನುಷ್ಠಾನಗೊಳಿಸುವಂತೆ ಒತ್ತಾಯಿಸಿ ಕಿಸಾನ್ ಸಂಘಟನೆಗಳು ಚಳವಳಿ ಆರಂಭಿಸಿದವು.

ಕಾಸರಗೋಡಿನ ರೈತ ಸಂಘದ ಎರಡನೇ ವಾರ್ಷಿಕ ಸಮ್ಮೇಳನ ಹಾಗೂ ಅಭಿನವ ಭಾರತ ಯುವಕ ಸಂಘದ ನಾಲ್ಕನೇ ವಾರ್ಷಿಕ ಸಮ್ಮೇಳನಗಳು ಸಂಯುಕ್ತವಾಗಿ, ೧೯೩೯ರ ಜನವರಿ ೧೪ ಮತ್ತು ೧೫ ದಿನಗಳಂದು ಕೊಡಕ್ಕಾಡ್‌ನಲ್ಲಿ ನಡೆದವು. ಅಖಿಲ ಭಾರತ ಕಿಸಾನ್ ಸಭಾದ ಪ್ರಧಾನ ಕಾರ್ಯದರ್ಶಿಯಾದ ಎನ್.ಜಿ.ರಂಗಾ, ರಾಜಕೀಯ ಚಳವಳಿಗಾರರಾದ ಎ.ಕೆ.ಗೋಪಾಲನ್, ಪಿ.ಕೃಷ್ಣಪಿಳ್ಳೈ, ಎ.ಕಾಮೇಶ್ವರರಾವ್ ಹಾಗೂ ಅನೇಕ ವಾಮಪಂಥೀಯ ನಾಯಕರು ಆ ಸಮ್ಮೇಳನದಲ್ಲಿ ಭಾಗವಹಿಸಿದ್ದರು. ಸಮ್ಮೇಳನದಲ್ಲಿ ಹಾಗೂ ಅಂತರ–ಜಾತಿ ಸಹಭೋಜನದಲ್ಲಿ ಅನೇಕ ಮಹಿಳೆಯರು ಭಾಗವಹಿಸಿದ್ದರು. ಆ ಭಾಗದಲ್ಲಿ ಕಾರ್ಮಿಕ ವರ್ಗದ ಚಳವಳಿ ಎಷ್ಟು ದೃಢವಾಗಿದೆಯೆಂಬುದಕ್ಕೆ ಇದು ಸಾಕ್ಷಿಯಾಗಿತ್ತು.[೧೬]

ಕುಟ್ಟಿಕೃಷ್ಣ ಮೆನನ್ ಅವರ ಅಧ್ಯಕ್ಷತೆಯಲ್ಲಿ ಮದರಾಸು ಸರ್ಕಾರವು ಮಲಬಾರಿಗೆ ಒಂದು ಗೇಣಿ ಸಮಿತಿಯನ್ನು ನೇಮಕ ಮಾಡಿದಾಗ ಕಾಸರಗೋಡು ತಾಲೂಕಿಗೆ ಶಾಸನವನ್ನು ವಿಧಿಸುವ ಸಾಧ್ಯಾಸಾಧ್ಯತೆಗಳ ಬಗ್ಗೆ ಚರ್ಚಿಸಬೇಕೆಂದು ಸಮಿತಿಯನ್ನು ಕೇಳಿತ್ತು.[೧೭] ತಮ್ಮ ತಾಲೂಕಿಗೆ ಆ ಶಾಸನವನ್ನು ವಿಧಿಸುವುದರ

ವಿರುದ್ಧ ಕಾಸರಗೋಡಿನ ಎಲ್ಲಾ ಜಮೀನುದಾರರು ಪ್ರತಿಭಟಿಸಿದರು. ಆದರೆ ರೈತ ಸಂಘಟನೆಗಳು ಮಾತ್ರ ತಮ್ಮ ತಾಲೂಕಿಗೆ ಆ ಶಾಸನದ ಅಗತ್ಯವಿದೆಯೆಂದು ಪಟ್ಟುಹಿಡಿದವು. ಆದರೆ ಎರಡನೇ ಮಹಾಯುದ್ಧ ಪ್ರಾರಂಭವಾದ ಹಿನ್ನೆಲೆಯಲ್ಲಿ ಸಮಿತಿಯ ಪ್ರಸ್ತಾವಗಳು ಮೂಲೆಗುಂಪಾದವು. ವಸಾಹತುಶಾಹಿ ವ್ಯವಸ್ಥೆಯಲ್ಲಿ ಕಾಣಿಸಿಕೊಂಡ ಕೃಷಿ ಸಂಬಂಧೀ ಸಮಸ್ಯೆಗಳ ಮೂಲಕ ಈ ಭಾಗದ ರೈತರು ಸ್ವರಾಜ್ಯಕ್ಕಾಗಿ ಹೋರಾಡುವ ಛಾತಿ ಬೆಳೆಸಿಕೊಂಡದ್ದನ್ನು ಕಾಣುತ್ತೇವೆ.

## ಕಯ್ಯೂರ್ ದಂಗೆ

ಜಾಗತಿಕ ಸಮರ ಸನ್ನಿವೇಶದಲ್ಲಿ ಕಾಂಗ್ರೆಸ್-ಸಮಾಜವಾದಿ ಪಕ್ಷದ ರಚನೆಯಲ್ಲಿ ಕೆಲವು ಸೈದ್ಧಾಂತಿಕ ಸಮಸ್ಯೆಗಳು ತಲೆದೋರಿದವು. ಮಲಬಾರಿನ ಪಕ್ಷ ಸಂಘಟನೆಯು ಇಡಿಯಾಗಿ ಸಾಮ್ರಾಜ್ಯಶಾಹಿ ವಿರೋಧಿ ಚಳವಳಿಯನ್ನು ಆರಂಭಿಸಿ ಬ್ರಿಟಿಷರಿಂದ ಸ್ವಾತಂತ್ರ್ಯಗಳಿಸುವುದಕ್ಕಾಗಿ ಯುದ್ಧ ಪರಿಸ್ಥಿತಿಯನ್ನು ಉಪಯೋಗಿಸಿಕೊಳ್ಳಬೇಕೆಂದು ತೀರ್ಮಾನಿಸಿತ್ತು. ಮಲಬಾರಿನ ಪಿನರಾಯಿ ಎಂಬಲ್ಲಿ ಜರುಗಿದ ಸಭೆಯಲ್ಲಿ ಕಾಂಗ್ರೆಸ್-ಸಮಾಜವಾದಿಗಳು ತಮ್ಮನ್ನು ತಾವು ಕೇರಳದ ಕಮ್ಯೂನಿಸ್ಟ್ ಪಕ್ಷವಾಗಿ ಬದಲಾಯಿಸಿಕೊಳ್ಳಲು ತೀರ್ಮಾನಿಸಿದರು. ಕಾಸರಗೋಡು ಮತ್ತು ಮಲಬಾರಿನಲ್ಲಿ ೧೯೪೦ರ ಜನವರಿ ೨೬ನೇ ತಾರೀಖು ಪಕ್ಷ ರಚನೆಯಾದದ್ದನ್ನು ಭಿತ್ತಿ ಪತ್ರಗಳು ಸಾರಿದವು.

ಕಾಂಗ್ರೆಸ್-ಸಮಾಜವಾದಿ ಪಕ್ಷ ರಚನೆ ಹಾಗೂ ಗ್ರಾಮೀಣ ಪ್ರದೇಶಗಳಲ್ಲಿ ಅದರ ಚಳವಳಿಗಳು ಕಾಸರಗೋಡಿನ ಕನ್ನಡ ಮಾತನಾಡುವ ಜನರ ಮೇಲೆ ಏನೂ ಪರಿಣಾಮವುಂಟುಮಾಡಲಿಲ್ಲ. ಈ ಹಳ್ಳಿಗಳ ಕಾಂಗ್ರೆಸ್ ಸಮಿತಿಗಳು ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯ ಅಧೀನದಲ್ಲಿ ಕೆಲಸ ಮಾಡುತ್ತಿದ್ದವು; ಕೇರಳ ಪ್ರದೇಶ ಕಾಂಗ್ರೆಸ್ ಸಮಿತಿಗಳಷ್ಟು ಆಮೂಲಾಗ್ರವಾದ ಸೈದ್ಧಾಂತಿಕ ಬದಲಾವಣೆಯನ್ನು ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿ ಹೊಂದಿರಲಿಲ್ಲ. ಆದರೆ ಕಾಸರಗೋಡಿನ ಮಲೆಯಾಳಿ ಪ್ರಾಂತ್ಯಗಳು ಎಡಪಂಥೀಯ ಸಿದ್ಧಾಂತ ಹಾಗೂ ಕಾರ್ಯಕ್ರಮದಿಂದ ಪ್ರಭಾವಿತವಾಗಿದ್ದವು. ಪಕ್ಷವು ರಚನೆಯಾಗುತ್ತಿದ್ದ ಕಾಲದಲ್ಲಿ ಕಮ್ಯುನಿಷ್ಟರು ಎದುರಿಸಿದ ಸಮಸ್ಯೆಗಳ ಬಗ್ಗೆ ಇ.ಎಮ್.ಎಸ್. ನಂಬೂದಿರಿ ಪಾದರು ಹೀಗೆ ದಾಖಲಿಸಿದ್ದಾರೆ: 'ಕಮ್ಯುನಿಸ್ಟರು ಒಂದು ವಿಲಕ್ಷಣ ಸನ್ನಿವೇಶದಲ್ಲಿ ಇದ್ದಾರೆ: ಒಂದು ಕಡೆ ಅವರು ಕಾನೂನು ಬಾಹಿರವಾದ ಒಂದು ಸ್ವತಂತ್ರ ರಾಜಕೀಯ ಪಕ್ಷವಾಗಿದ್ದು ಕಾಂಗ್ರೆಸ್ಸಿನ ಅಧಿಕೃತ ನಿಯಮಗಳ ವಿರುದ್ಧ ಸಮರ ಸಾರಿದೆ; ಇನ್ನೊಂದು ಅವರ ಕಾಂಗ್ರೆಸ್ ಸಂಘಟನೆಯ ಕೆಳ ಹಂತದ ಘಟಕಗಳಲ್ಲಿ, ಪ್ರಾಂತೀಯ ಜಿಲ್ಲೆಗಳಲ್ಲಿ ನಾಯಕರಾಗಿದ್ದರು'.[೧೮]

ಈ ಬಗೆಯ ರಾಜಕೀಯ ಸನ್ನಿವೇಶ ಕಾಸರಗೋಡಿನಲ್ಲೂ ಪ್ರಚಲಿತವಿತ್ತು. ೧೯೪೦, ಸೆಪ್ಟಂಬರ್ ೧೫ನೇ ದಿನದಂದು ಕಾಂಗ್ರೆಸ್‌ನ ಎಡಪಂಥೀಯರು ಯುದ್ಧದ ವಿರುದ್ಧ ದಮನ-ವಿರೋಧಿ ದಿನವನ್ನು ಆಚರಿಸಿದರು. ಅಪಾರ ಸಂಖ್ಯೆಯಲ್ಲಿ ರೈತರು ಮತ್ತು ಕಾರ್ಮಿಕರು ಆ ದಿನ ಮೆರವಣಿಗೆಯಲ್ಲಿ ಭಾಗವಹಿಸಿದರು. ತಲಶೆರಿ, ಮತ್ತನ್ನೂರು ಹಾಗೂ ಮೊರಾಜಾ ಅಂಥ ಕಡೆಗಳಲ್ಲಿ ಗೋಲಿಬಾರು ಹಾಗೂ ಲಾಠಿಪ್ರಹಾರ ನಡೆದು ಅನೇಕರ ಪ್ರಾಣಹಾನಿಯಾಯಿತು. ಮೊರಾಜಾದಲ್ಲಿ ಜನರಗುಂಪು ಪೋಲೀಸಿನವರ ಮೇಲೆ ಹಲ್ಲೆ ನಡೆಸಿದಾಗ ಒಬ್ಬ ಉಪನಿರೀಕ್ಷಕ ಮತ್ತು ಒಬ್ಬ ಪೇದೆ ಪ್ರಾಣ ಕಳೆದುಕೊಂಡರು.[೧೯] ಸೆಪ್ಟಂಬರ್ ೧೫ರ ಗಲಭೆಯ ನಂತರ ಸರ್ಕಾರ ರೈತರು ಮತ್ತು ಕಾರ್ಮಿಕರ ವಿರುದ್ಧ ತೀವ್ರವಾದ ದಮನಕಾರಿ ನೀತಿಯನ್ನು ಅನುಸರಿಸಿತಲ್ಲದೆ ಮಲಬಾರು ಕೃಷಿಕ ಸಂಗಂ ಮತ್ತದರ ಎಲ್ಲಾ ಘಟಕಗಳನ್ನು ನಿಷೇಧಿಸಿತು. ಈ ಚಳವಳಿಯೊಡನೆ ಸಂಬಂಧವಿರಿಸಿಕೊಂಡಿದ್ದ ರಾಜಕೀಯ ಚಳವಳಿಗಾರರು ಕಾಸರಗೋಡು ತಾಲೂಕಿನಲ್ಲಿ ಭೂಗತರಾದರು.

ಅಲ್ಲಿಯೂ ಕೂಡ ಪೋಲೀಸು ದೌರ್ಜನ್ಯ ಮೇಲಿಂದ ಮೇಲೆ ನಡೆದಿತ್ತು. ಕಯ್ಯೂರ್ ದಂಗೆಗೆ ಇದು ಹಿನ್ನೆಲೆಯಾಗಿ ಪರಿಣಮಿಸಿತು.

ಕಾಸರಗೋಡಿನ ಕೃಷಿಕ ಸಂಗಂ ಕಾರ್ಯಕರ್ತರಿಗೆ ಪೋಲೀಸರು ಕಿರುಕುಳ ಕೊಡುತ್ತಿದ್ದರು. ಸಂಗವು ವ್ಯಾಪಕವಾಗಿ ವಸಾಹತುಶಾಹಿ ಸರ್ಕಾರ ಹಾಗೂ ಜಮೀನುದಾರರ ವಿರುದ್ಧ ಜನರನ್ನು ಹುರಿದುಂಬಿಸಿದ್ದಿತು. ಕಾಸರಗೋಡು ರೈತವಾರಿ ಭಾಗವಾಗಿದ್ದೂ ವರಗದಾರರು ಅಥವಾ ಜಮೀನುದಾರರು ಸರ್ಕಾರದ ಗೇಣಿದಾರರಂತೆ ಇದ್ದರು. ಅವರ ಅಡಿಯಲ್ಲಿ ಕೃಷಿ ಮಾಡುತ್ತಿದ್ದ ಗೇಣಿದಾರರು ನಿಗದಿಯಾದ ಅವಧಿಯಿಲ್ಲದೆ ಗುತ್ತಿಗೆದಾರರಂತೆ ಕೆಲಸ ಮಾಡುತ್ತಿದ್ದರು. ಈ ಗುತ್ತಿಗೆದಾರರು ಬೆಳೆಯುತ್ತಿದ್ದ ಬೆಳೆಯನ್ನೆಲ್ಲಾ ಜಮೀನುದಾರರು ಕಟ್ಟಿದ ಕಂದಾಯಕ್ಕೆ ಉತ್ತಾರ ಮಾಡಲು ಸರ್ಕಾರ ಮುಟ್ಟುಗೋಲು ಹಾಕಿಕೊಳ್ಳುತ್ತಿತ್ತು. ಆ ಪದ್ಧತಿಯ ವಿರುದ್ಧ ರೈತ ಸಂಘಗಳು ಪ್ರತಿಭಟಿಸಿದುವು. ಆ ಕಾರಣದಿಂದ ಕೃಷಿ ಶಾಸನವನ್ನು ಆ ತಾಲೂಕಿಗೂ ಲಾಗು ಮಾಡಬೇಕೆಂದು ಅವರು ಒತ್ತಾಯಿಸಿದರು. ಗೈರು ಹಾಜರಿ ಜಮೀನುದಾರಿಕೆಯ ಪ್ರಭಾವ ರೈತಾಪಿ ಜನರ ಮೇಲೆ ಹೇಗೆ ಆಗುತ್ತದೆ ಎಂಬುದನ್ನು ಗೇಣಿ ವಿಚಾರಣಾ ಸಮಿತಿಯ ಮುಂದೆ ಒದಗಿಸಿದ ಪುರಾವೆಯಲ್ಲಿ ಪ್ರಸಿದ್ಧ ವಕೀಲರು ಈ ರೀತಿ ವಿವರಿಸಿದ್ದಾರೆ: 'ಬಹುತೇಕ ಗೇಣಿದಾರರು ವಾಸ್ತವವಾಗಿ ಸಂತೋಷದಿಂದಿಲ್ಲ. ರೈತನಿಗೆ ಅವಧಿ ನಿಗದಿಯಾಗಿಲ್ಲ, ಭೂಮಿಯನ್ನು ಉತ್ತಮಪಡಿಸುವ ಸಲುವಾಗಿ ಅವನಿಗೆ ಯಾವ ಬಗೆಯ ಪ್ರೋತ್ಸಾಹವೂ ಇಲ್ಲ. ಜಮೀನುದಾರನ ಇಚ್ಛೆ ಇದ್ದರೆ ಇರುತ್ತಾನೆ, ಇಲ್ಲ ಅಂದರೆ ಅವನ ಎತ್ತಂಗಡಿಯಾಗುತ್ತದೆ. ತನಗೆ ಬರಬೇಕಾಗಿರುವುದನ್ನು ಕಾಲ ಕಾಲಕ್ಕೆ ನಿಯತವಾಗಿ ಕೊಡುವ ಗೇಣಿದಾರನನ್ನು ಬುದ್ಧಿವಂತನಾದ ಜಮೀನುದಾರ ಸಾಮಾನ್ಯವಾಗಿ ಹೊರಗಟ್ಟುವುದಿಲ್ಲ. ತನ್ನ ದಿನನಿತ್ಯದ ಊಟಕ್ಕಾಗಿ ಅನವರತವೂ ಜಮೀನುದಾರನನ್ನು ಅವಲಂಬಿಸಬೇಕಾದ ಸ್ಥಿತಿಯಿಂದಾಗಿ ಗೇಣಿದಾರನ ಆತ್ಮ ಸೊರಗುವುದಲ್ಲದೆ ಒಂದು ರಾಷ್ಟ್ರದ ಪ್ರಗತಿಗೆ ವ್ಯಕ್ತಿಗಳು ಬದುಕಿನ ಬಗ್ಗೆ ಹೊಂದಬೇಕಾದ ಉದಾರವಾದ ಧೋರಣೆಯನ್ನು ಹೊಂದದಂತಾಗುತ್ತಾನೆ. ಪ್ರಜೆಗಳು ಪರಾವಲಂಬಿಯಾದ ಪರಿಸ್ಥಿತಿಯಲ್ಲಿ ಯಾವ ರಾಷ್ಟ್ರವಾದರೂ ಆರೋಗ್ಯವಾಗಿ ಬೆಳೆಯಲಾರದೆಂಬುದು ಸ್ವತಃಸಿದ್ಧವಾದ ಸತ್ಯವಾಗಿದೆ'.[೨೮]

ಕಮ್ಯುನಿಸ್ಟರು ಅರ್ಥ ಮಾಡಿಕೊಂಡಂತೆ ರಾಷ್ಟ್ರೀಯ ಚಳವಳಿಯಲ್ಲಿ ರೈತರನ್ನು ರಾಜಕೀಯವಾಗಿ ಕ್ರಿಯಾಶೀಲಗೊಳಿಸಬೇಕಾದ ಅಗತ್ಯವಿದ್ದಿತು. ಕರ್ಯಂಕೋಡೆ ನದಿಯ ಬಲದಂಡೆಯಲ್ಲಿರುವ ಊರು ಕಯ್ಯೂರು; ಆರಂಭದಲ್ಲಿ ಕಾಂಗ್ರೆಸ್ ಸಮಾಜವಾದಿಗಳೂ ನಂತರ ಕಮ್ಯುನಿಸ್ಟರೂ ಇಲ್ಲಿ ಪ್ರಭಾವ ಬೀರಿದರು. ೧೯೪೦ರಲ್ಲಿ ಪಿ.ಸುಂದರಯ್ಯನವರೂ ಈ ಗ್ರಾಮಕ್ಕೆ ಭೇಟಿ ನೀಡಿದ್ದರು. ಪೋಲೀಸರ ದೌರ್ಜನ್ಯವನ್ನು ಪ್ರತಿಭಟಿಸಲು ೧೯೪೧ರ ಮಾರ್ಚಿ ೧೨ನೇ ದಿನದಂದು ಇಲ್ಲಿ ಪ್ರದರ್ಶನವನ್ನು ನಡೆಸಲಾಗಿತ್ತು. ಸುಮಾರು ೬೦ ಮಂದಿ, ಕೆಲವರು ಸಮವಸ್ತ್ರ ಧರಿಸಿ ಈ ಪ್ರದರ್ಶನದಲ್ಲಿ ಭಾಗವಹಿಸಿದ್ದರು. ಕಮ್ಯೂನಿಸ್ಟ್ ಘಟಕಗಳು ಈ ಪ್ರದರ್ಶನವನ್ನು ಸಂಘಟಿಸಿದ್ದವು. ಪ್ರದರ್ಶನಕಾರರು ಈ ರೀತಿಯಾಗಿ ಘೋಷಣೆಗಳನ್ನು ಕೂಗಿದ್ದರು:

ಬ್ರಿಟಿಷರ ಆಡಳಿತ ನಾಶವಾಗಲಿ!
ಜಮೀಂದಾರಿಕೆ ನಾಶವಾಗಲಿ!
ರೈತರಿಗೆ ಜಯವಾಗಲಿ!
ಸೋವಿಯತ್‌ನ ಆಳ್ವಿಕೆಗೆ ಜಯವಾಗಲಿ!
ಕಂದಾಯ ಕೊಡಬೇಡಿ!

ಸೈನ್ಯ ಸೇರಬೇಡಿ!
ಸಮರಕ್ಕೆ ದೇಣಿಗೆ ನೀಡಬೇಡಿ!

ಮೊರಾಜಾ, ಮಟ್ಟನೂರ್ ಮತ್ತು ತಲಿಚೆರಿಯಲ್ಲಿ ಸೆಪ್ಟೆಂಬರ್ ೧೫ರ ಗಲಭೆಯಲ್ಲಿ ಬಂಧಿಸಲ್ಪಟ್ಟಿದ್ದ ಸೆರೆಯಾಳುಗಳನ್ನು ಮಲಬಾರಿನಿಂದ ಬಿಡುಗಡೆ ಮಾಡಬೇಕೆಂಬುದು ಅವರ ಒತ್ತಾಯಗಳಲ್ಲೊಂದು. ಕಯ್ಯೂರ್‌ನಂಥ ಒಂದು ಕುಗ್ರಾಮದ ಅನಕ್ಷರಸ್ಥ ಸಣ್ಣ ರೈತರು ರಾಜಕೀಯ ಪ್ರಜ್ಞೆಯುಳ್ಳ ಸ್ವಾತಂತ್ರ್ಯ ಹೋರಾಟಗಾರರಾಗಿ ಪರಿವರ್ತನೆ ಹೊಂದಿದ ಕಥೆ ಚರಿತ್ರೆಯ ವಿದ್ಯಾರ್ಥಿಗಳಿಗೆ ತುಂಬಾ ಕುತೂಹಲಕರವಾದ ಅಧ್ಯಯನವಾಗಬಹುದು. ವಾಪಸ್ಸು ಬರುವಾಗ ಜಾಥಾವು ಕಂದಾಯ ಉಪನಿರೀಕ್ಷಕನ ಮುಂದೆ ಬಂದಾಗ ಆ ಸಂದರ್ಭವನ್ನು ಆತನೇ ಹೇಳಿರುವಂತೆ ಮೊಕದ್ದಮೆಯನ್ನು ದಾಖಲಿಸಿಕೊಂಡು ಟಿ.ವಿ. ಕುನ್ಹಂಬು, ಕೆ.ಪಿ. ವೆಲ್ಲುಂಗಾ, ಟಿ.ವಿ.ಕುನ್ಹಿರಾಮನ್, ಚೂರಿಕ್ಕಟ್ಟ್ ಕೃಷ್ಣನ್ ನಾಯರ್, ಮತ್ತು ಇನ್ನೂ ಹಲವರ ಬಂಧನಕ್ಕೆ ಆದೇಶ ಹೊರಡಿಸಿದರಂತೆ. ಮಾರ್ಚಿ ೨೬ನೇ ದಿನದಂದು ಪೋಲೀಸ್ ಪೇದೆಯೊಬ್ಬ ಗ್ರಾಮಕ್ಕೆ ಬಂದು ಅಲ್ಲಿನ ಪಟೇಲರಿಗೆ ಆ ರಾತ್ರಿ ಪೋಲೀಸು ಪಾರ್ಟಿ ಭೇಟಿ ಕೊಡುವುದಾಗಿ ತಿಳಿಸಿದ. ಪಟೇಲರ ಮನೆಯಲ್ಲಿ ಆ ಪೇದೆ ಮಲಗಿರುವ ಸಂದರ್ಭದಲ್ಲಿ ಅವನನ್ನು ಕೊಲೆ ಮಾಡಲು ರೈತನೊಬ್ಬ ಪ್ರಯತ್ನ ನಡೆಸಿದ. ರೈತ ಚಳವಳಿಗಾರರು ಮತ್ತು ಕೆಲವು ಗ್ರಾಮಸ್ಥರನ್ನು ಪೋಲೀಸಿನವರು ಚೆನ್ನಾಗಿ ಥಳಿಸಿದರಲ್ಲದೆ ಕೆಲವು ಸ್ಥಳೀಯ ಮುಖಂಡರನ್ನು ಬಂಧಿಸಿದರು. ೨೭ನೇ ತಾರೀಖು ಈ ವಿಷಯ ಗ್ರಾಮದಲ್ಲೆಲ್ಲಾ ಹರಡಿತು. ಭೂಗತರಾಗಿದ್ದ ಕಮ್ಯೂನಿಸ್ಟರು, ಇ.ಕೆ. ನಯನಾರ್ (ಕೇರಳದ ಮುಖ್ಯಮಂತ್ರಿ) ಅವರೂ ಸೇರಿದಂತೆ ಕಯ್ಯೂರಿನಲ್ಲಿ ೨೮ರ ಅಪರಾಹ್ನ ಪ್ರತಿಭಟನಾ ಸಭೆ ಮತ್ತು ಪ್ರದರ್ಶನವನ್ನು ನಡೆಸಲು ತೀರ್ಮಾನಿಸಿದರು. ೨೮ನೇ ತಾರೀಖು ಜಾಥಾ ಮುಂದುವರಿದಿರುವ ಸಮಯದಲ್ಲಿ ಹಿಂದಿನ ದಿನ ರೈತ ಚಳವಳಿಗಾರರನ್ನು ಚೆನ್ನಾಗಿ ಥಳಿಸಿದ್ದ ಪೋಲೀಸು ತಂಡದಲ್ಲಿದ್ದ ಪೇದೆಯೊಬ್ಬ ಹಾದಿಗೆ ಅಡ್ಡಲಾದ. ಕೆಂಪು ಬಾವುಟ ತೊಟ್ಟು ಜಾಥಾವನ್ನು ಸೇರಿಕೊಳ್ಳಬೇಕೆಂದು ಸ್ವಯಂಸೇವಕರು ಅವನನ್ನು ಆಗ್ರಹಪಡಿಸಿದರು. ಒಂದು ಜಾಗಕ್ಕೆ ಬಂದಾಗ ಆತ ನದಿಗೆ ಹಾರಿಕೊಂಡ ಸಮಯದಲ್ಲಿ ಜನರ ಗುಂಪು ಅವನತ್ತ ಕಲ್ಲು ಬೀರಿತು. ನದಿಯಲ್ಲಿ ಆತ ಮುಳುಗೇಹೋದ.

ಪೋಲೀಸಿನವರು ಗ್ರಾಮಸ್ಥರನ್ನು ಬೇಟೆಯಾಡಲು ಪ್ರಾರಂಭಿಸಿದಾಗ ಭಯೋತ್ಪಾದನೆಯ ದಿನಗಳಿಗೆ ನಾಂದಿಯಾಯಿತು. ತಾಲೂಕಿನಲ್ಲಿ ಇರುವ ಎಲ್ಲ ಸಾಮ್ರಾಜ್ಯಶಾಹಿ-ವಿರೋಧಿಗಳು ಹಾಗೂ ಉಗ್ರಗಾಮಿಗಳನ್ನು ಹುಡುಕುವಂತೆ ಪಟೇಲರಿಗೆ ಆದೇಶವಾಯಿತು. ಜಾಥಾದಲ್ಲಿ ಭಾಗವಹಿಸದ ಅನೇಕರನ್ನು ಬಂಧಿಸಿ ಶಿಕ್ಷೆಗೆ ಗುರಿಪಡಿಸಲಾಯಿತು. ಅಪ್ಪು, ಕುನ್ಹಂಬುನಾಯರ್, ಚಿರುಕಂದನ್, ಅಬೂಬಕರ್ ಹಾಗೂ ಕೃಷ್ಣನ್ ನಾಯರ್ ಎಂಬ ಮತ್ತೊಬ್ಬ ಇವರೆಲ್ಲ ಕೊಲೆಗಡುಕ ಚಟುವಟಿಕೆಗಳಲ್ಲಿ ಭಾಗವಹಿಸಿರುವುದನ್ನು ಮಂಗಳೂರಿನ ಜಿಲ್ಲಾ ಸೆಷನ್ಸ್ ನ್ಯಾಯಾಧೀಶರು ಪತ್ತೆ ಹಚ್ಚಿದರು. ಅವರಿಗೆ ಫಾಸಿ ಶಿಕ್ಷೆಯಾಯಿತು. ಮೇಲ್ಮನವಿ ಮೊಕದ್ದಮೆಯಲ್ಲೂ ಸಹ ಈ ಮೊಕದ್ದಮೆಯ ರಾಜಕೀಯ ಅಂಶವನ್ನು ತಿರಸ್ಕರಿಸಿ ಕೆಳ ಹಂತದ ನ್ಯಾಯಾಲಯದ ತೀರ್ಪನ್ನೇ ಎತ್ತಿ ಹಿಡಿಯಲಾಯಿತು.[೨೧]

೧೯೪೨ರ ಜುಲೈ ೨೬ರಂದು ಸರ್ಕಾರವು ಕಮುನಿಸ್ಟ್ ಪಕ್ಷದ ಮೇಲೆ ವಿಧಿಸಿದ ನಿಷೇಧಾಜ್ಞೆಯನ್ನು ರದ್ದುಪಡಿಸಿದಾಗ, ಯುದ್ಧ ನಿಯಮಗಳ ಅನುಸಾರವಾಗಿ, ಪಕ್ಷದ ಸದಸ್ಯರು ಆಗಸ್ಟ್ ೨ನೇ ತಾರೀಖನ್ನು ದೇಶದಾದ್ಯಂತ ಕಯ್ಯೂರ್ ದಿನವನ್ನಾಗಿ ಆಚರಿಸುವುದರ ಮೂಲಕ ಜನಾಭಿಪ್ರಾಯವನ್ನು ರೂಢಿಸಲು ಪ್ರಯತ್ನಿಸಿದರು. ಬ್ರಿಟಿಷ್ ಕಮ್ಯುನಿಸ್ಟ್ ಪಕ್ಷ ಹಾಗೂ ಕೆಲವು ಉದಾರವಾದಿ ಸಂಸತ್ ಸದಸ್ಯರು ಕಯ್ಯೂರ್ ಪ್ರಸಂಗದ ಬಗ್ಗೆ ಆಸಕ್ತಿ ತೋರಿದರು. ಪ್ರಿವಿ ಕೌನ್ಸಿಲ್‌ನ ನ್ಯಾಯಾಧೀಕರಣ ಸಮಿತಿಯ ಮುಂದೆ ಈ ಮೊಕದ್ದಮೆಯನ್ನು ಹಾಜರುಪಡಿಸಲು ಡಿ.ಎನ್.ಪ್ರಿಟ್ ಅವರ ಮುಫತ್ತು ಸೇವೆಯನ್ನು ಗಳಿಸಿಕೊಂಡರು.

ಪ್ರಿಟ್ ಅವರಿಗೆ ಪಿ.ಕೆ.ಕೃಷ್ಣ ಮೆನನ್ನರು ಸಹಕರಿಸಿದರು. ಆದರೆ ಮೇಲ್ಮನವಿ ತಿರಸ್ಕೃತವಾಯಿತು. ೧೯೪೩ನೇ ಮಾರ್ಚಿ ೨೯ರಂದು ಕೃಷ್ಣನ್ ನಾಯರ್‌ರೊಬ್ಬರನ್ನುಳಿದು ನ್ಯಾಯಾಲಯ ಮರಣದಂಡನೆ ಶಿಕ್ಷೆ ವಿಧಿಸಿದ್ದ ನಾಲ್ವರನ್ನು ಕಣ್ಣಾನೂರಿನ ಕೇಂದ್ರ ಕಾರಾಗೃಹದಲ್ಲಿ ಗಲ್ಲಿಗೇರಿಸಲಾಯಿತು. ಗಲ್ಲುಶಿಕ್ಷೆಯ ಈ ದಿನವನ್ನು ಅಖಿಲ ಭಾರತ ಕಿಸಾನ್ ದಿನವನ್ನಾಗಿ ಆಚರಿಸಲಾಯಿತು. ಕಯ್ಯೂರ್ ಗಲಭೆಯ ರಾಜನೈತಿಕ ಹಾಗೂ ರಾಷ್ಟ್ರೀಯ ಚಳವಳಿಯ ಹಿನ್ನೆಲೆಯು ಕಾಸರಗೋಡಿನ ಸ್ವಾತಂತ್ರ್ಯ ಹೋರಾಟದ ಇತಿಹಾಸದಲ್ಲಿ ಒಂದು ಮುಖ್ಯವಾದ ಅಧ್ಯಾಯವಾಗಿದೆ.

## ವ್ಯಕ್ತಿಗತ ಸತ್ಯಾಗ್ರಹ

ಯುದ್ಧ ಕಾಲದಲ್ಲಿ ಎಲ್ಲಾ ಕಾಂಗ್ರೆಸ್ ಸಮಿತಿಗಳೂ ಸತ್ಯಾಗ್ರಹಿಗಳ ಸಮಿತಿಗಳಾಗಿ ತಾವು ಪರಿವರ್ತಿತವಾಗಬೇಕೆಂದೂ ಆ ದಿಶೆಯಲ್ಲಿ ಒಂದು ಒಪ್ಪಿಗೆಗೆ ಸಹಿ ಹಾಕಬೇಕೆಂದೂ ತೀರ್ಮಾನವಾಗಿತ್ತು. ಆ ಘೋಷಣೆಗೆ ಕಾಂಗ್ರೆಸ್ಸಿನ ವಾಮಪಂಥೀಯರು ರುಜು ಹಾಕಲಿಲ್ಲ. ಹಾಗಾಗಿ ಕೇರಳ ಪ್ರದೇಶ ಕಾಂಗ್ರೆಸ್ ಸಮಿತಿಯನ್ನು ರದ್ದುಗೊಳಿಸಿ ಒಂದು ಹಂಗಾಮಿ ಸಮಿತಿಯನ್ನು ರಚಿಸಲಾಯಿತು. ೧೯೪೦ರ ಅಕ್ಟೋಬರ್‌ನಲ್ಲಿ ಯುದ್ಧವನ್ನು ಪ್ರತಿಭಟಿಸುವ ಸಲುವಾಗಿ ಗಾಂಧೀಜಿಯವರು ವ್ಯಕ್ತಿಗತ ಸತ್ಯಾಗ್ರಹವನ್ನು ಪ್ರಾರಂಭಿಸಿದರು. ಇಡೀ ತಾಲೂಕಿನಲ್ಲಿ ನವೆಂಬರ್ ೨ನೇ ತಾರೀಖು ಒಂದು ಹರತಾಳವನ್ನು ಆಚರಿಸಲಾಯಿತು. ಜವಹರ್‌ಲಾಲ್ ನೆಹರೂರವರು ನ್ಯಾಯಾಲಯಕ್ಕೆ ನೀಡಿದ ಹೇಳಿಕೆಯ ಪ್ರತಿಯನ್ನು ಹೊಸದುರ್ಗ, ಕಾಸರಗೋಡು ಹಾಗೂ ಕುಂಬ್ಳಾದಲ್ಲಿ ಹಂಚಲಾಯಿತು. ಡಿಸೆಂಬರ್ ೧೮ರಂದು ಸಿ.ಪಿ. ಕೃಷ್ಣನ್‌ನಾಯರ್, ಬಿ.ದೇವಪ್ಪ ಆಳ್ವಾ ಹಾಗೂ ಎ.ಅಚ್ಯುತನ್‌ರವರು ಸತ್ಯಾಗ್ರಹ ನಡೆಸಿ ಬಂಧನಕ್ಕೊಳಗಾದರು. ಕಾಂಗ್ರೆಸ್-ಸಮಾಜವಾದಿಗಳು ಹಾಗೂ ಕಮ್ಯುನಿಸ್ಟರು ಆ ತಾಲೂಕಿನ ಸತ್ಯಾಗ್ರಹಿಗಳಿಗೆ ಪ್ರೋತ್ಸಾಹ ನೀಡಲಿಲ್ಲ. ಅವರಿಗಿದ್ದ ತೀವ್ರತರವಾದ ವಸಾಹತು-ವಿರೋಧಿ ಭಾವನೆಯಿಂದಾಗಿ ಗಾಂಧೀಜಿಯವರ ಕಾರ್ಯಕ್ರಮ ಅವರಿಗೆ ಒಪ್ಪಿತವಾಗಿರಲಿಲ್ಲ. ಉಗ್ರಗಾಮಿಯಾದ ಕಾರ್ಯಕ್ರಮ ಅವರಿಗೆ ಬೇಕಾಗಿತ್ತು.

## ಭಾರತ ಬಿಟ್ಟು ತೊಲಗಿ

ಬೊಂಬಾಯಿಯ ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಸಭೆಯ ನಂತರ ಚಾರಿತ್ರಿಕವಾದ 'ಭಾರತ ಬಿಟ್ಟು ತೊಲಗಿ' ಕಾರ್ಯಕ್ರಮದ ರಚನೆಯಾಯಿತು. 'ಮಾಡು ಇಲ್ಲವೇ ಮಡಿ' ಎಂಬ ಅದರ ಸಂದೇಶ ಕಾಸರಗೋಡಿನಲ್ಲೆಲ್ಲಾ ಮೊಳಗಿತು. ವಿದ್ಯಾರ್ಥಿಗಳು ತರಗತಿಗಳನ್ನು ಬಹಿಷ್ಕರಿಸಿದರು. ತಾಲೂಕಿನ ಎಲ್ಲಾ ಭಾಗಗಳಲ್ಲಿಯೂ ಹರತಾಳವನ್ನು ಆಚರಿಸಿದರು. ನೀಲೇಶ್ವರದಿಂದ ಕಾಸರಗೋಡಿಗೆ ಸತ್ಯಾಗ್ರಹಿಗಳು ಜಾಥಾ ಹೊರಟು ಅಲ್ಲಿ ಸರ್ಕಾರಿ ಕಚೇರಿಗಳ ಮುಂದೆ ಪಿಕೆಟಿಂಗ್ ನಡೆಸಿದರು, ದಸ್ತಗಿರಿಯಾದರು. ಕಂದಾಯ ಇಲಾಖಾ ಕಚೇರಿಗಳ ಮುಂದೆ ಪಿಕೆಟಿಂಗ್ ಮಾಡಿದರು. ಅಕ್ಟೋಬರ್ ೨ನೇ ತಾರೀಖು ವಿದ್ಯಾರ್ಥಿಗಳು ಗಾಂಧಿಜಯಂತಿಯನ್ನು ಆಚರಿಸಿದಾಗ ಪೋಲೀಸಿನವರು ಅವರನ್ನು ಚೆನ್ನಾಗಿ ಥಳಿಸಿದರು. ಅವರಲ್ಲಿ ಕೆಲವರನ್ನು ಶಾಲೆಯಿಂದ ವಜಾ ಮಾಡಲಾಯಿತು. ರಾಷ್ಟ್ರಧ್ವಜ ಹಾರಿಸುವುದು ನಿಷೇಧಿತವಾಗಿತ್ತು. ನೀಲೇಶ್ವರ, ಪಿಲಿಕೋಡ್‌ನಂಥ ಸ್ಥಳಗಳಲ್ಲಿ ಟೆಲಿಗ್ರಾಫ್ ತಂತಿಗಳನ್ನು ಕಡಿದರು. ಕಮ್ಯುನಿಸ್ಟರನ್ನು ವಿನಾಯಿತಿ ನೀಡಿ ಉಳಿದೆಲ್ಲಾ ರಾಜಕೀಯ ಕಾರ್ಯಕರ್ತರನ್ನು ದಸ್ತಗಿರಿ ಮಾಡಿ ದೀರ್ಘಾವಧಿ ಶಿಕ್ಷೆಗೆ ಅವರನ್ನು ಗುರಿಪಡಿಸಿ ವೆಲ್ಲೂರು, ಅಲಿಪುರ್ ಮತ್ತು ಬೆಳಗಾವಿಯ ಜೈಲುಗಳಿಗೆ ಕಳುಹಿಸಲಾಯಿತು. 'ಡೀಫೆನ್ಸ್ ಆಫ್ ಇಂಡಿಯಾ'

ಕಾನೂನಿನ ಪ್ರಕಾರ ಕಾಂಗ್ರೆಸ್ ಪಕ್ಷವನ್ನು ನಿಷೇಧಿಸಲಾಯಿತಲ್ಲದೆ ಅದರ ಎಲ್ಲಾ ಚಟುವಟಿಕೆಗಳನ್ನು ದಮ್ನಗೊಳಿಸಲಾಯಿತು. ಸಮಾಜವಾದಿಗಳು ಉಗ್ರಗಾಮಿ ಚಟುವಟಿಕೆಗಳಲ್ಲಿ ಕ್ರಿಯಾಶೀಲ ನಾಯಕತ್ವವನ್ನು ಒದಗಿಸಿದರು.[೨೨] ಉಳಿದ ಭಾಗಗಳಲ್ಲಿಯಂತೆ ಈ ತಾಲೂಕಿನಲ್ಲೂ ಸಹ ಕಾಂಗ್ರೆಸ್ ಕಾರ್ಯಕರ್ತರು ಸೆರೆಮನೆಯಲ್ಲಿದ್ದಾಗ ಭೂಗತ ಸಮಾಜವಾದಿಗಳು ಚಳವಳಿಯನ್ನು ಜೀವಂತವಾಗಿಟ್ಟರು. ಕನ್ನಡ ಹಾಗೂ ಮಲಯಾಳಂ ಸಾಹಿತ್ಯಗಳ ಮೂಲಕ ಈ ಚಳವಳಿಗೆ ಒಂದು ಸಾಂಸ್ಕೃತಿಕ ವಾತಾವರಣವನ್ನು ನಿರ್ಮಾಣ ಮಾಡಲಾಗಿತ್ತು. ಮಂಜೇಶ್ವರ ಗೋವಿಂದ ಪೈ ಅವರ ಸಾಹಿತ್ಯ ಕೃತಿಗಳು, ಕಯ್ಯಾರ ಕಿಞ್ಞಣ್ಣ ರೈ ಅವರು ಕನ್ನಡದಲ್ಲಿ ಬರೆದ ವಿರಾಗಿಣಿಯಂಥ ನಾಟಕಗಳು, ಕುಟ್ಟಿಮತ್ ಹಾಗೂ ಪಿ. ಕುಞ್ಞಿರಾಮನ್ ನಾಯರ್‌ರವರ ಸಾಹಿತ್ಯಿ ಕೃತಿಗಳು ನೂರಾರು ಜನ ರಾಷ್ಟ್ರವಾದಿಗಳ ಹೃದಯವನ್ನು ಕಲಕಿದವು. ಚಳವಳಿಯಿಂದ ಕಮ್ಯುನಿಸ್ಟ್ ಪಕ್ಷ ದೂರ ಉಳಿದಿತ್ತಾದರೂ ರಾಷ್ಟ್ರೀಯ ಭಾವನೆಯ ಕಾರಣವಾಗಿ ಅದರ ಅನೇಕ ಸದಸ್ಯರು ದಸ್ತಗಿರಿಯಾಗಿದ್ದರು. ಐಕ್ಯತಾ ದಿನವನ್ನು ಆಚರಿಸಿ ಕಾಂಗ್ರೆಸ್ ಹಾಗೂ ಮುಸ್ಲಿಂ ಲೀಗ್ ರಾಜಿಯಾಗಬೇಕೆಂದು ಅವರು ಸಲಹೆ ನೀಡಿದರು. ಗಾಂಧೀಜಿ, ಪಟೇಲ್ ಹಾಗೂ ನೆಹರೂರಂಥ ರಾಷ್ಟ್ರೀಯ ನಾಯಕರ ಬಿಡುಗಡೆಗೆ ಒತ್ತಾಯಿಸಿದರು. ೧೯೪೪ರ ಅಕ್ಟೋಬರ್ ವೇಳೆಗೆ ಕಾಸರಗೋಡಿನಲ್ಲಿ ಲಾಗುಮಾಡಿದ್ದ ಭಾರತ ದಂಡ ಸಂಹಿತೆಯ ೧೪೪ನೇ ವಿಧಿಯನ್ನು ವಾಪಸ್ಸು ತೆಗೆದುಕೊಂಡರು. ರಾಷ್ಟ್ರೀಯ ಚಳವಳಿಗಾರರು ಮತ್ತೆ ಗಾಂಧೀಜಿಯವರ ಹುಟ್ಟು ಹಬ್ಬವನ್ನಾಚರಿಸಿ ಕಸ್ತೂರಬಾ ಸ್ಮಾರಕ ನಿಧಿಗಾಗಿ ದೇಣಿಗೆಯನ್ನು ಸಂಗ್ರಹಿಸಿದರು. ೧೯೪೫ರಲ್ಲಿ ಸರ್ಕಾರ ಮತ್ತೆ ಪೂರ್ಣ ಸ್ವರಾಜ್ಯವನ್ನು ಆಚರಿಸದಂತೆ ನಿಷೇಧಿಸಿತು. ಆಗಸ್ಟ್ ವೇಳೆಗೆ ಕಾಂಗ್ರೆಸ್‌ನ ಮೇಲೆ ವಿಧಿಸಲಾಗಿದ್ದ ನಿಷೇಧವನ್ನು ಹಿಂತೆಗೆದುಕೊಳ್ಳಲಾಯಿತು.

೧೯೪೬ರ ಏಪ್ರಿಲ್‌ನಲ್ಲಿ ಟಿ.ಪ್ರಕಾಶಂ ಅವರ ಸಚಿವ ಸಂಪುಟ ಮದ್ರಾಸಿನಲ್ಲಿ ಅಧಿಕಾರಕ್ಕೆ ಬಂದಿತು. ೧೯೪೨ರಿಂದ ತಾಲೂಕಿನಲ್ಲಿ ಸಾಂಕ್ರಾಮಿಕ ರೋಗಗಳು, ಕ್ಷಾಮ ಹಾಗೂ ದಾರಿದ್ರ್ಯ ತಲೆದೋರಿತ್ತು. ಕಮ್ಯುನಿಸ್ಟರು ತಮ್ಮ ಕಿಸಾನ್ ಘಟಕಗಳು ಹಾಗೂ ಇತರ ಸಂಘಗಳ ಮೂಲಕ ಬಡ ರೈತಾಪಿ ಜನಗಳಿಗೆ ಆಹಾರ ಒದಗಿಸಲು ಏರ್ಪಾಟು ಮಾಡಿದ್ದವು. ಸಂಪೂರ್ಣವಾದ ಅಧಿಕಾರದ ಹಸ್ತಾಂತರ ಹಾಗೂ ಆರ್ಥಿಕ ಸುಧಾರಣ ಕ್ರಮಗಳಿಂದ ಮಾತ್ರ ಪರಿಸ್ಥಿತಿಯನ್ನು ಹತೋಟಿಗೆ ತರಬಹುದೆಂದು ಅವರು ದೃಢವಾಗಿ ನಂಬಿದ್ದರು. ಪಾಳು ಭೂಮಿ ಕೃಷಿ ಹಾಗೂ ಆಹಾರ ಧಾನ್ಯ ಮತ್ತು ಇತರ ಅವಶ್ಯಕ ಸಾಮಗ್ರಿಗಳ ಕಾಳಸಂತೆ ನಡೆಯದ ಹಾಗೆ ಚಳವಳಿಯನ್ನು ಪ್ರಾರಂಭಿಸಿದರು. ಚೀಮೆನಿಯಲ್ಲಿ ಖಾಸಗಿ ಗೋಡಂಬಿ ತೋಟವೊಂದರಲ್ಲಿ ರೈತರು ಹಸಿರೆಲೆ ಗೊಬ್ಬರ ಮತ್ತು ಸೌದೆ ಸಂಗ್ರಹಿಸುವುದನ್ನು ತಡೆಯಲಾಯಿತು. ಅವರಿಗೆ ಅಡ್ಡಿಯುಂಟು ಮಾಡಿದ್ದ ಮಾಲೀಕನ ವಿರುದ್ಧ ಹೋರಾಟ ನಡೆಸಿ ರೈತರು ಪಾರಂಪರಿಕವಾಗಿ ಪಡೆಯುತ್ತಿದ್ದ ಸೌದೆ ಇತ್ಯಾದಿಗಳ ವಿಷಯವಾಗಿ ತೊಂದರೆ ಕೊಡದಂತೆ ಅವನಿಗೆ ತಾಕೀತು ಮಾಡಲಾಯಿತು.[೨೩] ತಾಲೂಕಿನ ಎಲ್ಲ ಕಡೆ ಕಾರ್ಮಿಕ ವರ್ಗದ ಚಳವಳಿ ಬೆಳೆಯತೊಡಗಿತ್ತು. ವಾಮಪಂಥೀಯ ಮುಖಂಡರುಗಳನ್ನು ಪೋಲೀಸರು ಮತ್ತೆ ಬೇಟೆಯಾಡಲು ಪ್ರಾರಂಭಿಸಿದ್ದರು. ಅಂತಿಮವಾಗಿ ೧೯೪೮ರ ಜನವರಿ ೨೩ನೇ ತಾರೀಖು ರಾಜ್ಯಪಾಲರು ಸಾರ್ವಜನಿಕ ಸುವ್ಯವಸ್ಥೆ ಪರಿಪಾಲನಾ ಸುಗ್ರೀವಾಜ್ಞೆಯನ್ನು ಜಾರಿಗೊಳಿಸಿದರು. ಅದರ ಪ್ರಕಾರ, ಪ್ರಾಂತ್ಯದಲ್ಲಿ ಬೆಳೆಯುತ್ತಿರುವ ಕಮ್ಯುನಿಸ್ಟ್ ಚಟುವಟಿಕೆಗಳು ಆಡಳಿತವನ್ನು ಬುಡಮೇಲು ಮಾಡಿ ಹಿಂಸಾಚಾರವನ್ನು ಹೆಚ್ಚಿಸುವ ಅನಿಷ್ಟವಾಗಿರುವುದರಿಂದ ಅವುಗಳನ್ನು ತಡೆಯುವುದಕ್ಕಾಗಿ ಈ ಸುಗ್ರೀವಾಜ್ಞೆ.[೨೪] ಮಲಬಾರ್ ಮುಖಂಡರುಗಳ ಜೊತೆಗೆ ಹರಿದಾಸ್ ಮನಿಯಾನಿ, ಎಸ್.ಎನ್. ಹೊಳ್ಳ, ಬಿ.ವಿ. ಕಕ್ಕಿಲಾಯ, ಕೆ.ಪಿ. ಕೇಶವಕಾಮತ್, ಎನ್.ಕೆ. ಕೊಟ್ಟನ್, ಕೆ.ಟಿ. ಕುಞ್ಞಿರಾಮನ್ ನಂಬಿಯಾರ್, ಎನ್.ಎಸ್. ನಂಬೂದಿರಿ ಹಾಗೂ ಶಾಂತಾರಾಮ ಪೈ–ಇವರುಗಳೂ ಹೊಸ ಸುಗ್ರೀವಾಜ್ಞೆಯ ಪ್ರಕಾರ ದಸ್ತಗಿರಿಯಾಗಿದ್ದರು.[೨೫]

ಕಾಸರಗೋಡಿನ ಕೆಲವು ಭಾಗಗಳಲ್ಲಿ ಮುಸ್ಲಿಂ ಲೀಗಿಗೆ ಸಹಾನುಭೂತಿ ತೋರುತ್ತಿದ್ದವರು ಭಾರತ ವಿಭಜನೆಯನ್ನು ಬೆಂಬಲಿಸಿದರು. ಮದರಾಸು ಸಚಿವ ಸಂಪುಟದಲ್ಲಿ ಗುಂಪುಗಳಿದ್ದು ಪ್ರಕಾಶಂರವರು ರಾಜೀನಾಮೆ ನೀಡುವಂಥ ಪರಿಸ್ಥಿತಿ ಉದ್ಭವವಾಯಿತು. ೧೯೪೨ರಲ್ಲಿ ಸೆರೆಮನೆಗೆ ಹೋಗಿದ್ದವರು ಹಾಗೂ ಹೋಗದಿದ್ದವರು ಎಂದು ಕಾಂಗ್ರೆಸ್ ಸಮಿತಿಗಳಲ್ಲಿಯೂ ಕೂಡ ಒಡಕುಂಟಾಯಿತು. ಈ ಪರಿಸ್ಥಿತಿಯ ಪರಿಣಾಮವಾಗಿ ಆರಂಭ ಕಾಲದ ನಾಯಕರಾದ ಎ.ಸಿ.ಕಣ್ಣನ್ ನಾಯರ್‌ರಂಥವರು ತಮ್ಮ ಸ್ಥಾನಗಳಿಗೆ ರಾಜೀನಾಮೆ ನೀಡಿದರು. ಸ್ವಾತಂತ್ರ್ಯದ ಲಾಂಛನವಾಗಿದ್ದ ತ್ರಿವರ್ಣ ಧ್ವಜವನ್ನು ಸ್ಥಳೀಯ ಹಾಗೂ ಪ್ರಾದೇಶಿಕ ರಾಜಕಾರಣದ ನಡುವೆಯೇ ಆಗಸ್ಟ್ ೧೫ರಂದು ಕಾಸರಗೋಡಿನಲ್ಲಿ ಹಾರಿಸಲಾಯಿತು.

ಈ ರಾಜಕೀಯ ಚಳವಳಿಗಳ ಸರ್ವೇಕ್ಷಣವನ್ನು ಕೈಗೊಂಡರೆ ಸ್ವಾತಂತ್ರ್ಯ ಚಳವಳಿಯಲ್ಲಿ ಈ ದ್ವಿಭಾಷಾ ತಾಲೂಕಿನ ಪಾತ್ರವೇನೆಂದು ತಿಳಿಯುವುದು. ೧೯೨೦ರಿಂದ ಈ ತಾಲೂಕನ್ನು ವಸಾಹತು-ವಿರೋಧಿ ಹೋರಾಟಕ್ಕೆ ಕ್ರಮೇಣ ಅಣಿಗೊಳಿಸಲಾಗಿತ್ತು. ಕೃಷಿ ಭೂಮಿಯ ರಚನೆ, ದ್ವಿಭಾಷಾ ಸಾಂಸ್ಕೃತಿಕ ಲಕ್ಷಣಗಳು, ರೈತಾಪಿಜನರ ಬಡತನ, ರೈತವಾರಿ ಪದ್ಧತಿಯಡಿಯಲ್ಲಿ ರೈತರ ತೀವ್ರತರವಾದ ಶೋಷಣೆ, ಮುಂತಾದ ಬೆಳವಣಿಗೆಗಳಿಂದಾಗಿ, ಇಲ್ಲಿ ರಾಷ್ಟ್ರೀಯ ಚಳವಳಿ, ಉತ್ಕಟವಾಗಲು ಕಾರಣವಾಯಿತು. ಕಾರ್ನಾಡು ಸದಾಶಿವರಾವ್, ಉಮೇಶ್‌ರಾವ್, ಎ.ಸಿ.ಕಣ್ಣನ್‌ನಾಯರ್ ಹಾಗೂ ಇನ್ನೂ ಅನೇಕ ತ್ಯಾಗಿಗಳ ಮುಂದಾಳತ್ವದಿಂದಾಗಿ ಚಳವಳಿಯ ಸೈದ್ಧಾಂತಿಕ ಬದ್ಧತೆಗೆ ಒಂದು ವ್ಯಾಪಕತೆ ಪ್ರಾಪ್ತವಾಯಿತು. ಮುಂದೆ ತಾಲೂಕಿನಲ್ಲಿ ಕಾರ್ಮಿಕರ ಚಳವಳಿ ಹೆಚ್ಚಿದ ಕಾರಣ ರಾಷ್ಟ್ರೀಯ ಚಳವಳಿಗೆ ರೈತಾಪಿಜನರಿಂದಾಗಿ ಕೆಳಹಂತದ ಚಾಲನೆ ದೊರಕುವಂತಾಯಿತು. ಇದು ರೈತಾಪಿಗಳ ರಾಷ್ಟ್ರೀಯ ಚಳವಳಿಯಾಗಿ ಕೂಡ ಗೋಚರವಾಯಿತು. ಕಯ್ಯೂರ್ ಗಲಭೆಯಂಥ ಘಟನೆಯಿಂದ ಈ ಅಂಶವು ಇನ್ನೂ ಸ್ಪಷ್ಟವಾಗಿ ಕಾಣುತ್ತದೆ. ಕಾಂಗ್ರೆಸ್-ಸಮಾಜವಾದಿಗಳು ಹಾಗೂ ಕಮ್ಯುನಿಸ್ಟರು ರಾಷ್ಟ್ರೀಯ ಚಳವಳಿಯನ್ನು ವಿಶಾಲಗೊಳಿಸಿದ್ದರಲ್ಲದೆ ಮೊದಲು ಹೆಸರಿಸಿರುವ ' ಕೊಂಕಣಿ ಕಾಂಗ್ರೆಸ್' ಒಂದು ಜನಾಂದೋಲನವಾಗಿ ಪರಿವರ್ತಿತವಾಯಿತು. ಈ ತಾಲೂಕಿನ ಊಳಿಗಮಾನ್ಯ ವಿರೋಧಿ ಹಾಗೂ ವಸಾಹತು-ವಿರೋಧಿ ಹೋರಾಟಗಳಿಗೆ ಬೆಂಬಲ ನೀಡಿದರು. ರೈತರು ರಾಷ್ಟ್ರೀಯ ಚಳವಳಿಯಲ್ಲಿ ಈ ಹಂತದಲ್ಲಿ ಸಕ್ರಿಯವಾಗಿ ಭಾಗವಹಿಸಿದುದನ್ನು ನಾವು ಕಾಣುತ್ತೇವೆ. ಕೃಷಿಕ ಸಮಸ್ಯೆಗಳು ಮತ್ತು ವಾಮಪಂಥೀಯರ ಸಮರ್ಪಕ ನಾಯಕತ್ವವು ಕೂಡಿಕೊಂಡು ವಸಾಹತು-ವಿರೋಧಿ ಹೋರಾಟಕ್ಕೆ ರಂಗಸ್ಥಳ ಒದಗಿಸಿದವು. ಭಾಷಾವಾರು ಪ್ರಾಂತ್ಯ ರಚನೆಗೆ ಈ ಚಳವಳಿಯೇ ಸ್ಫೂರ್ತಿ ನೀಡಿದುವೆಂದು ತಿಳಿಯಬೇಕು. ಕೇರಳ ಹಾಗೂ ಕರ್ನಾಟಕ ಕಾಂಗ್ರೆಸ್ ಸಮಿತಿಗಳ ನಡುವಿನ ಸೈದ್ಧಾಂತಿಕ ಭಿನ್ನತೆಯು ಈ ಪ್ರಾಂತ್ಯದ ರಾಷ್ಟ್ರೀಯ ಚಳವಳಿಯಲ್ಲೇ ಪ್ರತಿಫಲವಾಗಿದೆ. ಕರ್ನಾಟಕದ ಭಾಗವು ವಾಮಪಂಥೀಯ ಧೋರಣೆಗೆ ಬದ್ಧವಾಗಿರಲಿಲ್ಲ, ಆದರೆ ಕೇರಳದ ಭಾಗಗಳು ಮಾರ್ಕ್ಸ್‌ವಾದ-ಲೆನಿನ್‌ವಾದದ ರಾಜನೈತಿಕ ಸಂಸ್ಕೃತಿಯಿಂದ ಪ್ರಭಾವಗೊಂಡಿದ್ದವು. ವಾಮಪಂಥೀಯ ನಾಯಕತ್ವಕ್ಕೆ ಈ ತಾಲೂಕಿನ ಆರ್ಥಿಕ ಪರಿಸರವು ಪೂರಕವಾದ ವಾತಾವರಣ ನಿರ್ಮಾಣ ಮಾಡಿದ್ದರಿಂದ ಸಂಘಟನಾತ್ಮಕ ಧೋರಣೆ ಹಾಗೂ ಸಿದ್ಧಾಂತ ಈ ತಾಲೂಕಿನಲ್ಲಿ ರಾಷ್ಟ್ರೀಯ ಚಳವಳಿಯು ಎರಡು ದಿಕ್ಕಿನಲ್ಲಿ ಬೆಳೆಯುವುದಕ್ಕೆ ಕಾರಣವಾಯಿತು. ಕರ್ನಾಟಕದ ಭಾಗವು ಮಂಗಳೂರಿನ ಜೊತೆ ತನ್ನ ಸಾಂಸ್ಕೃತಿಕ ಅನನ್ಯತೆಯನ್ನು ಉಳಿಸಿಕೊಳ್ಳಲು ಪ್ರಯತ್ನಿಸಿದರೆ ಮಲಯಾಳಿ ಭಾಗವು ಮಲಬಾರಿನ ಜೊತೆ ಗುರುತಿಸಿಕೊಳ್ಳಲು ಪ್ರಯತ್ನಿಸಿತು. ಈ ಎಲ್ಲಾ ಇತಿಮಿತಿಗಳಿದ್ದಾಗ್ಯೂ ಸ್ವಾತಂತ್ರ್ಯ ಹೋರಾಟದಲ್ಲಿ ಈ ತಾಲೂಕು ತುಂಬಾ ಪ್ರಮುಖವಾದ ಪಾತ್ರವಹಿಸಿದೆ.

**-ಪ್ರೊ. ಕೆ.ಕೆ.ಎನ್. ಕುರುಪ್**

## ಟಿಪ್ಪಣಿಗಳು

೧ ತಾಲೂಕಿನ ವಿಸ್ತೀರ್ಣ ೧೦೩೨ ಚದರ ಮೈಲಿಗಳು. ೧೪೯೧ರ ಜನಗಣತಿಯ ಪ್ರಕಾರ ಅದರ ಜನಸಂಖ್ಯಾ ಪ್ರಮಾಣ ೨,೮೦,೬೫೯, ಬೇರೆ ಬೇರೆ ಭಾಷಿಕ ಸಮುದಾಯದವರು ಈ ಕೆಳಗೆ ಕಾಣಿಸಿರುವಂತೆ ಪ್ರಮಾಣದಲ್ಲಿದ್ದರು: ಮಲಯಾಳಿಗಳು- ೧೪೮೧೩೨, ಕನ್ನಡಿಗರು-೨೧೦೫೭, ಹಿಂದೂಸ್ತಾನಿಗಳು-೨೨೧೩, ತುಳುವರು-೮೩೪೭೫, ಕೊಂಕಣಿಗಳು-೧೩೧೨೯, ಮರಾಠಿಗರು-೧೧೯೫೬.
ಈ ಜನಸಮುದಾಯ ಹಿಡಿದ ಬೇರೆ ಬೇರೆ ವೃತಿಗಳು ಈ ರೀತಿಯಿದ್ದವು:
ಭೂಮಾಲೀಕರು ಹಾಗೂ ಗೇಣಿದಾರರು -೧೧೪೯೩೯, ಕೃಷಿ ಕಾರ್ಮಿಕರು -೪೭೪೫೧, ಇತರೆ ಕಾರ್ಮಿಕರು-೪೪೪೨೦೦, ವ್ಯಾಪಾರಿಗಳು-೩೨೦೫೮, ನೇಕಾರರು-೪೦೧೫, ಇತರ ಕರಕುಶಲಕರ್ಮಿಗಳು-೧೬೭೧೯, ಇತರೆ-೨೧೦೭೭.

೨ ಸ್ವಾಗತ ಭಾಷಣವನ್ನು ನೋಡಿ: ಹೊಸದುರ್ಗದ ರಾಜಕೀಯ ಸಭೆಗಳು. ೩೧ಮೇ, ೧೯೩೧.
ಮೂಲಪತ್ರ ಸಂಗ್ರಹದಲ್ಲಿ ನೋಡಿ : ಕೆ.ಕೆ.ಎನ್, ಕುರುಪ್(ಸಂ): ಮಲಯಾಳಂ. ಪಿ.ಪಿ. ಕೃಷ್ಣನ್‌ನಾಯರ್, ಅಜನೂರ್, ೧೯೯೧

೩ ೧೯೨೫ನೇ ಜನವರಿಯಲ್ಲಿ ಹೊಸದುರ್ಗ ಘಟಕವು ವಿ.ಆರ್. ನಯನಾರ್‌ರವರಿಂದ ಸಂಘಟಿತವಾಯಿತು. ಎ.ಸಿ. ಕಣ್ಣನ್‌ನಾಯರ್ ಅಧ್ಯಕ್ಷರು ಹಾಗೂ ಕೆ.ಟಿ. ಕುನ್ಹಿರಾಮನ್ ನಂಬಿಯಾರ್ ಕಾರ್ಯದರ್ಶಿ. ಉಮೇಶ್ ರಾವ್ ಅವರು ಕಾಸರಗೋಡು ಸಮಿತಿಯ ಅಧ್ಯಕ್ಷರಾಗಿದ್ದರು. ನೋಡಿ: ಕೆ.ಕೆ.ಎನ್. ಕುರುಪ್, ಎ.ಸಿ.ಕಣ್ಣನ್‌ನಾಯರ್ ಒರು ಪಠವಂ ಮಲೆಯಾಳಂ, ಟ್ರಿವೆಂಡ್ರಮ್, ೧೯೮೫

೪ ಸೂರ್ಯನಾಥ ಕಾಮತ್ ತಮ್ಮ ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಭಾಗ ೧, ಬೆಂಗಳೂರು, ೧೯೭೪- ಇದರಲ್ಲಿ ಈ ಭಾಗದ ಸ್ವಾತಂತ್ರ್ಯ ಸಂಗ್ರಾಮದ ಚಾರಿತ್ರಿಕ ಬೆಳವಣಿಗೆಯನ್ನು ಸಂಪೂರ್ಣವಾಗಿ ಕಡೆಗಣಿಸಿದ್ದಾರೆ. ಕೇವಲ ಈ ಪ್ರದೇಶದ ಹತ್ತು ಜನ ಸ್ವಾತಂತ್ರ್ಯ ಹೋರಾಟಗಾರರು ಹಾಗೂ ಅವರು ಭಾಗವಹಿಸಿದ್ದರ ಬಗ್ಗೆ ಒಂದು ಯಾದಿ ನೀಡಿದ್ದಾರೆ.

೫ ದಿನಚರಿ, ಎ.ಸಿ. ಕಣ್ಣನ್ ನಾಯರ್, ಜುಲೈ ೧೯೨೫, ನೆಹರು ಸ್ಮಾರಕ ವಸ್ತುಸಂಗ್ರಹಾಲಯ ಹಾಗೂ ಗ್ರಂಥ ಭಂಡಾರ, ನವದೆಹಲಿ.

೬ ಈ ಶಾಲೆಯ ಉಪಾಧ್ಯಾಯರು, ಕಣ್ಣನ್ ನಾಯರ್, ಸಿ. ಕೇಳು ನಾಯರ್, ಕೆ.ಟಿ. ಕುನ್ಹಿರಾಮನ್, ನಂಬಿಯಾರ್, ದಾಮೋದರ ಭಕ್ತ ಮತ್ತು ಇ-ರಾಘವಪಣಿಕ್ಕರ್.

೭ ನೋಡಿ: ಕೆ.ಕೆ. ಎನ್.ಕುರುಪ್, ಸಂ: ಮಲೆಯಾಳಂ, ಸ್ವಾತ್ರಂತ್ಯ ಸಮರಂ, ಕಾಸರಕ್ಕೋಡು ತಾಲೂಕ್ಕಿಲ್, ಕೊಡಕ್ಕಾಡ್, ೧೯೮೪

೮ ವಿ.ಪಿ.ಕೃಷ್ಣನ್‌ನಾಯರ್, ಉಲ್ಲೇಖಿಸಿದೆ, ಪು. ೪೯

೯ ದಿನಚರಿ, ಕಣ್ಣನ್‌ನಾಯರ್, ೧ ಮಾರ್ಚಿ ೧೯೨೮

೧೦ ವಾರ್ಷಿಕ ಸದಸ್ಯ ಶುಲ್ಕ ೧/೪ ರೂಪಾಯಿ. ವಿ.ಪಿ. ಕೃಷ್ಣನ್‌ನಾಯರ್ ಗ್ರಂಥದಲ್ಲಿ ಮೊದಲನೇ ಸದಸ್ಯರ ತಂಡದ ಯಾದಿ ನೀಡಲಾಗಿದೆ.

೧೧ ಸ್ವಾತಂತ್ರ್ಯ ಸಮರಂ: ಕಾಸರಕೋಡು ತಾಲೂಕ್ಕಿಲ್. ಪು. XVIII-XIX. ಕಲಾಪಗಳ ವಿವರಗಳನ್ನು ಈ ಗ್ರಂಥದಲ್ಲಿ ಕೊಡಲಾಗಿದೆ.

೧೨ ಪಿ.ಪಿ. ಕೃಷ್ಣನ್ ನಾಯರ್ ಗ್ರಂಥದಲ್ಲಿ ಇದರ ನಿಯಮಗಳು ಹಾಗೂ ಉದ್ದೇಶಗಳನ್ನು ನೀಡಲಾಗಿದೆ. ಪು.೫೧-೩

೧೩ ನೋಡಿ: ಟಿ.ಎಸ್. ತಿರುಂಬ, ಮಲೆಯಾಳಂ. ಸ್ಮರಣಕಲ್, ಕವಿತಳ್, ಸಂ. ಕೆ.ಕೆ.ಎನ್. ಕುರುಪ್, ತ್ರಿಚೂರು, ೧೯೮೯, ಪು. ೭೮-೯

೧೪ ನೋಡಿ: ಸ್ವಾತಂತ್ರ್ಯ ಸಮರಂ, ಕಾಸರಕೋಡು ತಾಲೂಕ್ಕಿಲ್, ಪು. XXIV-XXV

೧೫ ಇ.ಎಮ್.ಎಸ್. ನಂಬೂದಿರಿಪಾದ್: ಕೇರಳ, ಎಸ್ಟರ್ಡೇ, ಟುಡೇ ಅಂಡ್ ಟುಮಾರೊ, ಕಲ್ಕತ್ತಾ, ೧೯೬೮, ಆವೃತ್ತಿ.

೧೬ ಕೆ.ಕೆ.ಎನ್.ಕುರುಪ್: ದ ಕಯ್ಯೂರ್ ರಯಟ್, ಕ್ಯಾಲಿಕಟ್, ೧೯೭೦

೧೭ ಸಮಿತಿ ನೇಮಕವಾದದ್ದು G.O.(p) ಮದರಾಸು, ೧೬೬೬. ರೆವೆನ್ಯೂ, ೫ ಜುಲೈ ೧೯೩೯

೧೮ ಇ.ಎಂ.ಎಸ್. ನಂಬೂದಿರಿಪಾದ್, ಉಲ್ಲೇಖಿಸಿದೆ, ಪು. ೧೭೦

೧೯ ವಿವರಗಳನ್ನೂ ನೋಡಿ G.O. ಮದರಾಸು, ಗೃಹಖಾತೆ (ಹಸ್ತಪ್ರತಿ) ರಹಸ್ಯ, ಸಂಖ್ಯೆ. ೧೨೬೫, ೨೪ ಮಾರ್ಚಿ ೧೯೪೨. ಹಾಗೂ ನೋಡಿ ಪಿ. ಮೋಹನ್‌ದಾಸ್, ಮಲೆಯಾಳಂ, ಮೊರಾಜಾ, ಕಣ್ಣೂರ್, ೧೯೯೩

೨೦ ಎಂ.ಕೆ. ನಂಬಿಯಾರ್, ಪುರಾವೆ ಕೆ.ಡಿ.ಟಿ.ಸಿ. ೪೧೦, ಎ, ಮಲಬಾರ್ ಗೇಣಿ ಸಮಿತಿಯ ವರದಿ, ೧೯೪೦ (ಪುರಾವೆ), II.

೨೧ ಇಡಿಯಾಗಿ ಕಲಾಪವನ್ನು ನೋಡಿ G.O. ಮದರಾಸು, ಗೃಹಖಾತೆ (ಆರ್‌ಟಿ) ೧೩೨೮-೨೯, ರಹಸ್ಯ, ೨೬ ಅಕ್ಟೋಬರ್, ೧೯೪೨ (ತಮಿಳುನಾಡು ರಾಜ್ಯಪತ್ರಾಗಾರ). ರಾಜಕೀಯ ಚಳವಳಿ ಹಾಗೂ ಕಯ್ಯುರ್ ವೀರರ ಬಲಿದಾನವನ್ನು ಕುರಿತು ಚಿರಸ್ಮರಣೆ ಎಂಬ ಸುಂದರವಾದ ಕಾದಂಬರಿಯನ್ನು ನಿರಂಜನರು ಕನ್ನಡದಲ್ಲಿ ಬರೆದಿದ್ದಾರೆ. ಇದನ್ನು ತೇಜಸ್ವಿನಿ ನಿರಂಜನರು 'ಸಾಗಾ ಆಫ್ ಕಯ್ಯೂರ್ ಮಾರ್ಟರ್ಸ್: ದ ಸ್ಟಾರ್ಸ್ ಶೈನ್‌ಬ್ರೈಟ್ಲೀ' (ನವದೆಹಲಿ, ೧೯೭೭) ಎಂಬ ಶೀರ್ಷಿಕೆ ನೀಡಿ ಇಂಗ್ಲೀಷಿಗೆ ಭಾಷಾಂತರಿಸಿದ್ದರೆ, ಸಿ. ರಾಘವನ್‌ರವರು 'ಚಿರಸ್ಮರಣ' ಎಂದು ಮಲೆಯಾಳಂಗೆ ಅನುವಾದಿಸಿದ್ದಾರೆ.

೨೨ ಕೆ.ಕೆ.ಎನ್. ಕುರುಪ್, ಮಲೆಯಾಳಂ. ಕ್ವಿಟ್‌ಇಂಡಿಯಾ ಸಮರಮುಂ ಕೇರಳಮುಂ (ಟ್ರಿವೆಂಡ್ರಮ್, ೧೯೯೩) ಕೆ.ಕೆ.ಎನ್. ಕುರುಪ್, ಅಗ್ರೇರಿಯಸ್ ಸ್ಟ್ರಗಲ್ಸ್ ಇನ್ ಕೇರಳ, ಟ್ರಿವೆಂಡ್ರಮ್, ೧೯೮೯, ಪು. ೨೭

೨೩ ಪಾಕ್ಷಿಕ ವರದಿ, ೧೯೪೭ರ ಜನವರಿ ಉತ್ತರಾರ್ಧ (ತಮಿಳುನಾಡು ರಾಜ್ಯಪತ್ರಾಗಾರ).

೨೪ ಮಾತೃಭೂಮಿ, ೨೫ ಜನವರಿ ೧೯೪೭

# ಶಬ್ದಸೂಚಿ

ಕನ್ನಡ ವಿಶ್ವವಿದ್ಯಾಲಯ ವಿಜಯನಗರ ಸಾಮ್ರಾಜ್ಯದ ಸ್ಥಳಗಳಲ್ಲಿ ಈಗ ತಲೆಯೆತ್ತಿದೆ. ಅದೇ ಕಾರಣಕ್ಕಾಗಿ ಈ ವಿಶ್ವವಿದ್ಯಾಲಯದ ಒಂದು ಜವಾಬ್ದಾರಿಯೆಂದರೆ ಕರ್ನಾಟಕದ ಸಮಗ್ರ ಇತಿಹಾಸವನ್ನು ಬರೆಯಿಸುವುದು. ಕನ್ನಡ ವಿಶ್ವವಿದ್ಯಾಲಯ ಈ ಕುರಿತು ಯೋಚಿಸಿದಾಗ ಅನೇಕ ವಿಚಾರಗಳು ನಮ್ಮಲ್ಲಿ ಅಸ್ಪಷ್ಟವಾಗಿ ರೂಪುಗೊಂಡಿದ್ದವು. ಭಾರತದ ಇತಿಹಾಸ ಕೇವಲ ಉತ್ತರ ಭಾರತದ ಇತಿಹಾಸವಾಗಿ, ದಕ್ಷಿಣ ಭಾರತದ ಇತಿಹಾಸ ಅಡಿಟಿಪ್ಪಣಿಗಳಲ್ಲಿ ಒಡಮೂಡುವುದನ್ನು ತಪ್ಪಿಸಬೇಕಾಗಿತ್ತು. ಅದು ತಪ್ಪಬೇಕಾದರೆ ಕರ್ನಾಟಕದ ಇತಿಹಾಸ ಸ್ವತಂತ್ರವಾಗಿ ರಚನೆಗೊಳ್ಳಬೇಕು. ನಮ್ಮ ಇತಿಹಾಸ ಕೇವಲ ದಿಗ್ವಿಜಯಗಳ ಇತಿಹಾಸ ಅಷ್ಟೇ ಆಗಬಾರದು. ಅದು ಸಾಂಸ್ಕೃತಿಕ ಇತಿಹಾಸವೂ ಆಗಬೇಕು. ರಾಜಕೀಯಕ್ಕೂ ಇತಿಹಾಸಕ್ಕೂ ಇರುವ ಸಂಬಂಧ ಅವಿಭಾಜ್ಯವೆಂದು ಒಪ್ಪಿಕೊಂಡರೂ ಈ ಮಾತನ್ನು ಹೇಳಬೇಕಾಗಿದೆ. ಇತಿಹಾಸದ ಬರೆವಣಿಗೆಯೂ ಬೇರೆ ಸ್ವರೂಪವನ್ನು ತಾಳಬೇಕಾಗಿದೆ. ಅವೆಲ್ಲ ಒಮ್ಮೆಲೆ ಆಗುವ ಕೆಲಸಗಳಲ್ಲ. ಮೊದಲು ಕರ್ನಾಟಕದ ಸಮಗ್ರ ಇತಿಹಾಸದ ಸಾಮಗ್ರಿ ಒಂದು ಕಡೆಗೆ ದೊರೆಯುವಂತಾಗಬೇಕು. ಈಗ ಆ ಕೆಲಸ ಪ್ರಾರಂಭವಾಗಿದೆ. ಇತಿಹಾಸದ ಈ ಸಂಪುಟಗಳಲ್ಲಿ ಈ ಪ್ರದೇಶದ ಅದ್ಭುತವಾದ ಸಾಂಸ್ಕೃತಿಕ ಮತ್ತು ರಾಜಕೀಯ ವಿಕಾಸದ ಚಿತ್ರಗಳಿವೆ. ಕರ್ನಾಟಕದ ಏಕೀಕರಣ ರಾಜಕೀಯವಾಗಿ ನಡೆದು ಹಳೆಮಾತಾಯಿತು. ಕರ್ನಾಟಕದ ಸೀಮಾರೇಖೆಗಳು ಅಲ್ಲಲ್ಲಿ ವಾದಗ್ರಸ್ತವಾಗಿದ್ದರೂ ನೃಪತುಂಗನಂತೆ ನಾವು ಈಗ ನಮ್ಮ ಪ್ರದೇಶ ಯಾವುದೆಂದು ನಿಶ್ಚಯಿಸಿಕೊಂಡಿದ್ದೇವೆ. ನಮ್ಮ ಇತಿಹಾಸ ಈ ಪ್ರಾದೇಶಿಕತೆಯಲ್ಲಿ ಪುನಃಸೃಷ್ಟಿಯಾಗಬೇಕು. ಇತಿಹಾಸ ಪ್ರತ್ಯಭಿಜ್ಞಾನದ ಫಲವೆಂದು ಬೇರೆ ಹೇಳುವ ಕಾರಣವಿಲ್ಲ. ಪ್ರತ್ಯಭಿಜ್ಞಾನ ಭಿನ್ನ ಭಿನ್ನವಾದ ಅಂಶಗಳನ್ನು ಒಳಗೂಡಿಸಿ ಒಂದು ಸಂಬಂಧವನ್ನು ಏರ್ಪಡಿಸಿಕೊಳ್ಳುತ್ತದೆ. ಈ ಸಂಬಂಧದ ಸೂತ್ರವನ್ನು ಅನುಸರಿಸುತ್ತಲೇ ಕನ್ನಡ ವಿಶ್ವವಿದ್ಯಾಲಯ ಕನ್ನಡದ ಕೆಲಸಕ್ಕಾಗಿ ಪ್ರಯತ್ನ ಮಾಡುತ್ತಿದೆ.

**ಚಂದ್ರಶೇಖರ ಕಂಬಾರ**

ಕುಲಪತಿಗಳು

